ಪದವಿಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ



ಪಿ ಯು ಸಿ ಮೊದಲ ವರ್ಷ

# ರಾಜ್ಯಶಾಸ್ತ್ರ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪದವಿ ಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ

ಪಿಯುಸಿ ಮೊದಲ ವರ್ಷ

# ರಾಜ್ಯಶಾಸ್ತ್ರ

ಸಂಪಾದಕ

**ಡಾ. ಹರೀಶ್ ರಾಮಸ್ವಾಮಿ**



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**RAJYASHASHTRA**
Prescibed Text Book for First Year P.U.C
*Edited by*
**Dr. Harish Ramaswamy**
Reader, Dept. of Political Science
Karnataka University, Pavate Nagar
Dharwad - 580 003
*Published by*
**Dr. H.C. Boralingaiah**
Director, Prasaranga
Kannada University, Hampi
Vidyaranya 583 276
Pages: xii+310 **Price: Rs. 100/-**
First Impression : 2005
www.kavihampi.org

ಬೆಲೆ : ರೂ. ೧೦೦/-
*ಮುಖಪುಟ* : ಕೆ.ಕೆ. ಮಕಾಳಿ
*ಪ್ರಕಾಶಕರು*
ಡಾ. ಹಿ.ಚಿ. ಬೋರಲಿಂಗಯ್ಯ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
*ಅಕ್ಷರ ಸಂಯೋಜನೆ*
ಶ್ರೀ ಎಸ್.ವ್ಹಿ. ಲಕಮನಹಳ್ಳಿ
ಲಕಮನಹಳ್ಳಿ ಓಣಿ, ಶುಕ್ರವಾರ ಪೇಟೆ
ಧಾರವಾಡ ೫೮೦ ೦೦೧
ದೂ. ೨೪೩೬೧೯೨
*ಮುದ್ರಣ*
ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು

# ನಿರ್ದೇಶಕರ ಮಾತು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಠ್ಯಪುಸ್ತಕ ರಚನಾ ಕೇಂದ್ರವು ಶಿಕ್ಷಣದ ಎಲ್ಲ ಹಂತಗಳಿಗೆ ಮತ್ತು ಎಲ್ಲ ವಿಷಯಗಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕಗಳು, ಆಕರ ಗ್ರಂಥಗಳು, ಪರಾಮರ್ಶನ ಕೃತಿಗಳು, ಅಧ್ಯಾಪಕರ ಕೈಪಿಡಿಗಳು ಮುಂತಾದವುಗಳನ್ನು ಸಿದ್ಧಪಡಿಸುವ ಮತ್ತು ಪ್ರಕಟಿಸುವ ದೊಡ್ಡ ಜವಾಬುದಾರಿಯನ್ನು ನಿರ್ವಹಿಸುತ್ತದೆ. ಈ ದಿಶೆಯಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆ ೨೦೦೪ - ೦೫ ರಲ್ಲಿ ಜಾರಿಗೆ ತಂದಿರುವ ಹೊಸ ಪಠ್ಯ ಕ್ರಮವನ್ನು ಆಧರಿಸಿ ಪಠ್ಯಪುಸ್ತಕಗಳನ್ನು ಪ್ರಕಟಿಸುತ್ತಿದೆ. ಈ ಪಠ್ಯ ಕ್ರಮಕ್ಕೆ ಅನುಗುಣವಾಗಿ ಅಧ್ಯಾಪಕರ ಕೈಪಿಡಿಗಳನ್ನು ಸಿದ್ಧಪಡಿಸುವ ಕಾರ್ಯವನ್ನು ಕೇಂದ್ರ ಆರಂಭಿಸಿದೆ.

ಈ ಕಾರ್ಯ ಅನೇಕರ ಸಹಕಾರ - ಸಹಯೋಗದಿಂದ ನಡೆಯಬೇಕಾಗಿದೆ. ನಾವು ಸಿದ್ಧ ಪಡಿಸುತ್ತಿರುವ ಪಠ್ಯಗಳಿಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಅಧೀಕೃತ ಪಠ್ಯಗಳೆಂದು ಮನ್ನಣೆ ನೀಡಿದೆ. ಇದು ತುಂಬಾ ಮಹತ್ವದ ಸಂಗತಿಯಾಗಿದೆ. ಪದವಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಡಿ. ಎನ್. ನಾಯಕ್ ಇವರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

ಪಠ್ಯಪುಸ್ತಕಗಳ ಸಂಪಾದಕರಾಗಿ ನಾಡಿನ ಅನೇಕ ಹಿರಿಯ ವಿದ್ವಾಂಸರು ಕೆಲಸ ಮಾಡುತ್ತಿದ್ದಾರೆ. ಅವರ ಸಹಯೋಗದಲ್ಲಿ ಅನೇಕ ಲೇಖಕರು ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರೆಲ್ಲರಿಗೂ ನಾನು ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಕೇಂದ್ರದ ಹಿಂದಿನ ಶಕ್ತಿ ಎಂದರೆ ಕುಲಪತಿಗಳಾದ ಡಾ. ಬಿ. ಎ. ವಿವೇಕ ರೈ. ಅವರ ಮಾರ್ಗದರ್ಶನದಲ್ಲಿ ಕೇಂದ್ರವು ಕೆಲಸ ಮಾಡುತ್ತಿದೆ. ಈ ಸಂದರ್ಭದಲ್ಲಿ ಮಾನ್ಯ ಕುಲಪತಿಗಳಿಗೆ, ಕುಲಸಚಿವರಿಗೆ, ಕೇಂದ್ರದ ಸಲಹಾ ಮಂಡಳಿ ಸದಸ್ಯರಿಗೆ, ಪ್ರಸಾರಾಂಗದ ನಿರ್ದೇಶಕರು ಮತ್ತು ಸಿಬ್ಬಂದಿಗೆ ಕೇಂದ್ರದ ಪರವಾಗಿ ನಾನು ಕೃತಜ್ಞತೆ ಸಲ್ಲಿಸುತ್ತೇನೆ.

ಪ್ರಸ್ತುತ ಪದವಿಪೂರ್ವ ಮೊದಲ ವರ್ಷದ ರಾಜ್ಯಶಾಸ್ತ್ರ ಪಠ್ಯವನ್ನು ತುಂಬಾ ಅಚ್ಚುಕಟ್ಟಾಗಿ ಸಿದ್ಧಪಡಿಸಿಕೊಟ್ಟಿರುವ ಅದರ ಸಂಪಾದಕರಾದ ಡಾ. ಹರೀಶ್ ರಾಮಸ್ವಾಮಿ ಅವರಿಗೆ ಹಾಗೂ ವಿವಿಧ ಅಧ್ಯಾಯಗಳನ್ನು ಬರೆದುಕೊಟ್ಟಿರುವ ನಾಡಿನ ಖ್ಯಾತ ವಿದ್ವಾಂಸರಿಗೆ ನಾನು ವಂದನೆಗಳನ್ನು ಸಲ್ಲಿಸುತ್ತೇನೆ.

ಡಾ. ಟಿ. ಆರ್. ಚಂದ್ರಶೇಖರ

# ಸಂಪಾದಕರ ಮಾತು

ಕನ್ನಡ ನಮ್ಮ ಮಾತೃಭಾಷೆ. ಕನ್ನಡದಲ್ಲಿ ವ್ಯವಹರಿಸುವ ನಾವು ನಮ್ಮ ಪ್ರಾದೇಶಿಕ ಭಾಷೆಯ ಬಗ್ಗೆ ಹೆಮ್ಮೆ ಹೊಂದಿದ್ದು, ಅದನ್ನು ಬೆಳೆಸಬೇಕು. ಆಂಗ್ಲ ಭಾಷೆಯಲ್ಲಿಯೇ ಜ್ಞಾನ ಭಂಡಾರವಿದೆ, ಅದನ್ನು ಕಲಿಯದ ನಾವು ಕಡಿಮೆ ಮಟ್ಟದಲ್ಲಿರುವವರು ಎಂಬ ಭಾವನೆ ಸಲ್ಲದು. ಅದರ ಬದಲು ಯಾವ ಭಾಷೆಯಲ್ಲಾಗಲೀ ಇರುವ ಜ್ಞಾನವನ್ನು ಗ್ರಹಿಸಿ ಕನ್ನಡದಲ್ಲಿ ಆ ಜ್ಞಾನ ಭಂಡಾರವನ್ನು ಬೆಳೆಸುವ ಸದುದ್ದೇಶ ನಮ್ಮದಾಗಬೇಕು. ಈ ನಿಟ್ಟಿನಲ್ಲಿ ಕನ್ನಡ ವಿಶ್ವವಿದ್ಯಾಲಯ ಮಾಡುತ್ತಿರುವ ಪಠ್ಯಪುಸ್ತಕಗಳ ಪ್ರಕಟಣೆಯ ಕೆಲಸವು ನಿಜಕ್ಕೂ ಶ್ಲಾಘನೀಯವಾದದ್ದು. ಈ ದೆಸೆಯಲ್ಲಿ ಡಾ. ಟಿ. ಆರ್. ಚಂದ್ರಶೇಖರ ಅವರು ಈ ಪಠ್ಯಪುಸ್ತಕದ ರಚನೆಯ ಕೆಲಸ ನನಗೆ ವಹಿಸಿದ್ದರು. ಇಂತಹ ನಿರ್ಧಾರದ ಹಿಂದೆ ಡಾ. ಎಚ್. ಜೆ. ಲಕ್ಕಪ್ಪಗೌಡ, ಡಾ. ಕೆ. ವಿ. ನಾರಾಯಣ ಹಾಗೂ ಮಾನ್ಯ ಕುಲಪತಿಗಳಾದ ಡಾ. ಬಿ. ಎ. ವಿವೇಕ ರೈ ಅವರ ಸಂಪೂರ್ಣ ಬೆಂಬಲವಿದೆ ಎಂಬ ಬಗ್ಗೆ ನನಗಾದರೂ ಅರಿವಿದೆ. ಅವರೆಲ್ಲರಿಗೂ ನಾನು ಚಿರಋಣಿ.

ಈ ಪಠ್ಯದ ಅಧ್ಯಾಯಗಳನ್ನು ಶ್ರಮವಹಿಸಿ ಬರೆದು ತಮ್ಮ ೩೦-೩೫ ವರ್ಷಗಳ ಅನುಭವದ ಜ್ಞಾನವನ್ನು ಹಂಚಿಕೊಂಡ ಹಿರಿಯರಾದ ಪ್ರೊ. ಹೀರೆಮಠ ಎ. ಬಿ. ಹಾಗೂ ಪ್ರೊ. ಚೇಗರಡ್ಡಿ ಬಿ. ಎಫ್. ಅವರಿಗೆ ನಾನು ಅಭಾರಿ. ಡಾ. ಕಮಲಾಕ್ಷಿ ತಡಸದ ಈ ಪಠ್ಯದ ರಚನೆಯ ವಿವಿಧ ಹಂತಗಳಲ್ಲಿ ಪಾಠಗಳನ್ನು ಓದಿ ಹೆಚ್ಚಿನ ವಿಷಯ ಹಾಗೂ ಸಂಘಟನಾ ಕಾರ್ಯದಲ್ಲಿ ಸಹಾಯವೆಸಗಿದ್ದಕ್ಕೆ ಅವರಿಗೆ ನಾನು ಆಭಾರಿ. ಡಾ. ಕರೀಗೌಡ ಬೀಚನಹಳ್ಳಿ ಹಾಗೂ ಪ್ರಸಾರಾಂಗದ ನಿರ್ದೇಶಕರಾದ ಡಾ. ಹಿ. ಚಿ. ಬೋರಲಿಂಗಯ್ಯ ಅವರ ಸಹಕಾರವನ್ನು ಪ್ರೀತಿಯಿಂದ ನೆನೆಯುತ್ತೇನೆ. ಪಠ್ಯಪುಸ್ತಕ ರಚನಾ ಕೇಂದ್ರದ ನಿರ್ದೇಶಕರಾದ ಡಾ. ಟಿ. ಆರ್. ಚಂದ್ರಶೇಖರ, ಸಹಾಯಕ ನಿರ್ದೇಶಕರಾದ ಜೈನುಲ್ಲಾ ಬಳ್ಳಾರಿ ಹಾಗೂ ಅಭಿವೃದ್ಧಿ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ. ಚಂದ್ರ ಪೂಜಾರಿ ಅವರು ಎಲ್ಲ ಹಂತಗಳಲ್ಲೂ ಸಹಕರಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ಅಂತೆಯೇ ಕೆ. ಎಲ್. ರಾಜಶೇಖರ್ ಅವರನ್ನು ಮರೆಯುವಂತಿಲ್ಲ. ಅಚ್ಚುಕಟ್ಟಾಗಿ ಡಿ. ಟಿ. ಪಿ. ಮಾಡಿದ ಶ್ರೀಮತಿ ಮತ್ತು ಶ್ರೀ. ಎಸ್. ವ್ಹಿ. ಲಕಮನಹಳ್ಳಿ ಅವರಿಗೆ ಧನ್ಯವಾದಗಳು. ಈ ಕೃತಿಯ ಪ್ರಕಟನೆಗೆ ಸಲಹೆ ಸೂಚನೆಗಳನ್ನೂ ನೀಡಿ ಸಹಕರಿಸಿದ ಕರ್ನಾಟಕ ವಿಶ್ವವಿದ್ಯಾಲಯದ ನನ್ನ ಎಲ್ಲ ಸಹದ್ಯೋಗಿ ಮಿತ್ರರಿಗೆ ವಂದನೆಗಳು.

**ಹರೀಶ ರಾಮಸ್ವಾಮಿ**

# ವಿಸ್ತೃತ ಪಠ್ಯಕ್ರಮ

ಬೋಧನಾ ಅವಧಿ : ೯೫ ಗಂಟೆ

ಅಧ್ಯಾಯ ೧ ೬ ಗಂಟೆ

## ರಾಜ್ಯಶಾಸ್ತ್ರ- ಒಂದು ಸಮಗ್ರದೃಷ್ಟಿ

ಅ. ರಾಜ್ಯಶಾಸ್ತ್ರ ಮತ್ತು ರಾಜಕಾರಣದ ಸ್ವರೂಪ ಹಾಗೂ ವ್ಯಾಪ್ತಿ

* ರಾಜ್ಯಶಾಸ್ತ್ರಮತ್ತು ರಾಜಕಾರಣದ ಪರಿಭಾವನೆ
* ರಾಜ್ಯಶಾಸ್ತ್ರ ಮತ್ತು ರಾಜಕಾರಣದ ವ್ಯಾಖ್ಯೆಗಳು
* ರಾಜ್ಯಶಾಸ್ತ್ರದ ವ್ಯಾಪ್ತಿ

ಆ. ಸಮಕಾಲೀನ ಜಗತ್ತಿನಲ್ಲಿ ರಾಜ್ಯಶಾಸ್ತ್ರ ಅಧ್ಯಯನದ ಪಸ್ತುತತೆ

ಪ್ರೊ. ಬಿ.ಎಫ್.ಚೇಗರಡ್ಡಿ

ಅಧ್ಯಾಯ ೨ ೧೧ ಗಂಟೆ

## ರಾಜ್ಯ,ಸಮಾಜ ಮತ್ತು ನಾಗರಿಕ

ಅ. ರಾಜ್ಯದ ಸ್ವರೂಪ ಮತ್ತು ಮಹತ್ವ

* ರಾಜ್ಯವೆಂಬ ಪರಿಕಲ್ಪನೆಯ ಪರಿಚಯ
* ರಾಜ್ಯದ ಮೂಲಾಂಶಗಳು

ಆ. ನಾಗರಿಕತ್ವ - ವಿಧಗಳು- ನಾಗರಿಕನ ಕರ್ತವ್ಯಗಳು

* ರಾಜ್ಯ ಮತ್ತು ರಾಷ್ಟ್ರ
* ರಾಜ್ಯ ಮತ್ತು ಸರಕಾರ
* ರಾಜ್ಯ ಮತ್ತು ಸಮಾಜ
* ರಾಜ್ಯ ಮತ್ತು ಸಂಘ
* ರಾಜ್ಯ ಮತ್ತು ನಾಗರಿಕ

ಪ್ರೊ. ಬಿ.ಎಫ್.ಚೇಗರಡ್ಡಿ

ಅಧ್ಯಾಯ ೩ ೨೦ ಗಂಟೆ

## ರಾಜ್ಯಶಾಸ್ತ್ರದ ಮೂಲಪರಿಕಲ್ಪನೆಗಳು

ಅ. ಅಧಿಕಾರ

* ರಾಜಕೀಯ ಅಧಿಕಾರದ ಸ್ವರೂಪ ಮತ್ತು ಮಹತ್ವ
* ರಾಜಕೀಯ ಅಧಿಕಾರದ ಗುಣ ಲಕ್ಷಣಗಳು

ಆ. ಸಾರ್ವಭೌಮತ್ವ

* ಸ್ವರೂಪ ಮತ್ತು ಮಹತ್ವ
* ಗುಣ ಲಕ್ಷಣಗಳು

ಇ. ಕಾನೂನು

* ಸ್ವರೂಪ ಮತ್ತು ಮಹತ್ವ
* ಕಾನೂನಿನ ವಿಧಗಳು

ಈ. ಸ್ವಾತಂತ್ರ್ಯ

* ಸ್ವರೂಪ ಮತ್ತು ಮಹತ್ವ
* ಸ್ವಾತಂತ್ರ್ಯದ ವಿಧಗಳು

ಉ. ಸಮಾನತೆ

* ಸ್ವರೂಪ ಮತ್ತು ಮಹತ್ವ
* ಸಮಾನತೆಯ ವಿಧಗಳು

ಊ. ನ್ಯಾಯ

* ಸ್ವರೂಪ ಮತ್ತು ಮಹತ್ವ
* ನ್ಯಾಯದ ವಿಧಗಳು

ಋ. ಹಕ್ಕುಗಳು

* ಸ್ವರೂಪ ಮತ್ತು ಮಹತ್ವ
* ಹಕ್ಕುಗಳ ವಿಧಗಳು

ಪ್ರೊ. ಬಿ.ಎಫ್.ಚೇಗರಡ್ಡಿ.

ಅಧ್ಯಾಯ ೪ ೧೨ ಗಂಟೆ

## ಸಂವಿಧಾನ ಮತ್ತು ಸರಕಾರ

ಅ. ಸಂವಿಧಾನ ಮತ್ತು ಸಂವಿಧಾನಾತ್ಮಕ ಸರಕಾರ

* ಸಂವಿಧಾನದ ಅರ್ಥ ಮತ್ತು ಮಹತ್ವ

ಆ. ಸರಕಾರದ ಪ್ರಕಾರಗಳು

* ಪ್ರಜಾಪ್ರಭುತ್ವ ಮತ್ತು ಪ್ರಜಾಪ್ರಭುತ್ವೇತರ
* ಪ್ರಜಾಪ್ರಭುತ್ವೇತರ ಸರಕಾರದ ಸ್ವರೂಪ ಮತ್ತು ಲಕ್ಷಣಗಳು

ಇ. ಸಂಸಧೀಯ ಮತ್ತು ಅಧ್ಯಕ್ಷೀಯ

* ಸಂಸದೀಯ ಸರಕಾರದ ಸ್ವರೂಪ ಮತ್ತು ಲಕ್ಷಣಗಳು
* ಅಧ್ಯಕ್ಷೀಯ ಸರಕಾರದ ಸ್ವರೂಪ ಮತ್ತು ಲಕ್ಷಣಗಳು

ಈ. ಏಕಾತ್ಮಕ ಮತ್ತು ಸಂಯುಕ್ತ ಸರಕಾರ

* ಸ್ವರೂಪ ಮತ್ತು ಗುಣಲಕ್ಷಣಗಳು

ಪ್ರೊ. ಬಿ.ಎಫ್.ಚೇಗರಡ್ಡಿ.

ಅಧ್ಯಾಯ ೫ ೧೩ ಗಂಟೆ

## ಭಾರತದ ಸಂವಿಧಾನ

* ಪ್ರಸ್ತಾವನೆ
* ವಿಶೇಷ ಲಕ್ಷಣಗಳು
* ಪೀಠಿಕಾ ಭಾಗ
* ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು
* ರಾಜ್ಯ ನಿರ್ದೇಶಕ ತತ್ವಗಳು
* ಸಂಯುಕ್ತ ವ್ಯವಸ್ಥೆ - ಅದರ ಲಕ್ಷಣಗಳು

ಪ್ರೊ. ಎ. ಬಿ. ಹಿರೇಮಠ

ಅಧ್ಯಾಯ ೬ ೮ ಗಂಟೆ

## ಶಾಸಕಾಂಗ

* ಅರ್ಥ ಮತ್ತು ಮಹತ್ವ

ಅ. ಸಂಸತ್ತು

* ಲೋಕಸಭೆ
* ರಾಜ್ಯಸಭೆ
* ರಚನೆ ಮತ್ತು ಕಾರ್ಯಗಳು

ಆ. ರಾಜ್ಯ ಶಾಸಕಾಂಗ

* ವಿಧಾನಸಭೆ
* ವಿಧಾನ ಪರಿಷತ್ತು
* ರಚನೆ ಮತ್ತು ಕಾರ್ಯಗಳು

ಪ್ರೊ. ಎ. ಬಿ. ಹಿರೇಮಠ

ಅಧ್ಯಾಯ ೭ ೧೧ ಗಂಟೆ

## ಕಾರ್ಯಾಂಗ

* ಅರ್ಥ ಮತ್ತು ಮಹತ್ವ

ಅ. ಕೇಂದ್ರ ಕಾರ್ಯಾಂಗ

* ರಾಷ್ಟ್ರಪತಿ
* ಪಾತ್ರ ಮತ್ತು ಕಾರ್ಯಗಳು
* ಪ್ರಧಾನ ಮಂತ್ರಿ
* ಮಂತ್ರಿ ಮಂಡಲ ರಚನೆ ಮತ್ತು ಕಾರ್ಯಗಳು

ಆ. ರಾಜ್ಯ ಕಾರ್ಯಾಂಗ

* ರಾಜ್ಯಪಾಲರು - ಪಾತ್ರ ಮತ್ತು ಕಾರ್ಯಗಳು
* ಮುಖ್ಯಮಂತ್ರಿ - ಸಚಿವ ಸಂಪುಟದ ರಚನೆ ಮತ್ತು ಕಾರ್ಯಗಳು

ಪ್ರೊ. ಎ. ಬಿ. ಹಿರೇಮಠ

ಅಧ್ಯಾಯ ೮ ೭ ಗಂಟೆ

## ನ್ಯಾಯಾಂಗ

* ಅರ್ಥ ಮತ್ತು ಮಹತ್ವ
* ಸರ್ವೋಚ್ಚ ನ್ಯಾಯಾಲಯ - ಸಂಘಟನೆ ಮತ್ತು ಕಾರ್ಯ ವ್ಯಾಪ್ತಿ
* ಉಚ್ಚ ನ್ಯಾಯಾಲಯ - ಸಂಘಟನೆ ಮತ್ತು ಕಾರ್ಯ ವ್ಯಾಪ್ತಿ
* ಅಧೀನ ನ್ಯಾಯಾಲಯಗಳು - ನ್ಯಾಯಾಲಯಗಳು - ರೆವಿನ್ಯೂ ನ್ಯಾಯಾಲಯಗಳು - ಗ್ರಾಹಕರ ನ್ಯಾಯಾಲಯಗಳು
* ಲೋಕ ಅದಾಲತ್‌ಗಳು - ಅರ್ಥ ಮತ್ತು ಸ್ವರೂಪ
* ಬಳಕೆದಾರರ ನ್ಯಾಯಾಲಯಗಳು

ಪ್ರೊ. ಎ. ಬಿ. ಹಿರೇಮಠ

ಅಧ್ಯಾಯ ೯ ೭ ಗಂಟೆ

## ಭಾರತದಲ್ಲಿ ಸ್ಥಳೀಯ ಸರಕಾರ

* ಸ್ಥಳೀಯ ಸರಕಾರಗಳು - ಸ್ವರೂಪ ಮತ್ತು ಮಹತ್ವ
* ಸ್ಥಳೀಯ ಸರಕಾರಗಳ ವಿಧಗಳು ( ಕರ್ನಾಟಕವನ್ನು ಅನುಲಕ್ಷಿಸಿ)
* ಗ್ರಾಮೀಣ ಸ್ಥಳೀಯ ಸರಕಾರಗಳು - ರಚನೆ ಮತ್ತು ಕಾರ್ಯಗಳು
* ನಗರ ಸ್ಥಳೀಯ ಸರಕಾರಗಳು - ರಚನೆ ಮತ್ತು ಕಾರ್ಯಗಳು

ಪ್ರೊ. ಎ. ಬಿ. ಹಿರೇಮಠ

ಪರಿವಿಡಿ

ಅನುಬಂಧಗಳು

# ಅಧ್ಯಾಯ ೧

# ರಾಜ್ಯಶಾಸ್ತ್ರ-ಒಂದು ಸಮಗ್ರ ದೃಷ್ಠಿ

## ಅ. ರಾಜ್ಯಶಾಸ್ತ್ರ ಮತ್ತು ರಾಜಕಾರಣದ ಸ್ವರೂಪ ಮತ್ತು ವ್ಯಾಪ್ತಿ

### * ರಾಜ್ಯಶಾಸ್ತ್ರ ಮತ್ತು ರಾಜಕಾರಣದ ಪರಿಭಾವನೆ

ರಾಜ್ಯಶಾಸ್ತ್ರ ಪ್ರಾಥಮಿಕವಾಗಿ ಉಗಮವಾದದ್ದು ಗ್ರೀಸ್ ದೇಶದಲ್ಲಿ. ಅತಿ ಪುರಾತನ ಕಾಲದಲ್ಲಿಯೇ ಶ್ರೇಷ್ಠ ಮಟ್ಟದ ಸಂಸ್ಕೃತಿಯನ್ನು ಹೊಂದಿದ ದೇಶವೆಂದರೆ ಗ್ರೀಸ್.

ರಾಜಕೀಯ ಚಿಂತನೆ ಸೋಫಿಸ್ಟರಿಂದ ಗ್ರೀಸ್‌ದಲ್ಲಿ ಪ್ರಾರಂಭವಾಗಿದ್ದರೂ ಅದರ ವೈಜ್ಞಾನಿಕ ಅಧ್ಯಯನ ಸಾಕ್ರೇಟಿಸ್, ಪ್ಲೇಟೋ ಮತ್ತು ಅರಿಸ್ಟಾಟಲ್‌ರ ಕಾಲದಲ್ಲಿ ಪ್ರಾರಂಭವಾಯಿತು. ಗ್ರೀಕ್ ತತ್ವಜ್ಞಾನಿಯಾದ ಅರಿಸ್ಟಾಟಲ್‌ರು ರಾಜ್ಯಶಾಸ್ತ್ರದ ಕುರಿತಂತೆ ಜಗತ್ತಿನಲ್ಲಿಯೇ ಮೊಟ್ಟ ಮೊದಲಿಗೆ ''ದಿ ಪೊಲಿಟಿಕ್ಸ್'' ಎಂಬ ಪುಸ್ತಕವನ್ನು ರಚಿಸಿದನು. ಆದ್ದರಿಂದ ಅರಿಸ್ಟಾಟಲ್‌ರನ್ನು ರಾಜ್ಯಶಾಸ್ತ್ರದ ಪಿತಾಮಹ ಎಂದು ಕರೆಯಲಾಗುತ್ತದೆ. ಇದು ರಾಜ್ಯಶಾಸ್ತ್ರದ ಬಗ್ಗೆ ಪ್ರಥಮ ಸ್ವತಂತ್ರ ಕೃತಿ ಎಂಬ ಹೆಗ್ಗಳಿಕೆ ಹೊಂದಿದೆ. ಪೊಲಿಟಿಕಲ್ ಅಥವಾ ಪೊಲಿಟಿಕ್ಸ್ ಎಂಬ ಪದವು ಗ್ರೀಕ್ ಶಬ್ದವಾದ ಪೋಲಿಸ್ ಎಂಬ ಪದದಿಂದ ಬಂದಿದೆ. ಪೋಲಿಸ್ ಎಂದರೆ ನಗರ ರಾಷ್ಟ್ರ ಎಂದರ್ಥ. ಗ್ರೀಕರು ನಗರ ರಾಜ್ಯಗಳಲ್ಲಿ ವಾಸಿಸುತ್ತಿದ್ದು ಪ್ರತಿಯೊಂದು ನಗರವೂ ಒಂದು ಸ್ವತಂತ್ರ ರಾಜ್ಯವಾಗಿತ್ತು. ಗ್ರೀಕ್‌ರ ಕಾಲದಲ್ಲಿ ಈಗಿನಂಥ ದೊಡ್ಡ ರಾಜ್ಯಗಳಿದ್ದಿಲ್ಲ. ಕಾರಣ ಅರಿಸ್ಟಾಟಲ್‌ನ ದೃಷ್ಠಿಯಲ್ಲಿ ರಾಜ್ಯಶಾಸ್ತ್ರವೆಂದರೆ ನಗರ ರಾಜ್ಯಗಳ ಆಡಳಿತವನ್ನು ವಿವರಿಸುವ ಶಾಸ್ತ್ರ.

ರಾಜಕೀಯ ಚಿಂತನೆಯಲ್ಲಿ ಪುರಾತನ ಭಾರತೀಯರೇನು ಕಡಿಮೆಯಿಲ್ಲ. ಭಾರತದಲ್ಲಿಯೂ ರಾಜಕೀಯ ಚಿಂತನೆಗಳು ನಡೆದಿದ್ದು ಮನುವನ್ನು ಭಾರತದ ಮೊದಲ ರಾಜಕೀಯ ಚಿಂತಕ ಹಾಗೂ ಮನುಸ್ಮೃತಿ ಭಾರತದ ಪ್ರಥಮ ಕಾನೂನಿನ ಗ್ರಂಥ ಎಂದು ಪರಿಗಣಿಸಲಾಗಿದೆ. ನಂತರ ಕೌಟಿಲ್ಯ ಭಾರತದ ರಾಜಕೀಯ ಚಿಂತನೆಯನ್ನು ಕ್ರಮಗೊಳಿಸಿದ್ದಷ್ಟೇ ಅಲ್ಲದೆ ಅರ್ಥಶಾಸ್ತ್ರ ಎಂಬ ಗ್ರಂಥವನ್ನು ರಚಿಸಿದ್ದಾನೆ.

ಆದರೆ ಈ ಪುರಾತನ ಕಾಲದ ಅಭಿಪ್ರಾಯವು ಮಧ್ಯಯುಗಕ್ಕಾಗಲೀ ಅಥವಾ ಆಧುನಿಕ ಯುಗಕ್ಕಾಗಲೀ ಅನ್ವಯಿಸುವದಿಲ್ಲ. ಈಗಿನ ಜಗತ್ತಿನಲ್ಲಿ ರಾಜ್ಯಗಳು ಜನಸಂಖ್ಯೆ

ಹಾಗೂ ಪ್ರದೇಶದ ದೃಷ್ಟಿಯಿಂದ ಅತಿ ದೊಡ್ಡವಾಗಿ ಬೆಳೆದಿವೆ. ಉದಾ:- ಭಾರತ, ಚೀನಾ, ರಶಿಯಾ ಹಾಗೂ ಅಮೇರಿಕಾ ಮುಂತಾದ ರಾಷ್ಟ್ರಗಳು ದೊಡ್ಡ ರಾಷ್ಟ್ರಗಳಾಗಿವೆ. ಕಾರಣ ರಾಜ್ಯಶಾಸ್ತ್ರ, ರಾಜ್ಯ ಮತ್ತು ಸರಕಾರಗಳೊಂದಿಗೆ ಜನರು ಹೊಂದಿರುವ ಸಂಬಂಧಗಳನ್ನು ವಿವೇಚಿಸುವ ಶಾಸ್ತ್ರವೆಂದು ಈಗಿನ ಕಾಲದಲ್ಲಿ ಕರೆಯಲ್ಪಡುತ್ತದೆ. ಹೀಗೆ ರಾಜ್ಯಶಾಸ್ತ್ರದ ಅಧ್ಯಯನವು ಪುರಾತನ ಗ್ರೀಕರಿಂದ ಪ್ರಾರಂಭವಾಗಿ ಭಾರತೀಯರ, ಬ್ರಿಟಿಷರ ಹಾಗೂ ಅಮೇರಿಕನ್‌ರ ಅಮೂಲ್ಯ ಕೊಡುಗೆಗಳಿಂದ ಇಂದು ಪ್ರಮುಖ ಸಮಾಜ ವಿಜ್ಞಾನಗಳಲ್ಲಿ ಒಂದು ಅಧ್ಯಯನ ಶಾಖೆಯಾಗಿ ಬೆಳೆದು ಮುಂದುವರಿಯುತ್ತಿದೆ.

ಮಾನವ ಸಮಾಜ ಜೀವಿ ಸಮಾಜವನ್ನು ಬಿಟ್ಟು ಒಬ್ಬಂಟಿಗನಾಗಿ ಜೀವನ ನಡೆಸುವದು ಅವನಿಗೆ ಸಾಧ್ಯವಿಲ್ಲ. ಮನುಷ್ಯ ಮಾನಸಿಕ ಹಾಗೂ ಆರ್ಥಿಕ ಕಾರಣಗಳಿಗಾಗಿ ಅಂದರೆ ಸುಖ-ದುಃಖ ವನ್ನು ತಮ್ಮ ತಮ್ಮಲ್ಲಿ ಹಂಚಿಕೊಂಡು ತೃಪ್ತಿದಾಯಕ ಜೀವನವನ್ನು ಸಾಗಿಸಲು ಹಾಗೂ ವಿನಿಮಯದ ಮೂಲಕ ತನ್ನಲ್ಲಿ ಹೆಚ್ಚಿದ್ದ ವಸ್ತುಗಳನ್ನು ಬೇರೆಯವರಿಗೆ ಕೊಟ್ಟು ತನ್ನಲ್ಲಿಲ್ಲದ ವಸ್ತುಗಳನ್ನು ಬೇರೆಯವರಿಂದ ಪಡೆದು ಸ್ವಾವಲಂಬನೆಯನ್ನು ಹೊಂದಲು ಸಮಾಜ ಜೀವಿಯಾಗಲು ಬಯಸುತ್ತಾನೆ. ಹೀಗೆ ಮನುಷ್ಯ ಸಮಾಜದ ಚೌಕಟ್ಟಿನಲ್ಲಿ ಮಾತ್ರ ತನ್ನ ಜೀವನಕ್ಕೆ ಬೇಕಾದ ಎಲ್ಲ ಅಗತ್ಯಗಳನ್ನು ಈಡೇರಿಸಿಕೊಳ್ಳಬಲ್ಲ.

ಯಾವುದೇ ವ್ಯಕ್ತಿ ಏಕಾಂಗಿಯಾಗಿ ಜೀವನವನ್ನು ನಡೆಸಲು ಬಯಸಿದರೆ ಅವನು ದೇವರಾದರೂ ಇರಬಹುದು ಅಥವಾ ದೆವ್ವವಾದರೂ ಇರಬಹುದು. ಕಾರಣ ಗ್ರೀಕ್ ರಾಜಕೀಯ ತತ್ವಜ್ಞಾನಿಯಾದ ಅರಿಸ್ಟಾಟಲ್ ಮಾನವ ಸಾಮಾಜಿಕ ಪ್ರಾಣಿ ಎಂದು ಹೇಳಿದ್ದಾರೆ. ಇದರಂತೆ ಲಾಸ್ಕಿ ಎಂಬ ಲೇಖಕರು ಕೂಡಾ ಮಾನವ ಸಮುದಾಯವನ್ನು ಕಟ್ಟುವ ಪ್ರಾಣಿ ಎಂದು ಹೇಳಿದ್ದಾರೆ.

ಸಮಾಜದ ನಮ್ಮ ಸುತ್ತಮುತ್ತಲಿನ ಜನರನ್ನು ನಾವು ಅವಲೋಕಿಸಿದಾಗ ನಮಗೆ ಎರಡು ವಿಷಯಗಳು ಗೋಚರವಾಗುತ್ತವೆ. ಮೊದಲನೆಯದಾಗಿ ಪ್ರತಿಯೊಬ್ಬ ಮಾನವನು ತನ್ನ ಮನಸ್ಸಿಗೆ ಬಂದಂತೆ ಸ್ವೇಚ್ಛೆಯಿಂದ ನಡೆಯಬೇಕೆಂದು ಬಯಸುತ್ತಾನೆ. ಎರಡನೆಯದಾಗಿ ಇದು ಸಾಧ್ಯವಾಗಲಾರದು. ಈ ಪ್ರಕಾರ ಗರಿಷ್ಠ ಸಾತಂತ್ರ್ಯವು ಸಾಧ್ಯವಾಗಲಾರದು. ಏಕೆಂದರೆ ಎಲ್ಲರೂ ತಮ್ಮ ಮನಬಂದಂತೆ ಸ್ವೇಚ್ಛೆಯಿಂದಿರಲು ಬಯಸಿದರೆ ಒಬ್ಬರ ಆಸೆ ಆಕಾಂಕ್ಷೆಗಳು ಇತರರ ಬಯಕೆಗಳಿಗೆ ವಿರುದ್ಧವಾಗಿ ಜಗಳಕ್ಕೆ ಕಾರಣವಾಗಬಹುದು. ಇದರಿಂದ ವ್ಯಕ್ತಿ - ವ್ಯಕ್ತಿಗಳಲ್ಲಿ ಹೋರಾಟ, ಹೊಡೆದಾಟ ಪ್ರಾರಂಭವಾಗಿ ಸಾಮಾಜಿಕ ಶಾಂತಿ ಸುವ್ಯವಸ್ಥೆಗಳಿಗೆ ಧಕ್ಕೆ ತಗಲಬಹುದು. ಈ ಪ್ರಕಾರ ಸಮಾಜದಲ್ಲಿ ಜಗಳಗಳು ಅನಿವಾರ್ಯ. ಜಗಳವಾಡದ ವ್ಯಕ್ತಿ ಯನ್ನು ಕಾಣಲಿಕ್ಕೆ ಸಾಧ್ಯವಿಲ್ಲ.

ಅದಾಗ್ಯೂ ಜಗಳಗಳಿಂದ ಸುಖ ಶಾಂತಿ, ನೆಮ್ಮದಿ ಮಾನವರಿಗೆ ಸಮಾಜದಲ್ಲಿ ಸಿಗಲಾರದು. ಕಾರಣ ಇಂಥ ಜಗಳಗಳನ್ನು ನಿವಾರಿಸಬೇಕು. ಅದಕ್ಕಾಗಿ ಮಾನವರನ್ನು ನಿಯಂತ್ರಿಸಬೇಕು. ಮಾನವರನ್ನು ನಿಯಂತ್ರಣದಲ್ಲಿಡಲು, ವ್ಯಕ್ತಿಗಳ ಸ್ವಾತಂತ್ರ್ಯವನ್ನು ರಕ್ಷಿಸಲು, ಸಮಾಜದಲ್ಲಿ ಶಾಂತಿಯನ್ನು ಕಾಪಾಡಿಕೊಂಡು ಹೋಗಲು, ರಾಜ್ಯ, ಸರಕಾರ ಹಾಗೂ ಕಾನೂನಿನ ಅಗತ್ಯವಿದೆ. ಸಾಮಾಜಿಕ ಜೀವನವನ್ನು ನಿಯಂತ್ರಿಸಲು ರೂಪಿಸಲಾದ ನಿಯಮಗಳೇ ಕಾನೂನುಗಳು.ಕಾನೂನುಗಳನ್ನು ಪಾಸು ಮಾಡಿದ ಬಳಿಕ ಆ ಕಾನೂನುಗಳಿಗೆ ಎಲ್ಲರೂ ವಿಧೇಯರಾಗಿರಬೇಕು. ಇಲ್ಲದಿದ್ದರೆ ಸರಕಾರವು ಸುಗಮವಾಗಿ ಆಡಳಿತವನ್ನು ಸಾಗಿಸಲಾರದು.ಸರಕಾರದ ಕಾನೂನುಗಳನ್ನು ಪಾಲಿಸುವದರಿಂದ ಸಮಾಜದಲ್ಲಿ ಶಾಂತಿ ಸ್ಥಾಪಿತವಾಗಿ ಪ್ರಗತಿ ಸಾಧ್ಯವಾಗುವದು. ಈ ರೀತಿ ರಾಜ್ಯ ಮತ್ತು ಸರ್ಕಾರಗಳ ಬಗೆಗಿನ ಎಲ್ಲ ವಿಷಯುಗಳನ್ನು ವಿವೇಚಿಸುವ ಶಾಸ್ತ್ರವೇ ರಾಜ್ಯಶಾಸ್ತ್ರವೆಂದು ಕರೆಯಲ್ಪಡುವದು. ಕಾರಣ ಗ್ರೀಕ್ ರಾಜಕೀಯ ತತ್ವಜ್ಞಾನಿ ಅರಿಸ್ಟಾಟಲರು 'ಮಾನವ ರಾಜಕೀಯ ಪ್ರಾಣಿ'ಎಂದು ಹೇಳಿದ್ದಾರೆ.ಮಾನವರು ಸಮಾಜದಲ್ಲಿರಬೇಕೆಂದು ಬಯಸುವಂತೆ ರಾಜ್ಯದಲ್ಲಿರಬೇಕೆಂದು ಬಯಸುತ್ತಾರೆ.

ಕೆಲವು ಚಿಂತಕರ ಪ್ರಕಾರ ಮಾನವ ಸ್ವಭಾವತಃ ರಾಜಕೀಯ ಪ್ರಾಣಿಯಲ್ಲ. ಅರಾಜಕ ಪರಿಸ್ಥಿತಿಯಲ್ಲಿ ಬದಕುವದಕ್ಕಿಂತಲೂ ರಾಜ್ಯದಡಿಯಲ್ಲಿ ಬದುಕುವದರಿಂದ ಹೆಚ್ಚು ಅನುಕೂಲಗಳಿವೆ ಎಂಬ ಕಾರಣದಿಂದ ರಾಜ್ಯವನ್ನು ಬಯಸುತ್ತಾನೆ.

ಅಮೇರಿಕಾದ ಚಿಂತಕ ರಾಬರ್ಟ ಧಾಲ್ ಪ್ರಕಾರ ಕೆಲವರು ರಾಜಕೀಯ ಜೀವನದಲ್ಲಿ ಪಾಲ್ಗೊಳ್ಳುವದಿಲ್ಲ, ರಾಜಕೀಯದಲ್ಲಿ ಆಸಕ್ತಿಹೊಂದಿರುವದಿಲ್ಲ. ರಾಜಕೀಯ ಘಟನೆಗಳ ಜ್ಞಾನ ಹೊಂದಿರುವದಿಲ್ಲ ಹಾಗೂ ನಿರ್ಣಯ ತೆಗೆದು-ಕೊಳ್ಳುವಲ್ಲಿ ಪಾಲುಗಾರಿಕೆ ವಹಿಸುವದಿಲ್ಲ. ಆದರೂ ರಾಜಕೀಯ ಜೀವನದ ಪ್ರಯೋಜನದಲ್ಲಿ ಪಾಲುಗಾರಿಕೆ ಪಡೆಯುವದಕ್ಕೋಸ್ಕರ ಒಂದು ರಾಜಕೀಯ ವ್ಯವಸ್ಥೆಯಲ್ಲಿ ಬದುಕುತ್ತಾರೆ. ಮನುಷ್ಯ ರಾಜಕೀಯದಲ್ಲಿ ಭಾಗವಹಿಸಲಿ, ವಹಿಸದಿರಲಿ, ಅವನ ಜೀವನ ರಾಜ್ಯ ಮತ್ತು ಸರಕಾರಗಳೊಂದಿಗೆ ಬೆಸೆದುಕೊಂಡಿದೆ ಎಂಬುದು ನಿಶ್ಚಿತ.

## ರಾಜ್ಯಶಾಸ್ತ್ರದ ವ್ಯಾಖ್ಯೆಗಳು

ರಾಜ್ಯಶಾಸ್ತ್ರ ಕುರಿತಂತೆ ಹಲವಾರು ಚಿಂತಕರು ಭಿನ್ನಭಿನ್ನವಾಗಿ ವ್ಯಾಖ್ಯಾನ ನೀಡಿದ್ದಾರೆ. ಅವುಗಳಲ್ಲಿ ಕೆಲವನ್ನು ನಾವು ಗಮನಿಸಬಹುದು.

ಫ್ರೆಂಚ್‌ಲೇಖಕ ಪಾಲ್ ಜಾನೆಟ್‌ರ ಪ್ರಕಾರ ''ರಾಜ್ಯಶಾಸ್ತ್ರ ರಾಜ್ಯದ ಬುನಾದಿಯನ್ನು ಮತ್ತು ಸರಕಾರದ ತತ್ವಗಳನ್ನು ವಿವೇಚಿಸುವ ಸಮಾಜಶಾಸ್ತ್ರದ ಒಂದು ಭಾಗ''.

ಗೆಟಲ್‌ರ ಪ್ರಕಾರ ''ಅಂತರರಾಜ್ಯ ಸಂಬಂಧ, ಶಾಸನಾಡಳಿತಗಳನ್ನು ನಿರ್ವಹಿಸುವ ಸರಕಾರ, ಅದರ ರಚನೆ ಮತ್ತು ರಾಜಕೀಯ ಘಟಕಗಳನ್ನು ಸೃಷ್ಟಿಸುವ ಮಾನವ ನಿರ್ಮಿತ ಸಂಸ್ಥೆಯ ಅಧ್ಯಯನವೇ ರಾಜ್ಯಶಾಸ್ತ್ರ''.

ಇ.ಸಿ. ಸ್ಮಿಥ್ ಹಾಗೂ ಎ.ಜೆ. ಜರ್‍ಜರ ಪ್ರಕಾರ ''ರಾಜ್ಯ ಶಾಸ್ತ್ರವು ಸಮಾಜಶಾಸ್ತ್ರಗಳ ಒಂದು ಶಾಖೆಯಾಗಿದ್ದು ರಾಜ್ಯ ಹಾಗೂ ಸರಕಾರಗಳಿಗೆ ಸಂಬಂಧಿಸಿದ ಸೈದ್ಧಾಂತಿಕ, ಸಂಘಟನಾತ್ಮಕ ಅಂಶಗಳ ಅಧ್ಯಯನವಾಗಿದೆ.

ಇಪ್ಪತ್ತನೆ ಶತಮಾನದ ಪ್ರಾರಂಭದವರೆಗೂ ರಾಜ್ಯಶಾಸ್ತ್ರವು ರಾಜ್ಯ ಮತ್ತು ಸರ್ಕಾರಗಳ ಅಧ್ಯಯನಗಳಿಗೆ ಸಂಬಂಧಿಸಿದ ಶಾಸ್ತ್ರ ಎಂಬ ಹೇಳಿಕೆಗೆ ಮಾನ್ಯತೆ ಇತ್ತು. ಈ ಶತಮಾನದಲ್ಲಿ ಉಳಿದೆಲ್ಲ ಶಾಸ್ತ್ರಗಳು ತಮ್ಮದೇ ಆದ ನೆಲೆಯನ್ನು ಪಡೆದುಕೊಂಡವು. ಆದರೆ ರಾಜ್ಯಶಾಸ್ತ್ರವು ಇನ್ನೂ ಹಿಂದೆ ಉಳಿದಿತ್ತು. ಮ್ಯಾಕ್ಸವೇಬರ ರಾಜ್ಯಶಾಸ್ತ್ರವನ್ನು ಉಳಿದ ಸಮಾಜ ವಿಜ್ಞಾನಗಳಿಂದ ಪ್ರತ್ಯೇಕಿಸುವ ಪ್ರಯತ್ನ ಮಾಡಿದನಷ್ಟೇ ಅಲ್ಲದೇ ರಾಜ್ಯಶಾಸ್ತ್ರದ ಕೇಂದ್ರ ವಿಷಯ ಅಧಿಕಾರ ಎಂದು ಅಭಿಪ್ರಾಯ ಪಟ್ಟನು. ಅಮೇರಿಕಾದ ಹಲವಾರು ಲೇಖಕರು ಈ ಹೇಳಿಕೆಯನ್ನು ಮಾನ್ಯ ಮಾಡಿದ್ದಷ್ಟೇ ಅಲ್ಲದೇ ಅಧಿಕಾರದ ಅಧ್ಯಯನಕ್ಕೆ ಹೆಚ್ಚಿನ ಲಕ್ಷ ನೀಡಿದರು.

ಹೆರಾಲ್ಡ.ಡಿ. ರಾಸವೇಲ್ ರ ಪ್ರಕಾರ ತನ್ನ '' ರಾಜಕೀಯ ಯಾರು, ಯಾವಾಗ ಏನನ್ನು, ಹೇಗೆ ಪಡೆಯುತ್ತಾರೆ ''. ಎಂಬ ಗ್ರಂಥದಲ್ಲಿ ರಾಜ್ಯಶಾಸ್ತ್ರವು ಅಧಿಕಾರವನ್ನು ರೂಪಿಸುವ ಮತ್ತು ಅಧಿಕಾರದ ಪಾಲದಾರಿಕೆಯನ್ನು ಅಭ್ಯಸಿಸುವ ಒಂದು ಅನುಭವಾತ್ಮಕ ವಿಜ್ಞಾನವಾಗಿದೆ.

ರಾಬಸನ್‌ರ ಪ್ರಕಾರ ರಾಜ್ಯಶಾಸ್ತ್ರವು ಶಕ್ತಿಯನ್ನು ಉಳಿಸಿಕೊಳ್ಳುವ ಹಾಗೂ ಪಡೆಯುವ ಹೋರಾಟ, ಶಕ್ತಿಯ ಚಲಾವಣೆ ಅಥವಾ ಉಳಿದವರ ಮೇಲೆ ಪ್ರಭಾವ ಬೀರುವ ಅಥವಾ ಶಕ್ತಿಯ ಚಲಾವಣೆಯ ಪ್ರತಿರೋಧಿಸುವ ಅಂಶವನ್ನು ಕೇಂದ್ರವಾಗಿ ಹೊಂದಿದೆ.

ರಾಜ್ಯಶಾಸ್ತ್ರದ ಇನ್ನೊಂದು ಅಂಶವೆಂದರೆ ವಾದ ಮತ್ತು ಘರ್ಷಣೆ

ಸ್ಟೀಪನ್ ವಾಸಬಾಯ್‌ರ ಪ್ರಕಾರ ಎಲ್ಲಿ ರಾಜಕೀಯವಿದೆಯೋ ಅಲ್ಲಿ ಘರ್ಷಣೆ ಇರುತ್ತದೆ. ಎಲ್ಲಿ ಘಟನೆಗಳು ಇವೆಯೋ ಅಲ್ಲಿ ರಾಜಕೀಯವಿರುತ್ತದೆ.ಎಲ್ಲಿ ಘರ್ಷಣೆ ಮತ್ತು ಘಟನೆಗಳು ಇಲ್ಲವೋ ಅಲ್ಲಿ ರಾಜಕೀಯವಿರುವದಿಲ್ಲ.

ಕ್ವಿನ್ಸಿರೈಟ್ ಪ್ರಕಾರ ರಾಜ್ಯಶಾಸ್ತ್ರವು ಮುಖ್ಯವಾಗಿ ವ್ಯಕ್ತಿಗಳ ನಡುವಳಿಕೆಯನ್ನು ಅಭ್ಯಸಿಸಿ ವ್ಯಕ್ತಿಗಳ ನಡುವಿನ ಘರ್ಷಣೆ (ಹೋರಾಟ)ಗಳಿಗೆ ಕಾರಣಗಳನ್ನು ಕಂಡು ಹಿಡಿಯುವಂತಾಗಬೇಕು.

ರಾಜಕೀಯದ ಅಧ್ಯಯನವು ಒಟ್ಟಾಭಿಪ್ರಾಯ ಹಾಗೂ ಸಮಾಜದ ಸಾಮಾನ್ಯ ವ್ಯವಸ್ಥೆಯನ್ನು ಒಳಗೊಂಡಿರುತ್ತದೆ.

ಎಡ್ವರ್ಡ್ ಬೆನ್‌ಫೀಲ್ಡ್‌ರ ಪ್ರಕಾರ ಒಂದು ವಿಧವಾದ ಪ್ರತಿಭಟನೆ ಹಾಗೂ ಅದರ ನಿವಾರಣೆಗೆ ಸಂಬಂಧಿಸಿದ ಚಟುವಟಿಕೆಗಳೇ ರಾಜಕೀಯ.

ಇನ್ನೊಂದು ದೃಷ್ಟಿಯ ಪ್ರಕಾರ ರಾಜಕೀಯ ವ್ಯಕ್ತಿಯೊಂದಿಗೆ ಸಂಬಂಧ ಹೊಂದಿದೆ.

ಹೆಂಜ ಉಲನ್‌ರ ಪ್ರಕಾರ ರಾಜಕೀಯ ಮೇಲಿನಿಂದ ಬಂದದ್ದಲ್ಲಾ. ಅದು ಮಾನವನೇ ಕೇಂದ್ರವಾಗಿರುವ, ಮಾನವನಿಂದಲೇ ನಿರ್ಮಿತವಾದದ್ದು.

ಹೀಗೆ ರಾಜಕೀಯ, ಅಧಿಕಾರ, ಪ್ರಭಾವ, ಘರ್ಷಣೆ, ವಿವಾದ, ಸಹಕಾರ, ನಿರ್ಣಯ ತೆಗೆದುಕೊಳ್ಳುವಿಕೆ, ರಾಜಕೀಯ ಸಂಸ್ಥೆ, ಅಂತರಾಷ್ಟ್ರೀಯತೆ ಎಲ್ಲವನ್ನು ಒಳಗೊಂಡಿದೆ.

ರಾಜಕೀಯದ ಅಧಿಕಾರ ದೃಷ್ಟಿಕೋನವನ್ನು ಉದಾರವಾದಿಗಳು, ಮಾರ್ಕ್ಸವಾದಿಗಳು ಖಂಡಿಸಿದ್ದಾರೆ.

ಉದಾರವಾದಿಗಳ ದೃಷ್ಟಿಯಲ್ಲಿ ರಾಜಕೀಯವು ವ್ಯಕ್ತಿಯನ್ನು ಒಂದು ಕೇಂದ್ರ ಘಟಕವಾಗಿ ಅಧ್ಯಯನ ಮಾಡುತ್ತದೆ.

ಮೆಕ್ಕೈವರ, ಲಾಸ್ಕಿ, ಉದಾರವಾದಿ ದೃಷ್ಠಿಕೋನದ ಪ್ರತಿಪಾದಕರಾಗಿದ್ದಾರೆ.

ಮಾರ್ಕ್ಸ್‌ರ ಪ್ರಕಾರ ರಾಜಕೀಯ ಸಂಸ್ಥೆಗಳು ಹಾಗೂ ಚಟುವಟಿಕೆಗಳು ಪ್ರಸ್ತುತ ಆರ್ಥಿಕ ವ್ಯವಸ್ಥೆಯ ವಿಶೇಷವಾಗಿ ಉತ್ಪಾದನಾ ವಿಧಾನದ ಪರಿಣಾಮಗಳೇ ಆಗಿವೆ. ರಾಜಕೀಯ ಸಂಬಂಧವೂ ಒಳಗೊಂಡಂತೆ ಎಲ್ಲ ಸಾಮಾಜಿಕ ಸಂಬಂಧಗಳು ಸಮಾಜದ ಪ್ರಸ್ತುತ ಆರ್ಥಿಕ ಸಂಬಂಧದಿಂದಲೇ ರೂಪಗೊಳ್ಳುತ್ತವೆ. ಎಲ್ಲ ರಾಜಕೀಯದ ಹಿಂದಿರುವ ಧ್ಯೇಯ ಘರ್ಷಣಾತ್ಮಕ ಆರ್ಥಿಕ ಹಿತಾಸಕ್ತಿಗಳಾಗಿವೆ.

## * ರಾಜ್ಯಶಾಸ್ತ್ರ ಹಾಗೂ ರಾಜಕಾರಣದ ವ್ಯಾಖ್ಯೆಗಳು

ರಾಜಕಾರಣ ಎಲ್ಲಡೆಯಲ್ಲಿಯೂ ಇದೆ. ಅದು ಸರ್ವವ್ಯಾಪಿಯಾಗಿದ್ದು ಮಾನವನ ಇತಿಹಾಸದಷ್ಟೇ ಹಳೆಯದಾಗಿದೆ. ಯಾವ ವ್ಯಕ್ತಿಯೂ ಒಂದು ರಾಜಕೀಯ ವ್ಯವಸ್ಥೆಯ ಹೊರಗೆ ಬದುಕಲು ಸಾಧ್ಯವಿಲ್ಲ. ರಾಜಕಾರಣವೇ ರಾಜ್ಯ, ಯುದ್ಧ, ಕ್ರಾಂತಿ, ಸಂಘ ಸಂಸ್ಥೆಗಳು ಹಾಗೂ ಸಂವಿಧಾನ ಮೊದಲಾದವುಗಳ ಉಗಮಕ್ಕೆ ಕಾರಣವಾಗಿದೆ. ಹೆನಿಜ್ ವಾಲನ್‌ರ ಪ್ರಕಾರ ರಾಜಕಾರಣ ದೇವ ನಿರ್ಮಿತವಲ್ಲ. ಅದು ಯಾವುದೇ ದೈವಿಕ ಕೊಡುಗೆಯಾಗಿಲ್ಲ. ಅದು ಮನುಷ್ಯನೇ ಕೇಂದ್ರವಾಗಿರುವ ಮನುಷ್ಯನಿಂದಲೇ ನಿರ್ಮಿತವಾದ ಒಂದು ಪರಿಕಲ್ಪನೆ.

ರಾಜ್ಯಶಾಸ್ತ್ರ ಹಾಗೂ ರಾಜಕಾರಣ ಈ ಎರಡೂ ಪದಗಳನ್ನು ಒಂದೇ ಅರ್ಥದಲ್ಲಿ ಬಳಸುವುದುಂಟು. ರಾಜ್ಯಶಾಸ್ತ್ರದ ಪಿತಾಮಹನೆನಿಸಿಕೊಂಡಿರುವ ಅರಿಸ್ಟಾಟಲ್‌ರವರು ಸಹ ತಮ್ಮ ಕೃತಿಗೆ ರಾಜ್ಯಶಾಸ್ತ್ರ ಎಂದು ಹೇಳದೆ 'ಪಾಲಿಟಿಕ್ಸ್' ಎಂದು ಹೆಸರಿಟ್ಟಿದ್ದಾರೆ. ಅದೇ ಪ್ರಕಾರ ಸಿಡ್ಜ್‌ವಿಕ್ ಮುಂತಾದ ಬರಹಗಾರರು ಸಹ ರಾಜ್ಯಶಾಸ್ತ್ರ ಎಂಬುದರ ಬದಲು ರಾಜಕಾರಣ ಎಂದೇ ಬಳಸಿದ್ದಾರೆ. **ಪ್ರೊ. ಎಚ್.ಜಿ. ಲಾಸ್ಕಿ**ಯವರು ತಮ್ಮ ಕೃತಿಯನ್ನು **'ಗ್ರಾಮರ್ ಆಫ್ ಪಾಲಿಟಿಕ್ಸ್'** ಎಂದು ಕರೆದಿದ್ದಾರೆ. ವಿಲ್ಸನ್‌ರವರು ತಮ್ಮ ಪುಸ್ತಕಕ್ಕೆ **'ಪ್ರಿನ್ಸಿಪಲ್ಸ್ ಆಫ್ ಪಾಲಿಟಿಕ್ಸ್'** ಎಂಬುದಾಗಿ ಹೆಸರಿಟ್ಟಿದ್ದಾರೆ

ಭಾರತದ ಅನೇಕ ವಿಶ್ವವಿದ್ಯಾಲಯಗಳಲ್ಲಿ ತಮ್ಮ ಇಲಾಖೆಗಳಿಗೆ **''ಡಿಪಾರ್ಟ್‌ಮೆಂಟ್ ಆಫ್ ಪಾಲಿಟಿಕ್ಸ್''** ಎಂಬುದಾಗಿ ಹೆಸರಿಟ್ಟಿದ್ದಾರೆ. ಇವುಗಳ ಮೇಲಿಂದ ರಾಜಕಾರಣ ಎಂಬ ಪದ ಹೇಗೆ ರಾಜ್ಯಶಾಸ್ತ್ರ ಎಂಬುದಕ್ಕೆ ಪರ್ಯಾಯವಾಗಿ ಉಪಯೋಗಿಸಲ್ಪಡುತ್ತದೆ ಎಂಬುದು ಸ್ಪಷ್ಟವಾಗುತ್ತದೆ.

೧೯ನೇ ಶತಮಾನದಲ್ಲಿ ರಾಜಕಾರಣ ಎಂಬ ಪದವನ್ನು ಸೈದ್ಧಾಂತಿಕ (ತಾತ್ವಿಕ) ಮತ್ತು ಪ್ರಾಯೋಗಿಕ (ಅನ್ವಯಿಕ) ಎಂದು ಎರಡು ಭಾಗವನ್ನಾಗಿ ವಿಭಜಿಸಲಾಯಿತು. ಸೈದ್ಧಾಂತಿಕ ಭಾಗದಲ್ಲಿ ರಾಜ್ಯದ ಮೂಲಭೂತ ಲಕ್ಷಣಗಳ ಅಧ್ಯಯನವನ್ನು ಸೇರಿಸಲಾಯಿತು. ಪ್ರಾಯೋಗಿಕ ರಾಜಕಾರಣದ ಭಾಗದಲ್ಲಿ ಸರ್ಕಾರ ವಾಸ್ತವವಾಗಿ ಹೇಗೆ ಕಾರ್ಯ ನಿರ್ವಹಿಸುತ್ತದೆ ಎಂಬುದರ ಅಧ್ಯಯನವನ್ನು ಸೇರಿಸಲಾಯಿತು. **ಸರ್ ಫೆಡರಿಕ್ ಪೋಲಾಕ್**‌ರವರು ರಾಜಕಾರಣವನ್ನು ಸೈದ್ಧಾಂತಿಕ ರಾಜಕಾರಣ ಮತ್ತು ಪ್ರಾಯೋಗಿಕ ರಾಜಕಾರಣವೆಂದು ಎರಡು ಭಾಗವಾಗಿ ವಿಂಗಡಿಸಿದ್ದಾರೆ. ಇವರ ಪ್ರಕಾರ ಸೈದ್ಧಾಂತಿಕ ರಾಜಕಾರಣವು ರಾಜ್ಯದ ಉಗಮ, ಸರಕಾರದ ವಿಧಗಳ ವರ್ಗೀಕರಣ, ಪರಮಾಧಿಕಾರದ ವರ್ಗೀಕರಣ ಮುಂತಾದವುಗಳನ್ನು ಒಳಗೊಂಡಿರುತ್ತದೆ. ಪ್ರಾಯೋಗಿಕ ರಾಜಕಾರಣ ಪ್ರಸ್ತುತ ಇರುವ ಸರ್ಕಾರಗಳ, ಸಂವಿಧಾನಾತ್ಮಕ ಕಾಯ್ದೆಗಳು, ಅವುಗಳ ಬಳಕೆ, ಸಂಸದೀಯ ಪದ್ಧತಿ ಮುಂತಾದವುಗಳನ್ನು ಅಧ್ಯಯನ ಮಾಡುತ್ತದೆ. ತನ್ಮೂಲಕ ತೊಂದರೆಗಳನ್ನು ಹುಡುಕಿ ನಿಜವಾಗಿಯೂ ಆ ತೊಂದರೆ ಇದೆಯೋ ಇಲ್ಲವೋ ಎಂಬುದನ್ನು ನಿರ್ಧರಿಸಿ ಅದನ್ನು ಬಗೆಹರಿಸಲು ಸೂಕ್ತ ಮಾರ್ಗೋಪಾಯಗಳನ್ನು ಹುಡುಕುವ ಕಲೆಯೇ ರಾಜಕಾರಣ ಎಂಬುದಾಗಿ ಸರ್ ಅರ್ನೆಸ್ಟ್ ಬೆನ್‌ರವರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ **ಪ್ರೊ. ಗಿಲ್‌ಕ್ರೈಸ್ಟ್**‌ರ ಪ್ರಕಾರ ಈ ದಿನಗಳಲ್ಲಿ ರಾಜಕಾರಣ ಸರ್ಕಾರದ ಪ್ರಸ್ತುತ ಸಮಸ್ಯೆಗಳಿಗೆ ಸಂಬಂಧಿಸಿದುದಾಗಿದೆ. ಓರ್ವ ವ್ಯಕ್ತಿ ರಾಜಕಾರಣದಲ್ಲಿ ಆಸಕ್ತಿ ಹೊಂದಿದ್ದಾನೆ ಎಂದರೆ ಆತನು ಇಂದಿನ ದಿನಗಳಲ್ಲಿ ರಾಜಕಾರಣದಲ್ಲಿ ಅಸಕ್ತಿ ಹೊಂದಿದ್ದಾನೆ ಎಂದರ್ಥ. ಉದಾ:-ಇಂದಿನ ತೆರಿಗೆ ವ್ಯವಸ್ಥೆ, ಕಾರ್ಮಿಕರ ಸಮಸ್ಯೆ, ಕಾರ್ಯಾಂಗ ಮತ್ತು ಶಾಸಕಾಂಗಗಳ ನಡುವಣ

ಸಂಬಂಧ ಇತ್ಯಾದಿ. ಆಧುನಿಕ ರಾಜ್ಯಗಳಲ್ಲಿ ಪೊಲಿಟಿಕ್ಸ್ ಎಂಬ ಪದವನ್ನು ಬೇರೆ ಅರ್ಥದಲ್ಲಿ ಬಳಸಲಾಗುತ್ತದೆ.

ರಾಜಕಾರಣ ಎಂಬುದು ಸರಕಾರದ ದೈನಂದಿನ ಸಮಸ್ಯೆಗಳನ್ನು ಹಾಗೂ ಚಟುವಟಿಕೆಗಳನ್ನು ತಿಳಿಸುತ್ತದೆ. ಉದಾ :- ಸರಕಾರ ನಿರ್ವಹಿಸುತ್ತಿರುವ ಕಾರ್ಯ ಪ್ರತಿನಿತ್ಯವು ದಿನಪತ್ರಿಕೆಗಳು ಇಂತಹ ರಾಜಕಾರಣದ ಬಗ್ಗೆ ಬಹಳಷ್ಟು ಮಾಹಿತಿಗಳನ್ನು ತಿಳಿಸುತ್ತವೆ. ಏಕೆಂದರೆ ಸಾರ್ವಜನಿಕರು ರಾಜಕಾರಣ ಹೇಗೆ ನಿರ್ವಹಣೆಯಾಗುತ್ತಿದೆ ಎಂಬುದನ್ನು ತಿಳಿಯಲು ಬಯಸುತ್ತಾರೆ.

ಈ ಅರ್ಥದಲ್ಲಿ ಒಂದು ದೇಶದ ರಾಜಕಾರಣ ಮತ್ತೊಂದು ದೇಶದ ರಾಜಕಾರಣಕ್ಕಿಂತ ವಿಭಿನ್ನವಾಗಿರುತ್ತದೆ. ವಿಭಿನ್ನ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಸಮಸ್ಯೆಗಳ ಮೂಲಕ ಭಾರತದ ರಾಜಕಾರಣ ಇಂಗ್ಲೆಂಡಿನ ರಾಜಕಾರಣಕ್ಕಿಂತ ವಿಭಿನ್ನವಾಗಿರುತ್ತದೆ. ಒಂದೇ ದೇಶದಲ್ಲಿ ಒಂದು ಪಕ್ಷದ ರಾಜಕಾರಣ ಮತ್ತೊಂದು ಪಕ್ಷದ ರಾಜಕಾರಣಕ್ಕಿಂತ ವಿಭಿನ್ನವಾಗಿರುತ್ತದೆ.ತನ್ಮೂಲಕ ಪ್ರತಿಯೊಂದು ಪಕ್ಷ,ದೇಶಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ತನ್ನದೆ ಆದ ಪರಿಹಾರವನ್ನು ಒದಗಿಸುತ್ತದೆ. ಉದಾ :- ಭಾರತ ದೇಶದಲ್ಲಿ ಕಾಂಗ್ರೆಸ್ ಪಕ್ಷದ ರಾಜಕಾರಣ ಭಾರತೀಯ ಜನತಾ ಪಕ್ಷದ ರಾಜಕಾರಣಕ್ಕಿಂತ ವಿಭಿನ್ನವಾಗಿರುತ್ತದೆ. ಯಾರು ಪ್ರಸ್ತುತ ರಾಜಕೀಯದಲ್ಲಿ ಆಸಕ್ತಿ ಹೊಂದಿದ್ದು ರಾಜಕೀಯ ಚಟುವಟಿಕೆಗಳಲ್ಲಿ, ಸರ್ಕಾರದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೋ ಅವರನ್ನು ರಾಜಕಾರಣಿ ಎಂದು ಕರೆಯಲಾಗುವದು. ವೆಬ್‌ಸ್ಟರ್ಸ್ ಡಿಕ್ಸನರಿಯ ಪ್ರಕಾರ ರಾಜಕಾರಣಿ ಎಂದರೆ ಸರ್ಕಾರದ ಯಾವುದಾದರೂ ಅಂಗದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ ಒಂದು ರಾಜಕೀಯ ಪಕ್ಷಕ್ಕೆ ಸೇರಿದವನಾಗಿರುತ್ತಾನೆ.

**ರ್‍ಯಾನಡಮ್ ಹೌಸ್ ಡಿಕ್ಸನರಿಯ** ಪ್ರಕಾರ ರಾಜಕಾರಣಿ ಪಕ್ಷ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವವನು, ಸಾರ್ವಜನಿಕ ಹುದ್ದೆಯನ್ನು ಹೊಂದಿರುವ ಅಥವಾ ಹೊಂದಲು ಪ್ರಯತ್ನ ಪಡುತ್ತಿರುವ, ತತ್ವಕ್ಕೆ ಬದ್ಧನಾಗಿರುವದಕ್ಕಿಂತ ಅಧಿಕಾರವನ್ನು ಉಳಿಸಿಕೊಳ್ಳಲು ಅಥವಾ ಅನುಕೂಲ ಪಡೆದುಕೊಳ್ಳುವುದನ್ನೇ ಮುಖ್ಯವಾಗಿ ಹೊಂದಿರುವವನಾಗಿರುತ್ತಾನೆ.

ಒಬ್ಬ ರಾಜಕಾರಣಿ ರಾಜಕೀಯ ವಿಜ್ಞಾನಿಯಾಗಿರಬೇಕಾದ ಅಗತ್ಯವಿಲ್ಲ. ರಾಜಕಾರಣಿ ರಾಜಕೀಯ ವಿಜ್ಞಾನದ ಬಗ್ಗೆ ತಿಳುವಳಿಕೆ ಹೊಂದದೆ ಇರಬಹುದು. ಓರ್ವ ರಾಜ್ಯಶಾಸ್ತ್ರಜ್ಞ ರಾಜಕೀಯ ತತ್ವಗಳ, ಸರಕಾರದ ವ್ಯವಸ್ಥೆ ಮತ್ತು ಇನ್ನಿತರ ರಾಜಕೀಯ ವಿಷಯಗಳ ಬಗೆಗೆ ಅಪಾರವಾದ ಜ್ಞಾನ ಪಡೆದುಕೊಂಡಿರುತ್ತಾನೆ. ಆದರೆ ರಾಜ್ಯಶಾಸ್ತ್ರಜ್ಞ ಸಕ್ರಿಯವಾಗಿ ರಾಜಕಾರಣದಲ್ಲಿ ಭಾಗವಹಿಸದೆ ಇರಬಹುದು. ಈತನು ವಿಷಯದ ಬಗೆಗೆ ಅಧ್ಯಯನ ಮಾಡುವದು, ಬರೆಯುವದು ಮತ್ತು ಚರ್ಚಿಸುವದರಲ್ಲೇ ತನ್ನ ಕಾರ್ಯ ಕ್ಷೇತ್ರವನ್ನು ಸೀಮಿತಗೊಳಿಸಬಹುದು.

ರಾಜಕಾರಣ ಯಾವತ್ತೂ ಸ್ಥಿರವಾಗಿರುವದಿಲ್ಲ. ಅದು ಕಾಲಕಾಲಕ್ಕೆ ಪರಿಸ್ಥಿತಿಗನುಗುಣವಾಗಿ ಬದಲಾಗುತ್ತಾ ಹೋಗುತ್ತದೆ. ಅದರೊಂದಿಗೆ ಪಾತ್ರವಹಿಸುವ ವ್ಯಕ್ತಿಗಳು, ಪಕ್ಷ, ಸರಕಾರಗಳು ಬದಲಾಗುತ್ತಾ ಹೋಗುತ್ತವೆ. ಅಲ್ಲದೇ ರಾಜಕೀಯದಲ್ಲಿ ಭಿನ್ನಾಭಿಪ್ರಾಯಗಳು, ಸಂಘರ್ಷಗಳು, ವ್ಯಕ್ತಿ ಸಂಬಂಧಗಳು ಹೊಸ ಹೊಸ ರೂಪ ಪಡೆಯುತ್ತಾ ಹೋಗುತ್ತವೆ. ಇದರೊಂದಿಗೆ ರಾಜಕೀಯದ ಕೇಂದ್ರ ವಸ್ತು ಬದಲಾಗುತ್ತದೆ ಹಾಗೂ ಧ್ಯೇಯ ಕೂಡಾ ಬದಲಾಗುತ್ತದೆ.

ಒಬ್ಬ ವ್ಯಕ್ತಿ ರಾಜಕಾರಣದಲ್ಲಿ ಹೆಚ್ಚು ಆಸಕ್ತನಾಗಿದ್ದಾನೆ ಎಂದರೆ ಅವನು ಪ್ರಸ್ತುತವಾದ ಸಮಸ್ಯೆಗಳ ವಿಷಯದಲ್ಲಿ ಆಸಕ್ತನಾಗಿದ್ದಾನೆಂದು ಅರ್ಥ. ಆದರೆ ರಾಜ್ಯಶಾಸ್ತ್ರವು ರಾಜ್ಯ, ಸರಕಾರ, ಶಾಸನ ಮೊದಲಾದವುಗಳನ್ನು ಕುರಿತ ಅಧ್ಯಯನವಾಗಿರುತ್ತದೆ. ರಾಜಕಾರಣದ ಸೈದ್ಧಾಂತಿಕ ಅಧ್ಯಯನ ರಾಜ್ಯಶಾಸ್ತ್ರವಾದರೆ ಅದರ ಪ್ರಾಯೋಗಿಕ ಕ್ಷೇತ್ರ ರಾಜಕಾರಣವಾಗಿರುತ್ತದೆ. ರಾಜಕಾರಣವು ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿರುತ್ತದೆ. ಆದರೆ ರಾಜ್ಯಶಾಸ್ತ್ರ ರಾಜ್ಯ ಹಾಗೂ ಸರಕಾರದ ಹುಟ್ಟು ಹಾಗೂ ಬೆಳವಣಿಗೆಗೆ ಸಂಬಂಧಿಸಿದ ವಿಷಯವಾಗಿರುತ್ತದೆ.

ರಾಜಕಾರಣ ಹಾಗೂ ರಾಜ್ಯಶಾಸ್ತ್ರಕ್ಕೆ ವ್ಯತ್ಯಾಸವಿರುವಂತೆ ರಾಜಕಾರಣಿ ಮತ್ತು ರಾಜ್ಯಶಾಸ್ತ್ರಜ್ಞರ ನಡುವೆಯೂ ವ್ಯತ್ಯಾಸವನ್ನು ಕಾಣಬಹುದು.

ರಾಜಕಾರಣ ವಿಷಯದಲ್ಲಿ ಆಸಕ್ತಿ ಹೊಂದಿರುವ ಹಾಗೂ ಸರ್ಕಾರದ ಚಟುವಟಿಕೆಗಳಲ್ಲಿ ಹಾಗೂ ರಾಜಕೀಯ ವ್ಯವಹಾರಗಳಲ್ಲಿ ಸಕ್ರಿಯವಾಗಿ ಭಾಗವಹಿಸುವವ ರಾಜಕಾರಣಿ.

ವೆಬ್ಸ್ಟರ ಅರ್ಥಕೋಶದ ಪ್ರಕಾರ ಸರಕಾರದ ವಿಷಯದಲ್ಲಿ ದಕ್ಷನಾದ ಅಥವಾ ಸರಕಾರದ ಯಾವುದಾದರೂ ರಂಗದಲ್ಲಿ ಸಕ್ರಿಯವಾಗಿ ನಿರತನಾಗಿ ಯಾವುದಾದರೊಂದು ರಾಜಕೀಯ ಪಕ್ಷದೊಂದಿಗೆ ನಿಕಟತೆ ಹೊಂದಿರುವವನೇ ರಾಜಕಾರಣಿ.

ರಾಜ್ಯಶಾಸ್ತ್ರಜ್ಞ, ರಾಜಕಾರಣದಲ್ಲಿ ಆಸಕ್ತನಾಗಿರದೆ ರಾಜಕೀಯ ತತ್ವ. ಸರ್ಕಾರದ ರಚನೆ ಮೊದಲಾದ ವಿಷಯಗಳ ಅಧ್ಯಯನದಲ್ಲಿ ತೊಡಗಿಸಿಕೊಂಡಿರುತ್ತಾನೆ ಅಥವಾ ಆ ವಿಷಯದಲ್ಲಿ ಪರಿಣಿತನಾಗಿರುತ್ತಾನೆ.

ಇತ್ತೀಚಿನ ದಿನಗಳಲ್ಲಿ ರಾಜಕೀಯ ಕ್ಷೇತ್ರದಲ್ಲಿ ಆದ ಪ್ರಗತಿ ರಾಜಕಾರಣ ಎಂಬುದಕ್ಕೆ ಹೊಸ ಅರ್ಥವನ್ನು ನೀಡಿದೆ. ಇಂದು ಪ್ರತಿಯೊಬ್ಬರೂ ಬೇರೆ ವ್ಯಕ್ತಿಗಳ ಅಭಿಪ್ರಾಯವನ್ನು ನಿಯಂತ್ರಿಸಿ ನಿರ್ದೇಶಿಸಲು ಪ್ರಯತ್ನಿಸುತ್ತಿರುತ್ತಾರೆ. ಇತರರನ್ನು ನಿಯಂತ್ರಿಸಬೇಕೆಂಬ ಆಸೆ ಎಲ್ಲ ಮಾನವರಲ್ಲಿಯೂ ಇರುತ್ತದೆ. ರಾಜಕೀಯ ಚಟುವಟಿಕೆಗಳನ್ನು ಅನೇಕ ಸಂಘ ಸಂಸ್ಥೆಗಳ ಹಾಗೂ ರಾಜಕೀಯ ಪಕ್ಷಗಳ ಮೂಲಕ

ನಡೆಸಬಹುದು. ಪ್ರತಿಯೊಂದು ರಾಜಕೀಯ ಪಕ್ಷವು ದೇಶವು ಎದುರಿಸುತ್ತಿರುವ ಸಮಸ್ಯೆಗಳಿಗೆ ತನ್ನದೇ ಆದ ಪರಿಹಾರ ಘೋಷಿಸಿ ಅಧಿಕಾರವನ್ನು ಹಿಡಿದು ಸರಕಾರವನ್ನು ನಡೆಸಲು ಪ್ರಯತ್ನಿಸುತ್ತಿರುತ್ತದೆ.

ರಾಜಕಾರಣ ಎಲ್ಲಾ ಹಂತಗಳಲ್ಲಿಯೂ ಅಧಿಕಾರಕ್ಕೋಸ್ಕರ ನಡೆಯುವ ಹೋರಾಟ,ರಾಜಕಾರಣದ ಆಟದಲ್ಲಿ ನಾಯಕನಾಗಬೇಕೆಂಬ, ಆಳ್ವಿಕೆ ನಡೆಸಬೇಕೆಂಬ ಆಸೆ ಸ್ವಾಭಾವಿಕವಾಗಿ ಇರುತ್ತದೆ. ರಾಜಕಾರಣಿಗಳಿಗೆ ರಾಜ್ಯ ಅದರ ಇತರ ಅಂಶಗಳು, ರಾಜ್ಯದ ಸಾಧನಗಳು ಹೇಗೆ ಅಸ್ತಿತ್ವಕ್ಕೆ ಬಂದವು ಹಾಗೂ ಬೆಳವಣಿಗೆಯಾದವು ಎಂಬುದರ ಬಗ್ಗೆ ಆಸಕ್ತಿ ಇರುವದಿಲ್ಲ. ಆದುದರಿಂದ ರಾಜ್ಯಮತ್ತು ಸರಕಾರಗಳ ಅಧ್ಯಯನ ನಡೆಸುವ ನಮ್ಮ ಈ ವಿಷಯಕ್ಕೆ ರಾಜಕಾರಣ (ರಾಜಕೀಯ) ಎಂಬ ಪದಕ್ಕಿಂತ ರಾಜ್ಯಶಾಸ್ತ್ರ ಎಂಬ ಪದವೇ ಹೆಚ್ಚು ಸೂಕ್ತವಾದುದು ಎಂದು ಹೇಳಲಾಗಿದೆ.

## ರಾಜ್ಯಶಾಸ್ತ್ರದ ವ್ಯಾಪ್ತಿ

ಇತರ ಶಾಸ್ತ್ರಗಳಂತೆ ರಾಜ್ಯಶಾಸ್ತ್ರವು ಕೂಡಾ ತನ್ನದೇ ಆದ ವಿಷಯ ವ್ಯಾಪ್ತಿಯನ್ನು ಹೊಂದಿದೆ.

ವ್ಯಾಪ್ತಿ ಎಂದರೆ ವಿಷಯ ಕ್ಷೇತ್ರ ಅಥವಾ ಹರವು ಅಥವಾ ಮೇರೆ ಎಂದರ್ಥ. ಅಂದರೆ ರಾಜ್ಯಶಾಸ್ತ್ರದಲ್ಲಿ ಏನನ್ನೆಲ್ಲಾ ಅಧ್ಯಯನ ಮಾಡಲಾಗುವದು ಅಥವಾ ಅದರಲ್ಲಿ ಏನೆಲ್ಲಾ ಸೇರಿರುತ್ತದೆ ಎಂಬುದು. ಪ್ರತಿಯೊಂದು ವಿಷಯವು ತನ್ನದೇ ಆದ ಅಧ್ಯಯನ ಕ್ಷೇತ್ರವನ್ನು ಹೊಂದಿಕೊಂಡಿದೆ. ನೈಸರ್ಗಿಕ ವಿಜ್ಞಾನಗಳಲ್ಲಿ ಒಂದು ವಿಷಯದ ಅಧ್ಯಯನ ಕ್ಷೇತ್ರವನ್ನು ಇಂತಿಷ್ಟೇ ಎಂದು ಸ್ಪಷ್ಟವಾಗಿ ಹೇಳಬಹುದು. ಆದರೆ ಅಷ್ಟು ನಿಖರವಾಗಿ ಸಾಮಾಜಿಕ ಶಾಸ್ತ್ರಗಳ ಅಧ್ಯಯನ ಕ್ಷೇತ್ರವನ್ನು ನಿರ್ಧರಿಸಲು ಸಾಧ್ಯವಿಲ್ಲ.

ರಾಜ್ಯಶಾಸ್ತ್ರದ ವಿಷಯ ಕ್ಷೇತ್ರದ ಬಗ್ಗೆ ರಾಜ್ಯಶಾಸ್ತ್ರಜ್ಞರಲ್ಲಿ ಏಕಾಭಿಪ್ರಾಯ-ವಿಲ್ಲದೆ ಭಿನ್ನಾಭಿಪ್ರಾಯವಿರುವದು ಕಂಡು ಬರುತ್ತದೆ. ಬ್ಲಂಟಶ್ಲಿ, ಗ್ಯಾರಿಸ್, ಗಾರ್ನರ್, ಗುಡ್‌ನವ್ ಮೊದಲಾದ ಕೆಲವು ರಾಜ್ಯ ಶಾಸ್ತ್ರಜ್ಞರು ರಾಜ್ಯಶಾಸ್ತ್ರವು ರಾಜ್ಯವನ್ನು ಕುರಿತ ಅಧ್ಯಯನ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಜಾನ್‌ಸೀಲಿ, ಸ್ಟೀಫನ್‌ಲೀಕಾಕ್ ಇವರುಗಳು ರಾಜ್ಯಶಾಸ್ತ್ರದ ಅಧ್ಯಯನವು ಸರಕಾರವನ್ನು ಮಾತ್ರ ಕುರಿತದ್ದಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಹೀಗಿದ್ದರೂ ಸಾಧಾರಣವಾಗಿ ಎಲ್ಲರ ಮನ್ನಣೆಯನ್ನು ಪಡೆದ ಒಂದು ಅಭಿಪ್ರಾಯವಿದೆ. ಅದೇನೆಂದರೆ ಸರಕಾರ ಇಲ್ಲದೇ ರಾಜ್ಯ ಇರಲು ಸಾಧ್ಯವಿಲ್ಲ ಹಾಗೂ ರಾಜ್ಯ ಇಲ್ಲದೇ ಸರಕಾರ ಇರಲು ಸಾಧ್ಯವಿಲ್ಲ. ಸರಕಾರವು ರಾಜ್ಯದ ಎಲ್ಲ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಒಂದು ಪ್ರಮುಖವಾದ ಸಾಧನ. ಸರಕಾರವಿಲ್ಲದಿದ್ದರೆ

ರಾಜ್ಯವು ತನ್ನ ಧ್ಯೇಯವನ್ನು ಸಾಧಿಸಲು ಸಾಧ್ಯವಿಲ್ಲ.ಈ ಸಂದರ್ಭದಲ್ಲಿ ಎಚ್.ಜಿ. ಲಾಸ್ಕಿಯವರ ಪ್ರಕಾರ ''ರಾಜ್ಯವೆಂದರೆ ವಾಸ್ತವವಾದ ಅರ್ಥ ಸರಕಾರವೆಂದೇ'' ಎಂಬ ಮಾತು ಗಮನಾರ್ಹವಾಗಿದೆ. ಅಂದರೆ ಸರಕಾರವು ರಾಜ್ಯದ ಒಂದು ಅವಿಭಾಜ್ಯ ಅಂಗವಾಗಿದೆ. ಜನರ ಹಿತ ಸಾಧನೆಯೇ ರಾಜ್ಯದ ಗುರಿ. ಆದರೆ ರಾಜ್ಯವು ಆ ಕೆಲಸವನ್ನು ಸರಕಾರದ ಮೂಲಕ ನಿರ್ವಹಿಸುತ್ತದೆ.ರಾಜ್ಯದ ಬಗ್ಗೆ ಹೇಳುವಾಗ ಅಥವಾ ಮಾತನಾಡುವಾಗ ಸರಕಾರದ ಬಗೆಗಿನ ಪ್ರಸ್ತಾಪ ಅನಿವಾರ್ಯ. ಇದರಿಂದ ರಾಜ್ಯ ಮತ್ತು ಸರಕಾರಗಳೆರಡರ ಅಧ್ಯಯನವನ್ನು ರಾಜ್ಯಶಾಸ್ತ್ರವು ಒಳಗೊಂಡಿರುತ್ತದೆ ಎಂಬ ಅಭಿಪ್ರಾಯವು ಸಮಂಜಸವಾದುದು ಎಂದು ಹೇಳಬಹುದು. ವ್ಯಕ್ತಿಯ ಅಗತ್ಯತೆಗಳನ್ನು ಪೂರೈಸಲೋಸುಗ ರಾಜ್ಯವು ರಚಿತವಾಗಿರಬಹುದು.ಆದರೆ ಸರಕಾರ ಎಂಬ ಯಂತ್ರ ರಾಜ್ಯದ ಸುತ್ತ ಸುತ್ತುತ್ತದೆಯಾದ್ದರಿಂದ ಸರಕಾರದ ಅಧ್ಯಯನವನ್ನು ಮಾಡದೇ ರಾಜ್ಯದ ಅಧ್ಯಯನ ಮಾಡುವುದು ಸಾಧ್ಯವಿಲ್ಲ. ಆದುದರಿಂದ ರಾಜ್ಯಶಾಸ್ತ್ರವು ರಾಜ್ಯ ಮತ್ತು ಸರಕಾರಗಳೆರಡರ ಅಧ್ಯಯನವನ್ನು ಒಳಗೊಂಡಿದೆ. ಅಂದರೆ ಕೇವಲ ಇವುಗಳ ಪ್ರಸ್ತುತ ಅಧ್ಯಯನ ಮಾತ್ರ ಎಂದು ಅರ್ಥವಲ್ಲ,ಇವೆರಡರ ಭೂತ, ವರ್ತಮಾನ, ಭವಿಷತ್‌ಗಳ ಸಮಗ್ರ ಅಧ್ಯಯನವು ಇದರಲ್ಲಿ ಸೇರಿದೆ. ಅದರೆ ಹಿಂದೆ ರಾಜ್ಯವು ಹೇಗೆ ಹುಟ್ಟಿತು, ಅದಕ್ಕೆ ಕಾರಣಗಳೇನು, ಯಾವ ತತ್ವಗಳ ಆಧಾರದ ಮೇಲೆ ರಾಜ್ಯವು ರಚನೆಯಾಯಿತು, ಅಂದಿನ ಸರಕಾರದ ರೂಪರೇಷೆಗಳೇನು ಎಂಬ ಐತಿಹಾಸಿಕ ಅಧ್ಯಯನವೂ ಪ್ರಸ್ತುತ ರಾಜ್ಯದ, ಸರಕಾರದ, ಪೌರ ಮತ್ತು ಸರಕಾರಗಳ ಸಂಬಂಧ, ಸರಕಾರದ ವಿಧಗಳು, ಪ್ರತಿಯೊಂದು ಅಂಗಗಳು, ಅವುಗಳ ಅಧಿಕಾರಗಳು ಆಡಳಿತದ ರೀತಿ-ನೀತಿ, ಜನರ ಹಕ್ಕು ಮತ್ತು ಕರ್ತವ್ಯಗಳು ಮುಂತಾದವುಗಳನ್ನು ಒಳಗೊಂಡಿರುತ್ತದೆ. ಅಲ್ಲದೇ ಮುಂದೆ ಈಗಿರುವದಕ್ಕಿಂತಲೂ ಉತ್ತಮ ಮಟ್ಟದಲ್ಲಿ ಸರಕಾರವು ಕೆಲಸ ಕಾರ್ಯಗಳನ್ನು ನಿರ್ವಹಿಸಿ ಜನರ ಹಿತವನ್ನು ಇನ್ನೂ ಹೆಚ್ಚಿನ ಮಟ್ಟದಲ್ಲಿ ಸಾಧಿಸಬೇಕಾದರೆ, ಪೌರರ ಆಶೋತ್ತರಗಳನ್ನು ಸುಲಭವಾಗಿ ಈಡೇರಿಸಬಹುದಾದಂತಹ ಉತ್ತಮವಾದ ರಾಜ್ಯವನ್ನು ಹೇಗೆ ಸೃಷ್ಟಿಸುವದು ಎಂಬ ವಿಷಯಗಳನ್ನೆಲ್ಲಾ ಅಭ್ಯಸಿಸಲಾಗುವದು.

ಈಗಿನ ಕಾಲದಲ್ಲಿ ರಾಜ್ಯದ ವೈಶಾಲ್ಯತೆ ಬೆಳೆದಿದೆ. ಮೂರು ನೂರುವರ್ಷಗಳ ಹಿಂದೆ ರಾಜ್ಯವು ಪೋಲಿಸ ರಾಜ್ಯವಾಗಿತ್ತು. ಅಂದರೆ ರಾಜ್ಯದ ಕಾರ್ಯಗಳು ಮಿತಗೊಳಿಸಲ್ಪಟ್ಟಿದ್ದವು. ಜನರ ಜೀವನ,ಸ್ವಾತಂತ್ರ್ಯ ಹಾಗೂ ಆಸ್ತಿಯನ್ನು ರಕ್ಷಿಸುವದಷ್ಟೇ ಸರಕಾರದ ಕಾರ್ಯಗಳಾಗಿದ್ದವು. ಆದರೆ ಆಧುನಿಕ ಪ್ರಪಂಚದಲ್ಲಿ ರಾಜ್ಯಗಳು ಲೋಕ ಕಲ್ಯಾಣ ರಾಜ್ಯ ಅಥವಾ ಕಲ್ಯಾಣ ರಾಜ್ಯಗಳಾಗಿ ಪರಿಣಮಿಸಿವೆ. ಕಲ್ಯಾಣ ರಾಜ್ಯವು ಕೇವಲ ರಕ್ಷಣಾ ಕಾರ್ಯಗಳನ್ನಷ್ಟೇ ಮಾಡದೇ ಜನರ ಸರ್ವತೋಮುಖ ಬೆಳವಣಿಗೆಗೆ ಅವಶ್ಯವಿರುವ ಶೈಕ್ಷಣಿಕ, ವೈದ್ಯಕೀಯ, ಸಾರಿಗೆ ಸಂಪರ್ಕ, ವಿದ್ಯುದ್ದೀಪದ ವ್ಯವಸ್ಥೆ ಇದಲ್ಲದೇ ಸಮಾಜವಾದಿ ಸಮಾಜವನ್ನು ಕಟ್ಟುವ ಉದ್ದೇಶಕ್ಕಾಗಿ ಅನೇಕ ಕಾರ್ಯಗಳನ್ನು ಮಾಡುತ್ತದೆ.

ಕ್ರಿ.ಶ.1948ರಲ್ಲಿ ಯುನೇಸ್ಕೊ ಸಮ್ಮೇಳನದಲ್ಲಿ ರಾಜ್ಯಶಾಸ್ತ್ರ ವಿಷಯದ ವಸ್ತುಗಳನ್ನು ಗುರುತಿಸಲಾಯಿತು. ಒಟ್ಟಾರೆ ರಾಜ್ಯಶಾಸ್ತ್ರವು ಈ ಕೆಳಗಿನ ಅಧ್ಯಯನವನ್ನು ಒಳಗೊಂಡಿದೆ.

### ಅ. ರಾಜ್ಯ ಮತ್ತು ಸರಕಾರದ ಅಧ್ಯಯನ

ರಾಜ್ಯ, ರಾಜ್ಯದ ರಚನೆ, ಸರಕಾರ ಹಾಗೂ ಅದರ ಚಟುವಟಿಕೆ ಮೊದಲಾದವುಗಳ ವೈಜ್ಞಾನಿಕ ಅಧ್ಯಯನವನ್ನು ರಾಜ್ಯಶಾಸ್ತ್ರ ಒಳಗೊಂಡಿದೆ. ಲಾಸ್ಕಿ ಎಂಬ ಲೇಖಕರ ಪ್ರಕಾರ ರಾಜ್ಯಶಾಸ್ತ್ರವು ರಾಜ್ಯ ಮತ್ತು ಸರಕಾರ ಎರಡರ ಅಧ್ಯಯನವನ್ನು ಒಳಗೊಂಡಿದೆ.

### ಆ. ರಾಜಕೀಯ ಸಿದ್ಧಾಂತಗಳ ಅಧ್ಯಯನ

ರಾಜಕೀಯ ಸಿದ್ಧಾಂತದಲ್ಲಿ ರಾಜ್ಯದ ಉಗಮ ಮತ್ತು ಬೆಳವಣಿಗೆ ರಾಜ್ಯದ ಗುರಿ ಮತ್ತು ರಾಜ್ಯದ ಕಾರ್ಯಗಳ ಬಗ್ಗೆ ಅಭ್ಯಸಿಸುತ್ತೇವೆ. ರಾಜ್ಯ ಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ಸಿದ್ಧಾಂತಗಳಾದ ವ್ಯಕ್ತಿವಾದ, ಸಮಾಜವಾದ, ಸಮತಾವಾದ, ಪ್ರಜಾಪ್ರಭುತ್ವ ಮುಂತಾದವುಗಳ ಬಗ್ಗೆ ಅಧ್ಯಯನಮಾಡುತ್ತೇವೆ. ರಾಜ್ಯ ಶಾಸ್ತ್ರಕ್ಕೆ ಸಂಬಂಧಿಸಿದ ಮೂಲಭೂತ ತತ್ವಗಳಾದ ಸಾರ್ವಭೌಮ ಅಧಿಕಾರ, ಕಾನೂನು, ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮಾನತೆ ಮೊದಲಾದವುಗಳ ಬಗ್ಗೆ ವಿವೇಚನೆ ಮಾಡುತ್ತೇವೆ.

### ಇ. ರಾಜಕೀಯ ವ್ಯವಸ್ಥೆ

ರಾಜ್ಯಕ್ಕೆ ಬೇಕಾಗುವ ವಿವಿಧ ಸಂವಿಧಾನಗಳ ಬಗ್ಗೆ ಅಭ್ಯಾಸ ಮಾಡುತ್ತೇವೆ. ಲಿಖಿತ ಮತ್ತು ಅಲಿಖಿತ ಸಂವಿಧಾನಗಳು ಮತ್ತು ನಮ್ಯ ಹಾಗೂ ಅನಮ್ಯ ಸಂವಿಧಾನಗಳು ಸರ್ಕಾರದ ಸ್ವರೂಪದ ಬಗ್ಗೆ ಅಭ್ಯಾಸ ಮಾಡುತ್ತೇವೆ. ಕೇಂದ್ರೀಕೃತ ಸರಕಾರ ಮತ್ತು ಸಂಯುಕ್ತ ಸರಕಾರ ಇದಲ್ಲದೆ ಸಂಸದೀಯ ಸರಕಾರ ಮತ್ತು ಅಧ್ಯಕ್ಷೀಯ ಸರಕಾರದ ಅಂಗಗಳಾದ ಶಾಸಕಾಂಗ, ಕಾರ್ಯಾಂಗ, ಮತ್ತು ನ್ಯಾಯಾಂಗ ಇವುಗಳ ರಚನೆ, ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ಅಭ್ಯಾಸ ಮಾಡುತ್ತೇವೆ.

### ಈ. ರಾಜಕೀಯ ಚಟುವಟಿಕೆಗಳು

ರಾಜಕೀಯ ಪಕ್ಷಗಳ ರಚನೆ, ಸಂಘಟನೆ ಹಾಗೂ ಕಾರ್ಯಗಳ ಬಗ್ಗೆ ಅಭ್ಯಾಸ ಮಾಡುತ್ತೇವೆ. ಚರ್ಚಾಕೂಟ, ಸಾರ್ವಜನಿಕ ವೇದಿಕೆಯ ಮುಖಾಂತರ ಭಾಷಣ ವರ್ತಮಾನ ಪತ್ರಗಳ, ದೂರದರ್ಶನ ಸಮೀಕ್ಷೆಗಳ ಮೂಲಕ ಸಾರ್ವಜನಿಕ ಅಭಿಪ್ರಾಯ ಹೇಗೆ ವ್ಯಕ್ತವಾಗುತ್ತದೆಂಬುದನ್ನು ತಿಳಿದುಕೊಳ್ಳುತ್ತೇವೆ. ಮತದಾರರ ಸಮುದಾಯ ಹಾಗೂ ಪ್ರಾತಿನಿಧ್ಯ ಮತ್ತು ಚುನಾವಣೆ ಪದ್ಧತಿಯ ಬಗ್ಗೆ ಅಭ್ಯಾಸ ಮಾಡುತ್ತೇವೆ.

### ಉ. ಸಾರ್ವಜನಿಕ ಆಡಳಿತ

ಸರಕಾರದ ದೈನಂದಿನ ಆಡಳಿತವನ್ನು ಸಾಗಿಸುವ ವಿಧಾನ, ಸರಕಾರದ ಬೇರೆ ಬೇರೆ ಖಾತೆಗಳು, ನೌಕರ ವರ್ಗ ಮೊದಲಾದ ವಿಷಯಗಳ ಬಗ್ಗೆ ಅಭ್ಯಾಸ ಮಾಡುತ್ತೇವೆ.

### ಊ. ಅಂತರಾಷ್ಟ್ರೀಯ ಸಂಬಂಧಗಳು

ಪ್ರಪಂಚದಲ್ಲಿ ಅನೇಕ ಸ್ವತಂತ್ರ ರಾಜ್ಯಗಳಿವೆ. ಆದರೆ ಅವು ಪ್ರತ್ಯೇಕವಾಗಿ ಬೆಳೆಯಲಾರವು. ಪರಸ್ಪರ ಸಹಕಾರ, ಸಹಾಯ ತತ್ವಗಳ ಆಧಾರದ ಮೇಲೆ ಜಗತ್ತಿನ ರಾಷ್ಟ್ರಗಳು ಶಾಂತ ರೀತಿಯಿಂದ ಬದುಕಬಲ್ಲವು. ಆದಕಾರಣ ರಾಜ್ಯ ರಾಜ್ಯಗಳ ನಡುವೆ ಯಾವ ರೀತಿಯಿಂದ ಸಂಬಂಧವನ್ನು ಇಟ್ಟು ಕೊಳ್ಳಬೇಕು ಮತ್ತು ಮಿತ್ರತ್ವವನ್ನು ಬೆಳೆಯಿಸಬೇಕೆಂಬ ವಿಧಾನದ ಬಗ್ಗೆ ಅಭ್ಯಾಸ ಮಾಡುತ್ತೇವೆ. ಸಂಯುಕ್ತರಾಷ್ಟ್ರ ಸಂಘ **(U.N.O.)**ದ ಮೂಲಕ ಪ್ರಪಂಚದಲ್ಲಿ ಶಾಂತಿ, ಸುವ್ಯವಸ್ಥೆ ಮತ್ತು ಸೌಹಾರ್ದತೆ ನೆಲೆಗೊಳ್ಳುವಂತೆ ಪ್ರತಿಯೊಂದು ರಾಷ್ಟ್ರವು ತನ್ನ ವಿದೇಶ ನೀತಿಯನ್ನು ರೂಪಿಸಬೇಕೆಂದು ಈ ಭಾಗವು ತಿಳಿಯಪಡಿಸುತ್ತದೆ.

### ಎ. ವ್ಯಕ್ತಿ ಹಾಗೂ ರಾಜ್ಯದ ನಡುವಿನ ಹೊಂದಾಣಿಕೆ

ವ್ಯಕ್ತಿ ಮತ್ತು ರಾಜ್ಯದ ನಡುವಿನ ಸಂಬಂಧ ಕುರಿತು ಅಭ್ಯಸಿಸಲಾಗುತ್ತದೆ. ಸಮಾಜದಲ್ಲಿ ವ್ಯಕ್ತಿ ಹೇಗೆ ತನ್ನನ್ನು ಹೊಂದಿಸಿಕೊಳ್ಳುತ್ತಾನೆ ಎಂಬುದು ಮುಖ್ಯ. ಏಕೆಂದರೆ ವ್ಯಕ್ತಿಯೇ ರಾಜಕಾರಣದ ಬಿಂದು. ರಾಜ್ಯ, ವ್ಯಕ್ತಿಗೆ ಕೆಲವೊಂದು ಹಕ್ಕು ಮತ್ತು ಸ್ವಾತಂತ್ರ್ಯಗಳನ್ನು ದಯಪಾಲಿಸಿದೆ. ಇದೇ ಸಂದರ್ಭದಲ್ಲಿ ಕೆಲವೊಂದು ಭಾದ್ಯತೆಗಳನ್ನು ವಿಧಿಸಿದೆ. ವ್ಯಕ್ತಿಯ ವಿಷಯದಲ್ಲಿ ರಾಜ್ಯದ ಹಸ್ತಕ್ಷೇಪ ಅವನ ಸ್ವಾತಂತ್ರ್ಯವನ್ನು ಹಾಳುಮಾಡುತ್ತದೆ. ರಾಜ್ಯ ಹಸ್ತಕ್ಷೇಪ ಮಾಡದಿದ್ದರೆ ಅರಾಜಕತೆ ಉಂಟಾಗುತ್ತದೆ. ಇಂತಹ ಸಂದರ್ಭದಲ್ಲಿ ವ್ಯಕ್ತಿಯ ಸ್ವಾತಂತ್ರ್ಯ ಮತ್ತು ರಾಜ್ಯದ ಅಧಿಕಾರದ ನಡುವೆ ಹೊಂದಾಣಿಕೆ ಹೇಗೆ ಏರ್ಪಾಡಾಗುತ್ತದೆ ಎಂಬುದು ಕೂಡ ಅಧ್ಯಯನಕ್ಕೆ ಮುಖ್ಯ ಎನಿಸಿದೆ.

ಇದು ಬೌದ್ಧಿಕ ಕ್ರಾಂತಿಯ ಯುಗ. ರಾಜ್ಯಶಾಸ್ತ್ರದ ವಿಷಯದಲ್ಲಿಯೂ ಹೊಸ ಹೊಸ ಕಲ್ಪನೆಗಳು, ಅನ್ವೇಷಣೆಗಳು ನಡೆದು ದಿನ ದಿನಕ್ಕೂ ರಾಜ್ಯಶಾಸ್ತ್ರದ ವ್ಯಾಪ್ತಿ ಹಿಗ್ಗುತ್ತಿದೆ.

# ಆ. ಸಮಕಾಲೀನ ಜಗತ್ತಿನಲ್ಲಿ ರಾಜ್ಯಶಾಸ್ತ್ರದ ಅಧ್ಯಯನದ ಪ್ರಸ್ತುತತೆ

ಈಗಿನ ಪ್ರಪಂಚದಲ್ಲಿ ರಾಜ್ಯಶಾಸ್ತ್ರವು ಅತ್ಯಂತ ಪುರಾತನ ಶಾಸ್ತ್ರವಾಗಿದೆ. ಪ್ಲೇಟೋ ಮುಂತಾದವರ ಕಾಲದಿಂದ ಇಂದಿನವರೆಗೂ ರಾಜ್ಯಶಾಸ್ತ್ರವನ್ನು ವಿವಿಧ ಸ್ಥರಗಳಲ್ಲಿ ಅಧ್ಯಯನ ಮಾಡಿ ಅನೇಕ ತತ್ವಜ್ಞಾನಿಗಳು, ದಾರ್ಶನಿಕರು, ಮೇಧಾವಿಗಳು, ರಾಜಕಾರಣಿಗಳು ಈ ಶಾಸ್ತ್ರಗಳ ಬೆಳವಣಿಗೆಗೆ ನೆರವಾಗಿದ್ದಾರೆ.

ರಾಜ್ಯಶಾಸ್ತ್ರದ ಅಭ್ಯಾಸ ಅತ್ಯವಶ್ಯಕವಾಗಿದೆ. ರಾಜ್ಯಶಾಸ್ತ್ರದ ಜ್ಞಾನವಿಲ್ಲದ ವ್ಯಕ್ತಿ ನಿಜವಾದ ಅರ್ಥದಲ್ಲಿ ನಾಗರಿಕನಾಗಲಾರ ಎಂದು ಹೇಳಲಾಗಿದೆ. ಇದರ ಪ್ರಾಮುಖ್ಯತೆಯ ಬಗ್ಗೆ ಈ ಕೆಳಗಿನ ಕಾರಣಗಳನ್ನು ಕೊಡಬಹುದು.

## ಅ. ರಾಜಕೀಯ ಶಿಕ್ಷಣ

ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಇಂದು ಪ್ರಜಾಸತ್ತಾತ್ಮಕ ಸರಕಾರಗಳನ್ನು ನೋಡುತ್ತೇವೆ. ಇದು ಪ್ರಜಾಪ್ರಭುತ್ವಯುಗ. ''ಪ್ರಜಾಪ್ರಭುತ್ವವೆಂದರೆ ಪ್ರಜೆಗಳು, ಪ್ರಜೆಗಳಿಂದ, ಪ್ರಜೆಗಳಿಗಾಗಿ ಇರುವ ಸರಕಾರ'' ಎಂದು ಅಮೇರಿಕದ ಅಧ್ಯಕ್ಷರಾಗಿದ್ದ ಅಬ್ರಹಂ ಲಿಂಕನ್ ಹೇಳಿದ್ದಾರೆ. ಈ ರೀತಿಯ ಪ್ರಜೆಗಳು ತಮ್ಮನ್ನು ತಾವೇ ಆಳಿಕೊಳ್ಳಬೇಕಾದರೆ ಅವರಿಗೆ ರಾಜ್ಯದ ಆಡಳಿತದ ಬಗ್ಗೆ ಮಾಹಿತಿ ಇರಲೇಬೇಕು. ದೇಶದಲ್ಲಿಯ ಜನರು ನಿರಕ್ಷರತೆಯ ಅಂಧಕಾರದಲ್ಲಿದ್ದರೆ ಅಂತಹ ಜನರು ಪ್ರಜಾಪ್ರಭುತ್ವ ಸರಕಾರವನ್ನು ಯಶಸ್ವಿ ರೀತಿಯಿಂದ ಸಾಗಿಸಿಕೊಂಡು ಹೋಗಲಾರರು. ಅವರಿಗೆ ರಾಜಕೀಯ ಜ್ಞಾನ ಇರಲೇಬೇಕು. ಅಜ್ಞಾನ ಪ್ರಜಾತಂತ್ರದ ಶತ್ರು ಎಂದು ಹೇಳಲಾಗಿದೆ. ಪ್ರತಿಯೊಬ್ಬರೂ ರಾಜ್ಯ ಶಾಸ್ತ್ರದ ಮೂಲತತ್ವಗಳನ್ನು ಅರಿತಿರಬೇಕು. ಇಂಥ ರಾಜಕೀಯ ಜ್ಞಾನವನ್ನು ರಾಜ್ಯಶಾಸ್ತ್ರದ ಅಭ್ಯಾಸವು ಒದಗಿಸುವದು. ಪ್ರಜಾಪ್ರಭುತ್ವದ ಯಶಸ್ಸು ಆ ದೇಶದ ನಾಗರಿಕರ ರಾಜಕೀಯಪ್ರಜ್ಞೆ ಹಾಗೂ ಅವರ ಚಾರಿತ್ರ್ಯದ ಮೇಲೆ ಅವಲಂಬಿಸಿರುತ್ತದೆ.

## ಆ. ವಿಶ್ವ ಶಾಂತಿಗೆ ಮಾರ್ಗದರ್ಶನ

ಇಪ್ಪತ್ತನೆಯ ಶತಮಾನದಲ್ಲಿ ನಾವು ಎರಡು ಮಹಾಯುದ್ಧಗಳನ್ನು ನೋಡಿದೆವು. ಈ ಜಾಗತಿಕ ಯುದ್ಧಗಳಿಂದ ಅನೇಕ ರಾಷ್ಟ್ರಗಳು, ಜನಾಂಗಗಳು ಹಾಗೂ ನಾಗರಿಕತೆ ಧ್ವಂಸವಾಗಿ ಹೋದವು. ಯಾಕೆಂದರೆ ಯುದ್ಧದಲ್ಲಿ ಅಂಥ ವಿನಾಶದ ಶಕ್ತಿಯಿರುವ ಅಸ್ತ್ರಗಳನ್ನು ಬಳಸಲಾಯಿತು. ಇನ್ನೊಂದು ಅಂಥ ಮೂರನೆಯ ಮಹಾಯುದ್ಧವಾದರೆ ಜಗತ್ತೇ ಅಂತ್ಯಗೊಳ್ಳುವದೆಂದು ದೇಶವಿದೇಶಗಳ ಚಿಂತಕರು

ಮನಗಂಡಿದ್ದಾರೆ. ಆದುದರಿಂದ ಪ್ರಪಂಚಕ್ಕೆ ಶಾಶ್ವತವಾದ ಶಾಂತಿಯನ್ನು ತರಲು ಹಾಗೂ ಪರಸ್ಪರ ಯುದ್ಧಗಳನ್ನು ನಿವಾರಿಸಲು ಕ್ರಿ. ಶ. 1945 ಅಕ್ಟೋಬರ್ 24 ರಂದು 'ಸಂಯುಕ್ತ ರಾಷ್ಟ್ರ ಸಂಘ' (U.N.O.)ವನ್ನು ಸ್ಥಾಪಿಸಲಾಗಿದೆ. ಇದನ್ನು ವಿಶ್ವಸಂಸ್ಥೆ ಎಂದು ಸಹ ಕರೆಯುವರು. 192 ಸದಸ್ಯ ರಾಷ್ಟ್ರಗಳನ್ನು ಇದು ಹೊಂದಿದೆ. ಸಂಯುಕ್ತರಾಷ್ಟ್ರ ಸಂಘದ ವಿವಿಧ ಅಂಗಗಳ ರಚನೆ, ಕಾರ್ಯ ಕಲಾಪಗಳನ್ನು ಅರಿತುಕೊಳ್ಳಲು ಮತ್ತು ಅಂತರ ರಾಷ್ಟ್ರೀಯ ಶಾಂತಿಯ ಅವಶ್ಯಕತೆಯನ್ನು ಮನಗಾಣಲು ರಾಜ್ಯಶಾಸ್ತ್ರದ ಅಭ್ಯಾಸ ಅಗತ್ಯವಾಗಿದೆ.

## ಇ. ಕಲ್ಯಾಣ ರಾಷ್ಟ್ರ

ಹಿಂದೆ ಇದ್ದ ಪೊಲೀಸ್ ರಾಜ್ಯದ ಸ್ಥಾನವನ್ನು ಕಲ್ಯಾಣ ರಾಜ್ಯಗಳು ಅಲಂಕರಿಸಿವೆ.. ಸರಕಾರವು ಸಮಾಜದ ಎಲ್ಲ ರಂಗಗಳಲ್ಲಿ ಕೈಹಾಕಿದೆ. ಸಮಾಜದ ಹಿತಕ್ಕಾಗಿ ಅನೇಕ ಕಾರ್ಯಗಳನ್ನು ನಡೆಸುವದು, ಪಂಚವಾರ್ಷಿಕ ಯೋಜನೆಗಳ ಮೂಲಕ ರಾಷ್ಟ್ರದ ಉತ್ಪಾದನೆಯನ್ನು ಹೆಚ್ಚಿಸಿ ದೇಶದಲ್ಲಿ ಭದ್ರ ಆರ್ಥಿಕ ತಳಹದಿಯನ್ನು ಹಾಕಲು ಸರಕಾರವು ಹೆಣಗಾಡುವದು. ಜನರ ಸರ್ವತೋಮುಖ ಬೆಳವಣಿಗೆಗಾಗಿ ಜನರ ಜೀವನ ಮಟ್ಟವನ್ನು ಹೆಚ್ಚಿಸುವದರ ಸಲುವಾಗಿ ಸರಕಾರವು ಅನೇಕ ಸಾಮಾಜಿಕ, ಆರ್ಥಿಕ ಚಟುವಟಿಕೆಗಳನ್ನು ಕೈಗೊಂಡಿದೆ.

ಕಲ್ಯಾಣರಾಜ್ಯದ ಗುರಿಯನ್ನು ಸಾಧಿಸಬೇಕಾದರೆ ಸರಕಾರ ಮತ್ತು ಜನರ ನಡುವೆ ತಿಳಿವಳಿಕೆ ಹಾಗೂ ಸಹಕಾರ ಅಗತ್ಯ. ಸರಕಾರಿ ಅಧಿಕಾರಿಗಳು ಮತ್ತು ನಾಗರಿಕರು ತಮ್ಮ ತಮ್ಮ ಕರ್ತವ್ಯಗಳನ್ನು ಪ್ರಾಮಾಣಿಕತೆಯಿಂದ, ಕರ್ತವ್ಯ ನಿಷ್ಠೆಯಿಂದ ಮಾಡಬೇಕು. ಇಂತಹ ಸರ್ವವ್ಯಾಪಕವಾದ ರಾಜಕೀಯ ಚಟುವಟಿಕೆಗಳನ್ನು ತಿಳಿದುಕೊಳ್ಳಲು ರಾಜ್ಯಶಾಸ್ತ್ರದ ಅಧ್ಯಯನ ಅವಶ್ಯವಾಗಿದೆ.

## ಈ. ರಾಜ್ಯ ಮತ್ತು ಸರಕಾರದ ಬಗ್ಗೆ ತಿಳಿದುಕೊಳ್ಳಲು

ಪ್ರತಿಯೊಬ್ಬ ಮನುಷ್ಯನು ತನ್ನ ವ್ಯಕ್ತಿತ್ವದ ಶಿಖರವನ್ನು ಮುಟ್ಟಲು ರಾಜ್ಯದಲ್ಲಿ ವಾಸಿಸಿದರೆ ಮಾತ್ರ ಸಾಧ್ಯ. ಆದುದರಿಂದ ರಾಜ್ಯ, ಮನುಷ್ಯನಿಗೆ ಬೇಕಾದ ಒಂದು ಅಗತ್ಯವಾದ ಸಂಸ್ಥೆಯಾಗಿದೆ. ತನ್ನ ಅಗತ್ಯತೆಗಳನ್ನು ಪೂರೈಸುವ, ಆಕಾಂಕ್ಷೆಗಳನ್ನು ಈಡೇರಿಸುವ ರಾಜ್ಯ ಹಾಗೂ ಸರಕಾರದ ಬಗ್ಗೆ ಅರಿಯ ಬೇಕಾದರೆ ರಾಜ್ಯ ಶಾಸ್ತ್ರದ ಅಧ್ಯಯನ ಅತ್ಯಗತ್ಯ.

## ಉ. ಹಕ್ಕುಗಳು ಮತ್ತು ಕರ್ತವ್ಯಗಳ ಬಗ್ಗೆ ತಿಳಿದುಕೊಳ್ಳಲು

ವ್ಯಕ್ತಿಯು ತನಗಿರುವ ಹಕ್ಕುಗಳು, ತಾನು ಮಾಡಬೇಕಾದ ಕರ್ತವ್ಯ ಮತ್ತು ಹೊಂದಿರುವ ಹೊಣೆ ಮುಂತಾದವುಗಳನ್ನು ತಿಳಿದುಕೊಳ್ಳಬೇಕಾದರೆ ರಾಜ್ಯಶಾಸ್ತ್ರದ ಅಧ್ಯಯನ ಅಗತ್ಯ.

## ಊ. ರಾಜಕೀಯ ಸಿದ್ಧಾಂತದ ಜ್ಞಾನ

ರಾಷ್ಟ್ರವು ಎದುರಿಸಬೇಕಾದ ರಾಜಕೀಯ, ಆರ್ಥಿಕ, ಮತ್ತು ಸಾಮಾಜಿಕ, ಸಮಸ್ಯೆಗಳಿಗೆ ಸೂಕ್ತ ಪರಿಹಾರವನ್ನು ಸೂಚಿಸಬೇಕಾದರೆ ನಾಗರಿಕರಿಗೆ ಬೇರೆ ಬೇರೆ ರಾಜಕೀಯ ಸಿದ್ಧಾಂತಗಳು ತಿಳಿದಿರಬೇಕು. ಅಂದರೆ ಮಾತ್ರ ದೇಶದ ಸಮಸ್ಯೆಗಳನ್ನು ಬಿಡಿಸುವಾಗ ಅವರು ತಮ್ಮ ಸಲಹೆಗಳನ್ನು ಕೊಡಬಲ್ಲರು. ರಾಜ್ಯ ಶಾಸ್ತ್ರದ ಅಭ್ಯಾಸವು ಇಂಥ ರಾಜಕೀಯ ಸಿದ್ಧಾಂತಗಳ ಬಗ್ಗೆ ಜನರಿಗೆ ತಕ್ಕ ಜ್ಞಾನ ಒದಗಿಸುತ್ತದೆ.
ಉದಾ : ಸಮಾಜವಾದ ಅನುಸರಿಸುವ ದೇಶದಲ್ಲಿ ಸಮಾಜವಾದ ಕುರಿತು ಜನತೆಗೆ ತಿಳುವಳಿಕೆ ಇರಬೇಕು.

## ಪ್ರಶ್ನೆಗಳು

ಅ :- ಒಂದು ಅಂಕದ ಪ್ರಶ್ನೆಗಳು. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

೧. ರಾಜ್ಯಶಾಸ್ತ್ರವೆಂದರೇನು ?
೨. ಅರಿಸ್ಟಾಟಲ್‌ಲನು ರಾಜ್ಯಶಾಸ್ತ್ರದ ಮೇಲೆ ಬರೆದ ಪುಸ್ತಕದ ಹೆಸರೇನು ?
೩. ರಾಜ್ಯಶಾಸ್ತ್ರದ ಪಿತಾಮಹ ಯಾರು ?
೪ ರಾಜ್ಯಶಾಸ್ತ್ರದ ಅಧ್ಯಯನದ ಮುಖ್ಯ ವಿಷಯವೇನು ?
೫. ರಾಜಕಾರಣ ಎಂದರೇನು ?
೬. ರಾಜ್ಯಶಾಸ್ತ್ರ ಮತ್ತು ರಾಜಕಾರಣ ಎಂಬ ಪದಗಳಲ್ಲಿ ಏನು ವ್ಯತ್ಯಾಸವಿದೆ ?
೭. ಪಾಲ ಜಾನೆಟ್ ನೀಡಿದ ರಾಜ್ಯಶಾಸ್ತ್ರದ ವ್ಯಾಖ್ಯೆ ಕೊಡಿರಿ ?
೮. ಮಾನವನು ಸಮಾಜದಲ್ಲಿ ವಾಸಿಸಲು ಕಾರಣವೇನು ?

ಆ :- ಎರಡು ಅಂಕದ ಪ್ರಶ್ನೆಗಳು. ಪ್ರಶ್ನೆಗಳಿಗೆ ೨-೩ ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೯. ರಾಜ್ಯಶಾಸ್ತ್ರವೆಂದರೇನು ?
೧೦. ರಾಜಕಾರಣ ಎಂದರೇನು ?
೧೧. ಮಾನವನು ಸಮಾಜಜೀವಿ ಹಾಗೂ ರಾಜಕೀಯ ಜೀವಿ ಎಂಬುದನ್ನು ವಿವರಿಸಿ.
೧೨. ಗ್ರೀಕ್ ನಗರ, ರಾಜ್ಯಗಳ ಬಗ್ಗೆ ಬರೆಯಿರಿ.
೧೩. ಮಾನವನು ರಾಜ್ಯದಲ್ಲಿ ವಾಸಿಸಲು ಕಾರಣವೇನು ?
೧೪. ರಾಜ್ಯಶಾಸ್ತ್ರ ಮತ್ತು ರಾಜಕಾರಣದ ನಡುವಿನ ವ್ಯತ್ಯಾಸವನ್ನು ತಿಳಿಸಿ ?
೧೫. ರಾಜ್ಯಶಾಸ್ತ್ರದ ವ್ಯಾಪ್ತಿಯನ್ನು ವಿವರಿಸಿ.

೧೭. ರಾಜ್ಯಶಾಸ್ತ್ರದ ವ್ಯಾಖ್ಯೆಗಳನ್ನು ವಿವರಿಸಿ.

೧೮. ರಾಜ್ಯಶಾಸ್ತ್ರದ ಸ್ವರೂಪದ ಬಗ್ಗೆ ವಿವರಿಸಿರಿ.

ಇ :- ಐದು ಅಂಕದ ಪ್ರಶ್ನೆಗಳು. ಪ್ರತಿಯೊಂದಕ್ಕೆ ೫-೧೦ ವಾಕ್ಯದಲ್ಲಿ ಉತ್ತರ ಬರೆಯಿರಿ.

೧೯. ರಾಜ್ಯಶಾಸ್ತ್ರವೆಂದರೇನು ?

೨೦. ರಾಜ್ಯಶಾಸ್ತ್ರ ಮತ್ತು ರಾಜಕಾರಣದ ನಡುವಿನ ವ್ಯತ್ಯಾಸವನ್ನು ತಿಳಿಸಿರಿ ?

೨೧. ರಾಜ್ಯಶಾಸ್ತ್ರದ ವ್ಯಾಪ್ತಿಯನ್ನು ವಿವರಿಸಿ.

೨೨. ರಾಜ್ಯಶಾಸ್ತ್ರದ ಮಹತ್ವವನ್ನು ವಿವರಿಸಿ.

೨೩. ರಾಜ್ಯಶಾಸ್ತ್ರದ ವ್ಯಾಖ್ಯೆಗಳನ್ನು ವಿವರಿಸಿ.

ಈ :- ಹತ್ತು ಅಂಕದ ಪ್ರಶ್ನೆಗಳು. ಪ್ರತಿಯೊಂದಕ್ಕೆ ೩೦-೪೦ ಸಾಲುಗಳಷ್ಟು ಉತ್ತರ ಬರೆಯಿರಿ.

೨೪. ರಾಜ್ಯಶಾಸ್ತ್ರವೆಂದರೇನು ? ಅದರ ಅಧ್ಯಯನದ ಮಹತ್ವವನ್ನು ವಿವರಿಸಿರಿ.

೨೫. ರಾಜ್ಯಶಾಸ್ತ್ರದ ವ್ಯಾಪ್ತಿಯನ್ನು ವಿವರಿಸಿ.

೨೬. ರಾಜ್ಯಶಾಸ್ತ್ರ ಮತ್ತು ರಾಜಕಾರಣದ ನಡುವಿನ ವ್ಯತ್ಯಾಸವನ್ನು ತಿಳಿಸಿರಿ ?

❑❑

# ಅಧ್ಯಾಯ ೨

# ರಾಜ್ಯ, ಸಮಾಜ ಮತ್ತು ನಾಗರಿಕ

ಪ್ರತಿಯೊಂದು ವಿಷಯದಲ್ಲಿ ಮೂಲಭೂತ ವಿಷಯಗಳು ಅಥವಾ ಪರಿಕಲ್ಪನೆಗಳು ಇರುವಂತೆ ರಾಜ್ಯಶಾಸ್ತ್ರದಲ್ಲಿಯೂ ಇರುತ್ತವೆ. ಅವು ಅತ್ಯವಶ್ಯಕ. ಅವು ಒಂದು ಕಟ್ಟಡದ ಬುನಾದಿಯೋಪಾದಿಯಲ್ಲಿರುತ್ತವೆ. ಒಂದು ಕಟ್ಟಡದ ಬುನಾದಿ ಸರಿಯಾಗಿ ಇರದಿದ್ದರೆ ಕಟ್ಟಡ ಸುರಕ್ಷಿತವಾಗಿ ಇರಲಾರದು. ಅದರಂತೆ ರಾಜ್ಯಶಾಸ್ತ್ರದ ಮೂಲಭೂತ ಪರಿಕಲ್ಪನೆಗಳು ಅಂದರೆ ರಾಜ್ಯ, ಸರಕಾರ, ಪರಮಾಧಿಕಾರ ಇತ್ಯಾದಿಗಳ ಜ್ಞಾನ ಇರದಿದ್ದರೆ ಆ ವಿಷಯವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗ-ಲಾರದು. ರಾಜ್ಯಶಾಸ್ತ್ರದ ಪರಿಕಲ್ಪನೆಗಳನ್ನು ಭಾಷೆಗೆ ಹೋಲಿಸಬಹುದು. ನಮ್ಮ ವಿಚಾರಗಳ ವಿನಿಮಯಕ್ಕಾಗಿರುವ ಮಾಧ್ಯಮ ಭಾಷೆ. ಅದರಂತೆ ರಾಜ್ಯಶಾಸ್ತ್ರದ ಮೂಲಭೂತ ವಿಷಯಗಳ ಮಾಧ್ಯಮದ ಮೂಲಕ ರಾಜ್ಯಶಾಸ್ತ್ರವನ್ನು ಬೋಧಿಸ-ಲಾಗುತ್ತದೆ ಹಾಗೂ ಕಲಿಯಲಾಗುತ್ತದೆ.

## ಅ. ರಾಜ್ಯದ ಸ್ವರೂಪ ಹಾಗೂ ಮಹತ್ವ

ರಾಜ್ಯಶಾಸ್ತ್ರ ಅಧ್ಯಯನದ ವಸ್ತು ರಾಜ್ಯ. ರಾಜ್ಯವಿಲ್ಲದೇ ರಾಜ್ಯಶಾಸ್ತ್ರವಿರಲಾರದು. ರಾಜ್ಯ ಎಂಬ ಪದದ ಆಧಾರದ ಮೇಲೆ ರಾಜ್ಯಶಾಸ್ತ್ರದ ಅರ್ಥ ನಿರೂಪಣೆಯಾಗಿದೆ. ಕಾರಣ ನಾವು ಪ್ರಾರಂಭದಲ್ಲೇ ರಾಜ್ಯವೆಂದರೇನು? ಎಂದು ತಿಳಿಯಬೇಕು.

### * ರಾಜ್ಯವೆಂಬ ಪರಿಕಲ್ಪನೆಯ ಪರಿಚಯ

ಮಾನವನಿಗೆ ಸಮಾಜದ ಅವಶ್ಯಕತೆ ಇರುವಂತೆ ರಾಜ್ಯದ ಅವಶ್ಯಕತೆಯೂ ಇದೆ. ಕಾರಣ ಗ್ರೀಕ್ ರಾಜಕೀಯ ತತ್ವಜ್ಞಾನಿಯಾದ ಅರಿಸ್ಟಾಟಲ್‌ನು ಮನುಷ್ಯ ಸ್ವಾಭಾವಿಕವಾಗಿ ಸಮಾಜ ಜೀವಿಯಾಗಿರುವಂತೆ ರಾಜಕೀಯ ಜೀವಿಯೂ ಆಗಿದ್ದಾನೆ ಎಂದು ಹೇಳಿರುವನು. ಹೀಗೆ ಮಾನವನಿಗೆ ಸಮಾಜದ ಅವಶ್ಯಕತೆಯಿರುವಂತೆ ರಾಜ್ಯದ ಅವಶ್ಯಕತೆಯು ಇದೆ. ಮೀನಿಗೆ ನೀರಿದ್ದಂತೆ ಮನುಷ್ಯನಿಗೆ ರಾಜ್ಯ . ಮಾನವನ ಸಮೃದ್ಧಿ ರಾಜ್ಯವನ್ನು ಅವಲಂಬಿಸಿರುತ್ತದೆ. ರಾಜ್ಯವು ಬಹಳ ಹಿಂದಿನ ಕಾಲದಿಂದಲೂ ಬಂದಿದೆ. ಆದರೆ ರಾಜ್ಯ ಅಥವಾ ಸ್ಟೇಟ್ ಎಂಬ ಪದದ ಬಳಕೆಯು ಹದಿನಾರನೇ ಶತಮಾನದವರೆಗೆ

ಇದ್ದಿಲ್ಲ. ಈ ಪದವನ್ನು ಜನಪ್ರಿಯಗೊಳಿಸಿದ ಕೀರ್ತಿ ಹದಿನಾರನೇ ಶತಮಾನದ ಇಟಾಲಿಯನ್ ಚಿಂತಕನಾದ ಮೆಕೆವಲಿಗೆ ಸಲ್ಲುತ್ತದೆ. ಅವನು ತನ್ನ ಗ್ರಂಥವಾದ 'ದಿ ಪ್ರಿನ್ಸ್' ದಲ್ಲಿ ಪ್ರಪ್ರಥಮ ಬಾರಿಗೆ ರಾಜ್ಯವೆಂಬ ಪದವನ್ನು ಉಪಯೋಗಿಸುತ್ತಾನೆ. ಅವನ ಕಾಲದಲ್ಲಿ ಸ್ಟೆಟಿಯೋ ಎಂದು ಕೂಡ ಉಪಯೋಗಿಸುತ್ತಿದ್ದರು. ಅದಕ್ಕಿಂತ ಮೊದಲು ಸ್ಟೇಟಸ್ ಎಂಬ ಶಬ್ದವು ಚಲಾವಣೆಯಲ್ಲಿತ್ತು. ಇದಕ್ಕೆ ಪರ್ಯಾಯವಾಗಿ ಎಸ್ಟೇಟ್ ಎಂಬ ಪದವನ್ನು ಕೂಡ ಉಪಯೋಗಿಸುತ್ತಿದ್ದರು. ಗ್ರೀಕರು ಈ ಪದವನ್ನು ಪೋಲಿಸ್ ಎಂಬ ಪದದ ಅಂದರೆ ನಗರ ರಾಜ್ಯದ ರೂಪದಲ್ಲಿ ಉಪಯೋಗಿಸುತ್ತಿದ್ದರು. ಗ್ರೀಕರು ಅರ್ಥೈಸಿದ ಪೋಲಿಸ್ ಪದ ವರ್ತಮಾನದ ರಾಜ್ಯಗಳಿಂದ ವಿಭಿನ್ನವಾಗಿದೆ. ಕೆಲವೊಮ್ಮೆ ರಾಜ್ಯವನ್ನು ಸಾಮ್ರಾಜ್ಯಕ್ಕೆ, ಚಕ್ರಾಧಿಪತ್ಯಕ್ಕೆ, ಗಣರಾಜ್ಯಕ್ಕೆ, ಸಂಯುಕ್ತ ಸರಕಾರಗಳಿಗೆ ಪಾರಿಭಾಷಿಕವಾಗಿ ಉಪಯೋಗಿಸುತ್ತೇವೆ. ಫ್ರಾನ್ಸ್ ದೇಶದ ತತ್ವಜ್ಞಾನಿ **ಬೋಡಿನ್** 'ರಿಪಬ್ಲಿಕ್' ಎಂಬ ಪದವನ್ನು ಹಾಗೂ ಇಂಗ್ಲೆಂಡ್ ದೇಶದ ವಿವೇಚಕನಾದ **ಥಾಮಸ್ ಹಾಬ್ಸ** 'ಕಾಮನ್‌ವೆಲ್ತ್'ಪದವನ್ನು ಉಪಯೋಗಿಸಿದರು. ಆದರೆ 18ನೇ ಶತಮಾನದ ಕೊನೆಗೆ ಸ್ಟೇಟ್ ಎಂಬ ಪದದ ಸಾರ್ವತ್ರಿಕ ಬಳಕೆ ಆರಂಭವಾಯಿತು.

**ಅರಿಸ್ಟಾಟಲ್** ಪ್ರಕಾರ 'ರಾಜ್ಯವು ಜೀವದ ರಕ್ಷಣೆಗಾಗಿ ಹುಟ್ಟಿಕೊಂಡಿದೆ. ಮತ್ತು ಅದು ಒಳ್ಳೆಯ ಜೀವನವನ್ನು ಒದಗಿಸಲು ಮುಂದುವರಿದಿದೆ'. ಸಮಾಜದಲ್ಲಿರುವ ಅನೇಕ ಸಂಘ ಸಂಸ್ಥೆಗಳಲ್ಲಿ ರಾಜ್ಯವು ಒಂದು ಅತ್ಯಂತ ಮಹತ್ವವಾದ ಸಂಸ್ಥೆಯಾಗಿದೆ. ಅದು ಸ್ವಾಭಾವಿಕವಾದ, ಅಗತ್ಯವಾದ ಮತ್ತು ಸರ್ವವ್ಯಾಪಿಯಾದ ಸಂಸ್ಥೆಯಾಗಿದೆ. ರಾಜ್ಯದ ರಕ್ಷಣೆಯಿಲ್ಲದೇ ಸಮಾಜವು ಬಹುಕಾಲ ಬದುಕಲಾರದು. ರಾಜ್ಯದ ರಕ್ಷಣೆ ಇದ್ದರೆ ಮಾತ್ರ ಸಾಮಾಜಿಕ ಜೀವನ ಶಾಂತಿಯಿಂದ ಸುಗಮವಾಗಿ ಸಾಗುವದು. ರಾಜ್ಯವು ಸರ್ವವ್ಯಾಪಿಯಾಗಿದೆ. ಅದು ಎಲ್ಲಿ ಜನ ಸಮುದಾಯವು ರಾಜಕೀಯವಾಗಿ ಸಂಘಟಿತವಾಗಿದೆಯೋ ಅಲ್ಲೆಲ್ಲ ಇದ್ದೇ ಇರುತ್ತದೆ. ಈಗಂತೂ ನಾವು ರಾಜ್ಯಗಳನ್ನು ಜಗತ್ತಿನ ಎಲ್ಲ ಭಾಗಗಳಲ್ಲಿ ಕಾಣುತ್ತೇವೆ.

ಪುರಾತನ ಕಾಲದಲ್ಲಿ ಗ್ರೀಕ್ ನಗರಗಳೇ ರಾಜ್ಯಗಳಾಗಿದ್ದವು. ಒಂದೊಂದು ನಗರವು ಒಂದೊಂದು ರಾಜ್ಯವೆನಿಸಿಕೊಳ್ಳುತ್ತಿತ್ತು. ಆದರೆ ಈಗ ರಾಜಕೀಯ ದೃಷ್ಟಿಯಿಂದ ಸುಸಂಘಟಿತವಾದ ಸಮಾಜವೇ ರಾಜ್ಯ. ಸಮಾಜ, ರಾಜಕೀಯ ದೃಷ್ಟಿಯಿಂದ ಸುಸಂಘಟಿತವಾಗುವ ಮೂಲಕ ನಿರ್ದಿಷ್ಟ ಪ್ರದೇಶ, ಜನಸಂಖ್ಯೆ, ಸರಕಾರ ಹಾಗೂ ಪರಮಾಧಿಕಾರವನ್ನು ಪಡೆಯುವದರ ಮೂಲಕ ರಾಜ್ಯವಾಗುತ್ತದೆ. ರಾಜ್ಯ = ಸಮಾಜ + ರಾಜಕೀಯ ಸಂಘಟನೆ.

## ರಾಜ್ಯದ ಅರ್ಥವಿವರಣೆ

**ವ್ಯಾಖ್ಯೆಗಳು :-** ರಾಜ್ಯವನ್ನು ಕುರಿತಂತೆ ವ್ಯಾಖ್ಯೆಗಳು ಏಕಮುಖವಾಗಿಲ್ಲ. ಆರಿಸ್ಟಾಟಲ್‌ರ ಕಾಲದಿಂದ ಇಂದಿನವರೆಗೆ ಅನೇಕ ರಾಜಕೀಯ ತಜ್ಞರು ರಾಜ್ಯದ ಅರ್ಥವಿವರಣೆ ಮಾಡಿದ್ದಾರೆ. ಆದರೆ ಎಲ್ಲ ಕಾಲಕ್ಕೂ ಸರಿಹೊಂದಬಹುದಾದಂತಹ ಒಂದು ವ್ಯಾಖ್ಯೆಯು ಇಲ್ಲ. ರಾಜ್ಯದ ವ್ಯಾಖ್ಯೆ ಕಾಲಕಾಲಕ್ಕೆ ಬದಲಾಗುತ್ತಾ ಬಂದಿದೆ. ಕಾಲ ಪರಿಸ್ಥಿತಿ ಬದಲಾದಂತೆ ರಾಜ್ಯದ ಸ್ವರೂಪವು ಬದಲಾಗುತ್ತಾ ಬಂದಿದೆ. ಆದರೆ ಈಗ ಮಾತ್ರ ರಾಜ್ಯ ಎಂಬಪದವನ್ನು ಒಂದು ನಿರ್ದಿಷ್ಟ ಅರ್ಥದಲ್ಲಿ ಉಪಯೋಗಿಸಲಾಗುತ್ತದೆ. ಕೆಲವು ಮುಖ್ಯವಾದ ವ್ಯಾಖ್ಯೆಗಳನ್ನು ಮಾತ್ರ ಕೆಳಗೆ ಕೊಟ್ಟಿದೆ.

### ಸಂಪ್ರದಾಯಿಕ ವ್ಯಾಖ್ಯೆಗಳು

**ಅರಿಸ್ಟಾಟಲ್** ಪ್ರಕಾರ 'ರಾಜ್ಯವು ಕುಟುಂಬ ಮತ್ತು ಹಳ್ಳಿಗಳ ಒಂದು ಸಮೂಹ.ಎಲ್ಲರಿಗೂ ಸ್ವಾವಲಂಬಿತವಾದ ಮತ್ತು ಪರಿಪೂರ್ಣವಾದ ಜೀವನವನ್ನು ಒದಗಿಸುವದೇ ರಾಜ್ಯದ ಗುರಿ.'

**ಸಿಸಿರೋರ** ಪ್ರಕಾರ 'ರಾಜ್ಯವು ಅನೇಕ ಜನರನ್ನೊಳಗೊಂಡ ಸಮಾಜ ರಾಜ್ಯದಲ್ಲಿ ನ್ಯಾಯವನ್ನು ದೊರಕಿಸಲು ಎಲ್ಲರೂ ಪಾಲ್ಗೊಳ್ಳುತ್ತಾರೆ. ಮತ್ತು ಅವರೆಲ್ಲರೂ ರಾಜ್ಯದ ಸೌಲಭ್ಯಗಳನ್ನು ಹಂಚಿಕೊಳ್ಳುತ್ತಾರೆ.'

**ಬೋಡಿನ್‌ರ** ಪ್ರಕಾರ 'ರಾಜ್ಯವು ಕುಟುಂಬಗಳಿಂದ ಹೆಣೆದ ಒಂದು ಸಂಸ್ಥೆ ಅದನ್ನು ಸಾರ್ವಭೌಮ ಅಧಿಕಾರ ಆಳುತ್ತದೆ.'

### ಆಧುನಿಕ ಅರ್ಥ ವಿವರಣೆಗಳು

**ಡಾ|| ವುಡ್ರಾವಿಲ್ಸನ್‌ರ** ಪ್ರಕಾರ 'ರಾಜಕೀಯ ದೃಷ್ಟಿಯಿಂದ ಸುಸಂಘಟಿತ-ವಾದ ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವ ಮತ್ತು ಕಾನೂನಿಗೆ ಅಧೀನವಾಗಿರುವ ಜನಾಂಗಕ್ಕೆ ರಾಜ್ಯವೆನ್ನುತ್ತಾರೆ.'

**ಬ್ಲಂಟಶ್ಲಿ** ಎಂಬ ಜರ್ಮನಿ ಲೇಖಕರ ಪ್ರಕಾರ 'ರಾಜಕೀಯ ದೃಷ್ಟಿಯಿಂದ ಸುಸಂಘಟಿತರಾಗಿ ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವ ಜನಾಂಗಕ್ಕೆ ರಾಜ್ಯವೆನ್ನುತ್ತಾರೆ .'

**ಪ್ರೊ. ಗಾರ್ನರ್** ಪ್ರಕಾರ 'ಸಾಮಾನ್ಯವಾಗಿ, ಸ್ವತಂತ್ರವಾಗಿ, ಇಲ್ಲವೆ ಯಾವದೇ ಬಾಹ್ಯ ಬಂಧನಗಳಿಗೊಳಗಾಗದೇ, ಸುವ್ಯವಸ್ಥಿತವಾದ ಸರಕಾರವನ್ನು ಹೊಂದಿರುವ ಮತ್ತು ಆ ಸರಕಾರಕ್ಕೆ ಎಲ್ಲರೂ ಸ್ವಾಭಾವಿಕವಾಗಿ ವಿಧೇಯರಾಗಿರುವ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಶಾಶ್ವತ ವಾಗಿ ನೆಲೆಸಿರುವ ಮತ್ತುತೀರ ಹೆಚ್ಚು ಅಥವಾ ಕಡಿಮೆ ಸಂಖ್ಯೆಯಲ್ಲಿಲ್ಲದ ಜನ ಸಮುದಾಯವೇ ರಾಜ್ಯ.'

ಪ್ರೊ. ಹೆರಾಲ್ಡ್ ಲಾಸ್ಕಿ ಯವರ ಪ್ರಕಾರ 'ರಾಜ್ಯವು ಸರಕಾರ ಮತ್ತು ಪ್ರಜೆಗಳನ್ನು ಹೊಂದಿದ್ದು, ನಿರ್ದಿಷ್ಟ ಪ್ರದೇಶದಲ್ಲಿರುವ ಮತ್ತು ಇತರ ಎಲ್ಲ ಸಂಘ ಸಂಸ್ಥೆಗಳ ಮೇಲೆ ಪರಮಾಧಿಕಾರವನ್ನು ಹೊಂದಿರುವ ಸಮಾಜವಾಗಿದೆ.'

## ✸ ರಾಜ್ಯದ ಮೂಲಾಂಶಗಳು

ರಾಜ್ಯಶಾಸ್ತ್ರಜ್ಞರು ರಾಜ್ಯದ ಬಗ್ಗೆ ಮಾಡಿರುವ ವ್ಯಾಖ್ಯಾನಗಳನ್ನು ಪರಿಶೀಲಿಸಿದಾಗ ರಾಜ್ಯದ ಅಸ್ತಿತ್ವಕ್ಕೆ ಹಲವಾರು ಮೂಲಾಂಶಗಳು ಅನಿವಾರ್ಯ ಎಂಬುದು ಸ್ಪಷ್ಟವಾಗುತ್ತದೆ. ಒಂದು ರಾಜ್ಯವಾಗಬೇಕಾದರೆ ಈ ಕೆಳಗಿನ ನಾಲ್ಕು ಮುಖ್ಯಾಂಶಗಳು ಇರಬೇಕೆಂದು ಹೇಳಬಹುದು. ಅವು ಯಾವವೆಂದರೆ

ಅ. ನಿರ್ದಿಷ್ಟ ಪ್ರದೇಶ

ಆ. ಜನಸಂಖ್ಯೆ

ಇ. ಸರಕಾರ

ಈ. ಪರಮಾಧಿಕಾರ

ಯಾವದೊಂದು ಸಮಾಜವು ರಾಜ್ಯವಾಗಬೇಕಾದರೆ ಈ ನಾಲ್ಕು ಅಂಶಗಳು ಇರಲಿಕ್ಕೇಬೇಕು. ಈ ನಾಲ್ಕು ಅಂಶಗಳಲ್ಲಿ ಯಾವದೊಂದು ಅಂಶವಿಲ್ಲದೇ ಹೊದರೆ ಆ ಸಮಾಜವು ರಾಜ್ಯವಾಗಲಾರದು.

## ಅ. ನಿರ್ದಿಷ್ಟ ಪ್ರದೇಶ

ರಾಜ್ಯದ ಅಸ್ತಿತ್ವಕ್ಕೆ ಪ್ರದೇಶವಿರಬೇಕು. ಭೌಗೋಲಿಕ ಪ್ರದೇಶವಿಲ್ಲದ ರಾಜ್ಯಗಳು ಪ್ರಪಂಚದಲ್ಲಿಲ್ಲ. ಕಾರಣ ಅಲೆಮಾರಿ ಜೀವನ ನಡೆಸುವ ನಿರ್ದಿಷ್ಟ ಪ್ರದೇಶವಿಲ್ಲದ ಜಿಪ್ಸಿಗಳನ್ನು ರಾಜ್ಯವೆಂದು ಹೇಳಲಾಗುವದಿಲ್ಲ. ಒಂದು ರಾಜ್ಯ ವಾಗಬೇಕಾದರೆ ಎಷ್ಟು ಪ್ರದೇಶವಿರಬೇಕೆಂಬುದರ ಬಗ್ಗೆ ಯಾವದೇ ನಿಯಮಗಳು ಇಲ್ಲಾ. ಜಗತ್ತಿನಲ್ಲಿರುವ ಎಲ್ಲ ರಾಜ್ಯಗಳಿಗೂ ಸಣ್ಣದಾದ ಇಲ್ಲವೇ ದೊಡ್ಡದಾದ ವಾಸಿಸುವ ಪ್ರದೇಶಗಳಿವೆ. ಜನತೆಯ ಜೀವನೋಪಾಯಕ್ಕೆ ಭೂಮಿ ಅತಿ ಅವಶ್ಯವಾಗಿದೆ. ಉದಾ : ವ್ಯಾಟಿಕಾನ್-ನಗರ ಎಂಬ ರಾಜ್ಯವು ಅತಿ ಚಿಕ್ಕದಾಗಿದ್ದು ಅದರ ಕ್ಷೇತ್ರವು ೦.೪೪ ಚ.ಕಿ.ಮೀ. ಮೊನ್ಯಾಕೋ ೧.೯೫ಚ.ಕಿ.ಮೀ ಇದೆ. ಆದರೆ ರಷಿಯಾ ಅತಿ ದೊಡ್ಡದಾಗಿದ್ದು ಅದರ ಕ್ಷೇತ್ರವು ೨೨೪ ಲಕ್ಷ ಚ.ಕಿ.ಮೀ. ಇದೆ. ಸಂಯುಕ್ತರಾಷ್ಟ್ರಸಂಘದಲ್ಲಿ ಮತ್ತು ಅಂತರ ರಾಷ್ಟ್ರೀಯ ಕಾನೂನಿನ ದೃಷ್ಟಿಯಲ್ಲಿ ಎಲ್ಲ ರಾಜ್ಯಗಳಿಗೂ ಸಮಾನ-ಸ್ಥಾನ ಮಾನಗಳಿವೆ.

ಕೆಲವು ತಜ್ಞರು ರಾಜ್ಯವು ಹೆಚ್ಚು ಪ್ರದೇಶವನ್ನು ಹೊಂದಿದ್ದರೆ ಬಲಾಢ್ಯವಾಗಿರುತ್ತದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಇನ್ನೂ ಕೆಲವು ತಜ್ಞರು ಚಿಕ್ಕ ರಾಜ್ಯಗಳು

ಉತ್ತಮ ಆಡಳಿತ ಒದಗಿಸಬಲ್ಲವು, ಜನತೆಯಲ್ಲಿ ಒಕ್ಕಟ್ಟನ್ನು ಸಾಧಿಸಬಲ್ಲವು ಹಾಗೂ ರಕ್ಷಣೆಯನ್ನು ಸುಲಭವಾಗಿ ಮಾಡಿಕೊಳ್ಳಬಲ್ಲವು ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಈ ಎರಡೂ ಅಭಿಪ್ರಾಯಗಳು ಸಮಂಜಸವಲ್ಲ. ಕಾರಣ ಪ್ರದೇಶವು ವಿಸ್ತಾರವಾಗಿದ್ದು ಸಂಪನ್ಮೂಲಗಳು ಸಾಕಷ್ಟು ಇಲ್ಲದಿದ್ದರೆ ಅದು ಬಲಾಢ್ಯವಾಗಲಾರದು ಮತ್ತು ರಾಜ್ಯದಲ್ಲಿ ಐಕ್ಯತೆ ಮತ್ತು ನಿಯಂತ್ರಣ ಸಾಧಿಸುವದು ಕಠಿಣವಾಗುವದು. ಇದೇ ಪ್ರಕಾರ ಪ್ರದೇಶವು ಚಿಕ್ಕದಾಗಿದ್ದರೆ ಆ ರಾಜ್ಯವು ಸಾಕಷ್ಟು ಸಂಪನ್ಮೂಲಗಳನ್ನು ಜನತೆಗೆ ಪೂರೈಸಲಾರದು. ತನ್ಮೂಲಕ ಅದು ಬಲಾಢ್ಯ ರಾಜ್ಯ ವಾಗಲಾರದು. ಹಿಟ್ಲರ್ ಪೋಲಂಡದ ಮೇಲೆ ದಾಳಿ ಮಾಡಿದ. ಯಾಕೆಂದರೆ ಅದು ಚಿಕ್ಕ ರಾಜ್ಯವಾಗಿತ್ತು. ಪ್ರಾಚೀನ ಭಾರತದ ಗಣ ರಾಜ್ಯಗಳು ಅಂತ್ಯಂತ ಚಿಕ್ಕದಾಗಿದ್ದರಿಂದ ದೇಶಿಯರ ಆಕ್ರಮಣವನ್ನು ತಡೆಗಟ್ಟಲು ಅಸಾಧ್ಯವಾಯಿತು. ಆದ್ದರಿಂದಲೇ ಅವುಗಳು ನಾಶವಾದವು. ಇಸ್ರೇಲ್ ರಾಜ್ಯವು ಸ್ಥಾಪಿತವಾಗುವ ಮುನ್ನ ಯಹೂದಿ ಜನರಿಗೆ ರಾಜ್ಯವೆಂಬುದು ಇರಲಿಲ್ಲ. ಕ್ರಿ.ಶ. ೧೯೪೮ ರಲ್ಲಿ ಪ್ಯಾಲಿಸ್ಟೈನನ್ನು ವಿಭಜಿಸಿದಾಗ ಅವರಿಗೆ ತುಣುಕು ಪ್ರದೇಶ ದೊರೆತು ಇಸ್ರೇಲ್ ರಾಜ್ಯವನ್ನು ಕಟ್ಟಿದರು. ಆದುದರಿಂದ ರಾಜ್ಯ ದ ಮೊದಲನೇ ಮೂಲ ಅಂಶವೆಂದರೆ ಪ್ರದೇಶ. ರಾಜ್ಯ ರಾಜ್ಯಗಳ ನಡುವಿನ ಕಲಹವನ್ನು ತಪ್ಪಿಸಲು ಪ್ರತಿಯೊಂದು ರಾಜ್ಯಕ್ಕೆ ನಿರ್ದಿಷ್ಟವಾದ ಮೇರೆಗಳಿಂದ ಕೂಡಿದ ಪ್ರದೇಶವಿರುವದು ವಿಹಿತವಾಗಿದೆ. ಉದಾ: ಭಾರತ ಮತ್ತು ಚೀನಾ ದೇಶಗಳ ನಡುವೆ ನಿರ್ದಿಷ್ಟವಾದ ಮೇರೆಯನ್ನು ಗೊತ್ತುಪಡಿಸದೇ ಇದ್ದ ಮೂಲಕ ಅವುಗಳ ನಡುವೆ ಪ್ರಾದೇಶಿಕ ಕಲಹ ಉದ್ಭವವಾಗಿದೆ. ಇನ್ನು ಆ ರಾಜ್ಯದ ಪ್ರದೇಶವು ಆ ದೇಶದ ಭೂಮಿಯನ್ನು, ನದಿಗಳನ್ನು, ಖನಿಜಗಳನ್ನು, ವಾಯು ಪ್ರದೇಶವನ್ನು, ದಂಡೆಯಿಂದ ಸಮುದ್ರದೊಳಗೆ ೧೨ ಮೈಲು ಪ್ರದೇಶವನ್ನು ಒಳಗೊಂಡಿರುತ್ತದೆ. ರಾಜ್ಯದ ಸಾರ್ವಭೌಮ ಅಧಿಕಾರವು ಎಲ್ಲ ಪ್ರದೇಶಗಳಿಗೂ ಅನ್ವಯಿಸುತ್ತದೆ.

ಗ್ರೀಕ್ ತತ್ವಜ್ಞಾನಿಯಾದ ಪ್ಲೇಟೋ ಅಭಿಪ್ರಾಯದಂತೆ ಒಂದು ರಾಜ್ಯದ ಪ್ರದೇಶವು ಆ ರಾಜ್ಯಕ್ಕೆ ಬೇಕಾಗುವ ಸಂಪನ್ಮೂಲಗಳಿಂದ ಹಾಗೂ ಅದನ್ನೂ ರಕ್ಷಿಸುವ ಜನ ಸಮೂಹದಿಂದ ಕೂಡಿರಬೇಕು. ಹೀಗೆ ಪ್ರದೇಶದ ಬಗ್ಗೆ ತಜ್ಞರಲ್ಲಿಯೇ ಭಿನ್ನಾಭಿಪ್ರಾಯವಿದ್ದರೂ, ರಾಜ್ಯಕ್ಕೆ ಚಿಕ್ಕದಾಗಿರಲಿ ಅಥವಾ ದೊಡ್ಡದಾಗಿರಲಿ ಒಂದು ನಿರ್ದಿಷ್ಟ ಪ್ರದೇಶವಿರಬೇಕೆಬುಂದು ಮಾತ್ರ ಮುಖ್ಯವಾದುದು.

ರಾಜ್ಯದ ವಿಸ್ತೀರ್ಣತೆಗೂ ಮತ್ತು ಅದರ ಆರ್ಥಿಕ, ರಾಜಕೀಯ ಶಕ್ತಿಗೂ ಸಂಬಂಧವಿಲ್ಲ ವೆಂಬುದನ್ನು ನೆನಪಿನಲ್ಲಿಡ ಬೇಕು. ಒಂದು ರಾಜ್ಯದ ಆರ್ಥಿಕ, ರಾಜಕೀಯ ಶಕ್ತಿ ಅಲ್ಲಿಯ ಜನರ ಗುಣವನ್ನೇ ಅವಲಂಬಿಸಿದೆ. ಜಪಾನ್ ವಿಸ್ತೀರ್ಣತೆಯಲ್ಲಿ ಅತ್ಯಂತ ಸಣ್ಣ ರಾಜ್ಯವಾಗಿದ್ದರೂ ಅದು ಇಂದು ಪ್ರಪಂಚದಲ್ಲಿಯೇ ಅತ್ಯಂತ ಬಲಾಢ್ಯವಾದ

ರಾಜ್ಯವಾಗಿದೆ. ಅದು ವಿಶಾಲವಾದಂಥ ಅಮೇರಿಕಾ ಹಾಗೂ ರಶ್ಯಾಗಳನ್ನು ನಡುಗಿಸುತ್ತದೆ. ಜಪಾನ ಸಾಧಿಸಿದ ಪ್ರಗತಿಯು ಇಂದು ಪ್ರಪಂಚವನ್ನೇ ಚಕಿತಗೊಳಿಸಿದೆ. ಅದರಂತೆ ಇಸ್ರೇಲ್ ಅತಿ ಚಿಕ್ಕ ರಾಜ್ಯವಾಗಿದ್ದು ಅದು ತನ್ನ ಸುತ್ತಮುತ್ತಲಿನ ವಿಶಾಲವಾದ ರಾಜ್ಯಗಳನ್ನು ಅಲುಗಾಡಿಸುವ ಸಾಮರ್ಥ್ಯ ಹೊಂದಿರುತ್ತದೆ.

### ಆ. ಜನಸಂಖ್ಯೆ

ಜನರಿಲ್ಲದ ಪ್ರದೇಶವನ್ನು ರಾಜ್ಯವೆಂದು ಕರೆಯಲಾಗದು. ರಾಜ್ಯಕ್ಕೆ ಪ್ರದೇಶವು ಎಷ್ಟು ಅವಶ್ಯವಾಗಿದೆಯೋ ಅದರಂತೆ ಜನರು ಕೂಡ ಅವಶ್ಯಕ. ಜನವಸತಿ ಇಲ್ಲದ ರಾಜ್ಯಗಳು ಪ್ರಪಂಚದಲ್ಲಿ ಕಂಡುಬರುವದಿಲ್ಲ. ಉದಾ : ಸಹರಾ ಮರುಭೂಮಿಯು ರಾಜ್ಯವಾಗಲಾರದು. ಪ್ರದೇಶದ ಬಗೆಗೆ ಇದ್ದಂತೆ ಜನಸಂಖ್ಯೆಯ ಬಗೆಗೂ ತಜ್ಞರಲ್ಲಿ ಬಿನ್ನಾಭಿಪ್ರಾಯವಿದೆ. ಪ್ರದೇಶಕ್ಕೆ ಹೇಗೆ ಇತಿಮಿತಿಗಳಿಲ್ಲವೋ ಹಾಗೆಯೇ ಜನಸಂಖ್ಯೆಗೂ ನಿರ್ದಿಷ್ಟವಾದ ನಿಯಮಗಳು ಇರುವದಿಲ್ಲ. ಒಂದು ರಾಜ್ಯದ ಜನಸಂಖ್ಯೆ ಸಣ್ಣದಾಗಿರಬಹುದು. ಗ್ರೀಕ್ ರಾಜಕೀಯ ತತ್ವಜ್ಞಾನಿಯಾದ ಪ್ಲೇಟೋ ರಾಜ್ಯದ ಜನಸಂಖ್ಯೆ ೫೦೪೦ ಇರಬೇಕೆಂದು ಹೇಳಿದರೆ, ರುಸೋ ಎಂಬ ತತ್ವಜ್ಞಾನಿ ೧೦,೦೦೦ ಇರಬೇಕೆಂದು ಹೇಳಿದ್ದಾರೆ. ಅವರು ಪ್ರತ್ಯಕ್ಷ ಪ್ರಜಾಪ್ರಭುತ್ವ ಅಳವಡಿಸಲು ಚಿಕ್ಕ ರಾಜ್ಯಗಳು ಇರಬೇಕೆಂದು ಹೇಳಿದ್ದಾರೆ. ಆದರೆ ಅರಿಸ್ಟಾಟಲ್‌ರು ಮಾತ್ರ ಜನಸಂಖ್ಯೆಯು ಅಷ್ಟು ದೊಡ್ಡದೂ ಇರಬಾರದು, ಅಷ್ಟು ಸಣ್ಣದೂ ಇರಬಾರದು. ಆದರೆ ಅದು ಸ್ವಾವಲಂಬಿಯಾಗುವಷ್ಟು ದೊಡ್ಡದೂ ಮತ್ತು ಸುಲಭವಾಗಿ ನಿಯಂತ್ರಣದಲ್ಲಿ ಬರುವಷ್ಟು ಚಿಕ್ಕದು ಆಗಿರಬೇಕು ಎಂದು ಹೇಳಿದರು. ಅಂದರೆ ೫,೦೦೦ ಇರಬೇಕೆಂಬುದು ಅವರ ಸೂಚನೆ. ಇನ್ನೂ ಕೆಲವು ತಜ್ಞರು ರಾಜ್ಯದ ಉತ್ಪಾದನೆ ಮತ್ತು ರಕ್ಷಣೆಯ ದೃಷ್ಟಿಯಿಂದ ಹೆಚ್ಚು ಜನಸಂಖ್ಯೆಯಿರುವುದು ಒಳ್ಳೆಯದೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಇಂದಿನ ಯಾಂತ್ರಿಕ ಹಾಗೂ ಅಣ್ವಸ್ತ್ರಗಳ ಯುಗದಲ್ಲಿ ಈ ಅಭಿಪ್ರಾಯವು ಅಷ್ಟು ಸಮಂಜಸವೆನಿಸಲಾರದು.

ಜನಸಂಖ್ಯೆಯ ಪ್ರಮಾಣದಿಂದ ರಾಜ್ಯವನ್ನು ನಿರ್ಧರಿಸುವದು ಅಸಮರ್ಪಕ. ಈಗಿನ ಕಾಲದಲ್ಲಿ ಬೇರೆ ಬೇರೆ ರಾಜ್ಯಗಳೂ ಬೇರೆ ಬೇರೆ ಪ್ರಮಾಣದ ಜನಸಂಖ್ಯೆಯನ್ನು ಹೊಂದಿವೆ. ಕೆಲವು ರಾಜ್ಯಗಳು ಸಣ್ಣ ಜನಸಂಖ್ಯೆಯನ್ನು ಹೊಂದಿದ್ದರೆ ಇನ್ನೂ ಕೆಲವು ರಾಜ್ಯಗಳು ದೊಡ್ಡ ಜನಸಂಖ್ಯೆಯನ್ನು ಹೊಂದಿವೆ. ಉದಾ : ವಾಟಿಕಾನ ನಗರದಲ್ಲಿ ೮೭೦ ಆ್ಯಂಡೋರಾದಲ್ಲಿ ೫೬,೦೦೦ ಹಾಗೂ ಭಾರತದಲ್ಲಿ ೧೦೬ ಕೋಟಿ, ಚೀನಾದಲ್ಲಿ ೧೨೫ ಕೋಟಿ ಜನಸಂಖ್ಯೆ ಇದೆ.

ಒಟ್ಟಾರೆ ಅತಿ ಕಡಿಮೆ ಹಾಗೂ ಅತಿ ಹೆಚ್ಚು ಜನಸಂಖ್ಯೆ ಒಳ್ಳೆಯದಲ್ಲ. ಅತಿ ಹೆಚ್ಚು

ಜನಸಂಖ್ಯೆ ಇದ್ದರೆ ಎಲ್ಲರಿಗೂ ಜೀವನದ ಅತ್ಯಾವಶ್ಯಕವಾದ ಅಹಾರ ,ಅರಿವೆ ಹಾಗೂ ವಸತಿ ಮೊದಲಾದವುಗಳನ್ನು ಒದಗಿಸುವದು ಕಠಿಣವಾಗುತ್ತದೆ. ಉದಾ : ಭಾರತದಲ್ಲಿ ಆಡಳಿತ ವೆಚ್ಚವು ಹೆಚ್ಚಾಗುತ್ತದೆ. ಜನರಲ್ಲಿ ಐಕ್ಯತೆ ಕಾಪಾಡಲು ಅಸಾಧ್ಯವಾಗುತ್ತದೆ. ಅತಿ ಕಡಿಮೆ ಜನಸಂಖ್ಯೆ ಇದ್ದರೆ ರಾಜ್ಯದಲ್ಲಿರುವ ನೈಸರ್ಗಿಕ ಸಂಪನ್ಮೂಲಗಳನ್ನು ಪೂರ್ಣವಾಗಿ ಉಪಯೋಗಿಸಿ ಉತ್ಪಾದನೆ ಮಾಡಲು ಸಾಧ್ಯವಾಗುವದಿಲ್ಲ. ಉದಾ :- ಆಸ್ಟ್ರೇಲಿಯಾ. ರಕ್ಷಣೆಯ ದೃಷ್ಟಿಯಿಂದಲೂ ಸಹ ಕಡಿಮೆ ಜನಸಂಖ್ಯೆಯಿರುವದು ಯೋಗ್ಯವಲ್ಲ. ಕಾರಣ ರಾಜ್ಯಕ್ಕೆ ಬೇಕಾಗುವ ಸಂಪತ್ತನ್ನು ಉತ್ಪಾದಿಸುವ ಮತ್ತು ಸಂಕಟ ಸಮಯದಲ್ಲಿ ರಾಜ್ಯವನ್ನು ರಕ್ಷಿಸುವ ಸಾಮರ್ಥ್ಯವುಳ್ಳ ಜನಸಂಖ್ಯೆಯಿದ್ದರೆ, ಬಹಳ ಉತ್ತಮ.

ಗ್ರೀಕ್ ಬರಹಗಾರರು ತಮ್ಮ ನಗರ ರಾಜ್ಯಗಳನ್ನು ಆಧಾರವಾಗಿಟ್ಟುಕೊಂಡು ರಾಜ್ಯದ ಜನಸಂಖ್ಯೆಯನ್ನು ನಿಗದಿ ಪಡಿಸುವದರಿಂದ ಆ ಸಂಖ್ಯೆ ಆಧುನಿಕ ರಾಜ್ಯಗಳಿಗೆ ಅನ್ವಯಿಸುವದಿಲ್ಲ. ಆಧುನಿಕ ರಾಜ್ಯಗಳುಅಧಿಕ ಜನಸಂಖ್ಯೆಗೆ ಪ್ರೋತ್ಸಾಹ ನೀಡುತ್ತದೆ. ಹಿಟ್ಲರ್ ಹಾಗೂ ಮುಸೋಲಿನಿ ದೇಶದ ಜನಸಂಖ್ಯೆ ಹೆಚ್ಚಳವನ್ನು ಪ್ರೋತ್ಸಾಹಿಸಿದರು. ರಷ್ಯಾದಲ್ಲಿ ಹೆಚ್ಚು ಮಕ್ಕಳನ್ನು ಪಡೆದಿರುವ ತಾಯಂದಿರಿಗೆ ಪ್ರಶಸ್ತಿ ನೀಡುವದರ ಮೂಲಕ ಜನಸಂಖ್ಯೆಯ ಹೆಚ್ಚಳಕ್ಕೆ ಪ್ರೋತ್ಸಾಹ ನೀಡುತ್ತಿತ್ತು. ಅವಿವಾಹಿತರು, ಮತ್ತು ಸಂತಾನವಿಲ್ಲದವರು ಹೆಚ್ಚು ತೆರಿಗೆ ಕೊಡಬೇಕಾಗಿದ್ದುದುಂಟು. ಅದೇ ಪ್ರಕಾರವಾಗಿ ಜಗತ್ತಿನ ಅನೇಕ ರಾಜ್ಯಗಳು ಜನಸಂಖ್ಯೆಯನ್ನು ಕಡಿಮೆ ಮಾಡುವ ಪ್ರಯತ್ನದಲ್ಲಿ-ರುವದು ಕಂಡುಬರುತ್ತದೆ. ಉದಾ : ನಮ್ಮ ದೇಶದ ಸರಕಾರ ಸಂತಾನ ನಿಯಂತ್ರಣಕ್ಕೆ ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡುತ್ತಿರುವದನ್ನು ನಾವು ಗಮನಿಸ-ಬಹುದಾಗಿದೆ. ಜನರು ಹಸಿವು, ದಾರಿದ್ರ್ಯಗಳಿಂದ ಬಳಲಬಾರದು.ದೇಶದ ಉತ್ಪನ್ನಕ್ಕೆ, ಶಕ್ತಿಸಾಮರ್ಥ್ಯಕ್ಕೆ ತಕ್ಕಂತೆ ಜನಸಂಖ್ಯೆ ಇರಬೇಕೆಂಬುದೇ ಸಂತಾನ ನಿಯಂತ್ರಣದ ಮುಖ್ಯ ಉದ್ದೇಶವಾಗಿದೆ.

ಒಂದು ರಾಜ್ಯದ ಸ್ಥಾನಮಾನ ಕೇವಲ ಜನರ ಸಂಖ್ಯೆಯನ್ನು ಮಾತ್ರ ಅವಲಂಬಿಸಿಕೊಂಡಿರುವದಿಲ್ಲ. ಇಂದು ಜನರ ಸಂಖ್ಯೆಗಿಂತ ಅವರ ಗುಣಮಟ್ಟಕ್ಕೆ ಹೆಚ್ಚಿನ ಗಮನವನ್ನು ಕೊಡಲಾಗಿದೆ.ಒಂದು ರಾಜ್ಯವು ಕಡಿಮೆ ಪ್ರಮಾಣದ ಜನಸಂಖ್ಯೆಯನ್ನು ಹೊಂದಿದ್ದರೂ ಆದರ ಗುಣ ಮಟ್ಟ, ದಕ್ಷತೆ, ಸಾಮರ್ಥ್ಯ ಉನ್ನತ ಮಟ್ಟದಲ್ಲಿದ್ದರೆ ಅವರು ಹೆಚ್ಚಿನ ಪ್ರಗತಿಯನ್ನು ಸಾಧಿಸಲು ಸಾಧ್ಯ. ಅವಿದ್ಯಾವಂತರೂ, ಅದಕ್ಷರೂ ಆದ ಜನರು ಅಧಿಕ ಸಂಖ್ಯೆಯಲ್ಲಿದ್ದಾಗ ಆ ರಾಜ್ಯದಲ್ಲಿ ಹೆಚ್ಚಿನ ಪ್ರಗತಿ ಸಾಧ್ಯವಿಲ್ಲ. ಅವಿದ್ಯಾವಂತರೂ, ಅನಾಗರಿಕರೂ ಅಧಿಕ ಸಂಖ್ಯೆಯಲ್ಲಿರುವದಕ್ಕಿಂತ ವಿದ್ಯಾವಂತರೂ, ನಾಗರಿಕರೂ, ಕುಶಲಿಗಳು, ಕಡಿಮೆ ಸಂಖ್ಯೆಯಲ್ಲಿದ್ದರೂ ಒಳ್ಳೆಯದು ಎಂದು

ಹೇಳಲಾಗಿದೆ. ಜನರು ಆರೋಗ್ಯವಂತರು, ದೃಢಕಾಯರು, ಶಿಸ್ತು ಮತ್ತು ದಕ್ಷತೆಗಳಿಂದ ಕೂಡಿದವರು ಆಗಿದ್ದರೆ ಅಂತಹ ಜನರನ್ನು ಹೊಂದಿರುವ ರಾಜ್ಯವು ಪ್ರಗತಿಯನ್ನು ಸಾಧಿಸಿ ಸುಖೀ ರಾಜ್ಯವಾಗುವದರಲ್ಲಿ ಸಂಶಯವಿಲ್ಲ. ಅಂತೆಯೇ ಸೋಮಾರಿಗಳು, ಅದಕ್ಷರು, ಅವಿದ್ಯಾವಂತರೂ, ಆದ ಜನರನ್ನೂ ಹೊಂದಿರುವ ರಾಜ್ಯದ ಪ್ರಗತಿ ಕಷ್ಟ ಸಾಧ್ಯ.ಆದುದರಿಂದ ಜನರ ಸಂಖ್ಯೆಗಿಂತ ಅವರ ಗುಣ ಸಾಮರ್ಥ್ಯಗಳು ಪ್ರಮುಖವಾದ ಸಂಗತಿಗಳಾಗಿವೆ. ಕಾರಣ ಉತ್ತಮ ನಾಗರಿಕರು ಉತ್ತಮ ರಾಜ್ಯವನ್ನು ನಿರ್ಮಾಣ ಮಾಡಬಲ್ಲರು. ಉದಾ :- ಇಗ್ಲೆಂಡ್, ಜಪಾನ್ ಇತ್ಯಾದಿ

## ಇ. ಸರಕಾರ

ಸರಕಾರವು ರಾಜ್ಯದ ಮೂರನೇ ಅಂಶವಾಗಿದೆ. ಇದು ರಾಜ್ಯದ ಪ್ರತಿನಿಧಿ. ರಾಜ್ಯವು ಸರಕಾರದ ಮೂಲಕ ತನ್ನ ಕಾರ್ಯವನ್ನು ಸಾಧಿಸುತ್ತದೆ. ರಾಜ್ಯದಲ್ಲಿ ಆಡಳಿತ ಸಾಗಿಸಲು ಮತ್ತು ಶಾಂತಿ ಸುವ್ಯವಸ್ಥೆಯನ್ನು ಸ್ಥಾಪಿಸಲು ಸರಕಾರವು ಅತ್ಯವಶ್ಯವಾಗಿದೆ. ಯಾವ ರೀತಿಯಾಗಿ ತಲೆ ಇಲ್ಲದ ಮಾನವನಿರಲಾರನೋ ಅದೇ ರೀತಿ ಸರಕಾರವಿಲ್ಲದೇ ರಾಜ್ಯವಿರಲಾರದು. ಇಸ್ರೇಲ್ ಸ್ಥಾಪನೆಯಾಗುವದಕ್ಕಿಂತ ಮೊದಲು ಯಹೂದಿಗಳು ರಾಜ್ಯವನ್ನು ಹೊಂದಿದ್ದಿಲ್ಲ. ರಾಜ್ಯವು ಕೇವಲ ಭಾವನಾತ್ಮಕವಾಗಿದೆ. ಅದು ಅಗೋಚರವಾಗಿದೆ. ಅದರ ಇರುವಿಕೆಯನ್ನು ಸರಕಾರದ ಮೂಲಕ ಕಾಣುತ್ತೇವೆ. ಆದ್ದರಿಂದ ರಾಜ್ಯವು ಅಮೂರ್ತವಾಗಿದ್ದರೆ ಸರಕಾರವು ಮೂರ್ತಸ್ವರೂಪದ್ದಾಗಿದೆ.

**ಸರಕಾರ ಮುಖ್ಯವಾಗಿ ಮೂರು ಅಂಗಗಳನ್ನು ಹೊಂದಿದೆ.**

**೧. ಶಾಸನಾಂಗ :** ಅವಶ್ಯವಾದ ಕಾನೂನುಗಳನ್ನು ಶಾಸನಾಂಗವು ಪಾಸು ಮಾಡುತ್ತದೆ.

**೨. ಕಾರ್ಯಾಂಗ :** ಶಾಸನಾಂಗ ಪಾಸು ಮಾಡಿದ ಕಾಯ್ದೆಗಳನ್ನು ಜಾರಿಯಲ್ಲಿ ತರುವ ಮತ್ತು ದೇಶದಲ್ಲಿ ಆಡಳಿತವನ್ನು ಸಾಗಿಸುವ ಕಾರ್ಯವನ್ನು ಮಾಡುತ್ತದೆ.

**೩. ನ್ಯಾಯಾಂಗ :** ಕಾನೂನುಗಳಿಗೆ ಅರ್ಥವಿವರಣೆ ಕೊಡುವ ಮತ್ತು ವ್ಯಕ್ತಿ-ವ್ಯಕ್ತಿಗಳ ನಡುವೆ ಹಾಗೂ ವ್ಯಕ್ತಿ ಸರಕಾರಗಳ ನಡುವೆ ತಲೆದೋರುವ ವ್ಯಾಜ್ಯಗಳನ್ನು ನಿರ್ಣಯಿಸುವ ಹೊಣೆ ನ್ಯಾಯಾಂಗದ್ದು. ಕಾನೂನನ್ನು ಉಲ್ಲಂಘಿಸುವ ವ್ಯಕ್ತಿಗಳಿಗೆ ನ್ಯಾಯಾಂಗವು ಶಿಕ್ಷೆಯನ್ನು ವಿಧಿಸುತ್ತದೆ.

ಈ ಪ್ರಕಾರ ಮೂರು ಅಂಗಗಳು ಕೂಡಿ ಸರಕಾರವನ್ನು ನಡೆಸುತ್ತವೆ. ಸರಕಾರವು ಯಾವದೇ ಪ್ರಕಾರದ್ದಾಗಿರಬಹುದು ಅಥವಾ ನಿರಂಕುಶ ಪ್ರಭುತ್ವವಾಗಿರಬಹುದು ಅಥವಾ ಅರಸೊತ್ತಿಯಾಗಿರಬಹುದು. ಇನ್ನೂ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ವಿಧವಾದ ಸರಕಾರವನ್ನು ಕಾಣಬಹುದು. ಉದಾ : ಇಂಗ್ಲೆಂಡಿನಲ್ಲಿ ಕೇಂದ್ರೀಕೃತ

ಸರಕಾರವಿದೆ. ಅಮೇರಿಕೆಯಲ್ಲಿ ಅಧ್ಯಕ್ಷೀಯ ಸರಕಾರವಿದೆ.ಹಾಗೂ ಭಾರತದಲ್ಲಿ ಸಂಸದೀಯ ಸರಕಾರವಿದೆ. ರಾಜ್ಯವು ಶಾಶ್ವತ ವಾದುದು ಎಂದು ಹೇಳುವದು ಅಷ್ಟೇನೂ ಸಮಂಜಸವಾದುದಲ್ಲ ಎಂದು ಹೇಳಬಹುದು. ರಾಜ್ಯವು ತನ್ನ ಅಧಿಕಾರವನ್ನು ಕಳೆದು ಕೊಂಡಾಗ ಅಂಥ ಬೇರೆ ರಾಜ್ಯವು ಬಂದು ರಾಜ್ಯವನ್ನು ಆಕ್ರಮಿಸಿಕೊಂಡಾಗ ಆಕ್ರಮಣಕ್ಕೆ ಒಳಗಾದ ರಾಜ್ಯವು ತನ್ನ ಅಸ್ತಿತ್ವವನ್ನೇ ಕಳೆದುಕೊಂಡು ನಶಿಸಿಹೊಗುತ್ತದೆ. ಒಂದು ರಾಜ್ಯಕ್ಕೆ ಯಾವ ಬಗೆಯ ಸರಕಾರವಿರಬೇಕೆಂಬುದನ್ನು ಅಲ್ಲಿನ ಸ್ಥಿತಿಗತಿಗಳನ್ನು ಅನುಸರಿಸಿ ಅಲ್ಲಿನ ಪ್ರಜೆಗಳು ನಿರ್ಧರಿಸುತ್ತಾರೆ.

## ಈ. ಪರಮಾಧಿಕಾರ ಅಥವಾ ಸಾರ್ವಭೌಮ ಅಧಿಕಾರ

ಸಾರ್ವಭೌಮ ಅಧಿಕಾರವೆಂದರೆ ರಾಜ್ಯದ ಪರಮ ಶ್ರೇಷ್ಠ ಅಧಿಕಾರ. ಈ ಅಧಿಕಾರವನ್ನುದೇಶದಲ್ಲಿಯ ಪ್ರತಿಯೊಬ್ಬ ವ್ಯಕ್ತಿ ಮತ್ತು ಸಂಘ ಸಂಸ್ಥೆಗಳ ಮೇಲೆ ನಡೆಸಲಾಗುವದು.ಈ ಅಧಿಕಾರವನ್ನು ತಿರಸ್ಕರಿಸಿದಲ್ಲಿ ರಾಜ್ಯವು ಆ ವ್ಯಕ್ತಿಗೆ ಅಥವಾ ಸಂಸ್ಥೆಗೆ ಶಿಕ್ಷೆಯನ್ನು ವಿಧಿಸುತ್ತದೆ. ಇಂಥ ಸಾರ್ವಭೌಮ ಅಧಿಕಾರವನ್ನು ಕಾನೂನಿನ ಮೂಲಕ ನಡೆಸಲಾಗುತ್ತದೆ. ಯಾವ ರೀತಿಯಾಗಿ ಇಂಜಿನ್ ಇಲ್ಲದೆ ರೇಲ್ವೆ ಗಾಡಿ ಸಾಧ್ಯವಿಲ್ಲವೋ ಅದೇ ರೀತಿಯಾಗಿ ಪರಮಾಧಿಕಾರ ಇಲ್ಲದ ರಾಜ್ಯವು ಸಾಧ್ಯವಿಲ್ಲ.

**ಸಾರ್ವಭೌಮ ಅಧಿಕಾರವು ಎರಡು ವಿಧವಾಗಿದೆ.**

**೧. ಆಂತರಿಕ :** ದೇಶದ ಒಳ ಆಡಳಿತೆಯನ್ನು ನಡೆಸಿಕೊಂಡು ಹೋಗುವಲ್ಲಿ ಸಮಾಜದ ನಾನಾ ಸಂಸ್ಥೆಗಳಿಂದಲೂ ಮತ್ತು ವ್ಯಕ್ತಿಗಳಿಂದಲೂ ತನ್ನ ಕಾಯಿದೆಗಳಿಗೆ ವಿಧೇಯತೆಯನ್ನು ಪಡೆಯುವ ಅಧಿಕಾರ .

**೨. ಬಾಹ್ಯ :** ಇತರ ರಾಜ್ಯಗಳೊಂದಿಗೆ ಮೈತ್ರಿ ಬೆಳೆಸುವ, ಯುದ್ಧ ಮಾಡುವ ಅಥವಾ ಒಪ್ಪಂದ ಮಾಡಿಕೊಳ್ಳುವ ಸಂಪೂರ್ಣ ಅಧಿಕಾರ.

ಈ ರೀತಿಯಾಗಿ ರಾಜ್ಯದ ಒಳಗೆ ಮತ್ತು ಹೊರಗೆ ತಮಗೆ ಸರಿ ಕಂಡಂತೆ ಕಾನೂನುಗಳನ್ನು ಮಾಡುವ ಅಧಿಕಾರ ಹೊಂದಿರುತ್ತದೆ. ಆಂತರಿಕವಾಗಿ ರಾಜ್ಯದಲ್ಲಿ ಎಲ್ಲರೂ ಸಾರ್ವಭೌಮ ಅಧಿಕಾರಕ್ಕೆ ವಿಧೇಯರಾಗಿರಬೇಕು ಮತ್ತು ತಲೆ ಬಾಗಬೇಕು. ಬಾಹ್ಯವಾಗಿ ದೇಶವು ಪರರಾಜ್ಯಗಳ ನಿಯಂತ್ರಣಕ್ಕೆ ಸಿಲುಕಬಾರದು. ಒಟ್ಟಾರೆ ರಾಜ್ಯವು ಆಂತರಿಕವಾಗಿ ಶ್ರೇಷ್ಠವಿದ್ದು, ಸ್ವತಂತ್ರವಾಗಿದ್ದು ಒಳಗೂ ಹಾಗೂ ಹೊರಗೂ ಶ್ರೇಷ್ಠ ವಾಗಿರುತ್ತದೆ. ಈ ಅರ್ಥದಲ್ಲಿ ಭಾರತದಲ್ಲಿಯ ಕರ್ನಾಟಕ ರಾಜ್ಯವು ನಿಜವಾದ ಅರ್ಥದಲ್ಲಿ ರಾಜ್ಯವೋ? ಕರ್ನಾಟಕ ನಿಜವಾದ ಅರ್ಥದಲ್ಲಿ ರಾಜ್ಯವಲ್ಲ ಯಾಕೆಂದರೆ ಕೆಲವೊಂದು ಮಟ್ಟಿಗೆ ಆಂತರಿಕ ಪರಮಾಧಿಕಾರ ವಿದ್ದರೂ ಅದಕ್ಕೆ ಬಾಹ್ಯ ಪರಮಾಧಿಕಾರ

ಇರುವದಿಲ್ಲ. ಯಾಕೆಂದರೆ ಅದು ಭಾರತ ಸಂಯುಕ್ತ(ಒಕ್ಕೂಟ) ರಾಜ್ಯದ ಒಂದು ಅಂಗವಾಗಿದ್ದು ಅದರ ನಿಯಂತ್ರಣದಲ್ಲಿರುತ್ತದೆ. ರಾಜ್ಯದ ಅತಿ ಮುಖ್ಯ ಲಕ್ಷಣವೆಂದರೆ, ಸಾರ್ವಭೌಮ ಅಧಿಕಾರ. ಕೇವಲ ಪ್ರದೇಶ, ಜನಸಂಖ್ಯೆ ಮತ್ತು ಸರಕಾರವಿದ್ದ ಮಾತ್ರಕ್ಕೆ ರಾಜ್ಯವಾಗಲಾರದು. ಪರಮಾಧಿಕಾರ ಹೊಂದಿದ್ದರೆ ಮಾತ್ರ ರಾಜ್ಯವೆಂದು ಪರಿಗಣಿಸಲ್ಪಡುತ್ತದೆ. ಉದಾ: ಕ್ರಿ.ಶ. ೧೯೪೭ ರ ಪೂರ್ವದಲ್ಲಿ ಭಾರತದ ಸಾರ್ವಭೌಮ ಅಧಿಕಾರವು ಬ್ರಿಟಿಶರ ಕೈಯಲ್ಲಿತ್ತು. ಆದಕಾರಣ ಭಾರತವನ್ನು ರಾಜ್ಯವೆಂದು ಪರಿಗಣಿಸಲಾಗಿದ್ದಿಲ್ಲ. ಆದರೆ ೧೯೪೭ ಅಗಷ್ಟ ೧೫ ರಂದು ಬ್ರಿಟಿಶರಿಂದ ಭಾರತೀಯರಿಗೆ ಸಾರ್ವಭೌಮ ಅಧಿಕಾರವು ಹಸ್ತಾಂತರವಾದ ಬಳಿಕ ಭಾರತವು ಸ್ವತಂತ್ರ ರಾಜ್ಯವಾಗಿ ಉದಯಿಸಿತು.

## ಆ. ನಾಗರಿಕತ್ವದ ವಿಧಗಳು ಮತ್ತು ನಾಗರಿಕನ ಕರ್ತವ್ಯಗಳು

ರಾಜ್ಯಶಾಸ್ತ್ರದ ಮೂಲಭೂತ ಪರಿಕಲ್ಪನೆಗಳಲ್ಲಿ ನಾಗರಿಕತ್ವವೂ ಒಂದು. ನಾಗರಿಕ ಎಂಬ ಪದದ ಅಕ್ಷರಶಃ ಅರ್ಥವನ್ನು ಮಾಡಿದರೆ ನಗರದಲ್ಲಿ ಅಥವಾ ಪಟ್ಟಣದಲ್ಲಿ ವಾಸಿಸುವ ವ್ಯಕ್ತಿ ಎಂದಾಗುತ್ತದೆ. ಆದರೆ ನಾಗರಿಕ ಎಂಬ ಪದವನ್ನು ಪ್ರಾಚೀನ ಕಾಲದಲ್ಲಿ, ಮಧ್ಯಯುಗದಲ್ಲಿ ಮತ್ತು ಈಗಿನ ಪ್ರಪಂಚದಲ್ಲಿ ವಿವಿಧ ಅರ್ಥಗಳಲ್ಲಿ ಬಳಸಲಾಗಿದೆ.

ಪೌರ ಅಥವಾ ನಾಗರಿಕ ಎಂಬ ಅರ್ಥಕೊಡುವ ಇಂಗ್ಲೀಷ್ ಪದವಾದ ಸಿಟಿಜನ್ ಎಂಬ ಪದ ಸಿಟಿ ಎಂಬ ಪದದಿಂದ ಬಂದುದಾಗಿದೆ. ಸಿಟಿ ಎಂಬ ಇಂಗ್ಲೀಷ್ ಪದ ಲ್ಯಾಟಿನ್ ಪದವಾದ ಸಿವಿಸ್‌ದಿಂದ ಬಂದಿದ್ದು 'ಸಿಟಿ' ಎಂದರೆ ನಗರ ಅಥವಾ ಪುರ ಅಥವಾ ಪಟ್ಟಣ ಎಂದರ್ಥ. ಆದ್ದರಿಂದ ನಾಗರಿಕ ಅಥವಾ ಪೌರ ಎಂದರೆ ನಗರ ವಾಸಿ ಅಥವಾ ಪಟ್ಟಣವಾಸಿ ಎಂಬ ಕಲ್ಪನೆ ಬರುವದು ಸಾಮಾನ್ಯ.

ನಾಗರಿಕತ್ವದ ಅರ್ಥ ವಿವರಣೆಯನ್ನು ಪ್ರಪ್ರಥಮ ಬಾರಿಗೆ ನೀಡಿದ ಕೀರ್ತಿ ರಾಜ್ಯಶಾಸ್ತ್ರದ ಪಿತಾಮಹ ಅರಿಸ್ಟಾಟಲ್‌ರಿಗೆ ಸಲ್ಲುತ್ತದೆ. ಅರಿಸ್ಟಾಟಲ್‌ರ ಪ್ರಕಾರ, ಸರಕಾರದ ವಿವಿಧ ಅಂಗಗಳಲ್ಲಿ ಹಾಗೂ ಚರ್ಚೆಯಲ್ಲಿ ಭಾಗವಹಿಸಬಲ್ಲಂತಹ ಅಧಿಕಾರವಿರುವವನೇ ನಾಗರಿಕ. ಅಂದರೆ ಇವರ ಪ್ರಕಾರ ಗ್ರೀಕ್ ನಗರ ರಾಜ್ಯಗಳಲ್ಲಿ ವಾಸಿಸುತ್ತಿದ್ದು ರಾಜ್ಯಾಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದವರು ಮಾತ್ರವೇ ನಾಗರಿಕ. ಇಂತಹ ನಾಗರಿಕರಿಗೆ ಮಾತ್ರವೇ ನಾಗರಿಕತ್ವ ಹೊಂದಿರಬೇಕೆಂಬ ಅಭಿಪ್ರಾಯ ಹೊಂದಿದ್ದ ಅರಿಸ್ಟಾಟಲ್, ಸ್ತ್ರೀಯರು, ವಿದೇಶಿಯರು, ಗುಲಾಮರಿಗೆ ನಾಗರಿಕತ್ವವನ್ನು ನೀಡಲು ವಿರೋಧಿಸಿದ್ದಾನೆ. ಹೀಗೆ ಕೆಲವೇ ಜನರಿಗೆ ನಾಗರಿಕತ್ವ ಸೀಮಿತವಾಗಿತ್ತು ಎಂಬುದು ಗೊತ್ತಾಗುತ್ತದೆ.

ರೋಮನ್ನರ ಕಾಲದ ನಾಗರಿಕತ್ವ ಗ್ರೀಕರ ಕಾಲದಲ್ಲಿನ ನಾಗರಿಕತ್ವಕ್ಕಿಂತ ತೀರ ಭಿನ್ನವಾಗಿತ್ತೆಂದು ಗೊತ್ತಾಗುತ್ತದೆ ಅಂದರೆ ರೊಮನ್‌ರ ಕಾಲದ ನಾಗರಿಕತ್ವವು ಕೇವಲ ಕೆಲವೇ ವರ್ಗದ ಜನರಿಗೆ ಸೀಮಿತವಾಗಿರದೇ ಗುಲಾಮರು ಹಾಗೂ ವಿದೇಶಿಯರನ್ನು ಹೊರತುಪಡಿಸಿ ಎಲ್ಲರಿಗೂ ವಿಸ್ತೃತವಾಗಿತ್ತು. ಇಲ್ಲಿ ಗ್ರೀಕರಂತೆ ರಾಜ್ಯಾಡಳಿತದಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತಿದ್ದವರಿಗೆ ಮಾತ್ರವೇ ನಾಗರಿಕತ್ವವನ್ನು ಸಿಮೀತಗೊಳಿ- ಸಿರಲಿಲ್ಲ ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಮಧ್ಯಯುಗದಲ್ಲೂ ರಾಜ್ಯದಲ್ಲಿ ವಾಸಿಸುತ್ತಿದ್ದವರಿಗೆಲ್ಲಾ ನಾಗರಿಕತ್ವವನ್ನು ನೀಡದೇ ಕೆಲವೇ ವರ್ಗದವರಿಗೆ ಮಾತ್ರ ನೀಡಲಾಗುತ್ತಿತ್ತು. ಈ ಕಾಲದಲ್ಲಿ ಊಳಿಗಮಾನ್ಯ ವ್ಯವಸ್ಥೆಯಲ್ಲಿದ್ದು ಜಮೀನದಾರರು, ಧರ್ಮ ಗುರುಗಳು, ಪಾಳೆಗಾರರು, ಸರದಾರರು ಮಾತ್ರವೇ ಹೊಂದಿದವರಾಗಿದ್ದರು ಆದರೆ ಊಳುವವರಿಗಲ್ಲ. ಅಂದರೆ ಈ ಕಾಲದಲ್ಲಿಯೂ ಸಹ ನಾಗರಿಕತ್ವ ಎಲ್ಲರಿಗೂ ವಿಸ್ತರಿತವಾಗಿರಲಿಲ್ಲ ಎಂದು ಗೊತ್ತಾಗುತ್ತದೆ.

ಆಧುನಿಕ ಕಾಲದಲ್ಲಿ ನಾಗರಿಕತ್ವದ ಅರ್ಥ ಪ್ರಾಚೀನ ಹಾಗೂ ಮಧ್ಯಕಾಲಕ್ಕಿಂತ ಭಿನ್ನವಾಗಿದೆ. ಇಂಗ್ಲೆಂಡದಲ್ಲಿ ಜರುಗಿದ ಔದ್ಯೋಗಿಕ ಕ್ರಾಂತಿ ನಾಗರಿಕತ್ವದ ಅರ್ಥ ವಿವರಣೆಯನ್ನು ಬದಲಿಸಿತು. ತನ್ಮೂಲಕ ಪಟ್ಟಣಗಳಲ್ಲಿ ದೊಡ್ಡ ದೊಡ್ಡ ಉದ್ದಿಮೆಗಳು ಸ್ಥಾಪಿಸಲ್ಪಟ್ಟವು. ಸಾಗುವಳಿ ಸ್ವತಂತ್ರವಾಯಿತು. ಸಾಗುವಳಿದಾರರು ಹೊಸದಾಗಿ ಪ್ರಾರಂಭವಾದ ಉದ್ದಿಮೆಗಳಲ್ಲಿ ಕೆಲಸ ಮಾಡಲು ಪಟ್ಟಣಗಳಿಗೆ ವಲಸೆ ಹೋಗಲಿಕ್ಕೆ ಹತ್ತಿದರು. ಇದೇ ವೇಳೆಯಲ್ಲಿ ಜರುಗಿದ ರಾಜಕೀಯಕ್ರಾಂತಿ ಯುರೋಪದಲ್ಲಿ ಪ್ರಜಾಪ್ರಭುತ್ವವನ್ನು ತಂದಿತು. ಉದಾ: ಕ್ರಿ.ಶ. ೧೭೮೯ ರಲ್ಲಿ ಜರುಗಿದ ಫ್ರೆಂಚ್ ಕ್ರಾಂತಿ ರಾಜಪ್ರಭುತ್ವವನ್ನು ರದ್ದುಪಡಿಸಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿತು. ಕ್ರಿ.ಶ. ೧೬೮೮ ರಲ್ಲಿ ಜರುಗಿದ ಇಂಗ್ಲೀಷ್‌ಕ್ರಾಂತಿ ಇಂಗ್ಲೆಂಡ್‌ದಲ್ಲಿ ರಾಜಪ್ರಭುತ್ವವನ್ನು ರಕ್ಷಿಸಿದರೂ ರಾಜನನ್ನು ನಾಮಮಾತ್ರ ಕಾರ್ಯಾಂಗವನ್ನಾಗಿ ರೂಪಿಸಿತು. ಪ್ರಶಸ್ತ ಕಾಲದಲ್ಲಿ ಅನೇಕ ದೇಶಗಳು ಪ್ರಜಾಸತ್ತಾತ್ಮಕ ಸರಕಾರಗಳನ್ನು ಅಳವಡಿಸಿಕೊಂಡಿವೆ. ಪ್ರಜಾಪ್ರಭುತ್ವದಲ್ಲಿ ಜನರು ಪ್ರಮುಖರು. ಆಧುನಿಕ ರಾಜ್ಯಗಳು ಭೂ-ವಿಸ್ತೀರ್ಣದಲ್ಲಿ ಮತ್ತು ಜನಸಂಖ್ಯೆಯಲ್ಲಿ ಹೆಚ್ಚಾಗಿದ್ದು ಇವುಗಳನ್ನು ಪ್ರಾಚೀನ ಕಾಲದ ರಾಜ್ಯಗಳಿಗೆ ಹೋಲಿಸಲು ಸಾಧ್ಯವಿಲ್ಲ. ಆಧುನಿಕ ಕಾಲದಲ್ಲಿನ ರಾಜ್ಯಗಳಲ್ಲಿ ಸಮಸ್ತ ಜನರೂ ರಾಜ್ಯದ ಆಡಳಿತದಲ್ಲಿ ಪ್ರತ್ಯಕ್ಷ ಭಾಗವಹಿಸುವದು ಅಸಾಧ್ಯ. ಅಂದರೆ ಅಲ್ಲಿ ಅಪ್ರತ್ಯಕ್ಷ ಪ್ರಜಾಪ್ರಭುತ್ವ ಜಾರಿಯಲ್ಲಿದೆ. ಇದರ ಜೊತೆಗೆ ಆಧುನಿಕಕಾಲ ಪ್ರಜಾಪ್ರಭುತ್ವ ಯುಗವಾಗಿದ್ದು, ನಾಗರಿಕತ್ವವನ್ನು ಕೆಲವೇ ವರ್ಗದ ಜನರಿಗೆ ನೀಡಲು ಅಸಾಧ್ಯ. ಕಾರಣವೇನೆಂದರೆ ಪ್ರಜಾಪ್ರಭುತ್ವದ ತತ್ವವೇ ಸಮಾನತೆಯಾಗಿದ್ದು ನಾಗರಿಕತ್ವವನ್ನು ನೀಡುವಲ್ಲಿ

ಪಕ್ಷಪಾತವನ್ನು ತೋರಿಸಲಾಗದು. ಈ ಎಲ್ಲ ಕಾರಣಗಳಿಂದ ರಾಜ್ಯದಲ್ಲಿ ವಾಸಿಸುವ ಸ್ತ್ರೀ- ಪುರುಷರು, ಶ್ರೀಮಂತರು - ಬಡವರು, ಭೂಮಾಲಿಕರು, ಭೂರಹಿತರು, ಬಂಡವಾಳ ಶಾಹಿಗಳು, ಕಾರ್ಮಿಕರು, ನಗರ ಪಟ್ಟಣ ಹಳ್ಳಿವಾಸಿಗಳಾದಿಯಾಗಿ, ಎಲ್ಲರೂ ನಾಗರಿಕತ್ವವನ್ನು ಪಡೆಯುತ್ತಾರೆ. ಅಂದರೆ ರಾಜ್ಯದ ಪೌರತ್ವವನ್ನು ಪಡೆಯಬೇಕಾದರೆ ರಾಜ್ಯದ ಆಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಅಗತ್ಯವಿಲ್ಲ. ಆದರೆ ಕೆಲವೊಂದು ಭಾದ್ಯತೆಗಳಿಗೆ ಪೌರತ್ವ ಒಳಪಟ್ಟಿರುತ್ತದೆ ಎಂಬುದನ್ನು ಮರೆಯುವಂತಿಲ್ಲ. ಒಟ್ಟಾರೆ ನಾಗರಿಕ ಎಂದರೆ ನಿರ್ಧಿಷ್ಟ ಪ್ರದೇಶದಲ್ಲಿ ವಾಸಿಸುವ ವ್ಯಕ್ತಿ. ಆದರೆ ಈ ವ್ಯಾಪ್ತಿಗೆ ವಿದೇಶಿ ವ್ಯಕ್ತಿ ಸೇರುವದಿಲ್ಲ. ನಾಗರಿಕತ್ವವು ರಾಜ್ಯದ ಸದಸ್ಯತ್ವವಾಗಿದ್ದು ಆಧುನಿಕ ರಾಜ್ಯದ ಎಲ್ಲ ಸದಸ್ಯರು ನಾಗರಿಕರಾಗಿರುತ್ತಾರೆ. ಅಂದರೆ ಒಂದು ರಾಜ್ಯದಲ್ಲಿ ವಾಸಿಸುತ್ತಿದ್ದು ಅಲ್ಲಿನ ಹಕ್ಕು - ಬಾಧ್ಯತೆಗಳನ್ನು ಹೊಂದಲು ಅರ್ಹನಾಗಿರುವವನೇ ನಾಗರಿಕ.

ನಾಗರಿಕತ್ವಕ್ಕೂ ಮತ್ತು ರಾಜ್ಯಕ್ಕೂ ಇರುವ ಸಂಬಂಧ ಬಹಳ ನಿಕಟವಾಗಿದೆ. ಏಕೆಂದರೆ ನಾಗರಿಕತ್ವವೆಂದರೆ ರಾಜ್ಯದ ಸದಸ್ಯತ್ವ. ಪ್ರತಿಯೊಬ್ಬ ವ್ಯಕ್ತಿಯು ವಿಶ್ವದ ಒಂದಲ್ಲ ಒಂದು ರಾಜ್ಯದ ನಾಗರಿಕತ್ವವನ್ನು ಹೊಂದಿರಲಿಕ್ಕೇ ಬೇಕು. ಪ್ರಜಾಪ್ರಭುತ್ವದಲ್ಲಿ ನಾಗರಿಕನು ಮಹತ್ವದ ಪಾತ್ರವನ್ನು ವಹಿಸಬೇಕಾಗಿದೆ. ಆದರೆ ಅರಸೊತ್ತಿಗೆ, ಉತ್ತಮರ ಪ್ರಭುತ್ವ ಮತ್ತು ಸರ್ವಾಧಿಕಾರತ್ವದಲ್ಲಿ ನಾಗರಿಕನಿಗೆ ಸ್ವಾತಂತ್ರ್ಯ ಹಾಗೂ ಹಕ್ಕು ಬಾಧ್ಯತೆಗಳಿರುವದಿಲ್ಲ. ಆಡಳಿತದಲ್ಲಿ ಭಾಗವಹಿಸಲು ಅವಕಾಶಗಳಿರುವದಿಲ್ಲ. ಆಡಳಿತಗಾರನ ಅಪ್ಪಣೆಗೆ ವಿಧೇಯರಾಗಿರುವದೇ ನಾಗರಿಕನ ಕರ್ತವ್ಯವಾಗಿದೆ. ಆದಕಾರಣ ಅಂತಹ ರಾಜಕೀಯ ಪದ್ಧತಿಯಲ್ಲಿ ನಾಗರಿಕತ್ವಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆಯಲಾರದೇ ನಾಗರಿಕನ ಪಾತ್ರ ಕಿರಿಯದಾಗಿರುತ್ತದೆ.

ಯಾವ ವ್ಯಕ್ತಿಯೂ ಏಕಕಾಲದಲ್ಲಿ ಎರಡು ರಾಜ್ಯಗಳ ಪೌರತ್ವವನ್ನು ಹೊಂದಲು ಸಾಧ್ಯವಿಲ್ಲ. ಆದರೆ ಪ್ರತಿಯೊಬ್ಬ ವ್ಯಕ್ತಿಯು ಯಾವುದಾದರೂ ರಾಜ್ಯದ ನಾಗರಿಕ-ನಾಗಿರಬೇಕು. ಒಂದು ರಾಜ್ಯದಲ್ಲಿ ವಾಸವಾಗಿರುವ ವಿದೇಶಿಯರಿಗೆ ಆ ರಾಜ್ಯದ ಪೌರತ್ವ ವಿರುವದಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಯಾವ ಕ್ಷೇತ್ರದಲ್ಲಿಯಾದರೂ ಗಣನೀಯವಾಗಿ ಸೇವೆ ಸಲ್ಲಿಸಿ ಜಗತ್ಪ್ರಸಿದ್ಧರಾದವರಿಗೆ ಗೌರವ ಸೂಚಿಸುವದಕ್ಕಾಗಿ ನಾಗರಿಕತ್ವವನ್ನು ನೀಡುವ ವಾಡಿಕೆಯುಂಟು. ಆದರೆ ಇಂತಹ ನಾಗರಿಕತ್ವವು ಗೌರವದ ಪ್ರತೀಕವಾಗಿದೆಯಷ್ಟೆ. ಇತರ ಕೆಲವೊಂದು ರಾಜ್ಯಗಳಲ್ಲಿರುವಂತೆ ಭಾರತದಲ್ಲಿ ವಾಸವಿಲ್ಲದ ಆಯ್ದ ಕೆಲವೊಂದು ಭಾರತೀಯ ವ್ಯಕ್ತಿಗಳಿಗೆ ಭಾರತದ ಪೌರತ್ವವನ್ನು ಕೊಡಬೇಕೆಂಬ ವಿಚಾರವಿದೆ.

ಒಂದೇ ರಾಜ್ಯದಲ್ಲಿ ವ್ಯಕ್ತಿ ಎರಡು ವಿಧವಾದ ನಾಗರಿಕತ್ವವನ್ನು ಪಡೆಯಲು ಅವಕಾಶವುಂಟು. ಸಂಯುಕ್ತ ಸರಕಾರ ಪದ್ಧತಿಯನ್ನು ಹೊಂದಿದ ಅಮೇರಿಕಾದಲ್ಲಿ

ಜನರು ಯಾವ ರಾಜ್ಯಕ್ಕೆ ಸೇರಿದವರಾಗಿರುತ್ತಾರೋ ಆ ರಾಜ್ಯದ ನಾಗರಿಕತ್ವವನ್ನು ನಂತರ ಅಮೇರಿಕಾ ದೇಶದ ನಾಗರಿಕತ್ವ ಪಡೆದಿರುತ್ತಾರೆ. ಆದರೆ ಭಾರತದಲ್ಲಿ ಸಂಯುಕ್ತ ಸರಕಾರ ಪದ್ಧತಿಯಿದ್ದರೂ ಅಲ್ಲಿ ಭಾರತೀಯರು ಭಾರತ ದೇಶದ ನಾಗರಿಕತ್ವವನ್ನು ಮಾತ್ರ ಪಡೆದಿರುತ್ತಾರೆ.

ನಾಗರಿಕತ್ವದ ಬಗ್ಗೆ ಅನೇಕ ಲೇಖಕರು ವ್ಯಾಖ್ಯೆಗಳನ್ನು ಕೊಟ್ಟಿದ್ದಾರೆ.

ವ್ಯಾಟಲ್‌ರ ಪ್ರಕಾರ ''ಸಮಾಜದ ಅಧಿಕಾರದಲ್ಲಿ ಮತ್ತು ಸಮಾಜದ ಎಲ್ಲ ಪ್ರಯೋಜನಗಳಲ್ಲಿ ಸಮಭಾಗಿಯಾಗುವದಕ್ಕೆ ಒಳಪಟ್ಟು ಕೆಲವು ಕರ್ತವ್ಯಗಳಿಗಾಗಿ ಸಮಾಜಕ್ಕೆ ಕಟ್ಟು ಬಿದ್ದ ನಾಗರಿಕ ಸಮಾಜದ ಸದಸ್ಯರು ನಾಗರಿಕರಾಗಿರುತ್ತಾರೆ.''

ಶ್ರೀನಿವಾಸಶಾಸ್ತ್ರಿ ಎಂಬುವವರ ಪ್ರಕಾರ ''ರಾಜ್ಯದ ಸದಸ್ಯನಾಗಿರುವ ಮತ್ತು ಸಮಾಜದ ಉನ್ನತ ನೈತಿಕ ಕಲ್ಯಾಣಕ್ಕಾಗಿ ಬೇಕಾಗುವ ವರ್ತನೆಯನ್ನು ಶ್ಲಾಘಿಸುವ-ದರೊಂದಿಗೆ ಸಮಾಜದೊಳಗಿದ್ದು ತನ್ನನ್ನೂ ಪೂರ್ತಿ ತಿಳಿದುಕೊಳ್ಳುವ ಹಾಗೂ ತನ್ನ ಅಪೇಕ್ಷೆಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸುವವನೇ ನಾಗರಿಕನಾಗಿದ್ದಾನೆ.

ಡೇನಿಯಲ್ ವಿಚ್ ಎಂಬ ಲೇಖಕರ ಪ್ರಕಾರ ''ಹಕ್ಕುಗಳು ಮತ್ತು ಕರ್ತವ್ಯಗಳನ್ನುಹೊಂದಿದವನೇ ನಾಗರಿಕ.''

## ನಾಗರಿಕ ಮತ್ತು ವಿದೇಶಿಯ

ನಾಗರಿಕ ಮತ್ತು ವಿದೇಶಿಯರ ನಡುವೆ ಅಂತರವಿದೆ. ಒಂದು ರಾಜ್ಯದ ಜನಸಂಖ್ಯೆಯಲ್ಲಿ ಹೆಚ್ಚಿನವರು ರಾಜ್ಯದ ಜನರೇ ಆದರೂ ಅನ್ಯದೇಶದ ಜನರೂ ಇರುತ್ತಾರೆ. ಅನೇಕ ಉದ್ದೇಶಗಳಿಗೋಸ್ಕರ ಬೇರೆ ಬೇರೆ ದೇಶದಿಂದ ಬಂದ ಜನ ಒಂದು ದೇಶದಲ್ಲಿ ತಾತ್ಕಾಲಿಕವಾಗಿ ವಾಸಿಸುತ್ತಾರೆ. ಈ ಜನರನ್ನೇ ವಿದೇಶಿಯರೆಂದು ಕರೆಯಲಾಗುವದು. ಈ ವಿದೇಶಿಯರು ದೇಶದ ನಾಗರಿಕರಂತೆ ಎಲ್ಲ ನಾಗರಿಕ ಹಕ್ಕುಗಳನ್ನು ಅನುಭವಿಸುತ್ತಾ ಸರಕಾರದ ಕಾನೂನುಗಳನ್ನು ಪಾಲಿಸಿಕೊಂಡು ಅದು ವಿಧಿಸುವ ಎಲ್ಲ ತೆರಿಗೆಗಳನ್ನು ಕೊಡಬೇಕಾಗಿದೆ. ಆದರೆ ವಿದೇಶಿಯರು ರಾಜಕೀಯ ಹಕ್ಕುಗಳನ್ನು ಅನುಭವಿಸಲು ಹಾಗೂ ರಾಜ್ಯದ ಸರಕಾರಿ ಹುದ್ದೆಗಳನ್ನು ಅಲಂಕರಿಸಲು ಸಾಧ್ಯವಿಲ್ಲ. ಆದರೆ ಕಾನೂನಿನ ಪ್ರಕಾರವಾಗಿ ಎಲ್ಲ ವಿಧವಾದ ರಕ್ಷಣೆಯನ್ನು ಇವರು ಪಡೆದುಕೊಳ್ಳುತ್ತಾರೆ. ಇವರಿಗೆ ರಾಜಕೀಯ ಹಕ್ಕುಗಳಾದ ಮತದಾನದ ಹಕ್ಕು, ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು ಹಾಗೂ ಸರಕಾರಿ ಹುದ್ದೆಗಳನ್ನು ಪಡೆಯುವ ಹಕ್ಕು ಇರುವದಿಲ್ಲ ಉದಾ :- ಭಾರತದಲ್ಲಿ ತಾತ್ಕಾಲಿಕವಾಗಿ ವಾಸಿಸುವ ಇಂಗ್ಲೀಷರು, ಅಮೇರಿಕನ್ನರು ಮತ್ತು ರಷಿಯಾದ ಜನರು ವಿದೇಶಿಗಳಾಗಿದ್ದಾರೆ. ಆದರೆ ಅವರು ತಮ್ಮ ದೇಶದ ನಾಗರಿಕರು, ನಮ್ಮ ಭಾರತದ ನಾಗರಿಕರಲ್ಲ.

೧. ನಾಗರಿಕನು ತನ್ನ ರಾಜ್ಯದ ಪರಿಪೂರ್ಣ ಸದಸ್ಯನಾಗಿದ್ದಾನೆ. ಆದರೆ ವಿದೇಶಿಯನು ಯಾವ ರಾಜ್ಯದಿಂದ ಬಂದಿರುವನೋ ಆರಾಜ್ಯದ ಸದಸ್ಯನಾಗಿರುತ್ತಾನೆ. ಉದಾ :- ಭಾರತದಲ್ಲಿ ವಾಸಿಸುವ ಅಮೇರಿಕಾದ ನಾಗರಿಕನು ವಿದೇಶಿಯನಾಗಿದ್ದು ಅಮೇರಿಕಾ ದೇಶದ ಸದಸ್ಯತ್ವವನ್ನು ಪಡೆದಿದ್ದಾನೆ ಹೊರತು ಭಾರತ ದೇಶದ ಸದಸ್ಯತ್ವವನ್ನಲ್ಲ.

೨. ನಾಗರಿಕನು ತನ್ನ ರಾಜ್ಯಕ್ಕೆ ನಿಷ್ಠೆಯುಳ್ಳವನಾಗಿರುತ್ತಾನೆ. ವಿದೇಶಿಯನು ಇಂಥ ನಿಷ್ಠೆ ತೋರಿಸುವದಿಲ್ಲ. ಅವನು ತಾನೂ ಸದಸ್ಯನಾಗಿರುವ ತನ್ನ ರಾಜ್ಯಕ್ಕೆ ನಿಷ್ಠೆಯನ್ನು ತೋರಿಸುತ್ತಾನೆ. ಉದಾ :- ಭಾರತ ದೇಶದಲ್ಲಿವಾಸಿಸುವ ಇಂಗ್ಲೀಷರು ಇಂಗ್ಲೆಂಡಕ್ಕೆ ನಿಷ್ಠೆಯುಳ್ಳವರಾಗಿರುತ್ತಾರೆಯೇ ಹೊರತು ಭಾರತಕ್ಕಲ್ಲ.

೩. ನಾಗರಿಕನು ಎಲ್ಲಿಯೇ ವಾಸಿಸಿರಲಿ ತನ್ನ ದೇಶದಲ್ಲಿ ವಾಸಿಸಿರಲಿ ಅಥವಾ ವಿದೇಶಗಳಲ್ಲಿವಾಸಿಸಿರಲಿ ಅವನಿಗೆ ತನ್ನ ದೇಶದ ಸರಕಾರದಿಂದ ರಕ್ಷಣೆ ಪಡೆಯುವ ಹಕ್ಕು ಇದೆ. ಆದರೆ ವಿದೇಶಿಯನ ವಿಷಯದಲ್ಲಿ ಹಾಗಿರುವದಿಲ್ಲ. ವಿದೇಶಿಯನು ತಾನು ವಾಸಿಸುವ ದೇಶದ ಸರಕಾರದಿಂದ ತಾನು ವಾಸಿಸುವವರೆಗೆ ರಕ್ಷಣೆ ಪಡೆಯಬಹುದು. ಆ ದೇಶವನ್ನು ಬಿಟ್ಟು ಹೋದನಂತರ ಇಂತಹ ರಕ್ಷಣೆಯನ್ನು ಅವನು ಪಡೆಯಲಾರನು. ಉದಾ : ಇಂಗ್ಲೆಂಡದ ನಾಗರಿಕನು ನಮ್ಮ ದೇಶದಲ್ಲಿ ವಾಸಿಸುವಾಗ ಅವನು ಭಾರತ ಸರಕಾರದಿಂದ ರಕ್ಷಣೆ ಕೇಳಬಹುದು. ಆದರೆ ಅವನು ಭಾರತ ದೇಶವನ್ನು ಬಿಟ್ಟು ಪಾಕಿಸ್ತಾನಕ್ಕೆ ಹೋದರೆ ಅಲ್ಲಿ ಅವನು ಭಾರತ ಸರಕಾರದಿಂದ ರಕ್ಷಣೆಯನ್ನು ಕೇಳಲಾರನು. ಆದರೆ ಅವನು ತನ್ನ ರಾಜ್ಯದ ಸರಕಾರವಾದ ಬ್ರಿಟಿಷ ಸರಕಾರದ ರಕ್ಷಣೆಯನ್ನು ಕೇಳಿಕೊಳ್ಳಬಹುದು. ಆದರೆ ಭಾರತದ ನಾಗರಿಕನು ಭಾರತ ದೇಶದಲ್ಲಿಯೇ ಇರಲಿ ಅಥವಾ ಜಗತ್ತಿನ ಯಾವುದೇ ಭಾಗದಲ್ಲಿ ಇರಲಿ ಅವನಿಗೆ ಭಾರತ ಸರಕಾರದಿಂದ ರಕ್ಷಣೆ ಕೇಳುವ ಹಕ್ಕು ಇರುತ್ತದೆ.

೪. ನಾಗರಿಕರಿಗೆ ಎಲ್ಲ ರಾಜಕೀಯ ಹಾಗೂ ನಾಗರಿಕ ಹಕ್ಕುಗಳು ಇರುತ್ತವೆ ಆದರೆ ವಿದೇಶಿಯರಿಗೆ ಇಂಥ ಹಕ್ಕುಗಳು ಇರುವದಿಲ್ಲ.

ನಾಗರಿಕನು ರಾಜ್ಯದಲ್ಲಿ ವಾಸವಾಗಿದ್ದು ರಾಜ್ಯದ ಸದಸ್ಯತ್ವವನ್ನು ಪಡೆದಿರುತ್ತಾನೆ. ಅವನಿಗೆ ನಾಗರಿಕ ಹಾಗೂ ರಾಜಕೀಯ ಹಕ್ಕುಗಳನ್ನು ಕೊಡಲಾಗಿ- ರುತ್ತದೆ. ನಾಗರಿಕನು ತನ್ನ ರಾಜ್ಯಕ್ಕೆ ಸಂಪೂರ್ಣ ವಿಧೇಯನಾಗಿರಬೇಕು. ಹಾಗೂ ನಿಷ್ಠೆಯನ್ನು ತೋರಿಸಬೇಕು.

ಭಾರತದೇಶದಲ್ಲಿ ವಾಸಿಸುವ ವಿದೇಶಿಯರು ಭಾರತ ಸರಕಾರದ ಕಾನೂನುಗಳಿಗೆ ವಿಧೇಯರಾಗಿರಬೇಕು. ಏಕೆಂದರೆ ಅವರ ಪ್ರಾಣ ಮತ್ತು ಆಸ್ತಿಗೆ ಸರಕಾರವು ರಕ್ಷಣೆ ನೀಡುತ್ತದೆ. ವಿದೇಶಿಯರು ನಮ್ಮ ರಾಜ್ಯದ ಕಾನೂನುಗಳನ್ನು ಉಲ್ಲಂಘಿಸಿದರೆ ನಮ್ಮ ನ್ಯಾಯಾಲಯಗಳು ಅವರಿಗೆ ಶಿಕ್ಷೆ ವಿಧಿಸಬಹುದು. ಆದರೆ ವಿದೇಶಿ ರಾಯಭಾರಿಗಳು

ಹಾಗೂ ಅವರ ಕಚೇರಿಯ ನೌಕರರು ಕಾನೂನುಗಳನ್ನು ಮುರಿದರೆ ಅವರಿಗೆ ಶಿಕ್ಷೆಯನ್ನು ವಿಧಿಸಲು ನ್ಯಾಯಾಲಯಗಳಿಗೆ ಅಧಿಕಾರವಿಲ್ಲ.

## ನಾಗರಿಕ ಮತ್ತು ಪ್ರಜೆ

ಇವರಲ್ಲಿಯೂ ಕೆಲವು ವ್ಯತ್ಯಾಸಗಳುಂಟು. ಈ ಎರಡೂ ಪದಗಳು ರಾಜ್ಯದ ಸದಸ್ಯರಿಗೆ ಅನ್ವಯಿಸುತ್ತವೆ. ನಾಗರಿಕನಿಗಿರುವ ಅಧಿಕಾರ, ಸ್ವಾತಂತ್ರ್ಯ, ಪ್ರಜೆಗೆ ಇರುವದಿಲ್ಲ. ಪ್ರಜಾಪ್ರಭುತ್ವದಲ್ಲಿ ವಾಸಿಸುವವರನ್ನು ನಾಗರಿಕರೆಂದೂ ಹಾಗೂ ನಿರಂಕುಶ ಪ್ರಭುತ್ವದಲ್ಲಿ ವಾಸಿಸುವವರನ್ನು ಪ್ರಜೆಗಳೆಂದು ಕರೆಯಬಹುದು.

ಕ್ರಿ.ಶ.೧೯೪೭ ಕ್ಕಿಂತಲೂ ಮೊದಲು ಅಂದರೆ ಬ್ರಿಟಿಶರ ಆಳ್ವಿಕೆಯಲ್ಲಿ ಭಾರತದ ಜನರನ್ನು ಪ್ರಜೆಗಳೆಂದೂ ಹಾಗೂ ಸ್ವಾತಂತ್ರ್ಯ ಪಡೆದ ನಂತರ ಅದರ ಜನರನ್ನು ನಾಗರಿಕರೆಂದೂ ಕರೆಯಲಾಗುತ್ತದೆ. ಒಟ್ಟಾರೆ ನಾಗರಿಕರು ಸ್ವಾತಂತ್ರ್ಯದ ದ್ಯೋತಕರು ಆದರೆ ಪ್ರಜೆಗಳು ಪರತಂತ್ರದ ದ್ಯೋತಕರು. ನಾಗರಿಕರನ್ನು ಮುಖ್ಯವಾಗಿ ಎರಡು ಪ್ರಕಾರವಾಗಿ ವಿಂಗಡಿಸಬಹುದು.

೧. ಹುಟ್ಟು ನಾಗರಿಕರು ಅಥವಾ ಜನನದ ಮೂಲಕ ನಾಗರಿಕರಾದವರು, ಇವರಿಗೆ ಸ್ವಾಭಾವಿಕ ನಾಗರಿಕರೆಂದೂ ಕರೆಯುತ್ತಾರೆ.

೨. ನಾಗರಿಕತ್ವವನ್ನು ಪಡೆದು ನಾಗರಿಕರಾದವರು, ಇವರು ಸಾಮಾನ್ಯವಾಗಿ ಮೊದಲು ವಿದೇಶಿಯರಾಗಿದ್ದು ತಮ್ಮ ದೇಶದ ನಾಗರಿಕತ್ವವನ್ನು ಬಿಟ್ಟುಕೊಟ್ಟು ತಾವು ವಾಸಿಸುವ ದೇಶದ ನಾಗರಿಕತ್ವವನ್ನುಸ್ವೀಕರಿಸಿದವರಾಗಿರುತ್ತಾರೆ. ಅಂದರೆ ಒಂದು ದೇಶಕ್ಕೆ ಕೆಲ ಕಾಲ ವಾಸಿಸಲು ಬಂದಂಥ ವಿದೇಶಿಯರು ಶಾಶ್ವತವಾಗಿ ಅಲ್ಲಿಯೇ ನೆಲೆಸಲು ನಿರ್ಧರಿಸಿದಾಗ ಅವರು ಆ ದೇಶದ ನಾಗರಿಕರಾಗಲು ಆ ದೇಶದ ನಾಗರಿಕರಂತೆಯೇ ಎಲ್ಲ ಹಕ್ಕುಗಳನ್ನು ಅನುಭವಿಸಲು ಇಚ್ಛಿಸುತ್ತಾರೆ. ವಿದೇಶಿಯರನ್ನು ನಾಗರಿಕರನ್ನಾಗಿ ಮಾಡಲು ಕೆಲವೊಂದು ನಿಯಮಗಳುಂಟು. ಈ ನಿಯಮಗಳು ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆಯಾಗಿವೆ. ಸರ್ವಸಾಮಾನ್ಯವಾಗಿ ಜನನದ ಮೂಲಕ ನಾಗರಿಕತ್ವವನ್ನು ಪಡೆದ ನಾಗರಿಕರಂತೆಯೇ ಇವರು ಎಲ್ಲ ಹಕ್ಕುಗಳನ್ನು ಅನುಭವಿಸುತ್ತಾರೆ. ಆದರೆ ಕೆಲವು ದೇಶಗಳಲ್ಲಿ ಒಂದೆರಡು ವಿಷಯಗಳಲ್ಲಿ ತಾರತಮ್ಯ ಮಾಡಲಾಗುತ್ತದೆ. ಉದಾ: ಅಮೇರಿಕೆಯಲ್ಲಿ ಆ ದೇಶದ ಅಧ್ಯಕ್ಷನಾಗಿರುವವನು ಹುಟ್ಟು ನಾಗರಿಕನಾಗಿರಬೇಕಾಗು ತ್ತದೆ. ಆದರೆ ಭಾರತದಲ್ಲಿ ಯಾವ ನಾಗರಿಕನಾದರೂ ರಾಷ್ಟ್ರಾಧ್ಯಕ್ಷನಾಗಬಹುದು. ಅಂದರೆ ರಾಷ್ಟ್ರಾಧ್ಯಕ್ಷನಾಗುವವನು ಹುಟ್ಟು ನಾಗರಿಕನಾಗಿರಬಹುದು ಅಥವಾ ವಿದೇಶದಿಂದ ನಮ್ಮ ದೇಶಕ್ಕೆ ಬಂದು ನಮ್ಮ ದೇಶದ ನಾಗರಿಕತ್ವವನ್ನು ಪಡೆದವನಾಗಿರಬಹುದು.

ಮುಂದೆ ಬಂದಲ್ಲಿ ಆ ಪ್ರಜೆ ಆ ರಾಜ್ಯದ ನಿಷ್ಠಾ ಪ್ರತಿಜ್ಞಾ ಪ್ರಮಾಣವನ್ನು ಸ್ವೀಕರಿಸಬೇಕಾಗುತ್ತದೆ.

೫. ವಿಶಿಷ್ಟ ಸನ್ನಿವೇಶ :- ಒಂದು ರಾಜ್ಯವು ಮತ್ತೊಂದು ರಾಜ್ಯದ ಜೊತೆಗೆ ವಿಲೀನಗೊಂಡಾಗ ಅಥವಾ ಒಂದು ರಾಜ್ಯದ ಭೂ -ವಿಸ್ತೀರ್ಣದಲ್ಲಿ ಕೆಲಭಾಗವನ್ನು ಮತ್ತೊಂದು ರಾಜ್ಯಕ್ಕೆ ಒಪ್ಪಂದದ ಮೂಲಕ ಒಪ್ಪಿಸಿದಾಗ, ಆ ರಾಜ್ಯದಲ್ಲಿ ಅಥವಾ ಭೂ-ವಿಸ್ತೀರ್ಣದಲ್ಲಿ ವಾಸಿಸುತ್ತಿದ್ದ ಪ್ರಜೆಗಳು ವಿಲೀನಗೊಂಡ ರಾಜ್ಯದ ನಾಗರಿಕತ್ವವನ್ನು ಹೊಂದುತ್ತಾರೆ. ಉದಾ :- ಟೆಕ್ಸಾಸ್, ಕ್ಯಾಲಿಫೋರ್ನಿಯಾ, ಹನಾಯಿ ರಾಜ್ಯಗಳು ಅಮೇರಿಕಾ ಸಂಯುಕ್ತ ಸಂಸ್ಥಾನ ಸೇರಿದ ನಂತರ ಈ ಮೇಲಿನ ರಾಜ್ಯಗಳ ನಾಗರಿಕರು ಅಮೇರಿಕಾದ ನಾಗರಿಕತ್ವವನ್ನು ಪಡೆದುಕೊಂಡರು. ಈ ರೀತಿ ಕ್ರಿ.ಶ. 1962 ರವರೆಗೆ ಗೋವಾ ಪೋರ್ಚುಗೀಸರ ವಶದಲ್ಲಿದ್ದು ಅನಂತರ ಈ ಪ್ರದೇಶ ಭಾರತಕ್ಕೆ ಸೇರ್ಪಡೆಯಾದ ನಂತರ ಅಲ್ಲಿನ ಪ್ರಜೆಗಳು ಭಾರತದ ನಾಗರಿಕತ್ವವನ್ನು ಪಡೆದುಕೊಂಡರು.

## ನಾಗರಿಕತ್ವವನ್ನು ಕಳೆದುಕೊಳ್ಳುವ ವಿಧಾನಗಳು

ನಾಗರಿಕತ್ವವನ್ನು ಪಡೆಯುವಂತೆ ನಾಗರಿಕತ್ವವನ್ನು ಕಳೆದುಕೊಳ್ಳುವ ಅವಕಾಶವಿದೆ. ಆದರೆ ನಾಗರಿಕತ್ವವನ್ನು ಪಡೆಯಲು ವಿಶ್ವದ ವಿವಿಧ ರಾಜ್ಯಗಳು ವಿವಿಧ ವಿಧಾನಗಳನ್ನು ಅನುಸರಿಸುವಂತೆಯೇ ನಾಗರಿಕತ್ವವನ್ನು ರದ್ದು ಪಡಿಸಲು ಸಹ ವಿವಿಧ ರಾಜ್ಯಗಳು ವಿವಿಧ ವಿಧಾನಗಳನ್ನು ಅನುಸರಿಸುತ್ತಿದ್ದು ವಿಶ್ವದಾದ್ಯಂತ ಏಕ ಪ್ರಕಾರದ ವಿಧಾನಗಳಿಲ್ಲ. ನಾಗರಿಕನೊಬ್ಬ ನಾಗರಿಕತ್ವವನ್ನು ಕಳೆದುಕೊಳ್ಳುವ ವಿಧಾನಗಳಿಗೆ ಸಂಬಂಧಿಸಿದಂತೆ ಪ್ರಮುಖವಾಗಿ ವಿಶ್ವದ ಎಲ್ಲ ರಾಜ್ಯಗಳು ಸಾಮಾನ್ಯವಾಗಿ ಅನ್ವಯಿಸುವ ಕೆಲವು ವಿಧಾನಗಳು ಈ ಕೆಳಗಿನಂತಿವೆ.

೧. ವಿದೇಶಿ ನಾಗರಿಕತ್ವವನ್ನು ಸ್ವೀಕರಿಸಿದಾಗ : ಒಬ್ಬ ವ್ಯಕ್ತಿ ವಿದೇಶಿ ರಾಜ್ಯವೊಂದರ ನಾಗರಿಕತ್ವವನ್ನು ಪಡೆಯಲು ಅಪೇಕ್ಷಿಸಿ ಹಾಗೂ ನಾಗರಿಕತ್ವವನ್ನು ಪಡೆದನಂತರ ಆತ ತನ್ನ ಹಿಂದಿನ ರಾಜ್ಯದ ನಾಗರಿಕತ್ವವನ್ನು ಕಳೆದುಕೊಳ್ಳುತ್ತಾನೆ. ಏಕೆಂದರೆ ಒಬ್ಬ ವ್ಯಕ್ತಿ ಏಕಕಾಲದಲ್ಲಿ ಎರಡು ರಾಜ್ಯಗಳ ನಾಗರಿಕತ್ವವನ್ನು ಹೊಂದಿರಲು ಸಾಧ್ಯವಿಲ್ಲ. ಈ ಸಂಬಂಧ ಕೆಲವು ರಾಜ್ಯಗಳು ತನ್ನ ನಾಗರಿಕರು ನಾಗರಿಕತ್ವವನ್ನು ತ್ಯಜಿಸಲು ಅವಕಾಶ ನೀಡುವದಿಲ್ಲ.

೨. ವಿದೇಶಿ ಸೇವೆಗೆ ಸೇರಿದಾಗ : ಒಬ್ಬ ವ್ಯಕ್ತಿ ವಿದೇಶಿ ರಾಜ್ಯವೊಂದರ ಸರಕಾರದ ಸೇವೆಗೆ ಸೇರಿದಾಗ ತನ್ನ ರಾಜ್ಯದ ನಾಗರಿಕತ್ವವನ್ನು ಕಳೆದುಕೊಳ್ಳುತ್ತಾನೆ.

೩. ವಿವಾಹ : ಸಾಮಾನ್ಯವಾಗಿ ಮಹಿಳೆಯೊಬ್ಬಳು, ವಿದೇಶಿ ಪುರುಷನೊಬ್ಬನನ್ನು ವಿವಾಹವಾದಾಗ ತನ್ನ ರಾಜ್ಯದ ನಾಗರಿಕತ್ವವನ್ನು ಕಳೆದುಕೊಳ್ಳುವ ಸಾಧ್ಯತೆ ಇದೆ. ಕೆಲವು

ರಾಜ್ಯಗಳು ವಿವಾಹಿತ ಮಹಿಳೆಯು ತನ್ನ ರಾಜ್ಯದ ನಾಗರಿಕತ್ವವನ್ನು ಉಳಿಸಿಕೊಳ್ಳಲು ಅವಕಾಶ ನೀಡುತ್ತವೆ.

೪. ದೀರ್ಘಕಾಲದ ಗೈರು ಹಾಜರಿ : ರಾಜ್ಯವೊಂದರ ನಾಗರಿಕನು ಸಕಾರಣವಿಲ್ಲದೇ ವಿದೇಶಿ ರಾಜ್ಯದಲ್ಲಿ ದೀರ್ಘಕಾಲ ವಾಸವಾಗಿದ್ದಲ್ಲಿ ಅಥವಾ ಖಾಯಂ ವಾಸವಾಗಿದ್ದಲ್ಲಿ ಅಂತಹ ನಾಗರಿಕನು ತನ್ನ ರಾಜ್ಯದ ನಾಗರಿಕತ್ವವನ್ನು ಕಳೆದುಕೊಳ್ಳುತ್ತಾನೆ.

೫. ಅಕ್ಷಮ್ಯ ಅಪರಾಧ : ಅಕ್ಷಮ್ಯ ಅಪರಾಧಗಳಂತಹ ದೇಶದ್ರೋಹ, ಬುಡ ಮೇಲು ಕೃತ್ಯ ಇವೇ ಮೊದಲಾದಂತಹ ಕೃತ್ಯಗಳನ್ನು ಎಸಗಿ ರಾಜ್ಯದ ನ್ಯಾಯಾಲಯದಿಂದ ಶಿಕ್ಷೆಗೆ ಒಳಪಟ್ಟ ನಾಗರಿಕನು ರಾಜ್ಯದ ನಾಗರಿಕತ್ವವನ್ನು ಸಾಮಾನ್ಯವಾಗಿ ಕಳೆದುಕೊಳ್ಳುತ್ತಾನೆ.

೬. ಸೇನೆಗೆ ಸೇರಿ ಕರ್ತವ್ಯ ಚ್ಯುತಿ ಎಸಗಿದಾಗ : ರಾಜ್ಯದ ನಾಗರಿಕನು ಸೇನೆಗೆ ಸೇರಿ ರಾಜ್ಯದ ಭದ್ರತೆಯ ಸಂದರ್ಭದಲ್ಲಿ ಕರ್ತವ್ಯ ಭ್ರಷ್ಟನಾಗಿ ತಲೆ ತಪ್ಪಿಸಿಕೊಂಡಾಗ ಆತ ತನ್ನ ರಾಜ್ಯದ ನಾಗರಿಕತ್ವವನ್ನು ಕಳೆದುಕೊಳ್ಳುವ ಸಾಧ್ಯತೆಗಳಿವೆ.

ಈ ಪ್ರಕಾರ ವ್ಯಕ್ತಿಯು ತನ್ನ ನಾಗರಿಕತ್ವವನ್ನು ಕಳೆದುಕೊಳ್ಳುತ್ತಾನೆ. ಆದರೆ ನಾಗರಿಕತ್ವವನ್ನು ಪಡೆಯುವ ಮತ್ತು ಕಳೆದು ಕೊಳ್ಳುವ ಬಗೆಗೆ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ನಿಯಮಗಳು ಇರುತ್ತವೆ ಎಂಬುದನ್ನು ನೆನಪಿನಲ್ಲಿಡಬೇಕು.

## ✸ ಆ. ನಾಗರಿಕತ್ವ - ವಿಧಗಳು - ನಾಗರಿಕನ ಕರ್ತವ್ಯಗಳು

ಮಾನವ ಸಮಾಜ ಜೀವಿ. ತನ್ಮೂಲಕ ಅನೇಕ ಹಕ್ಕುಗಳನ್ನು ಪಡೆದಿದ್ದಾನೆ. ಅವನ ಶ್ರೇಯೋಭಿವೃದ್ಧಿಗೆ ಈ ಹಕ್ಕುಗಳು ತುಂಬಾ ಸಹಾಯಕಾರಿಯಾಗಿವೆ. ಸಮಾಜದಿಂದ ಪ್ರತ್ಯೇಕವಾಗಿ ಹಕ್ಕುಗಳಿರುವದು ಸಾಧ್ಯವಿಲ್ಲ. ಹಕ್ಕುಗಳ ರೂಪದಲ್ಲಿ ನಾನಾವಿಧವಾದ ಸೌಲಭ್ಯಗಳನ್ನು ಸಮಾಜದಿಂದ ಪಡೆಯುವ ವ್ಯಕ್ತಿ ಅವುಗಳಿಗೆ ಪ್ರತಿಯಾಗಿ ಸಮಾಜಕ್ಕೆ ಸಹಾಯ ಮಾಡುವದು ಅಗತ್ಯ.ನಾಗರಿಕ ತಾನು ಕಡ್ಡಾಯವಾಗಿ ಸಮಾಜಕ್ಕೆ ಸಲ್ಲಿಸ ಬೇಕಾಗಿರುವ ಸಹಾಯಗಳನ್ನು ಕರ್ತವ್ಯಗಳೆನ್ನಬಹುದು. ಅಂದರೆ ಕರ್ತವ್ಯವೆನ್ನುವದು ನಾಗರಿಕ ತೀರಿಸಬೇಕಾಗಿರುವ ಒಂದು ಋಣ. ನಾಗರಿಕನು ನಾಗರಿಕ ಹಾಗೂ ರಾಜಕೀಯ ಹಕ್ಕುಗಳನ್ನು ಅನುಭವಿಸುತ್ತಾನೆ ಮತ್ತು ಸರಕಾರವು ನಾಗರಿಕನ ಈ ಹಕ್ಕುಗಳನ್ನು ರಕ್ಷಿಸುತ್ತದೆ. ಇದಕ್ಕೆ ಬದಲಾಗಿ ನಾಗರಿಕನು ಸರಕಾರಕ್ಕೆ ಕೆಲವು ಕರ್ತವ್ಯಗಳನ್ನು ಸಲ್ಲಿಸ ಬೇಕಾಗುತ್ತದೆ. ಈ ಕರ್ತವ್ಯಗಳನ್ನು ಪಾಲಿಸದಿದ್ದರೆ ನಾಗರಿಕನು ಹಕ್ಕುಗಳನ್ನು ಅನುಭವಿಸಲಾರನು. ಹಕ್ಕುಗಳನ್ನು ಅನುಭವಿಸುವವನು ಕೆಲವು ಕರ್ತವ್ಯಗಳನ್ನು ಸಲ್ಲಿಸಲೇಬೇಕು. ಹಕ್ಕುಗಳು ಮತ್ತು ಕರ್ತವ್ಯಗಳು ಕೂಡಿಯೇ ಹೋಗುತ್ತವೆ. ಅವುಗಳನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಹಕ್ಕುಗಳಲ್ಲಿ ಕರ್ತವ್ಯಗಳು ಅಡಗಿವೆ.

ಹಕ್ಕುಗಳೆಂದರೆ ಕರ್ತವ್ಯಗಳು ಹೌದು. ನಮ್ಮ ಹಕ್ಕುಗಳನ್ನು ಇತತರು ಗೌರವಿಸುವಂತೆ ಇತರರ ಹಕ್ಕುಗಳನ್ನು ನಾವು ಗೌರವಿಸಬೇಕು. ಹೀಗೆ ಮಾಡಬೇಕಾದದ್ದು ಎಲ್ಲರ ಕರ್ತವ್ಯ. ಈ ಹಕ್ಕುಗಳನ್ನು ಅನುಸರಿಸಿ ನಡೆಯದೇ ಇದ್ದಲ್ಲಿ ಹಕ್ಕುಗಳಿಗೆ ಬೆಲೆಯೇ ಇರುವದಿಲ್ಲ. ಸಮಾಜಜೀವಿಗಳಾದ ನಾವು ನಮ್ಮ ಕರ್ತವ್ಯಗಳನ್ನು ತಪ್ಪದೇಮಾಡಬೇಕು.

ಕರ್ತವ್ಯಗಳನ್ನು ಎರಡು ಪ್ರಕಾರಗಳಾಗಿ ವಿಂಗಡಿಸಬಹುದು.

೧. ನೈತಿಕ ಕರ್ತವ್ಯಗಳು : ಮಾನವ ನೈತಿಕ ದೃಷ್ಟಿಯಿಂದ ಮಾಡಬೇಕಾದ ಕೆಲಸಗಳಿಗೆ ನೈತಿಕ ಕರ್ತವ್ಯಗಳೆನ್ನುತ್ತಾರೆ. ನೈತಿಕ ಕರ್ತವ್ಯಗಳು ಕಾನೂನುಬದ್ಧ ಕಾರ್ಯಗಳಿಗೆ ಆಧಾರ ಸ್ತಂಭವಾಗಿದ್ದರೂ ಅವುಗಳಿಗೆ ಕಾನೂನಿನ ಬೆಂಬಲವಿಲ್ಲ. ಸಮಾಜದ ನೈತಿಕ ಅಭಿಪ್ರಾಯವೇ ಇವುಗಳಿಗೆ ಆಧಾರ . ನೈತಿಕ ಕರ್ತವ್ಯಗಳನ್ನು ಉಲ್ಲಂಘಿಸಿದವರನ್ನು ಶಿಕ್ಷಿಸಲು ಕಾನೂನುಬದ್ಧವಾದ ಯಾವ ನಿಯಮವು ಇಲ್ಲ. ಬಡವರಿಗೆ, ನಿರ್ಗತಿಕರಿಗೆ ಮತ್ತು ಕಾಯಿಲೆ ಬಿದ್ದವರಿಗೆ ಸಹಾಯ ಮಾಡುವದು ವ್ಯಕ್ತಿಯ ನೈತಿಕ ಕರ್ತವ್ಯವಾಗಿದೆ. ಆದರೆ ವ್ಯಕ್ತಿಯು ಇದನ್ನು ಮಾಡಲು ತಪ್ಪಿದರೆ ಸಮಾಜವಾಗಲಿ ಅಥವಾ ಸರಕಾರವಾಗಲಿ ಅವನನ್ನು ದಂಡಿಸಲಾರದು.

೨. ಕಾನೂನುಬದ್ಧ ಕರ್ತವ್ಯಗಳು : ಇವು ನೈತಿಕ ಕರ್ತವ್ಯಗಳಿಗೆ ವ್ಯತಿರಿಕ್ತವಾಗಿವೆ. ಕಾನೂನುಬದ್ಧ ಕರ್ತವ್ಯಗಳಿಗೆ ಕಾನೂನಿನ ಬೆಂಬಲವಿರುವದರಿಂದ ಪ್ರತಿಯೊಬ್ಬನು ಅವುಗಳನ್ನು ಕಡ್ಡಾಯವಾಗಿ ಪಾಲಿಸ ಬೇಕು. ಒಂದು ವೇಳೆ ತಪ್ಪಿದರೆ ಅವನನ್ನು ಸರಕಾರವು ಕಾನೂನಿನಲ್ಲಿ ನಮೂದಿಸಿದ ಪ್ರಕಾರ ಶಿಕ್ಷೆ ವಿಧಿಸುತ್ತದೆ. ಉದಾ: ತೆರಿಗೆಯನ್ನು ಕೊಡಲು ಬಾಧ್ಯಸ್ಥನಾದ ವ್ಯಕ್ತಿಯು ತೆರಿಗೆಯನ್ನು ಕೊಡದಿದ್ದರೆ ಅವನನ್ನು ಸರಕಾರವು ಶಿಕ್ಷಿಸುತ್ತದೆ.

ಕರ್ತವ್ಯಗಳನ್ನು ವಾಸ್ತವಿಕ (Positive)ಹಾಗೂ ನಿಷೇಧಾತ್ಮಕ (Negetive) ಕರ್ತವ್ಯಗಳು ಎಂದು ವಿಂಗಡಿಸಬಹುದು. ವಾಸ್ತವಿಕ ಕರ್ತವ್ಯಗಳೆಂದರೆ ವ್ಯಕ್ತಿಯು ಮಾಡಬೇಕಾದ ಕರ್ತವ್ಯಗಳು, ನಿಷೇಧಾತ್ಮಕ ಕರ್ತವ್ಯಗಳೆಂದರೆ ವ್ಯಕ್ತಿಯು ಮಾಡಬಾರದ ಕರ್ತವ್ಯಗಳು. ಉದಾ :- ಒಬ್ಬ ವ್ಯಕ್ತಿಯು ಸರಕಾರಕ್ಕೆ ತೆರಿಗೆಯನ್ನು ಕೊಟ್ಟರೆ ಅವನು ವಾಸ್ತವಿಕ ಕರ್ತವ್ಯ ಮಾಡುತ್ತಾನೆಂದರ್ಥ. ಅದರಂತೆ ಒಬ್ಬ ವ್ಯಕ್ತಿಯು ಇತರರ ಹಕ್ಕುಗಳ ವಿಷಯದಲ್ಲಿ ಅಡ್ಡಿಪಡಿಸುತ್ತಿದ್ದರೆ ಅವನು ನಿಷೇಧಾತ್ಮಕ ಕರ್ತವ್ಯ ಮಾಡುತ್ತಾನೆಂದರ್ಥ.

ಒಟ್ಟಾರೆ ನಾಗರಿಕನ ಕರ್ತವ್ಯಗಳು ಕೆಳಗಿನಂತಿವೆ.

೧. ರಾಜ್ಯನಿಷ್ಠೆ : ಪ್ರತಿಯೊಬ್ಬ ನಾಗರಿಕನು ತನ್ನ ರಾಜ್ಯದ ಬಗ್ಗೆ ನಿಷ್ಠೆಯುಳ್ಳವ-ನಾಗಿರಬೇಕು. ರಾಜ್ಯದ ಹಿತಾಸಕ್ತಿಗಳ ಬಗ್ಗೆ ಆತ ಆಸ್ಥೆವಹಿಸಬೇಕು. ರಾಜ್ಯಕ್ಕೆ ಯುದ್ಧ ಇತ್ಯಾದಿ ಗಂಡಾಂತರಗಳು ಸಂಭವಿಸಿದಾಗ ಅದರ ರಕ್ಷಣೆಯಲ್ಲಿ ತೊಡಗುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯ. ರಾಜ್ಯ ರಕ್ಷಣೆಗಾಗಿ ಸೈನ್ಯಕ್ಕೆ ಸೇರಿ ಸೇವೆ ಸಲ್ಲಿಸಲು,

ಅಗತ್ಯ ಬಿದ್ದಲ್ಲಿ ರಾಜ್ಯ ರಕ್ಷಣೆಗೆ ತನ್ನ ಪ್ರಾಣವನ್ನು ತ್ಯಾಗ ಮಾಡಲು ಸಿದ್ಧನಿರಬೇಕು. ರಾಷ್ಟ್ರಘಾತಕ ಚಟುವಟಿಕೆಗಳಲ್ಲಿ ತೊಡಗಿದ ಅಪರಾಧಿಗಳನ್ನು ದೇಶದ್ರೋಹಿಗಳೆಂದು ವಿಚಾರಣೆಗೆ ಒಳಪಡಿಸಿ ಅವರಿಗೆ ಉಗ್ರ ಶಿಕ್ಷೆಯನ್ನು ವಿಧಿಸಲಾಗುವದು. ಕೆಲವು ಪ್ರಸಂಗಗಳಲ್ಲಿ ಮರಣದಂಡನೆಯು ವಿಧಿಸಲ್ಪಡುತ್ತದೆ.

**೨. ಕಾನೂನುಗಳಿಗೆ ವಿಧೇಯತೆ :** ರಾಜ್ಯಗಳಿರುವಲ್ಲಿ ಕಾನೂನುಗಳಿರುವದು ಸ್ವಾಭಾವಿಕ. ಸರಕಾರ ಪಾಸು ಮಾಡಿದ ಕಾಯಿದೆಗಳಿಗೆ ವಿಧೇಯತೆಯನ್ನು ತೋರಿಸುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ. ಜನರ ಕಲ್ಯಾಣಕ್ಕಾಗಿ ಮತ್ತು ರಾಜ್ಯದಲ್ಲಿ ಶಾಂತಿ- ಸುವ್ಯವಸ್ಥೆ ಸ್ಥಾಪಿಸುವದಕ್ಕಾಗಿ ಸರಕಾರವು ಕಾಯಿದೆಗಳನ್ನು ಪಾಸು ಮಾಡುತ್ತದೆ. ಆದ್ದರಿಂದ ನಾಗರಿಕನು ಸರಕಾರದ ಎಲ್ಲ ಕಾಯಿದೆಗಳನ್ನು ಪಾಲಿಸದಿದ್ದರೆ ದೇಶದಲ್ಲಿ ಶಾಂತಿ- ಸುವ್ಯವಸ್ಥೆ ನೆಲೆಸಲಾರದು.

ಪ್ರಜಾಪ್ರಭುತ್ವದ ರಾಜ್ಯದಲ್ಲಿಯಂತೂ ಕಾಯಿದೆಗಳನ್ನು ಮಾಡುವವರೂ ಪ್ರಜೆಗಳೆ, ಮತ್ತು ಅವುಗಳಿಗೆ ವಿಧೇಯತೆಯನ್ನು ತೋರಿಸುವವರೂ ಪ್ರಜೆಗಳೇ. ಆದ್ದರಿಂದ ತಾವು ಮಾಡಿದ ಕಾಯ್ದೆಗಳಿಗೆ ತಾವು ವಿಧೇಯತೆಯನ್ನು ತೋರಿಸುವದು ಪ್ರಜೆಗಳ ಮುಖ್ಯ ಧರ್ಮವಾಗಿದೆಯೆಂದು ಹೇಳಬಹುದು. ಕಾನೂನಿಗೆ ವಿಧೇಯ-ರಾಗಿರುವ ನಾಗರಿಕರನ್ನು ಮಾತ್ರ ಒಳ್ಳೆಯ ನಾಗರಿಕರೆಂದು ಕರೆಯಲಾಗುತ್ತದೆ.

ಆದರೆ ಕೆಲವು ಪ್ರಸಂಗಗಳಲ್ಲಿ ನಾಗರಿಕರು ಕೆಲವು ವಿಶಿಷ್ಟ ಕಾನೂನುಗಳನ್ನು ವಿರೋಧಿಸಬಹುದು. ಉದಾ : ಸರಕಾರದ ಕಾಯಿದೆಗಳು ಜನರ ನೈತಿಕಮಟ್ಟವನ್ನು ಅಧೋಗತಿಗೆ ಇಳಿಸುವಂತಿದ್ದರೆ ಅಂತಹ ಕಾನೂನುಗಳನ್ನು ಪ್ರತಿಭಟಿಸಬಹುದು. ಕಾನೂನುಗಳಿಗೆ ವಿಧೇಯತೆಯನ್ನು ತೋರಿಸದೆ ಇರುವದು ಕೇವಲ ನಾಗರಿಕನ ನೈತಿಕ ಹಕ್ಕು. ಇಂತಹ ಪ್ರಸಂಗಗಳಲ್ಲಿ ಸತ್ಯಾಗ್ರಹದ ಮೂಲಕ ನಾಗರಿಕನು ಇಂತಹ ಕಾನೂನುಗಳಿಗೆ ಅಸಮ್ಮತಿಯನ್ನು ವ್ಯಕ್ತಪಡಿಸಬೇಕೆಂದು ಮಹಾತ್ಮಾ ಗಾಂಧಿಜಿಯವರ ಅಭಿಪ್ರಾಯವಾಗಿತ್ತು. ಆದರೆ ಕಾನೂನುಗಳನ್ನು ಪ್ರತಿಸಾರಿ ವಿರೋಧಿಸಿ ನಿತ್ಯದ ಆಡಳಿತಕ್ಕೆ ಭಂಗತರಬಾರದು. ಕೆಲವು ಮುಖ್ಯ ವಿಷಯಗಳ ಮೇಲೆ ಮಾತ್ರ ನಾಗರಿಕರು ಪ್ರತಿಭಟನೆಯನ್ನು ತೋರಿಸಬೇಕು.

**೩. ತೆರಿಗೆಗಳನ್ನು ಕೊಡುವದು :** ಈಗಿನ ಪ್ರಪಂಚದಲ್ಲಿ ಕಲ್ಯಾಣ ರಾಜ್ಯವು ತನ್ನ ನಾಗರಿಕರಿಗೆ ಶೈಕ್ಷಣಿಕ, ವೈದ್ಯಕೀಯ ಹಾಗೂ ಸಾರಿಗೆ ಸಂಪರ್ಕ ಹೀಗೆ ಅನೇಕ ಸೌಲಭ್ಯಗಳನ್ನು ಮತ್ತು ಸೇವೆಗಳನ್ನು ಒದಗಿಸಬೇಕಾಗುತ್ತದೆ. ಈ ಕಾರ್ಯಗಳನ್ನು ನಿರ್ವಹಿಸಲು ಸರಕಾರಕ್ಕೆ ಹಣವು ಅವಶ್ಯವಿರುತ್ತದೆ. ರಾಜ್ಯಕ್ಕೆ ಬೇಕಾಗುವ ಹಣವನ್ನು ಸರಕಾರವು ನಾಗರಿಕರ ಮೇಲೆ ತೆರಿಗೆಗಳನ್ನು ಹಾಕುವದರ ಮೂಲಕ ಸಂಗ್ರಹಿಸುತ್ತದೆ.

ನಾಗರಿಕರು ತೆರಿಗೆಗಳನ್ನು ಕೊಡದಿದ್ದರೆ ಸರಕಾರವು ಹಣವಿಲ್ಲದೇ ತನ್ನ ಚಟುವಟಿಕೆ-ಗಳನ್ನು ನಿಲ್ಲಿಸಬೇಕಾಗುತ್ತದೆ. ತಮ್ಮ ಸುಖ ಶಾಂತಿಗಾಗಿ ಸ್ಥಾಪಿಸಿದ ಸರಕಾರವನ್ನು ಪೋಷಿಸುವ ಭಾರ ನಾಗರಿಕರ ಮೇಲಿದೆ. ಆದ್ದರಿಂದ ಸರಕಾರವು ಆಕರಣೆ ಮಾಡಿದ ತೆರಿಗೆಗಳನ್ನು ಪ್ರಾಮಾಣಿಕವಾಗಿ ನಿಯಮಿತ ವೇಳೆಗೆ ಕೊಡುವದು ನಾಗರಿಕರ ಪವಿತ್ರ ಕರ್ತವ್ಯವಾಗಿದೆ. ತೆರಿಗೆಯನ್ನು ತಪ್ಪಿಸುವದು ಅಥವಾ ತೆರಿಗೆಗಳನ್ನು ಕೊಡುವದರಲ್ಲಿ ವಿಳಂಬ ಮಾಡುವದು ಉತ್ತಮ ನಾಗರಿಕತ್ವದ ಲಕ್ಷಣವೆನಿಸಲಾರದು. ಹೀಗೆ ನಡೆದುಕೊಂಡರೆ ರಾಜ್ಯಕ್ಕೆ ದ್ರೋಹ ಬಗೆದಂತೆ. ಆದ್ದರಿಂದ ಸಕಾಲಕ್ಕೆ ತೆರಿಗೆಗಳನ್ನು ನೀಡುವದು ಕರ್ತವ್ಯವೆಂಬುದನ್ನು ಪ್ರತಿಯೊಬ್ಬ ನಾಗರಿಕನು ತಿಳಿದುಕೊಳ್ಳುವದು ಅತ್ಯವಶ್ಯಕ ಸಂಗತಿಯಾಗಿದೆ.

**೪. ಮತದಾನ ಮಾಡುವದು :** ಪ್ರತಿಯೊಬ್ಬ ನಾಗರಿಕನು ತನ್ನ ವಿವೇಚನೆಗೆ ಸರಿ ಕಾಣುವಂತೆ ತನ್ನ ಮತವನ್ನು ಚಲಾಯಿಸಬೇಕು. ಪ್ರಜಾಪ್ರಭುತ್ವ ರಾಜ್ಯದಲ್ಲಿ ನಾಗರಿಕರು ಮತದಾನದ ಮೂಲಕವೇ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆ. ಮತದಾನ ಮಾಡುವದು ಪವಿತ್ರ ಕಾರ್ಯವೆಂದು ತಿಳಿದುಕೊಳ್ಳದ ಹೊರತು ನಾಗರಿಕರು ಯೋಗ್ಯ ಸರಕಾರವನ್ನು ಹೊಂದಲಾರರು. ಆದ್ದರಿಂದ ಚುನಾವಣೆಯಲ್ಲಿ ಮತದಾನ ಮಾಡುವದು ಪ್ರತಿಯೊಬ್ಬನ ನೈತಿಕ ಕರ್ತವ್ಯವಾಗಿದೆ. ಆದರೆ ಕೆಲವೊಂದು ರಾಜ್ಯಗಳಲ್ಲಿ ಅಂದರೆ ಆಸ್ಟ್ರೇಲಿಯಾದಲ್ಲಿ ಮತದಾನ ಮಾಡುವದು ಕಡ್ಡಾಯವಾಗಿರುತ್ತದೆ. ಒಂದು ವೇಳೆ ಚುನಾವಣೆಯಲ್ಲಿ ಮತ ಚಲಾಯಿಸದಿದ್ದರೆ ಅಂಥವರಿಗೆ ದಂಡವಿಧಿಸಲಾಗುವದು.

**೫. ಇತರ ಕರ್ತವ್ಯಗಳು :** ನಾಗರಿಕನು ಇನ್ನೂ ಅನೇಕ ಕರ್ತವ್ಯಗಳನ್ನು ನಿರ್ವಹಿಸಬೇಕು. ನಾಗರಿಕರು ಮಾಡುವ ಕರ್ತವ್ಯಗಳಿಗೆ ಇತಿ - ಮಿತಿಯಿಲ್ಲ. ಸರಕಾರವು ನೀರಿಕ್ಷಿಸುವ ಎಲ್ಲ ಕರ್ತವ್ಯಗಳನ್ನು ನಾಗರಿಕರು ಮಾಡಲಿಕ್ಕೆ ಬೇಕು. ಉದಾ : ಸರಕಾರವು ನಾಗರಿಕರಿಗೆ ನ್ಯಾಯದರ್ಶಿಗಳಾಗಲು (Jury) ಕೇಳಿಕೊಂಡರೆ ಆ ಕೆಲಸವನ್ನು ಮಾಡಬೇಕು. ಇಲ್ಲವಾದರೆ ಸರಕಾರಕ್ಕೆ ದಂಡ ಕೊಡಬೇಕಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಸರಕಾರವು ನಾಗರಿಕರಿಗೆ ನ್ಯಾಯಾಲಯಗಳಲ್ಲಿ ಸಾಕ್ಷಿ ಹೇಳಲು ಕೇಳಿಕೊಳ್ಳುತ್ತದೆ. ನಾಗರಿಕರು ಆ ಕೆಲಸವನ್ನು ಮಾಡಬೇಕಾಗುತ್ತದೆ. ದಂಗೆ ಹತ್ತಿಕ್ಕಲು, ಅಪರಾಧಿಗಳನ್ನು ಪತ್ತೆ ಹಚ್ಚಲು ಕಳ್ಳರನ್ನು ಹಿಡಿಯಲು ಇವೇ ಮೊದಲಾದ ಕಾರ್ಯಗಳಲ್ಲಿ ನಾಗರಿಕರು ಸರಕಾರಕ್ಕೆ ನೆರವಾಗಬೇಕಾಗುತ್ತದೆ. ಊರಲ್ಲಿ ಸಾಂಕ್ರಾಮಿಕ ರೋಗ ಹಬ್ಬಿದಾಗ ಚುಚ್ಚುಮದ್ದನ್ನು ಕೊಡಿಸುವದು ಇವೇ ಮೊದಲಾದವುಗಳು ಸಹ ನಾಗರಿಕರ ಕರ್ತವ್ಯ-ಗಳಾಗಿವೆ. ಒಟ್ಟಿನಲ್ಲಿ ಸಮಾಜದ ಹಿತಕ್ಕಾಗಿ, ಸರಕಾರದ ಸಲುವಾಗಿ ಯಾವ ಕೆಲಸವನ್ನು ಮಾಡಬೇಕಾಗುತ್ತದೆಯೋ ಅವೆಲ್ಲವುಗಳನ್ನು ನಾಗರಿಕರು ಮಾಡಲೇಬೇಕಾಗುತ್ತದೆ.

## ಹಕ್ಕುಗಳು ಮತ್ತು ಕರ್ತವ್ಯಗಳ ನಡುವಿನ ಸಂಬಂಧ

ನಾಗರಿಕರ ಹಕ್ಕುಗಳು ಮತ್ತು ಕರ್ತವ್ಯಗಳು ಪರಸ್ಪರ ಸಂಬಂಧವುಳ್ಳವುಗಳಾಗಿವೆ. ನನಗೆ ಜೀವಿಸುವ ಹಕ್ಕು ಇದೆಯೆಂದರೆ ನಾನು ಇತರರಿಗೆಲ್ಲರಿಗೂ ಜೀವಿಸಲು ಅವಕಾಶ ಕೊಡುವದು ನನ್ನ ಕರ್ತವ್ಯವಾಗಿರುತ್ತದೆ. ಹೀಗೆ ಒಬ್ಬನ ಹಕ್ಕು ಇನ್ನೊಬ್ಬನ ದೃಷ್ಟಿಯಲ್ಲಿ ಕರ್ತವ್ಯವಾಗಿರುತ್ತದೆ. ಆದ್ದರಿಂದ ಡಾ.॥ ಬೆನಿ ಪ್ರಸಾದರ ಪ್ರಕಾರ ಹಕ್ಕು ಮತ್ತು ಕರ್ತವ್ಯಗಳೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಬ್ಬನು ತನ್ನ ದೃಷ್ಟಿಕೋನದಿಂದ ನೋಡಿದರೆ ಅವು ಹಕ್ಕುಗಳಾಗುತ್ತವೆ. ಆದರೆ ಅವನು ಬೇರೆಯವರ ದೃಷ್ಟಿಕೋನದಿಂದ ನೋಡಿದರೆ ಅವು ಕರ್ತವ್ಯಗಳಾಗಿರುತ್ತವೆ. ಆದ್ದರಿಂದ ಕರ್ತವ್ಯಗಳಿಲ್ಲದ ಹಕ್ಕುಗಳು ನೆರಳಿಲ್ಲದ ಮಾನವನಿದ್ದಂತೆ. ಇದನ್ನು ದಂತ ಕಥೆಗಳಲ್ಲಿ ಅಷ್ಟೇ ಕಾಣುತ್ತೇವೆ. ಕರ್ತವ್ಯಗಳಿಲ್ಲದ ಹಕ್ಕುಗಳು ಮದುಮಗನಿಲ್ಲದ ಮದುವೆಯಂತೆ. ಕರ್ತವ್ಯಗಳನ್ನು ಗಮನಿಸದೇ ಕೇವಲ ಹಕ್ಕುಗಳಿಗಾಗಿ ಹೋರಾಡಿದರೆ ಅದಕ್ಕೆ ಅರ್ಥವೇ ಇರುವದಿಲ್ಲ. ಹಕ್ಕುಗಳಿಗೆ ಮಾತ್ರ ಹೆಚ್ಚು ಮಹತ್ವ ಕೊಡುವ ವಿನಾಶಕಾರಿ ಪ್ರವೃತ್ತಿಯನ್ನು ತೊಡೆದು ಹಾಕದಿದ್ದಲ್ಲಿ ನಾಗರಿಕತ್ವವು ಸಾರ್ಥಕವಾಗುವದಿಲ್ಲವೆಂದು ಲಾರ್ಡ ಬ್ರೈಸ್ ಹೇಳಿರುವದು ಗಮನಾರ್ಹ. ನಾಗರಿಕನಿಗಿರುವ ಕರ್ತವ್ಯಪ್ರಜ್ಞೆಯೇ ಸಾಮಾಜಿಕ ಜೀವನದ ಬುನಾದಿ. ಹಕ್ಕುಗಳು ಸುರಕ್ಷಿತವಾಗಿರಬೇಕಾದರೆ ಈ ಬುನಾದಿ ಭದ್ರವಾಗಿರಬೇಕು.

ಪ್ರಜಾಪ್ರಭುತ್ವ ಸರಕಾರ ಅಸ್ತಿತ್ವದಲ್ಲಿ ಬರುವದಕ್ಕಿಂತ ಮೊದಲು ಸರಕಾರದ ಪ್ರಗತಿ ಮತ್ತು ಕಲ್ಯಾಣಕ್ಕಾಗಿ ಮಾನವ ಹಕ್ಕುಗಳನ್ನು ದಯಪಾಲಿಸಬೇಕೆಂಬ ಕೂಗು ಇತ್ತು. ಇಂದಿಗೂ ಸಹ ನಿರಂಕುಶ ಪ್ರಭುತ್ವವಿರುವ ರಾಜ್ಯಗಳಲ್ಲಿ ಮಾನವ ಹಕ್ಕುಗಳಿಗಾಗಿ ಬೇಡಿಕೆ ಇದ್ದೇ ಇದೆ. ಆದರೆ ಪ್ರಜಾಪ್ರಭುತ್ವ ವಿರುವ ರಾಜ್ಯಗಳಲ್ಲಿ ನಾಗರಿಕನು ಕೇವಲ ಮಾನವನ ಹಕ್ಕುಗಳಷ್ಟೇ ಅಲ್ಲದೇ ಅವನ ಕರ್ತವ್ಯಗಳಿಗೂ ಅಷ್ಟೇ ಮಹತ್ವ ನೀಡಲಾಗುತ್ತದೆ. ಇಂಥ ರಾಜ್ಯಗಳಲ್ಲಿ ನಾಗರಿಕನು ತನ್ನ ಕರ್ತವ್ಯಗಳನ್ನು ಕೇವಲ ತನ್ನ ದೇಶಕ್ಕಷ್ಟೇ ಅಲ್ಲದೇ ತನ್ನ ಕುಟುಂಬಕ್ಕೂ, ನೆರೆಹೊರೆಯವರಿಗೂ, ಜೊತೆ ನಾಗರಿಕರಿಗೂ ಮತ್ತು ಒಟ್ಟಾರೆ ಸಮಾಜಕ್ಕೂ ಸಲ್ಲಿಸ ಬೇಕಾಗುತ್ತದೆ.ನಾಗರಿಕರು ಸದಸದ್ವಿವೇಕದಿಂದ ತಮ್ಮ ಕರ್ತವ್ಯಗಳನ್ನು ಎಷ್ಟರ ಮಟ್ಟಿಗೆ ನೆರವೇರಿಸುತ್ತಾರೆಂಬುದರ ಮೇಲೆಯೇ ಪ್ರಜಾಪ್ರಭುತ್ವದ ಯಶಸ್ಸು ಅವಲಂಬಿಸಿರುತ್ತದೆ.

### * ರಾಜ್ಯ ಮತ್ತು ರಾಷ್ಟ್ರ

ರಾಜ್ಯ ಮತ್ತು ರಾಷ್ಟ್ರ ಎಂಬ ಪದಗಳನ್ನು ಸಾಮಾನ್ಯವಾಗಿ ಒಂದೇ ಅರ್ಥದಲ್ಲಿ ಉಪಯೋಗಿಸುವದುಂಟು. ಆದರೆ ಇದು ತಪ್ಪು. ರಾಜ್ಯ ಮತ್ತು ರಾಷ್ಟ್ರ ಇವೆರಡೂ ಬೇರೆ ಬೇರೆ ಅರ್ಥವುಳ್ಳ ಪದಗಳಾಗಿವೆ. ರಾಜ್ಯವು ರಾಜಕೀಯ ದೃಷ್ಟಿಯಿಂದ ಸುಸಂಘಟಿತವಾದ

ಸಮಾಜವಾಗಿದೆ. ಅದಕ್ಕೆ ನಿರ್ದಿಷ್ಟ ಪ್ರದೇಶ, ಜನಸಮೂಹ, ಸರಕಾರ ಮತ್ತು ಸಾರ್ವಭೌಮ ಅಧಿಕಾರಗಳಿವೆ. ರಾಷ್ಟ್ರ ಎಂಬ ಪದವು ಲ್ಯಾಟಿನ್ ಭಾಷೆಯ ನೇಟಸ್ ಎಂಬ ಪದದಿಂದ ಬಂದಿರುತ್ತದೆ. ನೇಟಸ್ ಎಂದರೆ ಹುಟ್ಟು ಎಂದರ್ಥ. ತನ್ಮೂಲಕ ಬುರ್ಗೆಸ್, ಲೀಕಾಕ ಎಂಬ ಲೇಖಕರು ರಾಷ್ಟ್ರವನ್ನು ಜನಾಂಗೀಯ ದೃಷ್ಟಿಯಿಂದ ವಿವರಿಸಿದ್ದಾರೆ. ಈಗಿನ ಕಾಲದ ಜನಾಂಗದಲ್ಲಿ ಪರಿಶುದ್ಧವಾದ ರಕ್ತಸಂಬಂಧವನ್ನು ಕಾಪಾಡಿಕೊಳ್ಳುವದು. ಅಸಾಧ್ಯವಾಗಿದೆ. ಕಾರಣ ಸಿಡ್ಜವಿಕ್ ಎಂಬ ಲೇಖಕರ ಪ್ರಕಾರ ರಾಷ್ಟ್ರೀಯತೆ ಮಿಶ್ರ ಜನಾಂಗದಿಂದ ಕೂಡಿರುತ್ತದೆ.

ರಾಷ್ಟ್ರ = ರಾಜ್ಯ + ರಾಷ್ಟ್ರೀಯತೆ.

ಆದ್ದರಿಂದ ರಾಜ್ಯ ರಾಷ್ಟ್ರವಾಗಿರಬಹುದು ಅಥವಾ ಆಗಿರಲಿಕಿಲ್ಲ ಆದರೆ ರಾಜ್ಯ ಏಕತೆಯ ಭಾವನೆ ಅಂದರೆ ರಾಷ್ಟ್ರೀಯತೆ ಯನ್ನು ಪಡೆಯುವುದರಿಂದ ರಾಷ್ಟ್ರವಾಗುತ್ತದೆ. ಇದು ರಾಷ್ಟ್ರದ ಬಗ್ಗೆ ಪೂರ್ಣಸರಿಯಾದ ಅರ್ಥವಲ್ಲ. ಯಾಕೆಂದರೆ ಈಗಿನ ಕಾಲದಲ್ಲಿ ರಾಷ್ಟ್ರ ರಾಜಕೀಯ ಅರ್ಥವನ್ನು ಹೊಂದಿದ್ದು ಸ್ವತಂತ್ರ ಸರಕಾರವನ್ನು ಹೊಂದಿದ ಅಥವಾ ಹೊಂದಬೇಕೆಂಬ ಇಚ್ಛೆಯುಳ್ಳ ಏಕತಾ ಭಾವನೆ ಹೊಂದಿದ ಜನರೆಂದು ಹೇಳಬಹುದು. ಬ್ರೈಸ್ ಎಂಬ ಲೇಖಕರ ಪ್ರಕಾರ ಸ್ವತಂತ್ರ ಅಥವಾ ಸ್ವಾತಂತ್ರ್ಯವನ್ನು ಪಡೆಯಬೇಕೆಂಬ ಇಚ್ಛೆಯುಳ್ಳ ರಾಜಕೀಯ ಸಂಘಟನೆಯನ್ನು ಹೊಂದಿದ ರಾಷ್ಟ್ರೀಯತೆಯನ್ನು ಹೊಂದಿದ ರಾಷ್ಟ್ರ ಎಂದು ಕರೆಯಲಾಗುವದು.

ಆದ್ದರಿಂದ ಆಧುನಿಕ ರಾಜ್ಯ ಶಾಸ್ತ್ರಜ್ಞರ ಅಭಿಪ್ರಾಯದ ಪ್ರಕಾರ ರಾಷ್ಟ್ರದ ಮುಖ್ಯ ಅವಶ್ಯಕತೆ ಏನೆಂದರೆ ಜನರಲ್ಲಿ ತಾವು ಒಂದೇ ಎಂಬ ಮನೋಭಾವನೆ ಬಂದಿರಬೇಕು. ಭಾಷೆ ಮತ್ತು ಧರ್ಮ ಇವೆರಡೂ ಒಂದೇ ಕಡೆಗೆ ನೆಲೆಸುವಂತೆ ಪ್ರಚೋದಿಸಿದರೂ ಅವು ರಾಷ್ಟ್ರೀಯ ಭಾವನೆಗೆ ನೇರವಾಗಿ ಸಂಬಂಧ ಪಟ್ಟಿವೆಯೆಂದು ಹೇಳಲಾಗದು. ಉದಾ :- ಸ್ವಿಝರ್ಲ್ಯಾಂಡಿನಲ್ಲಿಯ ಜನರು ನಾಲ್ಕು ವಿಭಿನ್ನ ಭಾಷೆಗಳನ್ನು ಆಡುವರು ಮತ್ತು ಎರಡು ಬೇರೆ ಬೇರೆ ಧರ್ಮಗಳನ್ನು ಆಚರಿಸುವವರು ಆಗಿದ್ದಾರೆ. ಆದರೂ ಅವರು ಒಂದು ರಾಷ್ಟ್ರದವರೆನಿಸಿಕೊಂಡಿದ್ದಾರೆ. ಅದೇ ಪ್ರಕಾರವಾಗಿ ಭಾರತೀಯರು ಅನೇಕ ಭಾಷೆಗಳನ್ನು ಆಡುತ್ತಾರೆ ಮತ್ತು ವಿವಿಧ ಧರ್ಮಗಳನ್ನು ಆಚರಿಸುತ್ತಾರೆ. ಆದರೂ ಅವರು ಒಂದು ರಾಷ್ಟ್ರದವರೆಂದು ಪರಿಗಣಿಸಲ್ಪಡುತ್ತಾರೆ.

ಜನರನ್ನು ಒಂದು ರಾಷ್ಟ್ರವೆಂದು ಪರಿಗಣಿಸುವ ಸಾಧನಗಳು ಮಾನಸಿಕವಾಗಿವೆ ಹಾಗೂ ಭಾವನಾತ್ಮಕವಾಗಿವೆ. ಮಾತೃ ಭೂಮಿಗಾಗಿ ತಾವೂ ಜೀವಿಸಲು, ದುಡಿಯಲು ಮತ್ತು ಕಷ್ಟಪಡಲು ಸಿದ್ಧರಿದ್ದೇವೆಂಬ ಭಾವನೆಗಳೇ ಜನರನ್ನು ಒಂದೂಗೂಡಿಸಿ ರಾಷ್ಟ್ರವನ್ನಾಗಿ ಮಾಡುತ್ತವೆ. ಇಂತಹ ಭಾವನೆಗಳು ಜನರಲ್ಲಿ ಮೂಡಿದರೆ ಅವರಲ್ಲಿ ದೇಶಭಕ್ತಿ ಹುಟ್ಟುತ್ತದೆ. ಆದ್ದರಿಂದ ರಾಷ್ಟ್ರವೆಂಬ ಪದವು ಜನರ

ಮನಸ್ಸನ್ನು ಅಥವಾ ತಾವು ಒಂದೇ ಎಂಬ ಮನೋಭಾವನೆಯನ್ನು ಸೂಚಿಸುತ್ತದೆ.

ಈ ಮೇಲಿನ ವಿವರಣೆಯಿಂದ ರಾಜ್ಯ ಮತ್ತು ರಾಷ್ಟ್ರ ಇವೆರಡೂ ಒಂದೇ ಅರ್ಥ ಕೊಡುವ ಪದಗಳೆಲ್ಲವೆಂಬುದು ಗೊತ್ತಾಗುತ್ತದೆ.

ಸಾರ್ವಭೌಮ ಅಧಿಕಾರವು ರಾಜ್ಯದ ಒಂದು ಮುಖ್ಯ ಅಂಶವಾಗಿದೆ. ಆದರೆ ಇಂತಹ ಸಾರ್ವಭೌಮ ಅಧಿಕಾರ ಇಲ್ಲದೆಯೂ ಜನರು ರಾಷ್ಟ್ರವನ್ನು ನಿರ್ಮಿಸಿಕೊಳ್ಳ-ಬಹುದು. ಆದ್ದರಿಂದ ಸಾರ್ವಭೌಮ ಅಧಿಕಾರವನ್ನು ಹೊಂದಿದ ನಂತರವೇ ರಾಷ್ಟ್ರವು ರಾಜ್ಯವಾಗುವದು.

೧. ಪ್ರತಿಯೊಂದು ರಾಜ್ಯವು ರಾಷ್ಟ್ರವಾಗಲಿಕ್ಕೇ ಬೇಕು. ಆದರೆ ಪ್ರತಿಯೊಂದು ರಾಷ್ಟ್ರವು ರಾಜ್ಯವಾಗಿರಬೇಕಾಗಿಲ್ಲ. ಉದಾ: ಭಾರತವು೧೫ಅಗಸ್ಟ್ ೧೯೪೭ಕ್ಕಿಂತ ಮೊದಲು ಅಂದರೆ ನಮಗೆ ರಾಜಕೀಯ ಸ್ವಾತಂತ್ರ್ಯ ಸಿಗುವದಕ್ಕಿಂತ ಮೊದಲು ಭಾರತವು ಒಂದು ರಾಷ್ಟ್ರವಾಗಿತ್ತು. ಆದರೆ ಅದು ಸ್ವತಂತ್ರವಾದ ರಾಜ್ಯವಾಗಿರಲಿಲ್ಲ. ಭಾರತವು ಒಂದು ರಾಜ್ಯವಾದದ್ದು ರಾಜಕೀಯ ಸ್ವಾತಂತ್ರ್ಯ ಸಿಕ್ಕ ನಂತರವೇ. ರಾಷ್ಟ್ರವು ಯಾವಾಗಲೂ ಸ್ವತಂತ್ರವಾದ ಒಂದು ರಾಜ್ಯವಾಗಬೇಕೆಂದು ಬಯಸುತ್ತದೆ. ಆದ್ದರಿಂದ ರಾಜ್ಯ ಮತ್ತು ರಾಷ್ಟ್ರಗಳ ಸಂಬಂಧ ಎಷ್ಟೇ ನಿಕಟವಾಗಿದ್ದರೂ ಅವೆರಡೂ ಒಂದೇ ಆಗಲಾರವು.

೨. ರಾಷ್ಟ್ರಕ್ಕೆ ಏಕತೆಯ ಭಾವನೆ ಅತ್ಯವಶ್ಯಕ, ಆದರೆ ರಾಜ್ಯಕ್ಕಲ್ಲ. ಉದಾ: ಮೊದಲನೇ ಜಾಗತಿಕ ಯುದ್ಧಕ್ಕಿಂತ ಮುಂಚಿನ ಆಷ್ಟ್ರಿಯಾ -ಹಂಗೇರಿ ಇವು ರಾಜ್ಯವಾಗಿದ್ದವು. ಆದರೆ ರಾಷ್ಟ್ರವಾಗಿದ್ದಿಲ್ಲ, ಏಕೆಂದರೆ ಆಷ್ಟ್ರಿಯಾ ಮತ್ತು ಹಂಗೇರಿ ಎರಡು ದೇಶಗಳನ್ನು ಕೂಡಿಸಿ ಒಂದು ರಾಜ್ಯವನ್ನಾಗಿ ರಚಿಸಲಾಗಿತ್ತು. ಆ ಜನರಲ್ಲಿ ತಾವೆಲ್ಲ ಒಂದೇ ಎಂಬ ಭಾವನೆ ಮೂಡಿ ಬಂದಿರಲಿಲ್ಲ ಆದ್ದರಿಂದ ಆಷ್ಟ್ರೀಯಾ ಹಾಗೂ ಹಂಗೇರಿ ದೇಶಗಳು ರಾಷ್ಟ್ರಗಳಾಗಿದ್ದಿಲ್ಲ.

೩. ರಾಷ್ಟ್ರವು ಒಂದು ರಾಜ್ಯಕ್ಕೆ ಸೀಮಿತವಾಗಿಲ್ಲ. ಒಂದು ರಾಜ್ಯದೊಳಗೆ ವಿವಿಧ ರಾಷ್ಟ್ರಗಳು ಉಗಮಿಸಬಹುದು. ಉದಾ :- ಸೋವಿಯತ್ ಯುನಿಯನ್‌ದಲ್ಲಿದಲ್ಲಿ ೨೦ ಕ್ಕೂ ಮಿಕ್ಕ ರಾಷ್ಟ್ರಗಳನ್ನು ಕಾಣಬಹುದಾಗಿತ್ತು. ಆದರೆ ರಾಜ್ಯದೊಳಗೆ ಮತ್ತೊಂದು ರಾಜ್ಯವನ್ನು ಕಟ್ಟುವದು ನಿಷೇಧವಲ್ಲದೇ ಅಸಾಧ್ಯವೂ ಹೌದು.

೪. ರಾಜ್ಯವು ರಾಷ್ಟ್ರದ ಪರಿಕಲ್ಪನೆಯಿಲ್ಲದೇ ಉಗಮಿಸಬಹುದು. ರಾಷ್ಟ್ರ ರಾಜ್ಯಕಲ್ಪನೆ ಇಲ್ಲದೇ ಉಗಮಿಸಲು ಅಸಾಧ್ಯ.

೫. ರಾಷ್ಟ್ರದ ಉಗಮವು ಒಂದು ಚಾರಿತ್ರಿಕ ಬೆಳವಣಿಗೆ. ಆದಕಾರಣ ರಾಷ್ಟ್ರದ ಬೆಳವಣಿಗೆ- ಯನ್ನು ಕುಂಠಿತಗೊಳಿಸಲು ಅಥವಾ ತಡೆಹಿಡಿಯಲು ಅಸಾಧ್ಯ. ರಾಜ್ಯದ ಬೆಳವಣಿಗೆ- ಯನ್ನು ಕುಂಠಿತಗೊಳಿಸಬಹುದಲ್ಲದೇ ಛಿದ್ರಗೊಳಿಸಲು ಸಾಧ್ಯ.

ಪ್ರೋ. ಝಿಮರ್ನ ಎಂಬ ಲೇಖಕರ ಪ್ರಕಾರ ಧರ್ಮದಂತೆ ರಾಷ್ಟ್ರೀಯತೆ ,ವ್ಯಕ್ತಿಗತ, ರಾಜ್ಯ ವಸ್ತುಗತ,ರಾಷ್ಟ್ರೀಯತೆ ಭಾವಾತ್ಮಕ ರಾಜ್ಯ ರಾಜಕೀಯ, ರಾಷ್ಟ್ರೀಯತೆ, ಮನಸ್ಸಿನ ಸ್ಥಿತಿ, ರಾಜ್ಯ ಕಾಯ್ದೆಯ ಸ್ಥಿತಿ, ರಾಷ್ಟ್ರೀಯತೆ ಪಡೆಯುವಿಕೆ, ರಾಜ್ಯ ಋಣ, ರಾಷ್ಟ್ರೀಯತೆ ಜೀವಿಸುವ, ವಿಚಾರಿಸುವ, ಅನಿಸಿಕೆಯ ಪಥ ಇರುತ್ತದೆ. ರಾಜ್ಯ ಜೀವಿಸುವ ಪಥದಿಂದ ಪ್ರತ್ಯೇಕಿಸಲಾಗದ ಸ್ಥಿತಿ ಇರುತ್ತದೆ.

ಮೊದಲನೆ ಜಾಗತಿಕ ಯುದ್ಧದ ನಂತರ ಅಂದರೆ ಕ್ರಿ.ಶ. ೧೯೨೦ ರಿಂದ ಇತ್ತೀಚೆಗೆ ರಾಜ್ಯ ಮತ್ತು ರಾಷ್ಟ್ರಗಳ ನಡುವಿನ ವ್ಯತ್ಯಾಸ ಕಡಿಮೆಯಾಗತೊಡಗಿತು. ಅವೆರಡೂ ಪದಗಳನ್ನು ಸಾಮಾನ್ಯವಾಗಿ ಒಂದೇ ಅರ್ಥ ಬರುವಂತೆ ಉಪಯೋಗಿಸಲಾಗಿದೆ. ಅನೇಕ ಆಧುನಿಕ ರಾಜ್ಯಗಳು ರಾಷ್ಟ್ರಗಳೆಂದು ಹೇಳಿಕೊಳ್ಳುತ್ತಿವೆ. ರಾಜ್ಯದ ಜನತೆ ಒಂದೇ ಆಡಳಿತದ ಚೌಕಟ್ಟಿನಲ್ಲಿ ಇರುವದೇ ಅದಕ್ಕೆ ಮುಖ್ಯ ಕಾರಣ ಎಂದು ಹೇಳಲಾಗಿದೆ.

## ✸ ರಾಜ್ಯ ಮತ್ತು ಸರಕಾರ

ತಮ್ಮ ನಿರಂಕುಶಾಧಿಕಾರವನ್ನು ಸಮರ್ಥಿಸಿಕೊಳ್ಳಲು ಫ್ರಾನ್ಸಿನ ೧೪ನೇ ಲೂಯಿಸ್ 'ನಾನೇ ರಾಜ್ಯ' ಎಂದು ಹೇಳಿದ್ದಾರೆ. ತನ್ಮೂಲಕ ಅವರು ರಾಜ್ಯ ಹಾಗೂ ಸರಕಾರದ ನಡುವೆ ಅಂತರ ಮಾಡದೆ ಒಂದೇ ಅರ್ಥ ಬರುವಂತೆ ಉಪಯೋಗ ಮಾಡಿರುತ್ತಾರೆ ಹಾಗೂ ಇದನ್ನು ಎಚ್. ಜೆ. ಲಾಸ್ಕಿ, ಹಾಬ್ಸ್ ಮುಂತಾದ ಲೇಖಕರು ಸಮರ್ಥಸಿದ್ದಾರೆ. ಆದರೆ ಇದು ತಪ್ಪು. ರಾಜ್ಯ ಹಾಗೂ ಸರಕಾರದ ನಡುವೆ ಈ ಕೆಳಗಿನ ಅಂತರಗಳು ಇರುತ್ತವೆ.

೧. ರಾಜ್ಯವು ಕಾಲ್ಪನಿಕವಾಗಿದೆ, ಅದು ಅಗೋಚರವಾಗಿದೆ, ಅಮೂರ್ತವಾಗಿದೆ. ಆದರೆ ಸರಕಾರವು ಸಾಕಾರವಾಗಿದೆ, ದೃಷ್ಟಿಗೋಚರವಾಗಿದೆ, ಮೂರ್ತಸ್ವರೂಪದ್ದಾಗಿದೆ,. ರಾಜ್ಯದ ಇರುವಿಕೆಯನ್ನು ನಾವು ಕಾಣುವದು ಸರಕಾರದ ಮೂಲಕವೆ. ಭಾರತ ರಾಜ್ಯ ವೆಂದೊಡನೆ ನಮಗೆ ಭಾರತದ ಪ್ರದೇಶ ಮತ್ತು ಜನಾಂಗಗಳು ನಮ್ಮ ಕಣ್ಣೆದುರು ಬಂದು ನಿಲ್ಲುತ್ತವೆ. ಆದರೆ ಸಾಕಾರವಾಗಿ ಭಾರತರಾಜ್ಯವನ್ನು ನಾವು ಕಾಣಲಾರೆವು. ಭಾರತ ಸರಕಾರ-ವೆಂದೊಡನೆ ಭಾರತದ ರಾಷ್ಟ್ರಾಧ್ಯಕ್ಷ, ಮಂತ್ರಿಮಂಡಲ, ಸರಕಾರಿ ಅಧಿಕಾರಿಗಳು ಇವರೇ ಮೊದಲಾದವರು ಬಂದು ನಿಲ್ಲುತ್ತಾರೆ. ಆದ್ದರಿಂದ ರಾಜ್ಯವು ಕಾಲ್ಪನಿಕವಾಗಿದೆ, ಸರಕಾರವು ಸಾಕಾರವಾಗಿದೆ.

೨. ರಾಜ್ಯವು ಸರಕಾರಕ್ಕಿಂತ ಹಿರಿಯದು ಹಾಗೂ ಶ್ರೇಷ್ಠ ವಾದದ್ದು . ಸರಕಾರ ರಾಜ್ಯದ ಇಚ್ಛೆಯಂತೆ ಕೆಲಸ ಮಾಡುವ ಒಂದು ಸಾಧನ ಮಾತ್ರ. ರಾಜ್ಯವು ತನ್ನ ಕಾರ್ಯಗಳನ್ನು ಸರಕಾರದ ಮೂಲಕ ವಶಮಾಡಿಸಿಕೊಳ್ಳುತ್ತದೆ. ಆದ್ದರಿಂದ ಸರಕಾರವು ರಾಜ್ಯದ ಪರವಾಗಿ ಕೆಲಸ ಮಾಡುವ ಒಂದು ಯಂತ್ರ ಮಾತ್ರ. ರಾಜ್ಯವು ಇಡೀ ದೇಶದ ಜನರನ್ನು ಒಳಗೊಂಡಿರುತ್ತದೆ. ಆದರೆ ಸರಕಾರವು ಕೇವಲ ಶಾಸಕರನ್ನು, ಆಡಳಿತಗಾರರನ್ನು ಮತ್ತು ನ್ಯಾಯಾಧೀಶರನ್ನು ಒಳಗೊಂಡಿರುತ್ತದೆ.

೩. ರಾಜ್ಯವು ಶಾಶ್ವತವಾದದ್ದು ಆದರೆ ಸರಕಾರಗಳು ಮೇಲಿಂದ ಮೇಲೆ ಬದಲಾಗುತ್ತವೆ. ಆರನೇಯ ಜಾರ್ಜ್ ಮರಣ ಹೊಂದಿದಾಗ ರಾಣಿ ಎಲಿಜಬೇತ್ ಚಿರಾಯುವಾಗಲಿ ಎಂದು ಹೇಳಲಾಯಿತು. ಸಾರ್ವತ್ರಿಕ ಚುನಾವಣೆಯಲ್ಲಿ ಬಹುಮತ ಪಡೆದ ರಾಜಕೀಯ ಪಕ್ಷವು ಸರಕಾರವನ್ನು ರಚಿಸುವದು. ಉದಾ : ಭಾರತದಲ್ಲಿ ರಾಷ್ಟ್ರೀಯ ಪ್ರಜಾಸತ್ತಾತ್ಮಕ ಒಕ್ಕೂಟದ ಸರಕಾರ ಪತನವಾಗಿ ಪ್ರಗತಿಪರ ಒಕ್ಕೂಟದ ಸರಕಾರ ಅಸ್ತಿತ್ವಕ್ಕೆ ಬಂದಿದೆ. ಈ ಪ್ರಕಾರ ಈಗ ಒಂದು ಪಕ್ಷ ಅಥವಾ ಪಕ್ಷಗಳ ಒಕ್ಕೂಟ ಸರಕಾರ ರಚಿಸಬಹುದು. ಆದರೆ ಕೆಲವು ಸಮಯದ ನಂತರ ಅದು ಪತನವಾಗಿ ಇನ್ನೊಂದು ಪಕ್ಷ ಅಥವಾ ಪಕ್ಷಗಳ ಒಕ್ಕೂಟ ಸರಕಾರವನ್ನು ರಚಿಸಬಹುದು. ಆದರೆ ರಾಜ್ಯ ಮಾತ್ರ ಒಂದೇ ಆಗಿರುತ್ತದೆ. ಅದು ಎಂದಿಗೂ ಬದಲಾಗುವದಿಲ್ಲ.

೪. ರಾಜ್ಯಕ್ಕೆ ಸಾರ್ವಭೌಮ ಅಧಿಕಾರವಿದೆ. ಆದರೆ ಸರಕಾರಕ್ಕೆ ಇಲ್ಲ, ಆದರೆ ರಾಜ್ಯದ ಪರವಾಗಿ ಸರಕಾರವು ಈ ಅಧಿಕಾರವನ್ನು ಚಲಾಯಿಸುತ್ತದೆ. ಅದರಂತೆ ರಾಜ್ಯವು ತನ್ನ ಸಾರ್ವಭೌಮ ಅಧಿಕಾರವನ್ನು ಸರಕಾರದ ಮೂಲಕ ಚಲಾಯಿಸುತ್ತದೆ. ಆದರೆ ಸರಕಾರಕ್ಕೆ ಸಾರ್ವಭೌಮ ಅಧಿಕಾರವಿದೆಯೆಂದು ಇದರ ಅರ್ಥವಲ್ಲ. ಸಾರ್ವಭೌಮ ಅಧಿಕಾರವು ರಾಜ್ಯದ ಮುಖ್ಯ ಲಕ್ಷಣವೇ ಹೊರತು ಸರಕಾರದ ಲಕ್ಷಣವಲ್ಲ.

೫. ಎಲ್ಲ ರಾಜ್ಯಗಳ ಸ್ವರೂಪ ಒಂದೇ ಆಗಿದೆ. ಆದರೆ ಎಲ್ಲ ಸರಕಾರಗಳ ಸ್ವರೂಪ ಒಂದೇ ಆಗಿರುವದಿಲ್ಲ. ಎಲ್ಲ ರಾಜ್ಯಗಳು ನಿರ್ಧಿಷ್ಟ ಪ್ರದೇಶ, ಜನಸಂಖ್ಯೆ, ಸರಕಾರ ಮತ್ತು ಸಾರ್ವಭೌಮ ಅಧಿಕಾರ ಈ ಎಲ್ಲ ನಾಲ್ಕು ಅಂಶಗಳನ್ನು ಹೊಂದಿರುತ್ತವೆ. ಆದರೆ ಎಲ್ಲ ರಾಜ್ಯಗಳಲ್ಲಿ ಬೇರೆ ಬೇರೆ ಪ್ರಕಾರಗಳ ಸರಕಾರವಿರಬಹುದು. ಉದಾ:-ಇಂಗ್ಲೆಂಡ್‌ನಲ್ಲಿ ಕೇಂದ್ರೀಕೃತ ಸರಕಾರವಿದ್ದರೆ, ಅಮೇರಿಕೆಯಲ್ಲಿ ಅಧ್ಯಕ್ಷೀಯ ಸರಕಾರವಿದೆ ಇತ್ಯಾದಿ.

೬. ರಾಜ್ಯದ ವಿರುದ್ಧ ಬಂಡು ಏಳುವ ಹಕ್ಕು ಯಾವ ವ್ಯಕ್ತಿಗೂ ಇರುವದಿಲ್ಲ. ಆದರೆ ಅವನು ಸರಕಾರದ ವಿರುದ್ಧಮಾತ್ರ ಬಂಡೇಳಬಹುದು. ಅಂದರೆ ಸರಕಾರದ ನೀತಿಯನ್ನು ಟೀಕಿಸಲು, ಅದರ ವಿರುದ್ಧ ಹೋರಾಡಲು ಹಾಗೂ ಅದರ ಚಟುವಟಿಕೆಗಳನ್ನು ಪ್ರತಿಭಟಿಸಲು ವ್ಯಕ್ತಿಗೆ ಅಧಿಕಾರವಿದೆ.

ಈ ಪ್ರಕಾರ ರಾಜ್ಯ ಮತ್ತು ಸರಕಾರಗಳಲ್ಲಿ ವ್ಯತ್ಯಾಸಗಳಿರುವದರಿಂದ ರಾಜ್ಯವೇ ಬೇರೆ, ಸರಕಾರವೇ ಬೇರೆ ಎಂಬುದನ್ನು ನೆನಪಿನಲ್ಲಿಡಬೇಕು.

## ✸ ರಾಜ್ಯ ಮತ್ತು ಸಮಾಜ

ರಾಜಕೀಯ ದೃಷ್ಟಿಯಿಂದ ಸುಸಂಘಟಿತವಾದ ಸಮಾಜವನ್ನು ರಾಜ್ಯವೆಂದು ಹೇಳಬಹುದು. ಆದರೆ ಸುಸಂಘಟಿತ ವ್ಯಕ್ತಿಗಳ ಗುಂಪು, ಸವ, ಸೊಸೈಟಿ ಎಂಬ ಪದ ಗ್ರೀಕ್ ಪದವಾದ ಸೋಸಿಯಸ್ (Socious) ದಿಂದ ಬಂದಿದೆ. ಸೋಸಿಯಸ್ ಅಂದರೆ

ಸಂಘ ಎಂದು ಅರ್ಥ. ಸಂಘಟನೆ ಸಮಾಜಕ್ಕೆ ಅತ್ಯವಶ್ಯಕ. ಯಾಕೆಂದರೆ ಜನಸಮೂಹವನ್ನು ಸಮಾಜವೆಂದು ಪರಿಗಣಿಸುವದಿಲ್ಲ. ಇದು ಕುಟುಂಬ, ಸಮುದಾಯ ಹಾಗೂ ವರ್ಗದಂತಿದ್ದು ನಿಯಮಗಳ ಪಾಲನೆ ಇದೆ. ತನ್ಮೂಲಕ ಸಮಾಜವೆಂದರೆ ಒಂದು ಪ್ರದೇಶದಲ್ಲಿ ಮಾನವರ ನಡುವೆ ಇರುವ ಸಂಬಂಧದ ವಿಧಾನವನ್ನು ಸಮಾಜವೆಂದು ವ್ಯಾಖ್ಯಾನಿಸಬಹುದು. 'ಮ್ಯಾಕೆವರ್' ಎಂಬ ಲೇಖಕರ ಪ್ರಕಾರ ''ಮಾನವರು ಜೀವಿಸುವ ಸಾಮಾಜಿಕ ಸಂಬಂಧದ ಜೇಡರ ಬಲೆಯಂತೆ ಸಮಾಜವಿರುತ್ತದೆ,'' ಸಮಾಜವು ರಾಜ್ಯಕ್ಕಿಂತ ಪುರಾತನವಾದುದು.

ಅರಿಸ್ಟಾಟಲ್‌ರ ಅಭಿಪ್ರಾಯದಂತೆ ಮನುಷ್ಯನು ಸಮಾಜ ಜೀವಿ. ಅವನು ಸಮಾಜದಲ್ಲಿ ಬಾಳಿ ಬದುಕುತ್ತಾನೆ. ಸೌಕರ್ಯಕ್ಕಾಗಿ ಅನೇಕ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಸಂಸ್ಥೆಗಳನ್ನು ನಿರ್ಮಿಸಿಕೊಂಡಿದ್ದಾನೆ. ಈ ಸಂಘ ಸಂಸ್ಥೆಗಳ ಸಹಾಯದಿಂದ ಸಮಾಜ ಜೀವನವು ಸುಗಮವಾಗಿ ಸಾಗುವದು. ಈ ಸಂಘ ಸಂಸ್ಥೆಗಳು ರಾಜ್ಯದಿಂದ ನಿರ್ಮಿಸಲ್ಪಟ್ಟಿರುವದಿಲ್ಲ. ರಾಜ್ಯದ ಸಹಾಯವಿಲ್ಲದೇ ಅವು ಬದುಕಬಲ್ಲವು. ಸಮಾಜದಲ್ಲಿರುವ ನಾನಾರೂಢಿಗಳನ್ನು, ಸಂಪ್ರದಾಯಗಳನ್ನು ಮತ್ತು ಕಟ್ಟಳೆಗಳನ್ನು ಪಾಲಿಸುವದರಿಂದ ವ್ಯಕ್ತಿಯ ಜೀವನವು ಸುಖಮಯವಾಗುತ್ತದೆ. ರಾಜ್ಯವು ಸಮಾಜದಲ್ಲಿರುವ ಅನೇಕ ಸಂಘ ಸಂಸ್ಥೆಗಳಲ್ಲಿ ಒಂದು. ಆದರೆ ಇದು ಅತಿ ಮುಖ್ಯವಾದ ಸಂಸ್ಥೆ. ಯಾಕೆಂದರೆ ರಾಜ್ಯವು ಉಳಿದ ಸಂಘ ಸಂಸ್ಥೆಗಳನ್ನು ನಿಯಂತ್ರಿಸುವದು. ಸರಕಾರ ಮತ್ತು ಕಾನೂನುಗಳಿಲ್ಲದೆ ಜನರು ಸಮಾಜದಲ್ಲಿ ಶಾಂತಿ -ಸುವ್ಯವಸ್ಥೆಯನ್ನು ಕಾಣಲಾರರು. ಮತ್ತು ಸುಗಮವಾದ ಹಾಗೂ ಸುಖಮಯವಾದ ಸಾಮಾಜಿಕ ಜೀವನವನ್ನು ಸಾಗಿಸಲಾರರು. ರಾಜ್ಯವು ರಾಜಕೀಯ ಸಂಸ್ಥೆ, ಅದರ ಕಟ್ಟಳೆಗಳಾದ ಕಾನೂನುಗಳು ಕಡ್ಡಾಯವಾದವು. ಕಾನೂನುಗಳನ್ನು ಉಲ್ಲಂಘಿಸಿದ ವ್ಯಕ್ತಿಗಳಿಗೆ ರಾಜ್ಯವು ಶಿಕ್ಷೆಯನ್ನು ವಿಧಿಸುತ್ತದೆ. ಪುರಾತನ ಗ್ರೀಕರು ರಾಜ್ಯ ಮತ್ತು ಸಮಾಜಗಳಲ್ಲಿ ವ್ಯತ್ಯಾಸವನ್ನು ಮಾಡಿರಲಿಲ್ಲ. ಏಕೆಂದರೆ ಅವರ ರಾಜಕೀಯ ಮತ್ತು ಸಾಮಾಜಿಕ ಜೀವನಗಳು ಒಂದೇ ಆಗಿದ್ದವು. ಹಾಬ್ಸ ಎಂಬ ಲೇಖಕರು ಇವೆರಡು ಒಂದೇ ಎಂದು ಹೇಳಿದ್ದಾರೆ. ಇದು ರಾಜ್ಯವನ್ನು ಒಂದು ಉದ್ದೇಶವನ್ನಾಗಿ ಮಾಡುತ್ತದೆ. ತನ್ಮೂಲಕ ಮಾನವನನ್ನು ಸಾಧನವನ್ನಾಗಿ ಬಳಸಲಾಗುತ್ತದೆ. ಆದರೆ ನೈಜ ಸಂಗತಿ ಇದರ ತದ್ವಿರುದ್ಧ ಇರುತ್ತದೆ. ಅಂದರೆ ಒಂದು ಉದ್ದೇಶಕ್ಕಾಗಿ ಇರುವ ಸಾಧನ ರಾಜ್ಯ ಎಂದು ಹೇಳಬಹುದು.

ಸೊಲ್ಬು ಎಂಬ ಲೇಖಕರ ಪ್ರಕಾರ ಮಾನವ ಸ್ವಭಾವದ ಬಗೆಗಿನ ಮೂರು ಮೂಲಭೂತ ನೈಜತೆಗಳಲ್ಲಿ ಸಮುದಾಯದ ಜೀವನ ಅಡಕವಾಗಿದೆ.

೧. ಮಾನವರು ಸಮಾಜ ಜೀವಿ
೨. ಮಾನವರು ವಿಭಿನ್ನ
೩. ಮಾನವರು ಸ್ವಾರ್ಥಿಗಳು

ತನ್ಮೂಲಕ ಸಹಕಾರ ಅತ್ಯವಶ್ಯಕ ಹಾಗೂ ಜಗಳಗಳು ಅನಿವಾರ್ಯ. ಸಹಕಾರ ಸಮಾಜವನ್ನು ನಿರ್ಮಿಸುತ್ತದೆ. ಹಾಗೂ ಜಗಳಗಳು ರಾಜ್ಯವನ್ನು ಬಯಸುತ್ತವೆ. ಕಾರಣ ಸಮಾಜ ಹಾಗೂ ರಾಜ್ಯಗಳು ಒಂದೇ ಅಲ್ಲ; ಅವುಗಳ ನಡುವೆ ಮೂಲಭೂತ ವ್ಯತ್ಯಾಸಗಳಿವೆ.

೧. ಸಮಾಜವು ರಾಜ್ಯಕ್ಕಿಂತ ವಿಶಾಲವಾಗಿದೆ. ರಾಜ್ಯವು ಸಮಾಜದ ಒಂದು ಅಂಗ ಮಾತ್ರ. ಮಾನವನು ಸಮಾಜದಲ್ಲಿ ತನ್ನ ಅನುಕೂಲತೆಗಾಗಿ ಸ್ಥಾಪಿಸಿದ ಅನೇಕ ಸಂಘ ಸಂಸ್ಥೆಗಳಲ್ಲಿ ರಾಜ್ಯ ಒಂದಾಗಿದೆ.

೨. ಸಮಾಜದ ಕಾರ್ಯಕ್ಷೇತ್ರವು ರಾಜ್ಯದ ಕಾರ್ಯಕ್ಷೇತ್ರಕ್ಕಿಂತ ವಿಶಾಲವಾಗಿದೆ. ರಾಜ್ಯವು ಕೇವಲ ರಾಜಕೀಯ ಚಟುವಟಿಕೆಗಳಿಗೆ ಸಂಬಂಧಿಸಿದ್ದರೆ, ಸಮಾಜ ಮಾನವನ ಎಲ್ಲ ಚಟುವಟಿಕೆಗಳಿಗೆ ಸಂಬಂಧ ಪಟ್ಟಿರುತ್ತದೆ.

೩. ರಾಜ್ಯಕ್ಕೆ ನಿಶ್ಚಿತ ಪ್ರದೇಶವಿದೆ. ಆದರೆ ಸಮಾಜಕ್ಕೆ ಪ್ರಾದೇಶಿಕ ಮಿತಿಯಿರುವದಿಲ್ಲ. ಜನರು ಒಟ್ಟುಗೂಡಿ ಯಾವುದೇ ನಿರ್ಧಿಷ್ಟ ಪ್ರದೇಶಕ್ಕೆ ಸೀಮಿತವಾಗಿರದೆ ಸಂಘ ಸಂಸ್ಥೆಗಳನ್ನು ಸ್ಥಾಪಿಸಬಹುದು. ಉದಾ: ಅಂತರ ರಾಷ್ಟ್ರೀಯ ಕಾರ್ಮಿಕ ಸಂಘ, ರೋಟರಿ ಕ್ಲಬ್ ಇತ್ಯಾದಿ.

೪. ರಾಜ್ಯವು ಸಂಘಟಿತವಾದ ಮಾನವ ಸಮೂಹವಾಗಿದೆ. ತನ್ನ ಉದ್ದೇಶಗಳನ್ನು ಪೂರೈಸಿಕೊಳ್ಳಲು ರಾಜ್ಯವು ಸಂಘಟನೆಯನ್ನು ಹೊಂದಿರಬೇಕಾಗುತ್ತದೆ. ಆದರೆ ಸಮಾಜವು ಸಂಘಟಿತ ಹಾಗೂ ಅಸಂಘಟಿತ ಸಮೂಹ ರೂಪದಲ್ಲಿ ಗೋಚರವಾಗ-ಬಹುದು.

೫. ರಾಜ್ಯಕ್ಕೆ ಸಾರ್ವಭೌಮ ಅಧಿಕಾರ ಇದೆ, ಆದರೆ ಸಮಾಜಕ್ಕಿಲ್ಲ. ಕಾನೂನು -ಪಾಸು ಮಾಡಿ ಜಾರಿಯಲ್ಲಿ ತರುವ ಅಧಿಕಾರ ರಾಜ್ಯಕ್ಕಿದೆ. ರಾಜ್ಯದ ಕಾನೂನುಗಳು ಕಡ್ಡಾಯವಾದವು. ಕಾನೂನುಗಳನ್ನು ಉಲ್ಲಂಘಿಸಿದರೆ ರಾಜ್ಯವು ಅಂಥ ಜನರಿಗೆ ಶಿಕ್ಷೆಯನ್ನು ವಿಧಿಸುತ್ತದೆ. ಆದರೆ ಸಮಾಜದಲ್ಲಿ ಕೆಲವು ರೂಢಿಗಳು, ಸಂಪ್ರದಾಯಗಳು ಮತ್ತು ಕಟ್ಟಳೆಗಳು ಇವೆ. ಇವುಗಳನ್ನು ಪಾಲಿಸಿದರೆ ಸಾಮಾಜಿಕ ಜೀವನವು ಸುಖಮಯವಾಗಬಲ್ಲದು. ಇವುಗಳ ವಿರುದ್ಧ ಹೋದರೆ ಸಮಾಜವು ನಮ್ಮನ್ನು ಶಿಕ್ಷಿಸಲಾರದು, ಕೇವಲ ಬಹಿಷ್ಕಾರ ಹಾಕಬಲ್ಲದು.

೬. ರಾಜ್ಯದ ಸದಸ್ಯತ್ವವು ಎಲ್ಲ ಪ್ರಜೆಗಳಿಗೂ ಕಡ್ಡಾಯವಾದುದು. ಆದರೆ ಸಮಾಜದ ಸದಸ್ಯತ್ವವು ಐಚ್ಛಿಕವಾದುದು.

೭. ರಾಜ್ಯವು ಒಂದು ಶಾಶ್ವತ ಸಂಸ್ಥೆಯಾಗಿದೆ. ಆದರೆ ಸಮಾಜದಲ್ಲಿಯ ಇತರ ಸಂಸ್ಥೆಗಳು ಶಾಶ್ವತವಾಗಿರಬಹುದು ಅಥವಾ ಶಾಶ್ವತವಾಗಿರಲಿಕ್ಕಿಲ್ಲ. ಅನೇಕ ಸಂಸ್ಥೆಗಳು ಕೆಲವೊಂದು ಧ್ಯೇಯಗಳನ್ನಿಟ್ಟುಕೊಂಡು ಸ್ಥಾಪಿಸಲ್ಪಡುತ್ತವೆ. ಆ ಧ್ಯೇಯಗಳು ಈಡೇರಿದ ನಂತರ ಅವು ಅಳಿದು ಹೋಗಬಹುದು. ಉದಾ: ಕೂಲಿಕಾರರ ಸಂಘ ಅವರಿಗೆ ಹೆಚ್ಚಿನ ಸಂಬಳದ ಬೇಡಿಕೆ ಈಡೇರಿದಂತೆ ಆ ಸಂಘವು ಮಾಯವಾಗಬಹುದು.

ಮಾನವನು ರಾಜ್ಯವಿಲ್ಲದೇ ಬದುಕಬಹುದು, ಆದರೆ ಸಮಾಜವಿಲ್ಲದೇ ಬದುಕಲಾರನು. ಈ ದೃಷ್ಟಿಯಿಂದ ನೋಡಿದರೆ ಸಮಾಜವು ರಾಜ್ಯಕ್ಕಿಂತ ಹೆಚ್ಚು ಮಹತ್ವ ಪಡೆದಿದೆಯೆನ್ನಬಹುದು. ರಾಜ್ಯಕ್ಕೂ ಮತ್ತು ಸಮಾಜಕ್ಕೂ ಯಾವ ಸಂಬಂಧವಿರ-ಬೇಕೆಂಬ ಬಗ್ಗೆ ಅನೇಕ ಅಭಿಪ್ರಾಯಗಳಿವೆ. ರಾಜ್ಯ ಹಾಗೂ ಸಮಾಜದ ನಡುವಿನ ಅಂತರ ವೈಯಕ್ತಿಕ ಸ್ವಾತಂತ್ರ್ಯ ಸಾಧಿಸಲು ಸಹಾಯಕಾರಿ. ರಾಜ್ಯ ಹಾಗೂ ಸಮಾಜ ಒಂದೇ ಎಂದು ಪರಿಗಣಿಸುವದು ವ್ಯಕ್ತಿಯ ಜೀವನದ ಎಲ್ಲ ವಿಷಯಗಳಲ್ಲಿ ರಾಜ್ಯ ಕೈಹಾಕುವದನ್ನು ಸಮರ್ಥನೆ ಮಾಡುತ್ತದೆ. ಇದು ಸರ್ವಾಧಿಕಾರತ್ವಕ್ಕೆ ಕಾರಣೀಭೂತವಾಗುತ್ತದೆ. ನಿರಂಕುಶ ಪ್ರಭುತ್ವದ ಸರಕಾರವಿದ್ದರೆ ರಾಜ್ಯಕ್ಕೂ ಸಮಾಜಕ್ಕೂ ವ್ಯತ್ಯಾಸವೇ ಉಳಿಯುವದಿಲ್ಲ ನಿರಂಕುಶ ಪ್ರಭುಗಳಾದ ಜರ್ಮನಿಯ ಹಿಟ್ಲರ್ ಮತ್ತು ಇಟಲಿಯ ಮುಸೋಲಿನಿಯ ಆಳ್ವಿಕೆಯಲ್ಲಿ ರಾಜ್ಯವೇ ಸಮಾಜವಾಗಿ ಅಲ್ಲಿಯ ಜನರು ದಬ್ಬಾಳಿಕೆಗೆ ಗುರಿಯಾಗ ಬೇಕಾಯಿತು. ವ್ಯಕ್ತಿ ಸ್ವಾತಂತ್ರ್ಯಕ್ಕೆ ಅಲ್ಲಿ ಅವಕಾಶವೇ ಇದ್ದಿಲ್ಲ. ಅದೇ ಪ್ರಕಾರ ಈ ಮೊದಲು ರಶಿಯಾ ದೇಶದಲ್ಲಿ ರಾಜ್ಯಕ್ಕೂ ಮತ್ತು ಸಮಾಜಕ್ಕೂ ವ್ಯತ್ಯಾಸವಿದ್ದಿಲ್ಲ. ಅಲ್ಲಿ ಸಮಾಜ ಜೀವನವು ಸಂಪೂರ್ಣವಾಗಿ ಸರಕಾರದ ನಿಯಂತ್ರಣದಲ್ಲಿತ್ತು. ಆದರೆ ಇತ್ತೀಚೆಗೆ ಅಲ್ಲಿ ಹಲವಾರು ಬದಲಾವಣೆಗಳಾಗುತ್ತಿವೆ.

ಸಮಾಜ ಮತ್ತು ರಾಜ್ಯಗಳಲ್ಲಿರುವ ವ್ಯತ್ಯಾಸವನ್ನು ಬಾರ್ಕರ ಎಂಬ ಲೇಖಕರು ಈ ರೀತಿಯಾಗಿ ವಿವರಿಸಿದ್ದಾ, ''ವ್ಯಕ್ತಿಯ ಸದಿಚ್ಛೆ, ಸಹಕಾರಗಳೇ ಸಮಾಜದ ರಕ್ಷೆ. ಸದಿಚ್ಛೆಯೇ ಸಮಾಜದ ಶಕ್ತಿ, ಎಲ್ಲಕ್ಕೂ ಹೊಂದಿಕೊಂಡಿರುವದೇ ಸಮಾಜದ ಗುಣ, ಆದರೆ ರಾಜ್ಯದ ರಕ್ಷೆ ಯಾಂತ್ರಿಕವಾಗಿ ಕೆಲಸ ಮಾಡುವದು, ಬಲವಂತದಿಂದ ಇತರರನ್ನು ವಿಧೇಯರನ್ನಾಗಿ ಮಾಡುವ ಮತ್ತು ನಾನಾ ಸಂದರ್ಭಗಳಲ್ಲಿ ಹೊಂದಿಕೊಳ್ಳಲು ಅಸಮರ್ಥವಾಗಿದೆ.''

### ✸ ರಾಜ್ಯ ಮತ್ತು ಸಂಘ

ಸಮಾಜವೆಂದರೆ ವ್ಯಕ್ತಿಗಳ ಮತ್ತು ನಾನಾ ಸಂಘ ಸಂಸ್ಥೆಗಳ ಸಮುದಾಯ. ಮಾನವನು ಸಂಘ ಜೀವಿ ಸಮಾಜದಲ್ಲಿ ಬಾಳಿ ಬದುಕುತ್ತಾನೆ. ತನ್ನ ವಿವಿಧ ಬಯಕೆ-

ಗಳನ್ನು ಮತ್ತು ಅವಶ್ಯಕತೆಗಳನ್ನು ಪೂರೈಸಿಕೊಳ್ಳುವದರ ಸಲುವಾಗಿ ಅವನು ಸ್ವಪ್ರೇರಣೆಯಿಂದ ಅನೇಕ ಸಂಘ ಸಂಸ್ಥೆಗಳನ್ನು ನಿರ್ಮಿಸಿಕೊಳ್ಳುತ್ತಾನೆ. ಉದಾ: ವಿವಾಹ,ಕುಟುಂಬ, ಆಸ್ತಿ ದೇವಾಲಯ, ಕಾರ್ಮಿಕರ ಸಂಘ ಇತ್ಯಾದಿ. ಈ ರೀತಿ ಮಾನವರು ಕಟ್ಟಿಕೊಂಡ ಸಂಘ ಸಂಸ್ಥೆಗಳು ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಉದ್ದೇಶಗಳಿಂದ ಕೂಡಿಕೊಂಡಿರುತ್ತವೆ. ಈ ಸಂಘ ಸಂಸ್ಥೆಗಳನ್ನು ರಾಜ್ಯವು ನಿರ್ಮಿಸಿರುವದಿಲ್ಲ. ರಾಜ್ಯದ ಸಹಾಯವಿಲ್ಲದೇ ಈ ಸಂಘ ಸಂಸ್ಥೆಗಳು ಬಾಳಬಲ್ಲವು.

ಸಮಾಜದಲ್ಲಿರುವ ಅನೇಕ ಸಂಘ ಸಂಸ್ಥೆಗಳಲ್ಲಿ ರಾಜ್ಯವು ಒಂದು ಸಂಸ್ಥೆ. ಇದು ಪ್ರಮುಖವಾದ ಸಂಸ್ಥೆ ಏಕೆಂದರೆ ಉಳಿದ ಸಂಘ ಸಂಸ್ಥೆಗಳನ್ನು ಹಿಡಿತದಲ್ಲಿಟ್ಟು-ಕೊಂಡು ಸಮಾಜದಲ್ಲಿ ಶಾಂತಿ ಸುವ್ಯವಸ್ಥೆಯನ್ನು ನೆಲೆಗೊಳಿಸುವ ಹೊಣೆಗಾರಿಕೆಯು ರಾಜ್ಯದ ಮೇಲಿದೆ. ರಾಜಕೀಯ ಸಂಸ್ಥೆಯಾದ ರಾಜ್ಯವು ವ್ಯಕ್ತಿಗಳನ್ನು ಮತ್ತು ಸಂಘ ಸಂಸ್ಥೆಗಳನ್ನು ನಿಯಂತ್ರಣದಲ್ಲಿಡುವ ಪರಮಾಧಿಕಾರವನ್ನು ಪಡೆದಿರುತ್ತದೆ. ಮೆಕೈವರ್ ಪ್ರಕಾರ ಒಂದು ಉದ್ದೇಶ ಸಾಧನೆಗೋಸ್ಕರವಾಗಿ ಏಕಾಭಿಪ್ರಾಯವನ್ನು ಹೊಂದಿ ಸುಸಂಘಟಿತರಾಗಿರುವ ವ್ಯಕ್ತಿಗಳ ಸಮೂಹವೇ ಸಂಘ.

ಅನೇಕತಾವಾದಿಗಳು ರಾಜ್ಯ ಹಾಗೂ ಸಂಘಗಳ ನಡುವೆ ಯಾವ ಅಂತರವು ಇಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ ಸಂಘ ಸಂಸ್ಥೆಗಳಿಗೂ ರಾಜ್ಯದಷ್ಟೇ ಸ್ಥಾನಮಾನಗಳಿವೆ. ಆದರೆ ಈ ವಿಚಾರವು ಅಷ್ಟೇನೂ ಸಮಂಜಸವಾದುದಲ್ಲ. ರಾಜ್ಯವು ಮನುಷ್ಯನ ಪ್ರಯೋಜನಕ್ಕಾಗಿಯೇ ಇರುವದಾದರೂ ರಾಜ್ಯದ ಸ್ಥಾನ ಘನತೆ ಇತರ ಸಂಘ ಸಂಸ್ಥೆಗಳ ಸ್ಥಾನಮಾನಗಳಿಗಿಂತ ಉನ್ನತವಾಗಿದೆ. ಅಲ್ಲದೇ ರಾಜ್ಯದಲ್ಲಿರುವ ಸಂಘ ಸಂಸ್ಥೆಗಳು ಸಾರ್ವಜನಿಕ ಹಿತಕ್ಕೆ ಧಕ್ಕೆ ತರದಿರುವಂತೆ ನೋಡಿಕೊಳ್ಳುವ ಕರ್ತವ್ಯವನ್ನು ರಾಜ್ಯ ಹೊಂದಿದೆಯಲ್ಲದೇ ಈ ಸಂಸ್ಥೆಗಳು ತಮ್ಮ ಕಾರ್ಯಚಟುವಟಿಕೆಗಳನ್ನು ನಡೆಸುವಾಗ ಉದ್ಭವಿಸಬಹುದಾದ ವಿವಾದಗಳನ್ನು ಬಗೆಹರಿಸುವ ಜವಾಬ್ದಾರಿ ರಾಜ್ಯದ್ದಾಗಿದೆ. ರಾಜ್ಯ ಮತು ಸಂಘ ಸಂಸ್ಥೆಗಳಿಗಿರುವ ವ್ಯತ್ಯಾಸವನ್ನು ಅರಿಯುವದರಿಂದ ಇವೆರಡೂ ಒಂದೇ ಅಲ್ಲವೆಂಬ ಅಂಶವನ್ನು ತಿಳಿದು ಕೊಳ್ಳಬಹುದು.

೧. ರಾಜ್ಯಕ್ಕೆ ನಿಶ್ಚಿತವಾದ ಪ್ರದೇಶವಿರುವದು. ರಾಜ್ಯದ ಅಧಿಕಾರವು ತನ್ನ ಪ್ರದೇಶದಲ್ಲಿ ವಾಸಿಸುವ ಜನರಿಗೆ ಮತ್ತು ಅದರ ಸಂಘ ಸಂಸ್ಥೆಗಳಿಗೆ ಮಾತ್ರ ಸೀಮಿತಗೊಳಿಸಲ್ಪ-ಟ್ಟಿರುತ್ತವೆ. ಉದಾ: ಭಾರತದ ಸಾರ್ವಭೌಮ ಅಧಿಕಾರವು ಭಾರತ ರಾಜ್ಯದಲ್ಲಿಯ ಜನರಿಗೆ ಮತ್ತು ಸಂಘ ಸಂಸ್ಥೆಗಳಿಗೆ ಮಾತ್ರ ಅನ್ವಯಿಸುತ್ತದೆ. ಆದರೆ ಸಂಘ ಸಂಸ್ಥೆಗಳ

ಚಟುವಟಿಕೆಗಳು ಒಂದೇ ರಾಜ್ಯದ ಪ್ರದೇಶಕ್ಕೆ ಸೀಮಿತವಾಗಿರಬೇಕಾಗಿಲ್ಲ. ಅವು ವ್ಯಾಪಕವಾಗಿದ್ದು ಅಂತರರಾಷ್ಟ್ರೀಯ ವಾಗಿರಬಹುದು. ಉದಾ : ಲಾಯಿನ್ಸ್ ಕ್ಲಬ್ ಅಥವಾ ರೋಟರಿ ಸಂಸ್ಥೆಯಾಗಲಿ ಅಂತರ ರಾಷ್ಟ್ರೀಯ ಮಟ್ಟದಲ್ಲಿ ಕಾರ್ಯವ್ಯಾಪ್ತಿ ಹೊಂದಿವೆ. ಇವುಗಳ ಚಟುವಟಿಕೆಗಳು ಹಾಗೂ ಸದಸ್ಯತ್ವವು ಯಾವುದೇ ಒಂದು ನಿರ್ಧಿಷ್ಟ ಪ್ರದೇಶಕ್ಕೆ ಅಥವಾ ರಾಜ್ಯಕ್ಕೆ ಮೀಸಲಾಗಿಲ್ಲ. ತನ್ಮೂಲಕ ಸಂಘ ಸಂಸ್ಥೆಗಳ ವ್ಯಾಪಕತ್ವವು ರಾಜ್ಯದ ವ್ಯಾಪಕತ್ವಕ್ಕಿಂತ ವಿಶಾಲವಾದುದು ಮಾತ್ರವಲ್ಲದೇ ಹಿರಿದಾದುದು ಆಗಿರುತ್ತದೆ.

೨. ರಾಜ್ಯಕ್ಕೆ ಸಾರ್ವಭೌಮ ಅಧಿಕಾರವಿದೆ. ರಾಜ್ಯದ ಕಟ್ಟಳೆಗಳು ಅಥವಾ ಕಾನೂನುಗಳು ಕಡ್ಡಾಯವಾದವುಗಳು. ಅವುಗಳನ್ನು ಉಂಘಿಸಿದ ಜನರಿಗೆ ರಾಜ್ಯವು ಶಿಕ್ಷೆಯನ್ನು ವಿಧಿಸುತ್ತದೆ. ಆದರೆ ಸಂಘಗಳಿಗೆ ಸಾರ್ವಭೌಮ ಅಧಿಕಾರವಿರುವದಿಲ್ಲ. ಅವು ಕೆಲವು ನಿಯಮಗಳನ್ನು ಮತ್ತು ಕಟ್ಟಳೆಗಳನ್ನು ರೂಪಿಸುತ್ತವೆ. ಅವುಗಳನ್ನು ಉಲ್ಲಂಘಿಸಿದ ವ್ಯಕ್ತಿಗಳಿಗೆ ಸಂಸ್ಥೆಗಳು ಶಿಕ್ಷೆಯನ್ನು ಏಧಿಸಲಾರವು. ಆದರೆ ಕೇವಲ ಬಹಿಷ್ಕಾರ ಮಾತ್ರ ಹಾಕಬಲ್ಲವು.

೩. ರಾಜ್ಯದ ಸದಸ್ಯತ್ವವು ಕಡ್ಡಾಯವಾಗಿರುತ್ತವೆ. ಪ್ರತಿಯೊಬ್ಬ ವ್ಯಕ್ತಿಯು ಯಾವುದಾದರೊಂದು ರಾಜ್ಯದ ಸದಸ್ಯನಾಗಿರಲೇಬೇಕು. ಆದರೆ ಸಂಘ ಸಂಸ್ಥೆಗಳ ಸದಸ್ಯತ್ವವು ಐಚ್ಛಿಕವಾದುದು. ತನಗೆ ಬೇಕಾದರೆ ಸದಸ್ಯನಾಗಬಹುದು ಇಲ್ಲವೇ ಬಿಡಬಹುದು.

೪. ವ್ಯಕ್ತಿಯು ಒಮ್ಮೆ ಅಥವಾ ಏಕಕಾಲಕ್ಕೆ ಒಂದೇ ಒಂದು ರಾಜ್ಯದ ಸದಸ್ಯನಾಗಿರ ಬೇಕಾಗುವದು. ಏಕಕಾಲಕ್ಕೆ ಎರಡು ಅಥವಾ ಹೆಚ್ಚುರಾಜ್ಯಗಳ ಸದಸ್ಯತ್ವವನ್ನು ಪಡೆಯಲಾರನು. ಅದರೆ ಅವನು ಒಮ್ಮೆಲೇ ಅಥವಾ ಏಕಕಾಲಕ್ಕೆ ಅನೇಕ ಸಂಸ್ಥೆಗಳ ಸದಸ್ಯನಾಗಬಹುದು.

೫. ರಾಜ್ಯವು ಹೆಚ್ಚು ಶಾಶ್ವತವಾದುದು. ರಾಜ್ಯದಲ್ಲಿಯ ಸರಕಾರಗಳು ಮೇಲಿಂದ ಮೇಲೆ ಬದಲಾಗಬಹುದು. ಆದರೆ ರಾಜ್ಯವು ಮಾತ್ರ ಅಬಾಧಿತವಾಗಿರುವದು. ಅದರೆ ಇತರ ಸಂಘ ಸಂಸ್ಥೆಗಳು ಶಾಶ್ವತವಾಗಿರುವದಿಲ್ಲ. ತಮ್ಮ ಗುರಿಯು ಸಾಧಿಸಿದ ಬಳಿಕ ಸಂಘ ಸಂಸ್ಥೆಗಳು ಮಾಯವಾಗಿ ಬಿಡುತ್ತವೆ.

೬. ರಾಜ್ಯದ ಉದ್ದೇಶಗಳು ವಿಶಾಲವಾಗಿರುತ್ತವೆ. ರಾಜ್ಯದಲ್ಲಿಯ ಎಲ್ಲ ಜನರ ಕಲ್ಯಾಣ ಮತ್ತು ಹಿತರಕ್ಷಣೆ ಬಗ್ಗೆ ರಾಜ್ಯವು ಹೋರಾಡುತ್ತದೆ. ಆದರೆ ಬೇರೆ ಬೇರೆ ಇತರ ಸಂಘ ಸಂಸ್ಥೆಗಳ ಉದ್ದೇಶವು ಕೆಲವೊಂದು ಬೇಡಿಕೆ ಅಥವಾ ಕೆಲವು ಜನರ ಹಿತರಕ್ಷಣೆಗೆ ಸೀಮಿತವಾಗಿರುತ್ತವೆ. ಉದಾ : ಕೂಲಿಕಾರರ ಸಂಘ, ಈ ಸಂಘದ ಉದ್ದೇಶವು ಕೇವಲ ಕೂಲಿಕಾರರ ಕಲ್ಯಾಣ ವನ್ನು ಅವರ ಹಿತರಕ್ಷಣೆಯನ್ನು ಪಡೆಯುವುದರ ಸಲುವಾಗಿ

ಮಾತ್ರ ಹೋರಾಡುತ್ತದೆ. ಉಳಿದ ಜನರ ಹಿತರಕ್ಷಣೆಯ ಬಗ್ಗೆ ಅದರ ಗಮನವಿರುವದಿಲ್ಲ.

೭. ರಾಜ್ಯವು ಸಮಾಜದಲ್ಲಿಯ ಸಂಘ ಸಂಸ್ಥೆಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಂಡಿರುವದು. ಯಾವುದೇ ಸಂಘ ಸಂಸ್ಥೆಯ ಚಟುವಟಿಕೆಗಳು ರಾಜ್ಯಕ್ಕೆ ಘಾತಕವೆಂದು ಪರಿಗಣಿಸಿದರೆ ಅಂಥ ಸಂಘವನ್ನು ರಾಜ್ಯವು ಕಾನೂನು ಬಾಹಿರವೆಂದು ಘೋಷಿಸಿ ಅದರ ಚಟುವಟಿಕೆಗಳನ್ನು ನಿಲ್ಲಿಸಬಹುದು. ಉದಾ : ೧೯೯೨ ಡಿಸೆಂಬರ್ ೬ ಅಯೋಧ್ಯೆಯಲ್ಲಿ ಬಾಬ್ರಿ ಮಸೀದೆಯು ಧ್ವಂಸವಾಯಿತು. ಆಗ ಕೇಂದ್ರ ಸರಕಾರವು, ವಿಶ್ವಹಿಂದು ಪರಿಷತ್ ಕಾನೂನುಬಾಹಿರ ಸಂಸ್ಥೆಯಂದು ೨ ವರ್ಷಗಳವರೆಗೆ ಅದರ ಮೇಲೆ ಬಹಿಷ್ಕಾರ ಹಾಕಿತ್ತು.

೮. ಕೆಲವು ಸಂದರ್ಭಗಳಲ್ಲಿ ರಾಜ್ಯವು ಕೆಲವೊಂದು ಸಂಸ್ಥೆಗಳನ್ನು ನಿರ್ಮಿಸಬಹುದು. ವಿಶ್ವವಿದ್ಯಾಲಯಗಳು ಸರಕಾರದ ಕಾನೂನು ಮುಖಾಂತರ ಸ್ಥಾಪಿಸಲ್ಪಟ್ಟಿರುತ್ತವೆ. ಒಟ್ಟಿನ ಮೇಲೆ ಹೇಳುವದಾದರೆ ಇತರ ಸಂಘ ಸಂಸ್ಥೆಗಳು ತಮ್ಮ ಕಾರ್ಯಕಲಾಪಗಳನ್ನು ಮತ್ತು ಇತರ ಚಟುವಟಿಕೆಗಳನ್ನು ರಾಜ್ಯದ ಕಾನೂನುಗಳ ಚೌಕಟ್ಟಿನಲ್ಲಿಯೇ ಸಾಗಿಸಬೇಕು.

ರಾಜ್ಯ ಮತ್ತು ಸಂಘಗಳು ಒಂದಕ್ಕೊಂದು ಪೂರಕವಾಗಿ ಕೆಲಸ ಕಾರ್ಯಗಳನ್ನು ನಿರ್ವಹಿಸಿದಾಗ ಪ್ರಜಾಪ್ರಭುತ್ವವು ಯಶಸ್ವಿಯಾಗಿ ನಡೆಯುವದರಲ್ಲಿ ಸಂದೇಹವಿಲ್ಲ.

## * ರಾಜ್ಯ ಮತ್ತು ನಾಗರಿಕ

ಈಗಿನ ಕಾಲದಲ್ಲಿ ಸ್ವತಂತ್ರ ರಾಜ್ಯದ ಸದಸ್ಯನಿದ್ದು ನಾಗರಿಕ ಹಾಗೂ ರಾಜಕೀಯ ಹಕ್ಕುಗಳನ್ನು ಉಪಭೋಗಿಸುವವ ನಾಗರಿಕ. ಉದಾ:-೧೯೪೭ಕ್ಕಿಂತ ಮೊದಲು ಭಾರತದ ಜನರು ನಾಗರಿಕರಾಗಿರದೇ ಬ್ರಿಟಿಶ್ ಪ್ರಜೆಗಳಾಗಿದ್ದರು. ಅವರಿಗೆ ಯಾವುದೇ ರಾಜಕೀಯ ಹಾಗೂ ನಾಗರಿಕ ಹಕ್ಕುಗಳಿದ್ದಿಲ್ಲ. ಆದರೆ ಭಾರತ ಸ್ವತಂತ್ರವಾದ ಮೇಲೆ ವ್ಯಕ್ತಿಗಳು ಭಾರತದ ನಾಗರಿಕರಾಗಿದ್ದು ಅವರಿಗೆ ರಾಜಕೀಯ ಹಾಗೂ ನಾಗರಿಕ ಹಕ್ಕುಗಳು ಪ್ರಾಪ್ತವಾಗುತ್ತವೆ.ವ್ಯಕ್ತಿಯು ಸಮಾಜದಲ್ಲಿ ವಾಸಿಸುವಂತೆ ರಾಜ್ಯದಲ್ಲಿಯೂ ವಾಸಿಸುತ್ತಾನೆ. ಆದ್ದರಿಂದ ರಾಜ್ಯ ಮತ್ತು ವ್ಯಕ್ತಿಯ ನಡುವಿನ ಸಂಬಂಧವನ್ನು ಅರಿಯುವದು ರಾಜ್ಯಶಾಸ್ತ್ರದ ಮುಖ್ಯ ಸಮಸ್ಯೆಯಾಗಿದೆ.

ಮನುಷ್ಯ ಜೀವನವನ್ನು ಸುಗಮವಾಗಿ, ಸುಖಮಯವಾಗಿ ಮಾಡುವ ಉದ್ದೇಶದಿಂದಲೇ ರಾಜ್ಯವು ಅಸ್ತಿತ್ವಕ್ಕೆ ಬಂದಿರುತ್ತದೆ. ಇಂದಿನ ಕಲ್ಯಾಣ ರಾಜ್ಯವು ವ್ಯಕ್ತಿಯ ಕಲ್ಯಾಣ ಮತ್ತು ಯೋಗಕ್ಷೇಮವನ್ನು ನೋಡಿಕೊಳ್ಳುವ ಹೊಣೆಯನ್ನು ಹೊತ್ತಿರುತ್ತದೆ.

ರಾಜ್ಯ ಮತ್ತು ವ್ಯಕ್ತಿಗಳ ನಡುವಿನ ಸಂಬಂಧ ಯಾವ ತತ್ವದ ಮೇಲೆ ರೂಪಿತ

ವಾಗಿರಬೇಕು ಎಂಬ ಪ್ರಶ್ನೆಗೆ ತೃಪ್ತಿಕರ ಉತ್ತರ ದೊರೆತಿಲ್ಲ. ಒಂದು ಕಡೆಗೆ ವ್ಯಕ್ತಿಗಳು ಹೆಚ್ಚು ಹೆಚ್ಚು ಸ್ವಾತಂತ್ರ್ಯವನ್ನುಅನುಭೋಗಿಸಲು ಇಚ್ಛಿಸಿದರೆ ಮತ್ತೊಂದು ಕಡೆಗೆ ರಾಜ್ಯವು ಹೆಚ್ಚು ಹೆಚ್ಚು ಅಧಿಕಾರವನ್ನು ನಡೆಸಬೇಕೆಂದು ಹಾತೊರೆಯುತ್ತದೆ. ಈ ರೀತಿ ವ್ಯಕ್ತಿ ಸ್ವಾತಂತ್ರ್ಯ ಮತ್ತು ರಾಜ್ಯದ ಅಧಿಕಾರ ಇವುಗಳ ನಡುವೆ ಸಂಬಂಧದ ಹೊಂದಾಣಿಕೆಯನ್ನು ಕಂಡು ಹಿಡಿಯುವದು ಕಠಿಣ ಕಾರ್ಯವಾಗಿದೆ.ಕಾಲ ಕಾಲಕ್ಕೆ ಪರಿಸ್ಥಿತಿಯ ಒತ್ತಡದ ಮೂಲಕ ರಾಜ್ಯ ಮತ್ತು ವ್ಯಕ್ತಿಗಳ ಸಂಬಂಧ ಬದಲಾಗುತ್ತಾ ಬಂದಿದೆ.ಈ ಬದಲಾವಣೆಗಳಾದಂತೆ ಅನೇಕ ಸಿದ್ಧಾಂತಗಳು ತಲೆದೋರಿವೆ.

೧. ವ್ಯಕ್ತಿವಾದ :- ವ್ಯಕ್ತಿ ಸ್ವಾತಂತ್ರ್ಯ ಹೆಚ್ಚು ಇರಬೇಕು.ಮತ್ತು ರಾಜ್ಯಕ್ಕೆ ಕಡಿಮೆ ಅಧಿಕಾರ ವಿರಬೇಕೆಂಬ ತತ್ವವನ್ನು ಈ ವ್ಯಕ್ತಿವಾದ ಪ್ರತಿಪಾದಿಸುತ್ತದೆ.

೨. ಸಮಾಜವಾದ :- ವ್ಯಕ್ತಿಗೆ ಕಡಿಮೆ ಸ್ವಾತಂತ್ರ್ಯವಿರಬೇಕು. ರಾಜ್ಯಕ್ಕೆ ಹೆಚ್ಚು ಅಧಿಕಾರ ವಿರಬೇಕೆಂದು ಈ ಸಿದ್ಧಾಂತವು ಹೇಳುತ್ತದೆ.

೩. ಸಮತಾವಾದ :- ವ್ಯಕ್ತಿಯ ಸ್ವಾತಂತ್ರ್ಯವನ್ನು ಇನ್ನೂ ಕಡಿಮೆ ಮಾಡಿ ರಾಜ್ಯದ ಅಧಿಕಾರವನ್ನು ಪರಮಾವಧಿ ಮಟ್ಟಕ್ಕೆ ತರಬೇಕೆಂದು ಸಮತಾವಾದವು ಪ್ರತಿಪಾದಿಸುತ್ತದೆ.

ಆದರೆ ರಾಜ್ಯ ಮತ್ತು ವ್ಯಕ್ತಿಗಳ ಸಂಬಂಧದಷ್ಟೇ ವ್ಯಕ್ತಿ-ವ್ಯಕ್ತಿಗಳ ಸಂಬಂಧವು ಮುಖ್ಯವಾಗಿದೆ. ಏಕೆಂದರೆ ವ್ಯಕ್ತಿಯ ಒಳ್ಳೆಯ ಜೀವನವು ಇತರರ ಒಳ್ಳೆಯ ಜೀವನವನ್ನು ಅವಲಂಬಿಸಿರುತ್ತದೆ. ಎಲ್ಲರೂ ಒಳ್ಳೆಯ ಜೀವನವನ್ನು ಸಾಗಿಸಬೇಕಾದರೆ ಸಮಾಜದಲ್ಲಿ ಕೆಲವು ನಿಯಮಗಳನ್ನು, ಸಂಪ್ರದಾಯಗಳನ್ನು ಮತ್ತು ಕಟ್ಟಳೆಗಳನ್ನು ಪಾಲಿಸಬೇಕಾಗುವದು. ಪ್ರತಿಯೊಬ್ಬ ವ್ಯಕ್ತಿಯು ಹಕ್ಕುಗಳನ್ನು ಹೇಗೆ ಬಯಸುತ್ತಾನೋ ಹಾಗೆ ತನ್ನ ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಸಮಾಜದಲ್ಲಿ ಸಾಮರಸ್ಯ ಜೀವನವು ಸಾಧ್ಯವಾಗಬೇಕಾದರೆ ರಾಜ್ಯ ಮತ್ತು ವ್ಯಕ್ತಿಗಳ ಸಂಬಂಧವು ಸುವ್ಯವಸ್ಥಿತ ಮತ್ತು ಸುಮಧುರವಾಗಿರಬೇಕು.

ವ್ಯಕ್ತಿಯು ತನ್ನ ಜೀವ ಮತ್ತು ಆಸ್ತಿಯ ರಕ್ಷಣೆ ಹಾಗೂ ತನ್ನ ವ್ಯಕ್ತಿತ್ವದ ಬೆಳವಣಿಗೆಗೆ ರಾಜ್ಯವನ್ನು ಮತ್ತು ಇನ್ನಿತರ ಸಂಘ ಸಂಸ್ಥೆಗಳನ್ನು ಕಟ್ಟಿದನು. ಮದುವೆ ಕುಟುಂಬ, ಧರ್ಮ, ಮನರಂಜನೆಯ ಸಂಘಗಳು ಇವೇ ಮೊದಲಾದ ಸಂಘ ಸಂಸ್ಥೆಗಳನ್ನುವ್ಯಕ್ತಿಯು ನಿರ್ಮಿಸಿದನು.ಹೀಗೆ ವ್ಯಕ್ತಿ ನಿರ್ಮಿಸಿದ ಸಂಘ ಸಂಸ್ಥೆಗಳಲ್ಲಿ ರಾಜ್ಯವು ಅತ್ಯಂತ ಮುಖ್ಯವಾದ ಸಂಸ್ಥೆಯಾಗಿದೆ. ಆರಿಸ್ಟಾಟಲ್‌ರು ಹೇಳಿದಂತೆ ವ್ಯಕ್ತಿ ರಾಜ್ಯವನ್ನು ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಕಟ್ಟಿದನು. ಮತ್ತು ಅಂತಹ ರಾಜ್ಯವು ವ್ಯಕ್ತಿಯ ಕಲ್ಯಾಣವನ್ನು ಸಾಧಿಸಲು ಮುಂದುವರೆಯಿತು. ವ್ಯಕ್ತಿಗೆ ಒಳ್ಳೆಯ

ಜೀವನವನ್ನು ಒದಗಿಸಲು ರಾಜ್ಯವು ಸಹಾಯಕಾರಿಯಾಯಿತು. ರಾಜ್ಯವು ಅನೇಕ ಕಾನೂನುಗಳನ್ನು ರಚಿಸಿತು. ಈ ಕಾನೂನುಗಳಿಗೆ ವಿಧೇಯತೆಯನ್ನು ತೋರಿದಾಗ ಜನರ ಜೀವನವು ಸುಖಮಯವಾಯಿತು. ಈ ರೀತಿ ರಾಜ್ಯ ಮತ್ತು ವ್ಯಕ್ತಿಗಳ ನಡುವೆ ಸಂಬಂಧವಿರುತ್ತದೆ.

ದೇಶದಲ್ಲಿ ವಾಸಿಸುವ ಎಲ್ಲ ವ್ಯಕ್ತಿಗಳು ರಾಜ್ಯದ ಸದಸ್ಯರೇ ಆಗಿರುವರು. ವ್ಯಕ್ತಿಯು ರಾಜ್ಯದ ನಾಗರಿಕನೂ ಹೌದು ಮತ್ತು ಪ್ರಜೆಯೂ ಹೌದು. ವ್ಯಕ್ತಿಗಳು ರಾಜ್ಯದ ನಾಗರಿಕರಾಗಿ ರಾಜ್ಯಕ್ಕೆ ಬೇಕಾಗುವ ಕಾನೂನುಗಳನ್ನು ತಮ್ಮ ಚುನಾಯಿತ ಪ್ರತಿನಿಧಿಗಳ ಮೂಲಕ ರಚಿಸಿಕೊಳ್ಳುತ್ತಾರೆ ಮತ್ತು ರಾಜ್ಯದ ಪ್ರಜೆಗಳಾಗಿ ಪಾಸು ಮಾಡಿದ ಕಾನೂನುಗಳಿಗೆ ವಿಧೇಯತೆಯನ್ನು ತೋರುತ್ತಾರೆ.

ರಾಜ್ಯವು ವ್ಯಕ್ತಿಗೆ ರಾಜಕೀಯ, ಆರ್ಥಿಕ ಮತ್ತು ಮೂಲಭೂತ ಹಕ್ಕುಗಳನ್ನು ಕೊಡುತ್ತದೆ. ಈ ಹಕ್ಕುಗಳ ಮೂಲಕ ವ್ಯಕ್ತಿ ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸಿ-ಕೊಳ್ಳುವನು. ವ್ಯಕ್ತಿಯು ತನ್ನ ಹಕ್ಕುಗಳನ್ನು ಅನುಭವಿಸುವಾಗ ಅವನು ರಾಜ್ಯಕ್ಕೆ ಕೆಲವು ಕರ್ತವ್ಯಗಳನ್ನು ಪರಿಪಾಲಿಸ ಬೇಕಾಗುವದು. ರಾಜ್ಯದ ಮೇಲೆ ಪರಕೀಯರ ದಾಳಿಯಾದಾಗ ಸೈನ್ಯ ಸೇರಿ ರಾಜ್ಯವನ್ನು ರಕ್ಷಿಸುವದು. ಇವೇ ಮೊದಲಾದವು ವ್ಯಕ್ತಿಯ ಕರ್ತವ್ಯಗಳಾಗಿವೆ.

ವ್ಯಕ್ತಿಯ ಕಲ್ಯಾಣವನ್ನು ಸಾಧಿಸುವದೇ ರಾಜ್ಯದ ಗುರಿಯಾಗಿದೆ. ವ್ಯಕ್ತಿಯ ಸರ್ವತೋನ್ಮುಖ ಬೆಳವಣಿಗೆಗೆ ಸಹಾಯವನ್ನು ಸಲ್ಲಿಸುವದು ಅದರ ಕರ್ತವ್ಯವಾಗಿದೆ. ರಾಜ್ಯವು ವ್ಯಕ್ತಿಗಳಿಂದ ತುಂಬಿಕೊಂಡಿದೆ. ವ್ಯಕ್ತಿಯಿಲ್ಲದೇ ರಾಜ್ಯವಿಲ್ಲ. ರಾಜ್ಯ ಮತ್ತು ವ್ಯಕ್ತಿಗಳು ಅನ್ಯೋನ್ಯ ಸಂಬಂಧ ಹೊಂದಿದ್ದಾರೆ.

## ಪ್ರಶ್ನೆಗಳು

ಅ :- ಒಂದು ಅಂಕದ ಪ್ರಶ್ನೆಗಳು. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

೧. ರಾಜ್ಯವೆಂದರೇನು ?

೨. ಪರಮಾಧಿಕಾರವೆಂದರೇನು ?

೩. ಸಂಘ ಎಂದರೇನು ?

೪. ಸಮಾಜ ಎಂದರೇನು ?

೫. ನಾಗರಿಕ ಎಂದರೇನು ?

೬. ಸರಕಾರ ಎಂದರೇನು ?

೭. ರಾಷ್ಟ್ರ ಎಂದರೇನು ?

೮. ಪೌರತ್ವ ಎಂದರೇನು ?

೯. ವಿದೇಶಿಯ ಎಂದರೇನು ?

೧೦. ಪೌರರಲ್ಲಿ ಎಷ್ಟು ಬಗೆ ?

ಆ :- ಎರಡು ಅಂಕದ ಪ್ರಶ್ನೆಗಳು. ೨ -೩ ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೧೧. ರಾಜ್ಯದ ಮೂಲಾಂಶಗಳಾವವು ?

೧೨. ರಾಜ್ಯವನ್ನು ಏಕೆ ಸಾರ್ವಭೌಮ ಸಂಘವೆಂದು ಕರೆಯಲಾಗಿದೆ ?

೧೩. ಯಾವುದಾದರೂ ನಾಲ್ಕು ಸ್ವಯಂಸೇವಾ ಸಂಘಗಳನ್ನು ಹೆಸರಿಸಿರಿ ?

೧೪. ರಾಜ್ಯ ಮತ್ತು ಸರಕಾರದ ನಡುವಿನ ವ್ಯತ್ಯಾಸವನ್ನು ತಿಳಿಸಿರಿ ?

೧೫. ಆಧುನಿಕ ರಾಜ್ಯಗಳ ಪಾತ್ರವನ್ನು ತಿಳಿಸಿರಿ .

೧೬. ರಾಜ್ಯ ಮತ್ತು ವ್ಯಕ್ತಿಗಳ ನಡುವಿನ ಸಂಬಂಧದ ಬಗ್ಗೆ ಬರೆಯಿರಿ ?

೧೭. ರಾಜ್ಯವು ರಾಷ್ಟ್ರದಿಂದ ಹೇಗೆ ಭಿನ್ನವಾಗಿದೆ ಎಂಬುದನ್ನು ವಿವರಿಸಿರಿ ?

೧೮. ಏಕ ರಾಷ್ಟ್ರೀಯ ರಾಜ್ಯ ಅಂದರೇನು ?

೧೯. ಬಹುರಾಷ್ಟ್ರೀಯ ರಾಜ್ಯ ಅಂದರೇನು ?

ಇ.:- ಐದು ಅಂಕದ ಪ್ರಶ್ನೆಗಳು. ೫ - ೧೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೨೦. ರಾಜ್ಯ ಮತ್ತು ಸಮಾಜದ ನಡುವಿನ ವ್ಯತ್ಯಾಸಗಳನ್ನು ತಿಳಿಸಿರಿ ?

೨೧. ರಾಜ್ಯ ಮತ್ತು ಇತರ ಸಂಘ ಸಂಸ್ಥೆಗಳ ನಡುವಿನ ವ್ಯತ್ಯಾಸ ತಿಳಿಸಿರಿ ?

೨೨. ರಾಜ್ಯದ ಸ್ವರೂಪವನ್ನು ಕುರಿತು ಬರೆಯಿರಿ.

೨೩. ಪೌರ ಮತ್ತು ವಿದೇಶಿಯನ ನಡುವಿನ ವ್ಯತ್ಯಾಸಗಳಾವವು ?

೨೪. ದ್ವಿ-ಪೌರತ್ವ ಎಂದರೇನು ?

೨೫. ಕರ್ತವ್ಯಗಳೆಂದರೇನು ?

೨೬. ಆಧುನಿಕ ರಾಜ್ಯದಲ್ಲಿ ಪೌರತ್ವದ ಮಹತ್ವವನ್ನು ತಿಳಿಸಿರಿ ?

೨೭. ಹಕ್ಕು ಮತ್ತು ಕರ್ತವ್ಯಗಳ ನಡುವಿರುವ ವ್ಯತ್ಯಾಸವನ್ನು ತಿಳಿಸಿರಿ ?

ಈ :-ಹತ್ತು ಅಂಕದ ಪ್ರಶ್ನೆಗಳು. ೩೦ - ೪೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೨೮. ರಾಜ್ಯವೆಂದರೇನು ? ಅದರ ಮೂಲಾಂಶಗಳಾವವು ?

೨೯. ನಾಗರಿಕತ್ವ ಎಂದರೇನು ಅದನ್ನು ಪಡೆಯುವ ವಿಧಾನಗಳಾವವು ?

೩೦. ಕರ್ತವ್ಯಗಳೆಂದರೇನು ? ನಾಗರಿಕನ ಕರ್ತವ್ಯಗಳುಯಾವವು ?

☐☐

# ಅಧ್ಯಾಯ ೩

# ರಾಜ್ಯಶಾಸ್ತ್ರದ ಮೂಲಪರಿಕಲ್ಪನೆಗಳು

## ಅ. ಅಧಿಕಾರ

### ✸ ರಾಜಕೀಯ ಅಧಿಕಾರದ ಸ್ವರೂಪ ಮತ್ತು ಮಹತ್ವ

ಅಧಿಕಾರಕ್ಕೆ ಸಂಬಂಧಿಸಿದಂತೆ ರಾಜಕೀಯದ ಅಧ್ಯಯನದಲ್ಲಿನ ಅರ್ಥ ವಿವರಣೆಯ ಪ್ರಯತ್ನವು ರಾಜ್ಯಶಾಸ್ತ್ರದ ಪಿತಾಮಹನಾದ ಅರಿಸ್ಟಾಟಲರಿಂದ ಪ್ರಾರಂಭವಾಯಿತು. ಈತನು ಅಧಿಕಾರದ ಸ್ಥಳೀಕರಣದ ಆಧಾರದ ಮೇಲೆ ಸಂವಿಧಾನಗಳ ವರ್ಗೀಕರಣವನ್ನು ಮಾಡಿದನು. ಈತನ ನಂತರ ಹಾಬ್ಸ್‌ರು ಅಧಿಕಾರ ಪರಿಕಲ್ಪನೆಯನ್ನು ಅಭಿವೃದ್ಧಿ ಪಡಿಸಿದನು. ವ್ಯಕ್ತಿಗಳ ನಡುವಿನ ವಿವಿಧ ರೀತಿಯ ಪೈಪೋಟಿಗೆ ಅಧಿಕಾರ ಲಾಲಸೆಯೇ ಮೂಲಕಾರಣವೆಂದು ಹಾಬ್ಸ್‌ರು ಪ್ರತಿಪಾದಿಸಿದನು. ಈತ **'ಲೇವಿಯಾಥಾನ್'** ಪುಸ್ತಕ ಬರೆದ ಮೇಲೆ ಅಧಿಕಾರವೆಂಬ ಪದ ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಒಂದು ಪ್ರಮುಖವಾದ ವಿಷಯವಾಗಿದೆ. ನಾಗರಿಕ ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಅಧಿಕಾರಕ್ಕಾಗಿ ನಿರಂತರವಾಗಿ ಬೇರೆಯವರ ವಿರುದ್ಧ ಪಟ್ಟುಹಿಡಿದು ಸ್ಪರ್ಧಾತ್ಮಕ ಹೋರಾಟಕ್ಕಾಗಿ ಇಳಿಯುತ್ತಾನೆ.

ನಂತರದ ದಿನಗಳಲ್ಲಿ ಅಧಿಕಾರ ಪರಿಕಲ್ಪನೆಯು **ಹೆಗಲ್**‌ನಿಂದ ವಿಸ್ತರಿಸಲ್ಪಟ್ಟಿತು. ಈತನು ಅಂತರಿಕ ನೀತಿಶಾಸ್ತ್ರದ ನೀತಿಯನ್ನು ತ್ಯಜಿಸುವಷ್ಟರ ಮಟ್ಟಿಗೆ ರಾಜ್ಯದ ಪರಮಾಧಿಕಾರವನ್ನು ಅಪರಿಮಿತಗೊಳಿಸಿದನು. ಹೆಗಲ್‌ನಂತರ ಜರ್ಮನಿಯ ಕೆಲವು ಪ್ರಮುಖ ಬರಹಗಾರರಾದ ನೀಟ್ಸೆ ಟ್ರಾಟಸ್ಕೆ ಮತ್ತು ಬೆರ್ನಹಾರ್ಡಿ ಮುಂತಾದವರು ಅಧಿಕಾರ ಸಿದ್ಧಾಂತವನ್ನು ಉತ್ತಮವಾಗಿ ಪರಿಷ್ಕರಿಸಿದರು. ಆದರೆ ಉಳಿದ ರಾಜಕೀಯ ಚಿಂತಕರು ಅಧಿಕಾರ ಪರಿಕಲ್ಪನೆಯ ಮಹತ್ವದ ಬಗ್ಗೆ ತೀವ್ರವಾದ ಗಮನಹರಿಸಲಿಲ್ಲ.

ಆಧುನಿಕ ರಾಷ್ಟ್ರ-ರಾಜ್ಯಗಳ ಉದಯದೊಡನೆ ರಾಜಕೀಯ ಸಿದ್ಧಾಂತಗಳು ರಾಜಕಾರಣದಲ್ಲಿ ಅಧಿಕಾರದ ಮಹತ್ವವನ್ನು ಪಡೆದುಕೊಂಡವು. ಅಧಿಕಾರದ ಅಧ್ಯಯನ ಮತ್ತು ವಿಶ್ಲೇಷಣೆಯ ಹೊಸಮಟ್ಟವು ಮ್ಯಾಕ್ಸ್‌ವೇಬರ್‌ನಿಂದ ಪ್ರಾರಂಭವಾಯಿತು.

ಉದಾರವಾದಿಗಳು, ಪ್ರಜಾಪ್ರಭುತ್ವವಾದಿಗಳು ಮತ್ತು ಮಾರ್ಕ್ಸ್‌ವಾದಿಗಳು, ಅಧಿಕಾರ ಸಿದ್ಧಾಂತವನ್ನು ದಬ್ಬಾಳಿಕೆ ಮತ್ತು ದೌರ್ಜನ್ಯದ ಸಂಕೇತವೆಂದು ಕಟುವಾಗಿ ಟೀಕಿಸಿದ್ದಾರೆ. ಅವರಲ್ಲಿ ಪ್ರಮುಖರೆಂದರೆ - ಜೆ. ಎಸ್. ಮಿಲ್, ಟಿ. ಎಚ್. ಗ್ರೀನ್, ಬೆಂಥಮ್, ಗಾಂಧೀಜಿ, ಕಾರ್ಲ್‌ಮಾರ್ಕ್ಸ್, ಹೆಚ್. ಜೆ. ಲಾಸ್ಕಿ ಮುಂತಾದವರು. ಮೊಂಟೆಸ್ಕ್ಯೂ ತನ್ನ ಅಧಿಕಾರ ವಿಭಜನಾ ಸಿದ್ಧಾಂತದಲ್ಲಿ ಅಧಿಕಾರದ ಭ್ರಷ್ಟತೆಯನ್ನು ತಡೆಯಲು ತಡೆ ಮತ್ತು ಸಮತೋಲನದ ತತ್ವವನ್ನು ಅಳವಡಿಸಬೇಕು ಎಂದು ಪ್ರತಿಪಾದಿಸಿದ್ದಾನೆ.

ಪ್ರತ್ಯಕ್ಷವಾಗಿಯಾಗಲಿ ಅಥವಾ ಅಪ್ರತ್ಯಕ್ಷವಾಗಿಯಾಗಲೀ ಮಾರ್ಕ್ಸ್‌ವೇಬರನ ಪ್ರಭಾವಕ್ಕೊಳಗಾದ ನಂತರದ ಪಂಡಿತರು ಅಧಿಕಾರದ ಪರಿಮಿತಿಯನ್ನು ವಿಸ್ತಾರಗೊಳಿಸಿದ್ದಾರೆ. ಇತ್ತೀಚೆಗೆ ಅಧಿಕಾರ ಪರಿಕಲ್ಪನೆಯ ಬೆಳವಣಿಗೆಗೆ ಅತ್ಯಮೂಲ್ಯವಾದ ಕೊಡುಗೆಯನ್ನು ಕೊಟ್ಟ ಪ್ರಮುಖ ಪಂಡಿತರೆಂದರೆ ಕ್ಯಾಟಿನ್. ಮೇರಿಯಾನ್ ಮುಂತಾದವರು, ೧೯೪೮ ರಲ್ಲಿ ಪ್ರೊ. ಹ್ಯಾನ್ಸ್‌ಜೆ ಮಾರ್ಗೆಂಥೋ ಅಂತರರಾಷ್ಟ್ರೀಯ ರಾಜಕೀಯಕ್ಕೆ ಅಧಿಕಾರ ಪರಿಕಲ್ಪನೆಯನ್ನು ವಿಸ್ತರಿಸಿಕೊಂಡನು. ೨ನೇ ಮಹಾಯುದ್ಧದ ನಂತರದ ದಿನಗಳಲ್ಲಿ ಅಮೇರಿಕಾ ಮತ್ತು ಇತರ ರಾಷ್ಟ್ರಗಳಲ್ಲಿ ಅಧಿಕಾರ ಪರಿಕಲ್ಪನೆಯು ಬಹುವೇಗವಾಗಿ ಹಬ್ಬಿತು.

ಪವರ ಎಂಬ ಆಂಗ್ಲ ಪದವು ಲ್ಯಾಟಿನ್ ಮತ್ತು ಫ್ರೆಂಚ್ ಭಾಷೆಯ ಮೂಲಪದಗಳಿಂದ ಬಂದಿದೆ.

ಇಂದು ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ, ಮಾನಸಿಕ, ಧಾರ್ಮಿಕ ಮುಂತಾದ ಅನೇಕ ಕ್ಷೇತ್ರಗಳಿರುವುದರಿಂದ ಪವರ್ ಎಂಬುದರ ಅರ್ಥ ವಿವರಣೆಯನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲದಾಗಿದೆ. ರಾಜ್ಯಶಾಸ್ತ್ರಜ್ಞರು ಅಧಿಕಾರ ಪರಿಕಲ್ಪನೆಯನ್ನು ವಿವಿಧ ದೃಷ್ಟಿಕೋನಗಳಲ್ಲಿ ಅರ್ಥೈಸಿರುವುದರಿಂದ ಇದರ ಬಗ್ಗೆ ನಿರ್ದಿಷ್ಟ ವ್ಯಾಖ್ಯೆಯನ್ನು ಕೊಡುವುದು ಕಷ್ಟಕರ ಕೆಲಸವಾಗಿದೆ. ಅಧಿಕಾರ ಎಂಬುದನ್ನು ವಿವಿಧ ಸಂದರ್ಭಗಳಲ್ಲಿ ವಿವಿಧ ಅರ್ಥಗಳಲ್ಲಿ ಬಳಸಬಹುದಾಗಿದೆ. ಉದಾ : ಕುದುರೆ ಸಾಮರ್ಥ್ಯ, ಕಲ್ಪನಾ ಸಾಮರ್ಥ್ಯ, ಕಾರ್ಯ ನಿರ್ವಹಣಾ ಸಾಮರ್ಥ್ಯ, ಬುದ್ಧಿಶಕ್ತಿ, ಸೈನಿಕ ಸಾಮರ್ಥ್ಯ ಇದಾಗಿದೆ. ರಾಜಕೀಯ ಸಿದ್ಧಾಂತದಲ್ಲಿ ಪವರ್‌ಎಂಬ ಅಭಿಪ್ರಾಯವು ಪ್ರಮುಖ ಅಧ್ಯಯನ ವಿಷಯವಾಗಿದೆ.

ಒಂದು ನಿರ್ದಿಷ್ಟ ಗುರಿ ಸಾಧನೆಗೋಸ್ಕರ ಜನರ ನಡವಳಿಕೆಯನ್ನು ನಿಯಂತ್ರಿಸುವ, ಆಜ್ಞಾನುಸಾರ ನಡೆದುಕೊಳ್ಳುವವರನ್ನು ರಕ್ಷಿಸಬಹುದಾದ ಪರಿಸ್ಥಿತಿಯೇ ಅಧಿಕಾರ. ಉದಾ :- ಭಾರತದಲ್ಲಿ ಪ್ರಧಾನಮಂತ್ರಿ ಮತ್ತು ಇತರ ಮಂತ್ರಿಗಳು ತಮ್ಮ ತೀರ್ಮಾನಗಳಿಂದ ಜನರನ್ನು ನಿಯಂತ್ರಿಸುವ ಅಧಿಕಾರವನ್ನು

ಹೊಂದಿದ್ದಾರೆ. ತೀರ್ಮಾನ ತೆಗೆದುಕೊಳ್ಳಬಹುದಾದ ವಿಷಯವೇ ಅಧಿಕಾರ. ರಾಜಕೀಯ ಅಧಿಕಾರವೆಂದರೆ ಬೇರೆಯವರ ನಡವಳಿಕೆಯನ್ನು ಯಾವುದಾದರೂ ವಿಧವಾದ ಅಧಿಕಾರ ಮುದ್ರೆಯ ಭಯದಿಂದ ನಿಯಂತ್ರಿಸುವದು. ಅಧಿಕಾರ ಮುದ್ರೆ ಹೆಚ್ಚಿಗೆಯಾದಂತೆಲ್ಲಾ ರಾಜಕೀಯ ಸಾಮರ್ಥ್ಯದ ಪ್ರಮಾಣ ಹೆಚ್ಚಿಗೆಯಾಗುತ್ತದೆ. Power ಒಂದು ಸ್ಪರ್ಧೆಯಲ್ಲಿ ಗೆಲ್ಲುವ ಸಾಮರ್ಥ್ಯ ಬೇರೆಯವರ ಅಭಿಪ್ರಾಯ ಮತ್ತು ಕಾರ್ಯಗಳು ತನ್ನ ಇಚ್ಛೆಯ ಪ್ರಕಾರ ನಡೆಯುವಂತೆ ಮಾಡುವ ಸಾಮರ್ಥ್ಯವೇ 'ಪವರ್' ಎಂಬ ಪದದ ಬಳಕೆಯ ತಿರುಳು. ಮೋಸ, ಯುಕ್ತಿ, ಗುಂಪಿನ ತಂತ್ರಗಾರಿಕೆ ಮುಂತಾದ ಅಂಶಗಳನ್ನು ಅಧಿಕಾರ ಆಧಾರವನ್ನಾಗಿ ಹೊಂದಿರಬಹುದು. ವ್ಯವಸ್ಥಿತವಾದ ಸಂವಿಧಾನ ಮತ್ತು ಕಾನೂನು ವ್ಯವಸ್ಥೆಗಳಿಂದಲೂ ಅಧಿಕಾರವನ್ನು ಪಡೆದುಕೊಳ್ಳಬಹುದು.

ಅಧಿಕಾರ ,ರಾಜಕೀಯ ಅಧಿಕಾರದ ಕೇಂದ್ರವಸ್ತು,ರಾಜಕೀಯ ಅಧಿಕಾರಕ್ಕಾಗಿ ನಡೆಸುವ ಹೋರಾಟ ಆದ್ದರಿಂದ ರಾಜಕೀಯದಿಂದ ಈ ಅಧಿಕಾರವನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಅಧಿಕಾರ ಇಲ್ಲದಿದ್ದರೆ ಯಾವ ರಾಜ್ಯ ವ್ಯವಸ್ಥೆಯು ಕೆಲಸ ಮಾಡಲು ಸಾಧ್ಯವಿಲ್ಲವಾದ್ದರಿಂದ ಪ್ರತಿಯೊಂದು ರಾಜ್ಯವು ಅಧಿಕಾರವನ್ನು ಹೊಂದಿರುತ್ತದೆ. ಈ ರಾಜಕೀಯ ಅಧಿಕಾರ ಕೆಲವು ವ್ಯಕ್ತಿಗಳ ಕೈಯಲ್ಲಿ ಕೇಂದ್ರೀಕೃತವಾಗಿರಬಹುದು. ರಾಜಕೀಯ ಸಂಬಂಧಗಳು ಶಾಸನಬದ್ಧಾಧಿಕಾರ ಸಂಬಂಧಗಳು ಆಗಿರುತ್ತವೆ. ಆದ್ದರಿಂದ ಶಾಸನಬದ್ಧಾಧಿಕಾರ ರಾಜ್ಯದ ಮುಖ್ಯ ವಸ್ತುವಾಗಿದೆ. ಅಧಿಕಾರದ ಚಲಾವಣೆ ಶಾಸನದ ಬೆಂಬಲವನ್ನು ಹೊಂದಿರಬೇಕು.

ಅಧಿಕಾರದ ವ್ಯಾಖ್ಯಾನ ಸುಲಭ ಸಾಧ್ಯವಲ್ಲದಿದ್ದರೂ ಅನೇಕ ರಾಜ್ಯಶಾಸ್ತ್ರಜ್ಞರು ಇದರ ವ್ಯಾಖ್ಯಾನ ನೀಡಿದ್ದಾರೆ. **ಆರ್.ಎಚ್.ಟಾನೆ** ''ಒಬ್ಬನು ಇಚ್ಛಿಸುವಂತೆ ಇತರರ ವರ್ತನೆಯನ್ನು ಪರಿವರ್ತಿಸುವಂತಹ ವ್ಯಕ್ತಿಯೊಬ್ಬನ ಅಥವಾ ವ್ಯಕ್ತಿಗಳ ಸಮೂಹದ ಸಾಮರ್ಥ್ಯವೇ ಅಧಿಕಾರ ''ಎಂದಿದ್ದಾನೆ.

**ಮ್ಯಾಕ್ಸವೇಬರ** ''ಒಬ್ಬ ನಟನು ಒಂದು ಸಾಮಾಜಿಕ ಸಂಬಂಧಗಳೊಳಗೆ ಪ್ರತಿರೋಧವಿದ್ದರೂ ತನ್ನ ಇಚ್ಛೆಯನ್ನು ಜಾರಿಗೆ ತರುವಂತಹ ಸ್ಥಿತಿಯಲ್ಲಿರುತ್ತಾನೆ. ಇದೇ ಅಧಿಕಾರ'' ಎಂದುಅರ್ಥೈಸಿದ್ದಾನೆ.

**ಡೇವಿಡ್ ಈಸ್ಟನ್** ''ಒಬ್ಬ ವ್ಯಕ್ತಿ ಮತ್ತು ವ್ಯಕ್ತಿಗಳ ಗುಂಪೊಂದು ಮತ್ತೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ಗುಂಪಿನ ಮೇಲೆ ತನ್ನ ಉದ್ದೇಶ ಸಾಧನೆಗಾಗಿ ನಿರ್ದೇಶನ ನೀಡುವ ಕ್ರಿಯಾತ್ಮಕ ಚಟುವಟಿಕೆಯೇ ಅಧಿಕಾರ'' ಎಂದಿದ್ದಾನೆ.

**ಪ್ರೊ.ಹಾನ್ಸ್‌ಜೆ ಮಾರ್ಗೆಂಥೋ** ಇವರ ಪ್ರಕಾರ ''ವ್ಯಕ್ತಿಗಳ ಮನಸ್ಸು ಮತ್ತು ಕ್ರಿಯೆಗಳ ಮೇಲೆ ಒಬ್ಬ ವ್ಯಕ್ತಿಯು ಹೊಂದಿರುವ ಸಾಮರ್ಥ್ಯವೇ ಅಧಿಕಾರ.''

ಹರ್ಬರ್ಟ್ ಗೋಲ್ಡ್‌ಹ್ಯಾಮರ್ ಹಾಗೂ ಎಡ್ವರ್ಡ್ ಶಿಲ್ಸ್ "ತನ್ನ ಇಚ್ಛೆಯ ಪ್ರಕಾರ ಬೇರೆಯವರು ನಡೆದುಕೊಳ್ಳುವಂತೆ ಮಾಡುವ ಸಾಮರ್ಥ್ಯವೇ ಅಧಿಕಾರ." ಎಂದಿದ್ದಾರೆ.

ಕೆಲವರು ಅಧಿಕಾರ ಎಂದರೆ ಒಬ್ಬ ವ್ಯಕ್ತಿಯು ತನ್ನ ಇಚ್ಛಾಶಕ್ತಿಯನ್ನು ಇನ್ನೊಬ್ಬ ವ್ಯಕ್ತಿಯ ಇಚ್ಛಾಶಕ್ತಿಯ ವಿರುದ್ಧವಾಗಿ ಹೇರುವ ಶಕ್ತಿ ಎಂದಿದ್ದಾರೆ ಮತ್ತು ಕೆಲವರು ಬಲಾಢ್ಯರು ತನ್ನ ಇಚ್ಛೆಯನ್ನು ಬಲಾತ್ಕಾರವಾಗಿ ಸಾರ್ವಜನಿಕ ಒಳಿತಿಗಾಗಿ ಬೇರೆಯವರ ಮೇಲೆ ಹೇರುವ ಶಕ್ತಿ ಎಂದಿದ್ದಾರೆ. ಸರಳವಾಗಿ ಹೇಳುವುದಾದರೆ ಅಧಿಕಾರವನ್ನು ಒಬ್ಬ ವ್ಯಕ್ತಿಯು ಇತರರ ಮೇಲೆ ಹೊಂದಿರುವ ನಿಯಂತ್ರಣ ಶಕ್ತಿ, ಪ್ರಭಾವ, ಅಧಿಪತ್ಯ, ಮನವೊಲಿಸುವಿಕೆ, ಶಾಸನಬದ್ಧ ಅಧಿಕಾರ ಎಂಬುದಾಗಿ ಅರ್ಥೈಸಲಾಗಿದೆ.

### ✸ ರಾಜಕೀಯ ಅಧಿಕಾರದ ಗುಣಲಕ್ಷಣಗಳು

**೧. ಬೇರೆಯವರ ವರ್ತನೆಯ ಮೇಲೆ ಪ್ರಭಾವ ಬೀರುವ ಸಾಮರ್ಥ್ಯದ ಇರುವಿಕೆ:-** ಬೇರೆಯವರ ವರ್ತನೆ, ಕಾರ್ಯ ಚಟುವಟಿಕೆಗಳು ಮತ್ತು ನೀತಿ ಧೋರಣೆಗಳ ಮೇಲೆ ಪ್ರಭಾವ ಬೀರುವ ಸಾಮರ್ಥ್ಯದ ಇರುವಿಕೆಯೇ ಅಧಿಕಾರದ ಮುಖ್ಯ ಲಕ್ಷಣವಾಗಿದೆ. ಈ ರೀತಿಯ ಸಾಮರ್ಥ್ಯ ಮತ್ತು ಯೋಗ್ಯತೆ ಇಲ್ಲದಿದ್ದರೆ ಅಧಿಕಾರವಿರಲು ಸಾಧ್ಯವಿಲ್ಲ. ಸಾಮರ್ಥ್ಯ, ಬೌದ್ಧಿಕ ಸಾಮರ್ಥ್ಯ, ವೈಯಕ್ತಿಕ ಸಾಮರ್ಥ್ಯ ಎಂಬ ನಾನಾವಿಧದ ಸಾಮರ್ಥ್ಯವನ್ನು ಉಪಯೋಗಿಸಿಕೊಂಡು ವ್ಯಕ್ತಿಯು ತನ್ನ ಇಚ್ಛೆಯಂತೆ ಕೆಲಸಗಳನ್ನು ಬೇರೆಯವರಿಂದ ಮಾಡಿಸಿಕೊಳ್ಳುತ್ತಾನೆ.

**೨. ಅಧಿಕಾರವು ಒಂದು ನಿರ್ದಿಷ್ಟ ರೀತಿಯ ಮಾನವ ಸಂಬಂಧ :- ಕಾರ್ಲ್. ಜೆ. ಫ್ರೆಡರಿಕ್‌**ರವರ ಪ್ರಕಾರ ಅಧಿಕಾರವು ಒಂದು ನಿರ್ದಿಷ್ಟ ರೀತಿಯ ಮಾನವ ಸಂಬಂಧವಾಗಿದೆ. ಪ್ರಭಾವ ಬೀರುವ ವ್ಯಕ್ತಿಯೊಬ್ಬ ಮತ್ತು ಪ್ರಭಾವಕ್ಕೊಳಗಾಗುವ ವ್ಯಕ್ತಿಯೊಬ್ಬ ಹೀಗೆ ಎರಡು ವ್ಯಕ್ತಿಗಳಿದ್ದಾಗ ಮಾತ್ರ ಒಬ್ಬ ನಟನು ಬೇರೊಬ್ಬ ನಟನ ಮೇಲೆ ತನ್ನ ಪ್ರಭಾವ ಬೀರಬಲ್ಲನು. ಪ್ರಭಾವ ಬೀರುವ ಮತ್ತು ಪ್ರಭಾವಕ್ಕೊಳಗಾಗುವ ವ್ಯಕ್ತಿಗಳಿಲ್ಲದಿದ್ದರೆ ಅಧಿಕಾರವಿರಲಾರದು. ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಯ ಮೇಲೆ ಪ್ರಭಾವ ಬೀರುವುದರಿಂದ ಅವರಲ್ಲಿ ನಿರ್ದಿಷ್ಟ ರೀತಿಯ ಮಾನವ ಸಂಬಂಧವೇರ್ಪಡುತ್ತದೆ.

**೩. ಅಧಿಕಾರವು ಅದರ ಉಪಯೋಗದ ಮೇಲೆ ಅವಲಂಬಿಸಿರುತ್ತದೆ:-** ಅಧಿಕಾರದ ಮತ್ತೊಂದು ಲಕ್ಷಣವೆಂದರೆ ಅವಲಂಬನೆ. ಅಧಿಕಾರದ ಅಸ್ತಿತ್ವವು ಅದರ ಉಪಯೋಗವನ್ನು ಅವಲಂಬಿಸಿದೆ. ವ್ಯಕ್ತಿಯೊಬ್ಬನು ವಾಸ್ತವವಾಗಿ ತನ್ನ ಅಧಿಕಾರವನ್ನು ಪ್ರಯೋಗಿಸುತ್ತಾನೋ ಆತನು ಶಕ್ತಿಶಾಲಿ ಎಂದು ಪರಿಗಣಿಸಲ್ಪಡುತ್ತಾನೆ. ಉದಾ:

ಭಾರತದ ರಾಷ್ಟ್ರಪತಿಯು ಸಂವಿಧಾನಾತ್ಮಕವಾಗಿ ಹೆಚ್ಚು ಅಧಿಕಾರವನ್ನು ಹೊಂದಿದ್ದಾನೆ. ಆದರೆ ವಾಸ್ತವವಾಗಿ ಮಂತ್ರಿಮಂಡಲದ ಸಲಹೆ ಪಡೆದ ನಂತರ ರಾಷ್ಟ್ರಪತಿಯು ಅಧಿಕಾರವನ್ನು ಚಲಾಯಿಸಬೇಕು. ಆದರೆ ಅಮೇರಿಕಾದಲ್ಲಿ ಅಧ್ಯಕ್ಷನು ನೈಜ ಅಧಿಕಾರವನ್ನು ಚಲಾಯಿಸುತ್ತಾನೆ ಮತ್ತು ಶಕ್ತಿಶಾಲಿಯಾಗಿದ್ದಾನೆ.

**೪. ಅಧಿಕಾರ ಪರಿಕಲ್ಪನೆಯು ಉಗ್ರಹಾನಿ ಕಲ್ಪನೆಗೆ ಒಳ ಪಡುತ್ತದೆ :-** ಜಾರ್ಜ್ ಸವರ್ಜನ್ ಬರ್ಗರ್ ಹಾಗೂ ರಾಬರ್ಟ್ ದಾಲ್‌ರ ಮತ್ತು ಇತರ ಬರಹಗಾರರ ಪ್ರಕಾರ ಅಧಿಕಾರ ಪರಿಕಲ್ಪನೆಯು ಉಗ್ರಹಾನಿ ಪರಿಕಲ್ಪನೆಗೆ ಒಳಪಡುತ್ತದೆ. ಅಧಿಕಾರವು ಮಂಜೂರಾತಿಯ ಬೆಂಬಲವನ್ನು ಪಡೆದಿರಬೇಕು. ಒಬ್ಬ ವ್ಯಕ್ತಿಯು ಬೇರೆಯವರಿಂದ ಬಲವಂತವಾಗಿ ಕೆಲಸವನ್ನು ಪಡೆಯಲು ಅಧಿಕಾರದ ಅವಶ್ಯಕತೆಯಿದೆ. ಅಧಿಕಾರಿಯ ಆಜ್ಞೆಯನ್ನು ಪಾಲಿಸದಿದ್ದವನು ಉಗ್ರಹಾನಿಗೆ ಒಳ ಪಡಬೇಕಾಗುತ್ತದೆ. ಉದಾ : ಕೈಗಾರಿಕಾ ಮಾಲಕನು ತನ್ನ ಕೆಲಸಗಾರನಿಗೆ ಒಂದು ಕೆಲಸವನ್ನು ನಿರ್ದಿಷ್ಟ ಅವಧಿಯೊಳಗೆ ಮುಕ್ತಾಯಗೊಳಿಸಲು ನೀಡಿದ ಆಜ್ಞೆಯನ್ನು ತಿರಸ್ಕರಿಸಿದರೆ ಮಾಲಿಕನು ಕಾರ್ಮಿಕನ ಆ ದಿನದ ಕೂಲಿಯನ್ನು ಕಟಾಯಿಸುವ, ಆತನನ್ನು ಕೆಲಸದಿಂದ ವಜಾ ಮಾಡುವ ಅಥವಾ ಯಾವ ಕ್ರಮವನ್ನಾದರೂ ಜಾರಿಗೊಳಿಸುವ ಅಧಿಕಾರವನ್ನು ಹೊಂದಿಲ್ಲದಿದ್ದರೆ ಆತನಿಗೆ ಅಧಿಕಾರವಿಲ್ಲ ಎಂದರ್ಥವಾಗುತ್ತದೆ.

**೫. ಅಧಿಕಾರವು ಪರಿಸ್ಥಿತಿಗನುಗುಣವಾದುದು :-** ಅಧಿಕಾರವು ಸಂದರ್ಭ ಮತ್ತು ಅಂತಸ್ತನ್ನು ಅವಲಂಬಿಸಿರುತ್ತದೆ. ಉದಾ : ಒಂದು ಕಾಲೇಜಿನ ಪ್ರಾಂಶುಪಾಲರು ಒಬ್ಬ ವಿದ್ಯಾರ್ಥಿಯು ತನ್ನ ಕಾಲೇಜಿನ ವಿದ್ಯಾರ್ಥಿಯಾಗಿರುವತನಕ ತನ್ನ ಅಧಿಕಾರವನ್ನು ಚಲಾಯಿಸುತ್ತಾರೆ. ಅದೇ ರೀತಿ ಪ್ರಾಂಶುಪಾಲರ ಅಧಿಕಾರವು ಆತನ ನಿವೃತ್ತಿಯೊಡನೆ ಅಂತ್ಯವಾಗುತ್ತದೆ. ಆದ್ದರಿಂದ ಅಧಿಕಾರವು ಸಂದರ್ಭ ಮತ್ತು ಅಧಿಕಾರವನ್ನು ಅವಲಂಬಿಸಿರುತ್ತದೆ.

**೬. ಅಧಿಕಾರ ಪ್ರಯೋಗವು ಕೆಲವು ಉದ್ದೇಶಗಳಿಗಾಗಿ ಇರಬೇಕು :-** ಅಧಿಕಾರದ ಮತ್ತೊಂದು ಲಕ್ಷಣವೆಂದರೆ ಅಧಿಕಾರವು ಕೆಲವು ಉದ್ದೇಶ ಸಾಧನೆಗಾಗಿ ಪ್ರಯೋಗಿಸಲ್ಪಡಬೇಕು. ಯಾವ ಉದ್ದೇಶವಿಲ್ಲದೆ ಪ್ರಯೋಗಿಸಲ್ಪಟ್ಟಿದ್ದರೆ ಅಂತಹ ಅಧಿಕಾರವು ಅರ್ಥಹೀನವಾಗುತ್ತದೆ.

೭. ಅಧಿಕಾರವು ಸಂಬಂಧಯುತವಾದುದು :- ಅಧಿಕಾರವು ಆಸ್ತಿಯಲ್ಲ. ಇದು ನಿರಂತರ ಸಂಬಂಧಯುತವಾದುದು. ಈ ಸಂಬಂಧವಾದವನ್ನು ಸ್ಥಾಪಿಸುವದಕ್ಕಾಗಿ ಕೊನೆಪಕ್ಷ ಇಬ್ಬರ ಅವಶ್ಯಕತೆಯಿದೆ.

೮. ಅಧಿಕಾರವು ಸಂಬಂಧಿ ಪರಿಕಲ್ಪನೆಯಾಗಿದೆ :- ಅಧಿಕಾರವು ಒಂದು ಸಂಬಂಧಿ ಪರಿಕಲ್ಪನೆಯಾಗಿದೆ. ಅಧಿಕಾರವು ನಾನಾ ಮೂಲಾಂಶಗಳನ್ನು ಹೊಂದಿದೆ. ಅಧಿಕಾರವು

ವಿರೋಧವಾಗಿ ಕೆಲಸ ಮಾಡುತ್ತಿರುವ ವ್ಯಕ್ತಿಗಳ ಸಂಖ್ಯೆಯನ್ನು ಅವಲಂಬಿಸುತ್ತದೆ. ಒಬ್ಬ ವ್ಯಕ್ತಿಯು ಅಥವಾ ವ್ಯಕ್ತಿಗಳ ಗುಂಪಿನ ಅಧಿಕಾರವು ಬೇರೊಬ್ಬ ವ್ಯಕ್ತಿಯ ಅಥವಾ ವ್ಯಕ್ತಿಗಳ ಗುಂಪಿನ ಅಧಿಕಾರದ ಪ್ರಭಾವಕ್ಕೊಳಗಾಗುತ್ತದೆ. ಅಧಿಕಾರವು ಸಮಯವನ್ನು ಅವಲಂಬಿಸಿದೆ. ಉದಾ :- ೧೯೭೭ರ ಹಿಂದೆ ಅಂದಿನ ಪ್ರಧಾನಿ ದಿ. ಶ್ರೀಮತಿ ಇಂದಿರಾ ಗಾಂಧಿಯವರು ಬಹಳ ಪ್ರಬಲವಾಗಿದ್ದರು. ನಂತರದ ಲೋಕಸಭಾ ಚುನಾವಣೆಯಲ್ಲಿ ಭಾರೀ ಸೋಲನ್ನು ಅನುಭವಿಸಿದರು.

೯. **ಅಧಿಕಾರವು ನೈಜ ಮತ್ತು ಸಂಭವನೀಯ ಸ್ವರೂಪಗಳನ್ನು ಹೊಂದಿದೆ :-** ವ್ಯಕ್ತಿಯ ಅಧಿಕಾರವು ನೈಜ ಮತ್ತು ಸಂಭವನೀಯ ಸ್ವರೂಪಗಳನ್ನು ಹೊಂದಿದೆ. ಒಬ್ಬ ವ್ಯಕ್ತಿಯ ಅಥವಾ ವ್ಯಕ್ತಿಗಳ ಗುಂಪು ನಿಜವಾಗಿ ಪ್ರಯೋಗಿಸುವ ಅಧಿಕಾರವೇ ನೈಜ ಅಧಿಕಾರ. ಈ ಅಧಿಕಾರವನ್ನು ವ್ಯಕ್ತಿಯು ಪ್ರಯೋಗಿಸುತ್ತಾನೆ. ಒಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ಗುಂಪು ಆ ಸಂದರ್ಭದಲ್ಲಿ ಅಧಿಕಾರವನ್ನು ಉಪಯೋಗಿಸದಿದ್ದರೂ ಅವರು ಹೊಂದಿರುವ ಅಧಿಕಾರವನ್ನು ಸಂಭವನೀಯ ಅಧಿಕಾರ ಎನ್ನುತ್ತಾರೆ.

**ಅಧಿಕಾರದ ಮೂಲಗಳು :-** ಅಧಿಕಾರ ಪರಿಕಲ್ಪನೆಯು ಬಹಳ ವಿಶಾಲವಾದುದು. ಈ ಪರಿಕಲ್ಪನೆಯ ಸ್ವರೂಪತೆ ನಮ್ಮ ಅಧ್ಯಯನದ ವಸ್ತು ವಿಶೇಷವಾಗಿದೆ. ಅಧಿಕಾರದ ಮೂಲಗಳನ್ನು ಅಧ್ಯಯನ ಮಾಡುವುದರಿಂದ ಇದರ ರಾಜಕೀಯ ಸ್ವರೂಪಗಳನ್ನು ಸ್ಪಷ್ಟವಾಗಿ ತಿಳಿಯಬಹುದು.

ಅಧಿಕಾರದ ಮೂಲಗಳು ಕೆಳಗಿನಂತಿವೆ :

೧. ಜ್ಞಾನ : ಮಾನವನ ಜ್ಞಾನಶಕ್ತಿಯು ಅಧಿಕಾರದ ಒಂದು ಬಹು ಮುಖ್ಯವಾದ ಮೂಲವಾಗಿದೆ. ವ್ಯಕ್ತಿಯು ತನ್ನ ಜ್ಞಾನಶಕ್ತಿಯ ಸಹಾಯದಿಂದ ತನ್ನ ಸಾಮರ್ಥ್ಯವನ್ನು ಬೆಳೆಸಿಕೊಳ್ಳುವುದರ ಮೂಲಕ ಅಧಿಕಾರವನ್ನು ಪಡೆಯುವದಲ್ಲದೆ ಪಡೆದ ಅಧಿಕಾರವನ್ನು ಬಳಸಿಕೊಂಡು ಉನ್ನತ ಸ್ಥಾನವನ್ನು ಏರುತ್ತಾನೆ.

೨. ಸಂಘಟನೆ : ಸಂಘಟನೆಯು ಅಧಿಕಾರದ ಮತ್ತೊಂದು ಪ್ರಮುಖ ಮೂಲವಾಗಿದೆ. ಜನಪ್ರಿಯ ನಾಣ್ಣುಡಿಯಾದ 'ಒಗ್ಗಟ್ಟಿನಲ್ಲಿ ಬಲವಿದೆ' ಎಂಬುದರಲ್ಲಿ ಬಹಳ ಸತ್ಯವಿದೆ. ಸಂಘಟನೆಯೇ ಒಂದು ಅಧಿಕಾರ. ಜನರು ತಾವಾಗಿಯೇ ಸಂಘಟಿತರಾಗಿ ಶಿಸ್ತಿನಿಂದ ಕಾರ್ಯನಿರ್ವಹಿಸಿದರೆ ಆ ಸಂಘಟನೆಯ ಅಧಿಕಾರವು ವೃದ್ಧಿಯಾಗುತ್ತದೆ. ಪ್ರಜಾಪ್ರಭುತ್ವದಲ್ಲಿ ರಾಜಕೀಯ ಪಕ್ಷಗಳು ಅಧಿಕಾರವನ್ನು ಪಡೆಯಲು ಸಂಘಟಿತವಾಗುತ್ತವೆ. ಉತ್ತಮವಾಗಿ ಸಂಘಟಿತವಾದ ಪಕ್ಷಗಳು ಸುಲಭವಾಗಿ ಅಧಿಕಾರವನ್ನು ಪಡೆಯುತ್ತವೆ ಹಾಗೂ ಅಂತಹ ಸಂಘಟನೆಯ ನಾಯಕರು ಬಹಳ ಶಕ್ತಿಶಾಲಿಗಳಾಗಿರುತ್ತಾರೆ. ಉದಾ : ೧೯೭೪ರ ಫೆಬ್ರುವರಿಯಲ್ಲಿ ಕಾರ್ಮಿಕ ಸಂಘಟನೆಯ

ಚಳುವಳಿಯ ಬೆದರಿಕೆಯನ್ನು ಒಡ್ಡಿದ್ದರಿಂದ ಬ್ರಿಟನ್ನಿನ ಅಂದಿನ ಪ್ರಧಾನಿ ಎಡ್ವರ್ಡ್ ಹೀತ್ ಸಾಮಾನ್ಯರ ಸಭೆಯನ್ನು ವಿಸರ್ಜಿಸಿ ಮಧ್ಯಂತರ ಚುನಾವಣೆಯನ್ನು ಘೋಷಿಸಿದರು.

೩. ಸಾಮಾಜಿಕ ಅಂತಸ್ತು : ವ್ಯಕ್ತಿಯ ಸಾಮಾಜಿಕ ಅಂತಸ್ತು ಮತ್ತು ಸ್ಥಿತಿಗತಿಯು ಅಧಿಕಾರದ ಇನ್ನೊಂದು ಮೂಲವಾಗಿದೆ. ಸಮಾಜದಲ್ಲಿ ಹೆಚ್ಚಿನ ಅಂತಸ್ತಿರುವ ವ್ಯಕ್ತಿಯು ಕಡಿಮೆ ಅಂತಸ್ತಿನ ವ್ಯಕ್ತಿಗಿಂತ ಹೆಚ್ಚು ಅಧಿಕಾರವನ್ನು ಪಡೆಯುತ್ತಾನೆ. ಅದನ್ನೇ ಸಾಮಾಜಿಕ ಅಧಿಕಾರ ಎಂದು ಕರೆಯುತ್ತಾರೆ.

೪. ಆರ್ಥಿಕ ಅಂತಸ್ತು :- ಉತ್ತಮ ಆರ್ಥಿಕ ಅಂತಸ್ತು ಮತ್ತು ಹಣ ಬಲವು ಅಧಿಕಾರದ ಇನ್ನೊಂದು ಮೂಲವಾಗಿದೆ. ಶ್ರೀಮಂತರು ಅಧಿಕ ಹಣವನ್ನು ಖರ್ಚುಮಾಡಿ ಮೇಲ್ದರ್ಜೆಯ ಅಧಿಕಾರಿಗಳ ಮೇಲೆ ಒತ್ತಡ ಹೇರುವದರಿಂದ ಮತ್ತು ಸಾಮಾನ್ಯರನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವುದರ ಮೂಲಕ ಪ್ರಜಾಪ್ರಭುತ್ವದಲ್ಲಿ ಚುನಾವಣೆಯಲ್ಲಿ ಜಯಶೀಲರಾಗಿ ಅಧಿಕಾರ ಗದ್ದುಗೆ ಏರುತ್ತಾರೆ.

೫. ಗಾತ್ರ :-ಕೆಲವು ಸಂದರ್ಭಗಳಲ್ಲಿ ಗಾತ್ರವು ಕೂಡಾ ಅಧಿಕಾರದ ಮೂಲವಾಗಿ ಪರಿಗಣಿಸಲ್ಪಟ್ಟಿದೆ. ಗಾತ್ರವು ಎಲ್ಲಾ ಸಂದರ್ಭಗಳಲ್ಲಿ ಅಧಿಕಾರದ ಮೂಲವೆಂದು ಹೇಳುವದು ನಿಜವಲ್ಲ. ಕೇವಲ ಕೆಲವು ಸಂದರ್ಭಗಳಲ್ಲಿ ಮಾತ್ರ ದೊಡ್ಡ ಗಾತ್ರವು ಅಧಿಕಾರದ ಮೂಲವಾಗುತ್ತದೆ. ಉದಾ :- ತೆಳುವಾದ ಶರೀರವನ್ನು ಹೊಂದಿದ ಮಹಾತ್ಮಾ ಗಾಂಧೀಜಿಯವರು ಬೃಹತ್ ಸ್ವರೂಪದ ಬ್ರಿಟೀಶ್ ಸಾಮ್ರಾಜ್ಯವನ್ನೇ ತಮ್ಮ ಅಹಿಂಸೆ ಮತ್ತು ಆಧ್ಯಾತ್ಮಿಕ ಶಕ್ತಿಯಿಂದ ಅಲುಗಾಡಿಸಿ ಸ್ವಾತಂತ್ರ್ಯವನ್ನು ಪಡೆದರು. ಬ್ರಿಟನ್ ಚಿಕ್ಕ ರಾಷ್ಟ್ರವಾದರೂ ಶಕ್ತಿಶಾಲಿ ರಾಷ್ಟ್ರವಾಗಿ ಹೊರ ಹೊಮ್ಮಿತ್ತು. ಆದರೆ ಇಂದು ಚೈನಾ ಬೃಹತ್ ಗಾತ್ರದಿಂದ ಶಕ್ತಿಶಾಲಿ ರಾಷ್ಟ್ರವೆಂದು ಪರಿಗಣಿಸಲ್ಪಟ್ಟಿದೆ.

೬. ವಿಶ್ವಾಸ :- ವಿಶ್ವಾಸವು ಕೂಡ ಅಧಿಕಾರದ ಮೂಲವಾಗಿದೆ. ಒಂದು ಸಂಘಟನೆ ಅಥವಾ ಆಳುವವನಲ್ಲಿಟ್ಟಿರುವ ವಿಶ್ವಾಸವು ಅಧಿಕಾರವನ್ನು ಹೆಚ್ಚಿಸುತ್ತದೆ. ಸೈನಿಕ ಮತ್ತು ಪೋಲಿಸ್ ಶಕ್ತಿಯನ್ನು ಪ್ರಯೋಗಿಸಿ ಯಾವುದೇ ಸರಕಾರವು ಶಕ್ತಿಶಾಲಿ ಮತ್ತು ಪ್ರಭಾವಶಾಲಿ -ಯಾಗಲು ಸಾಧ್ಯವಿಲ್ಲ. ಉದಾ: ಹಿಂದೆ ರಾಜನು ದೇವರ ಪ್ರತಿನಿಧಿ ಎಂಬ ನಂಬಿಕೆಯಿಟ್ಟಿದ್ದರಿಂದ ರಾಜನು ಬಹಳಕಾಲ ಅಧಿಕಾರವನ್ನು ಹೊಂದಿರುತ್ತಿದ್ದನು. ಆದರೆ ಇಂದಿನ ದಿನಗಳಲ್ಲಿ ಸರ್ಕಾರದ ರಚನೆ, ನೀತಿನಿಯಮ ಮತ್ತು ಕಾನೂನಾಡಳಿತವು ಅಧಿಕಾರದ ಮೂಲವೆಂದು ಪರಿಗಣಿಸಲಾಗಿದೆ.

೭. ವಿಧಿಬದ್ಧ ಅಧಿಕಾರ :- ವಿಧಿಬದ್ಧ ಅಧಿಕಾರವು ಅಧಿಕಾರದ ಮೂಲವಾಗಿದೆ. ಈ ಮೂಲಾಂಶವು ಎಲ್ಲ ಜನರನ್ನು ಶಕ್ತಿಶಾಲಿಗಳನ್ನಾಗಿ ಮಾಡಲು

ಸಹಕಾರಿಯಾಗಿರುತ್ತದೆ.ವ್ಯಕ್ತಿಯೊಬ್ಬನು ರಾಜಕೀಯ ಮತ್ತು ಶಾಸನಬದ್ಧ ಹುದ್ದೆಗಳನ್ನು ನ್ಯಾಯಬದ್ಧವಾಗಿ ಆಕ್ರಮಿಸಿದಾಗ ಆತನನ್ನು ಅಧಿಕಾರವಾದಿ ಎನ್ನಲಾಗುತ್ತದೆ ಮತ್ತು ಆತನ ಅಧಿಕಾರವು ಬಹಳ ಪರಿಣಾಮಕಾರಿಯಾಗಿರುತ್ತದೆ. ಉದಾ: ಪ್ರಜಾಪ್ರಭುತ್ವದಲ್ಲಿ ಸಾಮಾನ್ಯ ವ್ಯಕ್ತಿಗಿಂತ ಚುನಾಯತ ಪ್ರತಿನಿಧಿಯ ಅಧಿಕಾರವು ಹೆಚ್ಚಾಗಿರುತ್ತದೆ.

೮. **ಕೌಶಲ್ಯತೆ** :- ಇದು ಅಧಿಕಾರದ ಮತ್ತೊಂದು ಮೂಲವಾಗಿದೆ ಇಬ್ಬರು ವ್ಯಕ್ತಿಗಳು ಸಮಾನ ಅಧಿಕಾರವನ್ನು ಹೊಂದಿದ್ದರೆ ಅದರಲ್ಲಿ ಹೆಚ್ಚು ಕೌಶಲ್ಯತೆಯನ್ನು ಹೊಂದಿರುವ ವ್ಯಕ್ತಿಯು ಹೆಚ್ಚು ಶಕ್ತಿಶಾಲಿಯಾಗಿರುತ್ತಾನೆ. ಮೆಕವೆಲ್ಲಿಯು ರಾಜಕೀಯ ಕೌಶಲ್ಯಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟಿದ್ದಾನೆ.

೯. **ವ್ಯಕ್ತಿತ್ವ** : ವ್ಯಕ್ತಿಯ ಅಧಿಕಾರವು ಆತನ ವ್ಯಕ್ತಿತ್ವವನ್ನು ಅವಲಂಬಿಸಿರುತ್ತದೆ. ವ್ಯಕ್ತಿಯ ಬುದ್ಧಿವಂತಿಕೆ, ಧೈರ್ಯ, ಸಂಘಟನಾ ಸಾಮರ್ಥ್ಯ, ಚುರುಕಾದ ಮತ್ತು ನಿಖರವಾದ ನಿರ್ಧಾರಗಳ ಉನ್ನತ ವ್ಯಕ್ತಿತ್ವವುಳ್ಳ ನಾಯಕನ ಹಿಂದೆ ಹಲವಾರು ಹಿಂಬಾಲಕರು ಇರುತ್ತಾರೆ ಉದಾ :- ಆಯಸ್ಕಾಂತ ವ್ಯಕ್ತಿತ್ವವನ್ನು ಹೊಂದಿದ್ದ ನೆಹರು, ಗಾಂಧಿ ಮುಂತಾದವಾರು ಹಿಂಬಾಲಕರಸೈನ್ಯವನ್ನೇ ಹೊಂದಿದ್ದರು.

೧೦. **ಸಮೂಹ ಮಾಧ್ಯಮ** : ಇದು ಮತ್ತೊಂದು ಅಧಿಕಾರದ ಮೂಲಾಂಶವಾಗಿದೆ. ಪ್ರಜಾಪ್ರಭುತ್ವದಲ್ಲಿ ಸಮೂಹ ಮಾಧ್ಯಮಗಳಾದ ವೃತ್ತಪತ್ರಿಕೆ, ರೇಡಿಯೋ, ದೂರದರ್ಶನ ಮುಂತಾದವುಗಳು ಸಾರ್ವಜನಿಕ ಅಭಿಪ್ರಾಯವನ್ನು ಸೃಷ್ಟಿಸುವ ಮಹತ್ತರ ಪಾತ್ರವನ್ನು ವಹಿಸುತ್ತವೆ. ಉದಾ :- ಚುನಾವಣಾ ಸಂದರ್ಭದಲ್ಲಿ ಸಮೂಹ ಮಾಧ್ಯಮಗಳು ಜನರ ಮೇಲೆ ಪ್ರಭಾವಬೀರುತ್ತವೆ. ಪತ್ರಿಕಾ ಸಂಪಾದಕರು ಸಾಕಷ್ಟು ಅಧಿಕಾರವನ್ನು ಪಡೆದಿರುತ್ತಾರೆ.

**ಅಧಿಕಾರದ ವಿಧಗಳು** : ಅಧಿಕಾರ ಕಾನೂನಬದ್ಧವಾಗಿರಬಹುದು ಅಥವಾ ಕಾನೂನ ಬಾಹಿರವಾಗಿರಬಹುದು. ಸಂವಿಧಾನ ಮತ್ತು ಜನರಮಾನ್ಯತೆ ಪಡೆದಿರುವ ರೂಢಿ ಮತ್ತು ಸಂಪ್ರದಾಯದ ಪ್ರಕಾರ ಚಲಾಯಿಸಲ್ಪಟ್ಟ ಅಧಿಕಾರ ಕಾನೂನಬದ್ಧ ಅಧಿಕಾರವಾಗುತ್ತದೆ. ಇವಾವುಗಳ ಆಧಾರವಿಲ್ಲದೆ ಚಲಾಯಿಸಲ್ಪಟ್ಟ ಅಧಿಕಾರ ಕಾನೂನ ಬಾಹಿರವಾದ ಅಧಿಕಾರವಾಗುತ್ತದೆ. ಇದು ಬಲವನ್ನು ಆಧಾರವಾಗಿಹೊಂದಿರುತ್ತದೆ.

೧. ಪ್ರತ್ಯಕ್ಷ ಮತ್ತು ಪರೋಕ್ಷ ಅಧಿಕಾರ : ಒಬ್ಬ ವ್ಯಕ್ತಿ ನೇರವಾಗಿ ತಾನೇ ಅಧಿಕಾರ ಚಲಾಯಿಸಿದಾಗ ಅದು ಪ್ರತ್ಯಕ್ಷ ಅಧಿಕಾರವಾಗುತ್ತದೆ. ಅಧಿಕಾರವನ್ನು ಬೇರೆಯವರ ಮೂಲಕ ಚಲಾಯಿಸಿದಾಗ ಅದು ಪರೋಕ್ಷ ಅಧಿಕಾರವಾಗುತ್ತದೆ.

೨. ಸ್ಪಷ್ಟ ಅಧಿಕಾರ ಅಥವಾ ಅಗೋಚರ ಅಧಿಕಾರ : ಬಹಿರಂಗವಾಗಿ ಚಲಾಯಿಸಲ್ಪಡುವ ಅಧಿಕಾರವನ್ನು ಸ್ಪಷ್ಟ ಅಧಿಕಾರವೆಂದು ಕರೆಯಲಾಗಿದೆ. ಪೋಲಿಸ್

ಮತ್ತು ಸೇನೆ ಇದಕ್ಕೆ ಉದಾಹರಣೆಗಳು. ಬಹಿರಂಗವಾಗಿ ಚಲಾಯಿಸಲು ಸಾಧ್ಯವಿಲ್ಲದ ಅಧಿಕಾರವನ್ನು ಅಗೋಚರ ಅಥವಾ ಗುಪ್ತಾಧಿಕಾರ ಎಂದು ಹೇಳಲಾಗಿದೆ. ಉದಾ: ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಜನರಲ್ಲಿರುವ ಅಧಿಕಾರ.

**೩. ಏಕಪಕ್ಷೀಯ ಮತ್ತು ದ್ವಿಪಕ್ಷೀಯ ಅಧಿಕಾರ :** ಒಬ್ಬ ವ್ಯಕ್ತಿ ತನ್ನ ಅಧಿಕಾರವನ್ನು ತನ್ನ ಮೇಲೆ ಯಾವ ವಿಧವಾದ ಅಧಿಕಾರವನ್ನು ಹೊಂದಿರದಂತಹ ವ್ಯಕ್ತಿಗಳ ಮೇಲೆ ಚಲಾಯಿಸಿದರೆ ಅದನ್ನು ಏಕಪಕ್ಷೀಯ ಅಧಿಕಾರವೆಂತಲೂ, ಎರಡೂ ಪಕ್ಷವು ಒಬ್ಬರ ಮೇಲೆ ಒಬ್ಬರು ಅಧಿಕಾರವನ್ನು ಚಲಾಯಿಸಬಹುದಾದರೆ ಅದನ್ನು ದ್ವಿಪಕ್ಷೀಯ ಅಧಿಕಾರ ಎಂಬುದಾಗಿಯೂ ಕರೆಯಲಾಗಿದೆ.

**೪. ಕೇಂದ್ರೀಕೃತ ಮತ್ತು ವಿಕೇಂದ್ರೀಕೃತ ಅಧಿಕಾರ :** ಒಂದೇ ಸ್ಥಳದಲ್ಲಿ ಅಧಿಕಾರ ಕೇಂದ್ರಿಕರಣವಾಗಿದ್ದರೆ ಅದನ್ನು ಕೇಂದ್ರೀಕೃತ ಅಧಿಕಾರವೆಂದೂ, ಅನೇಕ ಸ್ಥಳಗಳಲ್ಲಿ ಅಧಿಕಾರ ಹಂಚಿಕೆಯಾಗಿದ್ದರೆ ಅಂತಹ ಅಧಿಕಾರ ವಿಕೇಂದ್ರೀಕೃತ ಅಧಿಕಾರ ಎನಿಸಿಕೊಳ್ಳುವದು. ಸಂಯುಕ್ತ ವ್ಯವಸ್ಥೆಯಲ್ಲಿ ಅಧಿಕಾರ ವಿಕೇಂದ್ರೀಕೃತವಾಗುತ್ತದೆ. ಏಕಾತ್ಮಕ ಸರಕಾರದಲ್ಲಿ ಅಧಿಕಾರ ಕೇಂದ್ರೀಕರಣವಾಗುತ್ತದೆ.

## ಆ . ಸಾರ್ವಭೌಮತ್ವ

### ಸ್ವರೂಪ ಮತ್ತು ಮಹತ್ವ

ಆಧುನಿಕ ರಾಜಕೀಯ ಸಿದ್ಧಾಂತಗಳಲ್ಲಿ ಸೇರ್ಪಡೆಯಾದ ಪದವೇ ಸಾರ್ವಭೌಮತ್ವ ಅಥವಾ ಪರಮಾಧಿಕಾರವಾಗಿದೆ. ಗ್ರೀಕರು ಈ ಪದವನ್ನು ಉಪಯೋಗಿಸದೇ ಶ್ರೇಷ್ಠ ಅಧಿಕಾರವೆಂದು ಕರೆಯುತ್ತಿದ್ದರು. ಮಧ್ಯಯುಗದಲ್ಲಿ ಕೆಲವು ನ್ಯಾಯವಾದಿಗಳು ರಾಜ್ಯದ ಶ್ರೇಷ್ಠ ಅಧಿಕಾರವೆಂಬುದಕ್ಕೆ ಪರ್ಯಾಯವಾಗಿ ಸುಮ್ಮಾ **ಪೊಟೆಸ್ಟಾಸ್** ಎಂದು ಉಪಯೋಗಿಸಿದರು. ಪ್ರಥಮವಾಗಿ ಫ್ರಾನ್ಸದ **ಜೇನ್ ಬೋಡಿನ್** ಕ್ರಿ.ಶ. ೧೫೭೬ ರಲ್ಲಿ **ಸುವರೆಂಟ್** ಎಂಬ ಪದವನ್ನು ತನ್ನ ಪುಸ್ತಕವಾದ 'ದಿ ರಿಪಬ್ಲಿಕ್' ಗ್ರಂಥದಲ್ಲಿ ಬಳಸಿ ಪರಮಾಧಿಕಾರದ ಸ್ವರೂಪ ಹಾಗೂ ಮುಖ್ಯ ಲಕ್ಷಣಗಳ ಬಗ್ಗೆ ವಿಸ್ತೃತವಾಗಿ ಚರ್ಚಿಸಿ ಆಧುನಿಕ ಪರಮಾಧಿಕಾರ ಸಿದ್ಧಾಂತಕ್ಕೆ ತಳಹದಿ ಹಾಕಿದನು. ಇವನು ಆಂತರಿಕ ಪರಮಾಧಿಕಾರವನ್ನು ಪ್ರತಿಪಾದಿಸಿದ್ದರೆ, ನಂತರ ಬಂದ ಡಚ್ ಲೇಖಕ ಗ್ರೋಸಿಯಸ್ ಬಾಹ್ಯ ಪರಮಾಧಿಕಾರವನ್ನು ಪ್ರತಿಪಾದಿಸಿದನು. ಅನಂತರ ಹಾಬ್ಸ್, ಲಾಕ್, ಮತ್ತು ರೂಸೋ ಅನುಕ್ರಮವಾಗಿ ಕಾನೂನಬದ್ಧ ಪರಮಾಧಿಕಾರ, ರಾಜಕೀಯ ಪರಮಾಧಿಕಾರ ಮತ್ತು ಜನತಾ ಪರಮಾಧಿಕಾರವನ್ನು ಪ್ರತಿಪಾದಿಸಿದರು. ಪರಮಾಧಿಕಾರದ ಬಗ್ಗೆ ಸ್ಪಷ್ಟವಾದ ಸಿದ್ಧಾಂತ ರೂಪಿತವಾಗಲು ಈ ಮೂವರು ಬಹಳ ಮಟ್ಟಿಗೆ ಕಾರಣರಾಗಿದ್ದಾರೆ. ಅನಂತರ ಜಾನ್ ಅಷ್ಟಿನ್ ಪರಮಾಧಿಕಾರವನ್ನು ಮೊದಲ

ಬಾರಿಗೆ ವೈಜ್ಞಾನಿಕವಾಗಿ ವಿಶ್ಲೇಷಿಸಿದ. ಅಷ್ಟಿನ್ ಪ್ರತಿಪಾದಿಸಿದ ಸಿದ್ಧಾಂತಕ್ಕೆ ಪ್ರತಿಕ್ರಿಯೆಯಾಗಿ ಬಹುತ್ವವಾದ ಸಿದ್ಧಾಂತ ರೂಪಿತವಾಗಿದೆ.

ಸಾವರ್ನಿಟಿ ಎಂಬ ಇಂಗ್ಲೀಷ್ ಪದ ಸುಪರಾನಸ್ ಎಂಬ ಲ್ಯಾಟಿನ್ ಪದದಿಂದ ಬಂದಿದೆ. ಇದು ಸುಪ್ರೀಮ್ ಅಂದರೆ ಪರಮ ಎಂಬ ಅರ್ಥಕೊಡುತ್ತದೆ. ಈ ಸಾರ್ವಭೌಮ ಅಧಿಕಾರವೆಂದರೆ ರಾಜ್ಯದ ಪರಮಶ್ರೇಷ್ಠ ಅಧಿಕಾರ. ಈ ಅಧಿಕಾರವನ್ನು ದೇಶದಲ್ಲಿಯ ಪ್ರತಿಯೊಬ್ಬ ವ್ಯಕ್ತಿ ಮತ್ತು ಸಂಘಸಂಸ್ಥೆಗಳ ಮೇಲೆ ನಡೆಸಲಾಗುವದು. ಈ ಅಧಿಕಾರವನ್ನೇ ತಿರಸ್ಕರಿಸಿದಲ್ಲಿ ರಾಜ್ಯವು ಆ ವ್ಯಕ್ತಿಗೆ ಅಥವಾ ಸಂಸ್ಥೆಗೆ ಶಿಕ್ಷೆಯನ್ನು ವಿಧಿಸುತ್ತದೆ. ಇಂಥ ಸಾರ್ವಭೌಮ ಅಧಿಕಾರವನ್ನು ಕಾನೂನ ಮೂಲಕ ನಡೆಸಲಾಗುತ್ತದೆ. ಯಾವ ರೀತಿಯಾಗಿ ಇಂಜಿನ್ ಇಲ್ಲದ ರೇಲ್ವೆಗಾಡಿ ಸಾಧ್ಯವಿಲ್ಲವೋ, ಅದೇ ರೀತಿಯಾಗಿ ಪರಮಾಧಿಕಾರ ಇಲ್ಲದ ರಾಜ್ಯವು ಸಾಧ್ಯವಿಲ್ಲ. ರಾಜ್ಯದ ನಾಲ್ಕು ಮೂಲಾಂಶಗಳಲ್ಲಿ ಪರಮಾಧಿಕಾರವೂ ಒಂದು. ಆದ್ದರಿಂದಲೇ ಪರಮಾಧಿಕಾರವೇ ರಾಜ್ಯದ ಜೀವಾಳ. ರಾಜ್ಯವನ್ನು ಇತರ ಸಂಘ ಸಂಸ್ಥೆಗಳಿಂದ ಬೇರ್ಪಡಿಸಿರುವದು ಪರಮಾಧಿಕಾರವೆ. ಲಾಸ್ಕಿ ಹೇಳಿರುವಂತೆ ಪರಮಾಧಿಕಾರವನ್ನು ಹೊಂದಿರುವದರಿಂದಲೇ ರಾಜ್ಯ ಇತರ ಸಂಘಸಂಸ್ಥೆಗಳಿಂದ ವಿಭಿನ್ನವಾಗಿದೆ.

ಸಾರ್ವಭೌಮ ಅಧಿಕಾರವು ಎರಡು ವಿಧವಾಗಿದೆ.

೧. **ಆಂತರಿಕ** : ದೇಶದ ಒಳಾಡಳಿತವನ್ನು ನಡೆಯಿಸಿಕೊಂಡು ಹೋಗುವಲ್ಲಿ ಸಮಾಜದ ನಾನಾ ಸಂಸ್ಥೆಗಳಿಂದಲೂ ಮತ್ತು ವ್ಯಕ್ತಿಗಳಿಂದಲೂ ತನ್ನ ಕಾಯದೆಗಳಿಗೆ ವಿಧೇಯತೆಯನ್ನು ಪಡೆಯುವ ಅಧಿಕಾರ.

೨. **ಬಾಹ್ಯ** : ಇತರ ರಾಜ್ಯಗಳೊಂದಿಗೆ ಮೈತ್ರಿ ಬೆಳೆಯಿಸುವ, ಯುದ್ಧ ಮಾಡುವ ಅಥವಾ ಒಪ್ಪಂದ ಮಾಡಿಕೊಳ್ಳುವ ಸಂಪೂರ್ಣ ಅಧಿಕಾರ. ಒಂದು ವೇಳೆ ರಾಜ್ಯ ಯಾವುದೇ ಒಪ್ಪಂದ ಅಥವಾ ಅಂತರಾಷ್ಟ್ರೀಯ ಕಾಯದೆಗೆ ಬದ್ಧವಾದರೆ ಅದರ ಪರಮಾಧಿಕಾರದ ಸ್ಥಾನಮಾನ ನಾಶವಾಗುವದಿಲ್ಲ. ಇವುಗಳನ್ನು ಸ್ವ-ನಿಯಂತ್ರಣಗಳು ಎಂದು ಹೇಳಬಹುದು. ಈ ರೀತಿ ರಾಜ್ಯವು ಒಳಗೂ ಮತ್ತು ಹೊರಗೂ ತಮಗೆ ಸರಿಕಂಡಂತೆ ಕಾನೂನುಗಳನ್ನು ಮಾಡುವ ಅಧಿಕಾರ ಹೊಂದಿರುತ್ತದೆ. ಆಂತರಿಕವಾಗಿ ರಾಜ್ಯದಲ್ಲಿ ಎಲ್ಲರೂ ಸಾರ್ವಭೌಮ ಅಧಿಕಾರಕ್ಕೆ ವಿಧೇಯರಾಗಿರಬೇಕು ಮತ್ತು ತಲೆಬಾಗಬೇಕು. ಬಾಹ್ಯವಾಗಿ ದೇಶವು ಪರರಾಜ್ಯಗಳ ನಿಯಂತ್ರಣಕ್ಕೆ ಸಿಲುಕಬಾರದು. ಒಟ್ಟಾರೆ ರಾಜ್ಯವು ಆಂತರಿಕವಾಗಿ ಶ್ರೇಷ್ಠವಿದ್ದು, ಬಾಹ್ಯವಾಗಿ ಸ್ವತಂತ್ರವಾಗಿದ್ದು ರಾಜ್ಯದ ಒಳಗೂ ಹಾಗೂ ಹೊರಗೂ ಶ್ರೇಷ್ಠವಾಗಿರುತ್ತದೆ. ಈ ಅರ್ಥದಲ್ಲಿ ಭಾರತದೇಶದಲ್ಲಿಯ ಕರ್ನಾಟಕ ರಾಜ್ಯವು ನಿಜವಾದ ಅರ್ಥದಲ್ಲಿ ರಾಜ್ಯವೋ? ನಿಜವಾದ ಅರ್ಥದಲ್ಲಿ 'ಕರ್ನಾಟಕ' ರಾಜ್ಯವಾಗಲಾರದು. ಯಾಕೆಂದರೆ ಕೆಲವೊಂದು ಮಟ್ಟಿಗೆ ಅದಕ್ಕೆ ಆಂತರಿಕ

ಪರಮಾಧಿಕಾರವಿದ್ದರೂ ಬಾಹ್ಯ ಪರಮಾಧಿಕಾರ ಇರುವದಿಲ್ಲ. ಯಾಕೆಂದರೆ ಅದು ಭಾರತ ಸಂಯುಕ್ತರಾಜ್ಯದ ಒಂದು ಅಂಗವಾಗಿದ್ದು ಅದರ ನಿಯಂತ್ರಣದಲ್ಲಿರುತ್ತದೆ.

ರಾಜ್ಯದ ಅತೀ ಮುಖ್ಯ ಲಕ್ಷಣವೆಂದರೆ ಸಾರ್ವಭೌಮ ಅಧಿಕಾರ. ಕೇವಲ ಪ್ರದೇಶ, ಜನಸಂಖ್ಯೆ ಮತ್ತು ಸರಕಾರವಿದ್ದ ಮಾತ್ರಕ್ಕೆ ರಾಜ್ಯವಾಗಲಾರದು. ಆದರೆ ಪರಮಾಧಿಕಾರವನ್ನು ಹೊಂದಿದ್ದರೆ ಮಾತ್ರ ರಾಜ್ಯವೆಂದು ಪರಿಗಣಿಸಲ್ಪಡುತ್ತದೆ. ಉದಾ: ಕ್ರಿ.ಶ. ೧೯೪೭ರ ಪೂರ್ವದಲ್ಲಿ ಭಾರತದ ಸಾರ್ವಭೌಮ ಅಧಿಕಾರವು ಬ್ರಿಟಿಶರ ಕೈಯಲ್ಲಿತ್ತು. ಆದಕಾರಣ ಭಾರತವನ್ನು ರಾಜ್ಯವೆಂದು ಪರಿಗಣಿಸಲಾಗುತ್ತಿದ್ದಿಲ್ಲ. ಆದರೆ ಕ್ರಿ.ಶ. ೧೯೪೭ ಅಗಸ್ಟ್ ೧೫ ರಂದು ಭಾರತ ಸ್ವತಂತ್ರವಾದ ನಂತರ ಅದು ರಾಜ್ಯವೆಂದು ಪರಿಗಣಿಸಲ್ಪಡುತ್ತಿದೆ.

ಪರಮಾಧಿಕಾರದ ಅರ್ಥವನ್ನು ಸುಲಭವಾಗಿ ಹೇಳಲು ಸಾಧ್ಯವಿಲ್ಲ. ಯಾಕೆಂದರೆ ಅನೇಕ ರಾಜ್ಯಶಾಸ್ತ್ರ ಪಂಡಿತರು ಅದರ ಅರ್ಥವನ್ನು ನಾನಾ ರೀತಿಯಲ್ಲಿ ವಿವರಿಸಿದ್ದಾರೆ.

**ಬೋಡಿನ್** ''ಸಾರ್ವಭೌಮ ಅಧಿಕಾರವು ಕಾಯದೆಗಳಿಂದ ಪರಿಮಿತಗೊಳ್ಳದ ಪ್ರಜೆಗಳ ಮತ್ತು ನಾಗರಿಕರ ಮೇಲೆ ರಾಜ್ಯಕ್ಕಿರುವ ಪರಮಶ್ರೇಷ್ಠ ಅಧಿಕಾರ.''

**ಗಾರ್ನರ್** ''ಸಾರ್ವಭೌಮ ಅಧಿಕಾರವು ರಾಜ್ಯದ ಒಂದು ಪ್ರಮುಖ ಲಕ್ಷಣ. ರಾಜ್ಯವು ತನ್ನ ಅಧಿಕಾರವನ್ನು ತಾನೇ ನಿರ್ದಿಷ್ಟಪಡಿಸಿಕೊಳ್ಳುವದೇ ಹೊರತು ರಾಜ್ಯದ ಸಾರ್ವಭೌಮ ಅಧಿಕಾರವನ್ನು ಯಾವ ಕಾನೂನು ನಿರ್ಧರಿಸಲಾರದು.''

**ಬೆಂಥಮ್** ''ಸಾರ್ವಭೌಮ ಅಧಿಕಾರವು ಕಾನೂನಿನಿಂದ ಪರಿಮಿತವಾಗಲಾರದು. ಬಹುಸಂಖ್ಯಾತರ ಕಲ್ಯಾಣವನ್ನು ಸಾಧಿಸಲು ಸಾಧ್ಯವಾಗುವಂತೆ ಸಾರ್ವಭೌಮನು ಕಾನೂನುಗಳನ್ನು ಪಾಸುಮಾಡಬೇಕು. ಜನರ ನೈತಿಕ ವಿರೋಧವು ಮಾತ್ರ ಸಾರ್ವಭೌಮ ಅಧಿಕಾರವನ್ನು ಪರಿಮಿತಗೊಳಿಸಬಲ್ಲುದು.''

**ವಿಲೋಘಿ** ''ಸಾರ್ವಭೌಮ ಅಧಿಕಾರವು ರಾಜ್ಯದ ಪರಮೋಚ್ಚ ಸಂಕಲ್ಪವಾಗಿದೆ.''

**ಬರ್ಗೆಸ್** ''ಸಾರ್ವಭೌಮ ಅಧಿಕಾರವು ರಾಜ್ಯದ ಪರಮೋಚ್ಚ ಸಂಕಲ್ಪವಾಗಿದೆ.ಹ್ಯೂಗೋ **ಗ್ರೋಷಿಯಸ್ (Hugo Grotious)** ''ಸಾರ್ವಭೌಮ ಅಧಿಕಾರವು ಪರಮೋಚ್ಚ ರಾಜಕೀಯ ಅಧಿಕಾರವಾಗಿದ್ದು ಅದು ಒಬ್ಬ ವ್ಯಕ್ತಿಯ ಸ್ವಾಧೀನದಲ್ಲಿರುತ್ತದೆ. ಆತನ ಕೃತಿಗಳು ಯಾವುದಕ್ಕೂ ಅಧೀನವಾಗಿರುವದಿಲ್ಲ. ಆತನ ಸಂಕಲ್ಪವನ್ನು ಯಾರೂ ಮೀರಲು ಶಕ್ಯವಿಲ್ಲ.''

ಹಿಂದಿನ ಕಾಲದಲ್ಲಿ ಸಾರ್ವಭೌಮ ಅಧಿಕಾರವನ್ನು ಒತ್ತಾಯದಿಂದ ಪ್ರಜೆಗಳ ಮೇಲೆ ಹೇರಲಾಗುತ್ತಿತ್ತು. ಆದರೆ ಈಗಿನ ಕಾಲದಲ್ಲಿ ಪ್ರಜಾಪ್ರಭುತ್ವವಿರುವ ರಾಜ್ಯಗಳಲ್ಲಿ

ಈ ಅಧಿಕಾರವನ್ನು ಜನರ ಒಪ್ಪಿಗೆಯ ಮೂಲಕ ಉಪಯೋಗಿಸಲಾಗುತ್ತದೆ. ಆದರೆ ಸರ್ವಾಧಿಕಾರಿಗಳಿರುವ ರಾಜ್ಯಗಳಲ್ಲಿ ಮಾತ್ರ ಈ ಅಧಿಕಾರವನ್ನು ಜನರ ಒಪ್ಪಿಗೆಯನ್ನು ಪಡೆಯದೆ ಸಂಪೂರ್ಣವಾಗಿ ಒತ್ತಾಯದ ಮೂಲಕವೇ ಜಾರಿಗೆ ತರಲಾಗುತ್ತದೆ.

ತಾತ್ವಿಕವಾಗಿ ಸಾರ್ವಭೌಮತೆಯು ಯಾವುದೇ ಇತಿಮಿತಿಯಿಲ್ಲದ ಅಧಿಕಾರ ಎಂದು ಕರೆಯಲ್ಪಟ್ಟರೂ ವಾಸ್ತವಿಕವಾಗಿ ಕೆಲವು ಇತಿಮಿತಿಗಳು ಇರುವದನ್ನು ನಾವು ಗುರುತಿಸಬಹುದು. ಅವುಗಳೆಂದರೆ ರಾಷ್ಟ್ರದ ಉದ್ದೇಶ, ಪರಂಪರೆ, ಸಂಪ್ರದಾಯ ಮತ್ತು ಅವುಗಳ ಆಧಾರದ ಮೇಲೆ ನಿರ್ಮಿಸಲು ಜನರು ಮಾಡಿಕೊಂಡ ಒಡಂಬಡಿಕೆ ಇತ್ಯಾದಿ. ಇವು ಕಾನೂನಿನ ನಿರ್ಬಂಧಗಳಲ್ಲ ಬದಲಾಗಿ ನೈತಿಕ ಹಾಗೂ ಸ್ವಾಭಾವಿಕ ನಿರ್ಬಂಧಗಳು. ರಾಜ್ಯವು ಎಷ್ಟೋ ಪರಮಾಧಿಕಾರವನ್ನು ಹೊಂದಿದ್ದರೂ ಅಂತರಿಕವಾದ ಕೆಲವು ಬಲಾಢ್ಯ ಶಕ್ತಿಗಳನ್ನು ಎದುರು ಹಾಕಿಕೊಳ್ಳುವದು ಸಾಧ್ಯವಾಗುವದಿಲ್ಲ ಎಂಬುದನ್ನು ನಾವು ನೆನಪಿಡಬೇಕು. ಬಾಹ್ಯವಾಗಿಯೂ ರಾಜ್ಯ ರಾಜ್ಯಗಳ ನಡುವೆ ಶಕ್ತಿಯ ಭಾರಿ ಅಸಮತೋಲನವಿರುವಾಗ ಎಲ್ಲ ರಾಜ್ಯಗಳು ಸಮಾನವಾದವು ಎಂಬುದು ಕೇವಲ ಔಪಚಾರಿಕವಾಗಿರುತ್ತದೆ. ಉದಾ : ವಿಶ್ವಸಂಸ್ಥೆಯಲ್ಲಿ ಕೆಲವೆ ಬಲಾಢ್ಯ ರಾಜ್ಯಗಳು ತಮ್ಮ ವಿಟೋ ಅಧಿಕಾರವನ್ನು ಚಲಾಯಿಸುವದರ ಮೂಲಕ ಇತರ ರಾಜ್ಯಗಳ ಅಭಿಪ್ರಾಯವನ್ನು ಮೂಲೆಗುಂಪಾಗಿಸುತ್ತವೆ. ಇದಲ್ಲದೆ ರಾಜ್ಯದ ವ್ಯಾಪ್ತಿಯನ್ನು ಮೀರಿದ ಕೆಲವು ಒತ್ತಡ ಗುಂಪುಗಳು ಕೆಲವೊಂದು ವಿಷಯಗಳಲ್ಲಿ ರಾಜ್ಯದ ಪರಮಾಧಿಕಾರವನ್ನು ಪ್ರಶ್ನಿಸುತ್ತವೆ. ಉದಾ: ಅಂತರಾಷ್ಟ್ರೀಯ ಮಾನವ ಹಕ್ಕುಗಳ ಸಂಘಟನೆ, ಪರಿಸರ ಸಂಘಟನೆಗಳು ಇತ್ಯಾದಿ.

## ಗುಣಲಕ್ಷಣಗಳು

**೧. ಅದು ಶಾಶ್ವತವಾಗಿದೆ :-** ರಾಜ್ಯದ ಸಾರ್ವಭೌಮ ಅಧಿಕಾರವು ಶಾಶ್ವತವಾಗಿದೆ. ಅದು ರಾಜ್ಯವಿರುವವರೆಗೂ ಇರುತ್ತದೆ. ರಾಜ್ಯವಿಲ್ಲದಾಗ ಅದು ಇಲ್ಲದಂತಾಗುತ್ತದೆ. ಅದರಂತೆ ಸಾರ್ವಭೌಮ ಅಧಿಕಾರವಿಲ್ಲದಾಗ ರಾಜ್ಯವು ಇಲ್ಲದಾಗುತ್ತದೆ. ಒಂದು ವೇಳೆ ಪರರಾಜ್ಯವು ಅತಿಕ್ರಮಣ ಮಾಡಿ ರಾಜ್ಯದ ಸ್ವಾತಂತ್ರ್ಯಹರಣ ಮಾಡಿದರೆ ಮಾತ್ರ ರಾಜ್ಯವು ತನ್ನ ಸಾರ್ವಭೌಮ ಅಧಿಕಾರವನ್ನು ಕಳೆದುಕೊಳ್ಳುತ್ತದೆ ಮತ್ತು ಆರಾಜ್ಯವು ತನ್ನ ರಾಜ್ಯತ್ವವನ್ನು ಕಳೆದುಕೊಳ್ಳುತ್ತದೆ.

ರಾಜ್ಯದ ಪರವಾಗಿ ಸರಕಾರವು ಸಾರ್ವಭೌಮ ಅಧಿಕಾರವನ್ನು ಉಪಯೋಗಿಸುತ್ತದೆ. ಸರಕಾರವು ಬದಲಾದರೆ, ಸರಕಾರ ನಡೆಸುವವರು ಅಧಿಕಾರ ತ್ಯಾಗಮಾಡಿದರೆ ಅಥವಾ ಸರಕಾರ ನಡೆಸುವ ರಾಜನು ನಿಧನಹೊಂದಿದರೆ ಸಾರ್ವಭೌಮ ನಾಶವಾಗದೆ ಮುಂಬರುವ ಸರಕಾರದ ಕೈಗೆ ಹೋಗುತ್ತದೆ. ಆದರೆ ರಾಜ್ಯವು ಮಾತ್ರ

ಸ್ಥಿರವಾಗಿರುತ್ತದೆ.ಇದರಿಂದ ಸಾರ್ವಭೌಮ ಅಧಿಕಾರಕ್ಕೆ ಯಾವ ಧಕ್ಕೆಯೂ ತಗಲುವದಿಲ್ಲ.ಸರಕಾರವು ರಾಜ್ಯ ಸಾರ್ವಭೌಮಾಧಿಕಾರದ ಉಪಯೋಗಕ್ಕೆ ಇರುವ ಒಂದು ಸಾಧನ ಮಾತ್ರ. ರಾಜ್ಯವು ಇರುವವರೆಗೂ ಸಾರ್ವಭೌಮ ಅಧಿಕಾರ ಇರುತ್ತದೆ. ಈ ಸಂದರ್ಭದಲ್ಲಿ ಇಂಗ್ಲೆಂಡಿನಲ್ಲಿ ಜನಪ್ರಿಯವಾಗಿರುವ 'ರಾಜನು ನಿಧನ ಹೊಂದಿದ, ಆದರೆ ರಾಜ್ಯತನ ಚಿರಾಯುವಾಗಲಿ '**(The King is Dead, Long live the Kingship or King)** ಎಂಬ ಹೇಳಿಕೆಯನ್ನು ಸ್ಮರಿಸಿಕೊಳ್ಳಬಹುದಾಗಿದೆ. ದೊರೆಯು ನಿಧನ ಹೊಂದಿದರೂ ದೊರೆಯ ಸ್ಥಾನ ಮಾತ್ರ ಖಾಲಿಯಾಗುವುದಿಲ್ಲ. ರಾಜನಾಗಿದ್ದವನು ದೈಹಿಕವಾಗಿ ಕಾಣೆಯಾಗಬಹುದು ಆದರೆ ದೊರೆತನ, ಆತನು ರಾಜನಾಗಿ ಅನುಭವಿಸಿದ ಅಧಿಕಾರ ಶಾಶ್ವತವಾಗಿರುತ್ತದೆ. ಆ ಸ್ಥಾನವನ್ನು ಬೇರೊಬ್ಬನು ಅಲಂಕರಿಸಿ ಹಿಂದೆ ರಾಜನಾಗಿದ್ದವನು ಅನುಭವಿಸುತ್ತಿದ್ದ ಎಲ್ಲ ಅಧಿಕಾರ ಮತ್ತು ಕರ್ತವ್ಯಗಳನ್ನು ಚಲಾಯಿಸಬಹುದು. ಇದೇ ರೀತಿ ಪರಮಾಧಿಕಾರವು ಶಾಶ್ವತವಾಗಿರುತ್ತದೆ.

೨. ಅದು ಅನನ್ಯವಾಗಿದೆ :- ಸಾರ್ವಭೌಮ ಅಧಿಕಾರವನ್ನು ಬೇರೆಯವರಿಗೆ ವರ್ಗಾಯಿಸಲು ಬರುವದಿಲ್ಲ ಅಥವಾ ಇತರರೊಡನೆ ಹಂಚಿಕೊಳ್ಳಲು ಬರುವದಿಲ್ಲ ಅಲ್ಲದೆ ಇದರಲ್ಲಿ ಮತ್ತೊಬ್ಬರು ಬಂದು ಭಾಗಿಯಾಗಲು ಸಹ ಬರುವದಿಲ್ಲ. ಸಾರ್ವಭೌಮ ಅಧಿಕಾರವನ್ನು ವರ್ಗಾಯಿಸುವದೆಂದರೆ ಅಥವಾ ಹಂಚಿಕೊಳ್ಳುವ-ದೆಂದರೆ ಅದನ್ನು ನಾಶಮಾಡಿದಂತೆಯೇ. ಅದು ಶಾಶ್ವತವಾಗಿ ರಾಜ್ಯದ ಕೈಯಲ್ಲಿಯೇ ಇರುತ್ತದೆ. ರಾಜ್ಯದ ಪರವಾಗಿ ಸರಕಾರವು ಅದನ್ನು ಉಪಯೋಗಿಸುತ್ತದೆ. ಸರಕಾರವು ಬದಲಾಗಬಹುದು. ಹಳೆಯ ಸರಕಾರವು ಉರುಳಿ ಹೊಸ ಸರಕಾರವು ರಾಜ್ಯದ ಪರವಾಗಿ ಸಾರ್ವಭೌಮ ಅಧಿಕಾರವನ್ನು ಉಪಯೋಗಿಸುತ್ತದೆ. ಆದರೆ ಸಾರ್ವಭೌಮ ಅಧಿಕಾರಕ್ಕೆ ಮಾತ್ರ ಯಾವ ಚ್ಯುತಿಯೂ ಉಂಟಾಗುವುದಿಲ್ಲ.

ಒಬ್ಬ ವ್ಯಕ್ತಿಯು ತನ್ನ ಜೀವವನ್ನು ಇತರರಿಗೆ ಹೇಗೆ ವರ್ಗಾಯಿಸಲಾರನೋ ಅದೇ ಪ್ರಕಾರ ರಾಜ್ಯವು ತನ್ನ ಸಾರ್ವಭೌಮ ಅಧಿಕಾರವನ್ನು ವರ್ಗಾಯಿಸಲಾರದು. ವ್ಯಕ್ತಿಯು ತನ್ನ ಜೀವವನ್ನು ಬೇರೆಯವರಿಗೆ ವರ್ಗಾಯಿಸುವದೆಂದರೆ ತನ್ನನ್ನೆ ನಾಶಮಾಡಿಕೊಂಡಂತೆ. ಅದರಂತೆ ರಾಜ್ಯವು ಬೇರೆಯವರಿಗೆ ತನ್ನ ಸಾರ್ವಭೌಮ ಅಧಿಕಾರವನ್ನು ವರ್ಗಾಯಿಸುವದೆಂದರೆ ತನ್ನನ್ನೆ ತಾನು ನಾಶಮಾಡಿಕೊಂಡಂತೆ. ಜೀವವಿಲ್ಲದ ವ್ಯಕ್ತಿಯು ಬದುಕಲಾರ. ಅದರಂತೆ ಸಾರ್ವಭೌಮ ಅಧಿಕಾರವಿಲ್ಲದೆ ರಾಜ್ಯವು ಅಸ್ತಿತ್ವದಲ್ಲಿ ಇರಲಾರದು.

೩. ಅದು ಮೂಲಸ್ವರೂಪದ್ದಾಗಿದೆ :- ರಾಜ್ಯದ ಸಾರ್ವಭೌಮಾಧಿಕಾರವು ಮೂಲಸ್ವರೂಪದ್ದಾಗಿದೆ. ರಾಜ್ಯವು ಹುಟ್ಟಿದಾಗಿನಿಂದ ಅದು ಬಂದಿರುತ್ತದೆ. ಬೇರೆಯವರಾರೂ ಅದನ್ನು ರಾಜ್ಯಕ್ಕೆ ಕೊಟ್ಟಿರುವದಿಲ್ಲ. ಮನುಷ್ಯನು

ಹುಟ್ಟಿದೊಡನೆಯೇ ಅವನಲ್ಲಿ ಜೀವವಿದ್ದಂತೆ ರಾಜ್ಯವು ಹುಟ್ಟಿದೊಡನೆ ಸಾರ್ವಭೌಮ ಅಧಿಕಾರವು ಸಹ ಅದರೊಡನೆಯೇ ಬರುತ್ತದೆ.

೪. ಅದು ಅವಿಭಾಜ್ಯವಾಗಿದೆ :-ಗೆಟಲ್ ಎಂಬ ಲೇಖಕರ ಪ್ರಕಾರ ಒಂದು ವೇಳೆ ಪರಮಾಧಿಕಾರವನ್ನು ವಿಭಜಿಸಿದರೆ ಒಂದಕ್ಕಿಂತ ಹೆಚ್ಚಿನ ರಾಜ್ಯಗಳು ಅಸ್ಥಿತ್ವದಲ್ಲಿ ಇರುತ್ತವೆ. ರಾಜ್ಯದ ಸಾರ್ವಭೌಮ ಅಧಿಕಾರವು ಅವಿಭಾಜ್ಯವಾಗಿದೆ ಅದನ್ನು ಯಾವ ರೀತಿಯಿಂದಲೂ ವಿಭಜಿಸಲು ಬರುವದಿಲ್ಲ. ಅದನ್ನು ವಿಭಜಿಸುವದೆಂದರೆ ಅದನ್ನು ನಾಶಮಾಡಿದಂತೆ. ಜೆ.ಸಿ. ಕಾಲ್ಹಾನರ ಪ್ರಕಾರ ಅದು ಒಂದು ಅಖಂಡ ವಸ್ತುವಾಗಿದೆ. ಇದನ್ನು ವಿಭಜಿಸುವದೆಂದರೆ ಅದನ್ನು ನಾಶವಮಾಡಿದಂತೆಯೆ. ಅದು ರಾಜ್ಯದ ಪರಮೋಚ್ಚ ಅಧಿಕಾರ. ಅರ್ಧ ಸಾರ್ವಭೌಮ ಅಧಿಕಾರಕ್ಕೆ ನಾವು ಅರ್ಧ ಚೌರಸ ಅಥವಾ ಅರ್ಧ ತ್ರಿಕೋನ ವೆಂದು ಹೇಳಲಾಗುತ್ತಿದೆ. ಅರ್ಧ ಚೌರಸ ಅಥವಾ ಅರ್ಧ ತ್ರಿಕೋನಗಳು ಎಲ್ಲಿಯಾದರೂ ಕಾಣಸಿಗುತ್ತವೆಯೋ? ಅರ್ಧ ಚೌರಸ ಮತ್ತು ಅರ್ಧ ತ್ರಿಕೋನಗಳು ಹೇಗೆ ಇರುವದಿಲ್ಲವೋ ಹಾಗೆಯೇ ಅರ್ಧ ಅಂದರೆ ವಿಭಜಿಸಿದ ಸಾರ್ವಭೌಮ ಅಧಿಕಾರವು ಇರುವದಿಲ್ಲ. ಸಂಯುಕ್ತ ರಾಜ್ಯದಲ್ಲಿ ಸಹ ಸಾರ್ವಭೌಮ ಅಧಿಕಾರವು ವಿಭಜಿಸಲ್ಪಟ್ಟಿರುವದಿಲ್ಲ. ಅಲ್ಲಿ ಕೇವಲ ರಾಜ್ಯದ ಆಡಳಿತಾಧಿಕಾರಗಳು ಮಾತ್ರ ಕೇಂದ್ರ ಹಾಗೂ ಪ್ರಾಂತಗಳಲ್ಲಿ ಸಂವಿಧಾನಾತ್ಮಕವಾಗಿ ವಿಭಜಿಸಲ್ಪಟ್ಟಿರುತ್ತವೆ. ಸಾರ್ವಭೌಮ ಅಧಿಕಾರವು ಮಾತ್ರ ಪ್ರಾಂತದ ಅಧಿಕಾರಗಳಿಗಿಂತ ತೀರ ವಿಭಿನ್ನವಾಗಿರುತ್ತವೆ. ಭಾರತವು ಒಂದು ರಾಜ್ಯವಾಗಿದೆ. ಅದಕ್ಕೆ ಸಾರ್ವಭೌಮ ಅಧಿಕಾರ ಇದೆ. ಭಾರತವು ಸಂಯುಕ್ತ ರಾಜ್ಯವಾಗಿದ್ದು ಅಲ್ಲಿ ಕೇಂದ್ರ ಸರಕಾರ ಮತ್ತು ಅನೇಕ ಪ್ರಾಂತೀಯ ಸರಕಾರಗಳು ಇರುತ್ತವೆ. ರಾಜ್ಯದ ಆಡಳಿತಾಧಿಕಾರಗಳನ್ನು ಕೇಂದ್ರ ಸರಕಾರ ಮತ್ತು ವಿವಿಧ ರಾಜ್ಯ ಸರಕಾರಗಳಲ್ಲಿ ಹಂಚಲಾಗಿದೆಯೇ ಹೊರತು ಭಾರತದ ಸಾರ್ವಭೌಮ ಅಧಿಕಾರವನ್ನಲ್ಲ.

೫. ಅನಿರ್ಬಂಧವು ಹಾಗೂ ಸರ್ವಶ್ರೇಷ್ಠವಾಗಿದೆ :- ಗೆಟಲ್ ಎಂಬ ಲೇಖಕರ ಪ್ರಕಾರ ಒಂದು ವೇಳೆ ಪರಮಾಧಿಕಾರವು ಅನಿರ್ಬಂಧವಿಲ್ಲದಿದ್ದರೆ ರಾಜ್ಯ ಅಸ್ತಿತ್ವದಲ್ಲಿ ಉಳಿಯಲಾರದು. ರಾಜ್ಯದ ಸಾರ್ವಭೌಮ ಅಧಿಕಾರವು ಅನಿರ್ಬಂಧವೂ ಸರ್ವಶ್ರೇಷ್ಠವು ಆಗಿದೆ. ಅದರ ಮೇಲೆ ಯಾವ ನಿರ್ಬಂಧಗಳು ಇರುವದಿಲ್ಲ. ರಾಜ್ಯದ ಒಳಗೂ ಮತ್ತು ಹೊರಗೂ ಈ ಅಧಿಕಾರವನ್ನು ಯಾರೂ ನಿರ್ಬಂಧಿಸಲಾರರು. ಅದು ರಾಜ್ಯದ ಸರ್ವಶ್ರೇಷ್ಠ ಅಧಿಕಾರವಾಗಿದೆ. ಬೇರಾವ ವ್ಯಕ್ತಿಯೂ ಅಥವಾ ಸಂಸ್ಥೆಯೂ ಅಂಥ ಅಧಿಕಾರವನ್ನು ಹೊಂದಿರುವದಿಲ್ಲ. ಸಾರ್ವಭೌಮ ಅಧಿಕಾರಕ್ಕೆ ಚ್ಯುತಿ ಬಂದಾಗ ರಾಜ್ಯವು ತನ್ನ ಅಧಿಕಾರವನ್ನು ಕಳೆದುಕೊಳ್ಳುತ್ತದೆ. ಆಂತರಿಕವಾಗಿ ರಾಜ್ಯದ ಸಾರ್ವಭೌಮ ಅಧಿಕಾರವನ್ನು ಯಾರೂ ನಿಷೇಧಿಸಲಾರರು. ಬಾಹ್ಯವಾಗಿಯೂ ಸಹ ಈ ಅಧಿಕಾರವನ್ನು ನಿರ್ಬಂಧಿಸಲಾರರು. ಆದರೆ ಅಂತರರಾಷ್ಟ್ರೀಯ ಕಾನೂನು, ಸಂಪ್ರದಾಯ ಇವೇ

ಮೊದಲಾದವುಗಳನ್ನು ರಾಜ್ಯವು ಮಾನ್ಯ ಮಾಡಬೇಕಾಗುತ್ತದೆ. ಹೀಗೆ ಮಾಡುವದರಿಂದ ರಾಜ್ಯವು ತನ್ನ ಸಾರ್ವಭೌಮ ಅಧಿಕಾರವನ್ನು ಕಳೆದುಕೊಳ್ಳುವದಿಲ್ಲ. ತನ್ನ ಸಾರ್ವಭೌಮ ಅಧಿಕಾರಕ್ಕೆ ಚ್ಯುತಿ ಬರದಂತೆ ಇಂತಹ ಅಂತರರಾಷ್ಟ್ರೀಯ ವಿಷಯಗಳನ್ನು ರಾಜ್ಯವು ಮನ್ನಿಸುತ್ತದೆ. ಅಲ್ಲಿ ಯಾವುದೇ ಒತ್ತಾಯವಿರುದಿಲ್ಲ. ಹೀಗಿದ್ದರೂ ಸಾರ್ವಭೌಮ ಅಧಿಕಾರಕ್ಕೆ ಕೆಲವೊಂದು ಮಿತಿಗಳಿವೆ. ಬಾಹ್ಯವಾಗಿ ಕೆಲವೊಂದು ಮಿತಿಗಳಿರುತ್ತವೆ. ಉದಾ:- ವಿಶ್ವಶಾಂತಿಗಾಗಿ ಅಂತರರಾಷ್ಟ್ರೀಯ ಕಾನೂನುಗಳನ್ನು ರಾಜ್ಯವು ಉಲ್ಲಂಘಿಸದು. ಆಂತರಿಕವಾಗಿಯೂ ಕೆಲವೊಂದು ಮಿತಿಗಳಿರುತ್ತವೆ. ಉದಾ :- ಸಾರ್ವಭೌಮ ಅಧಿಕಾರವು ರಾಜ್ಯದ ರೂಢಿ, ಪರಂಪರೆ, ಸಂಸ್ಕೃತಿಯನ್ನು ಅಲಕ್ಷಿಸದು. ರಾಜ್ಯದ ಪ್ರಜೆಗಳು ಕೆಲವೊಂದು ಸಲ ಅದರ ವಿರುದ್ಧ ಚಳುವಳಿ ಸಹ ಹೂಡಬಹುದು. ಹೀಗೆ ಸಾರ್ವಭೌಮ ಅಧಿಕಾರಕ್ಕೆ ಕೆಲ ಬಾಹ್ಯ ಮತ್ತು ಆಂತರಿಕ ಮಿತಿಗಳು ಇರುತ್ತವೆ.

೬. **ಅದು ಸರ್ವವ್ಯಾಪಿಯಾಗಿದೆ :-** ರಾಜ್ಯದ ಸಾರ್ವಭೌಮ ಅಧಿಕಾರವು ಇಡೀಯ ರಾಜ್ಯವನ್ನೆ ವ್ಯಾಪಿಸಿರುತ್ತದೆ. ರಾಜ್ಯದಲ್ಲಿರುವ ಎಲ್ಲ ವ್ಯಕ್ತಿ ಮತ್ತು ಸಂಘ ಸಂಸ್ಥೆಗಳ ಮೇಲೆ ರಾಜ್ಯವು ಈ ಅಧಿಕಾರವನ್ನು ಚಲಾಯಿಸುತ್ತದೆ. ಅಂದರೆ ರಾಜ್ಯದಲ್ಲಿರುವ ಎಲ್ಲ ವ್ಯಕ್ತಿಗಳು ಮತ್ತು ಸಂಘ ಸಂಸ್ಥೆಗಳು ಸಾರ್ವಭೌಮ ಅಧಿಕಾರದ ವ್ಯಾಪ್ತಿಯಲ್ಲಿ ಬರುತ್ತಾರೆ. ಅವರೆಲ್ಲರೂ ಈ ಅಧಿಕಾರಕ್ಕೆ ವಿಧೇಯರಾಗಿರಲಿಕ್ಕೆ ಬೇಕು. ಈ ವಿಷಯದಲ್ಲಿ ರಾಜ್ಯವು ಯಾರಿಗೂ, ಯಾವ ಸಂಘ ಸಂಸ್ಥೆಗೂ ಯಾವ ರಿಯಾಯ್ತಿಯನ್ನು ತೋರಿಸಲಾರದು. ಯಾರಾದರೂ ಈ ಅಧಿಕಾರವನ್ನು ಕಿಂಚಿತ್ತಾದರೂ ವಿರೋಧಿಸಿದರೆ ಅವರನ್ನು ರಾಜ್ಯವು ಶಿಕ್ಷಿಸುತ್ತದೆ. ಆದರೆ ಇದಕ್ಕೆ ಕೆಲವೊಂದು ಅಪವಾದಗಳುಂಟು. ಪರದೇಶದ ರಾಯಭಾರಿಗಳು ಬೇರೆ ಬೇರೆ ದೇಶದ ಪ್ರಜೆಗಳಾಗಿದ್ದು ಅವರು ತಮ್ಮ ದೇಶಗಳಿಗೆ ವಿಧೇಯರಾಗಿರುವದರಿಂದ ಅವರಿಗೆ ರಿಯಾಯಿತ್ತಿ ತೋರಿಸಬೇಕಾಗುತ್ತದೆ. ಸ್ನೇಹ ಮತ್ತು ಸೌಹಾರ್ದ, ಸಹಕಾರ ಮತ್ತು ಸಧೀಚ್ಛೆಗಳಿಗಾಗಿ ರಾಜ್ಯ ರಾಜ್ಯಗಳಲ್ಲಿ ಇಂಥ ತಿಳಿವಳಿಕೆ ಇರುತ್ತದೆ. ಆದರೆ ಇಂತಹ ವಿನಾಯತಿಗಳನ್ನು ದುರುಪಯೋಗ ಪಡಿಸಿಕೊಂಡರೆ ಅವುಗಳನ್ನು ಹಿಂತೆಗೆದುಕೊಳ್ಳುವ ಅಧಿಕಾರ ರಾಜ್ಯಕ್ಕೆ ಇರುತ್ತದೆ. ರಾಯಭಾರಿಗಳಿಗೆ ತೋರಿಸುವ ವಿನಾಯತಿಗಳು ಈ ರೀತಿಯಾಗಿವೆ. ಅವರು ತಮ್ಮ ದೇಶದ ಧ್ವಜವನ್ನೇ ತಮ್ಮ ಕಛೇರಿಯಲ್ಲಿ ಹಾರಿಸುವರು ಮತ್ತು ತಮ್ಮ ರಾಷ್ಟ್ರಗೀತೆಯನ್ನೇ ಹಾಡುವರು. ಆದರೆ ರಾಯಭಾರಿಗಳ ಚಟುವಟಿಕೆಯಿಂದ ದೇಶದ ಶಾಂತಿಗೆ ಭಂಗ ಉಂಟಾಗುವ ಸಂಭವ ಕಂಡುಬಂದರೆ ಅಂತಹ ರಾಯಭಾರಿಗಳನ್ನು ರಾಜ್ಯದಿಂದ ಹೊರಗೆ ಹಾಕಲು ರಾಜ್ಯಕ್ಕೆ ಅಧಿಕಾರವಿದೆ.

ಈ ಪ್ರಕಾರ ರಾಯಭಾರಿಗಳನ್ನು ಹೊರತು ಪಡಿಸಿ ಉಳಿದೆಲ್ಲ ಪ್ರಜೆಗಳು ಮತ್ತು ಸಂಘಸಂಸ್ಥೆಗಳು ರಾಜ್ಯದ ಸಾರ್ವಭೌಮ ಅಧಿಕಾರಕ್ಕೆ ವಿಧೇಯರಾಗಿರಲಿಕ್ಕೇ ಬೇಕಾಗುತ್ತದೆ.

ಇ. ಕಾನೂನು

## ಸ್ವರೂಪ ಮತ್ತು ಮಹತ್ವ

ಸಮಾಜ ಜೀವಿಯಾಗಿರುವ ಮನುಷ್ಯ ಜಗಳಗಂಟನೂ ಹೌದು. ಆದ್ದರಿಂದ ಸಾಂಘಿಕ ಜೀವನದಲ್ಲಿ ಕಲಹಗಳು ಉದ್ಭವಿಸುವದು ಸಹಜ. ಸಮಾಜದಲ್ಲಿ ವಾಸಿಸುವ ಜನರ ಪರಸ್ಪರ ಸಂಬಂಧಗಳನ್ನು ನಿಯಂತ್ರಿಸಿ ಕಲಹಗಳು ಉದ್ಭವಿಸದಂತೆ ಮಾಡಲು ಕೆಲವು ನಿಯಮಗಳು ಅತ್ಯಾವಶ್ಯಕ.ಇಲ್ಲದಿದ್ದಲ್ಲಿ ಸಮಾಜ ಹೆಚ್ಚು ಕಾಲ ಮುಂದುವರೆಯಲಾರದು. ಈ ನಿಯಮಗಳಿಗೆ ಮೂಲಾಧಾರ ಸಂಪ್ರದಾಯಗಳು. ಈ ಸಾಮಾಜಿಕ ನಿಯಮಗಳು ಲಿಖಿತ ರೂಪದಲ್ಲಿ ಇರುವದಿಲ್ಲ. ಎಲ್ಲರೂ ಅವುಗಳಿಗೆ ಅನುಗುಣವಾಗಿಯೇ ನಡೆಯಬೇಕೆಂಬ ಬಲವಂತವು ಇರುವದಿಲ್ಲ. ಆದರೂ ಜನರು ಸಾಂಪ್ರದಾಯಿಕವಾಗಿ ನಡೆದುಕೊಂಡು ನಿಯಮಗಳನ್ನೂ ಅನುಸರಿಸಿ ನಡೆಯುತ್ತಾರೆ. ಇವುಗಳನ್ನು ಯಾವ ವ್ಯಕ್ತಿಯೂ ರೂಪಿಸಿಲ್ಲ.ಈ ನಿಯಮಗಳ ಉಗಮಕ್ಕೆ ವ್ಯಕ್ತಿ ಸಮಾಜದಲ್ಲಿರಬೇಕೆಂಬ ಬಯಕೆ ಮತ್ತು ಸಮಾಜದ ಸನ್ನಿವೇಶಗಳೇ ಮುಖ್ಯ ಕಾರಣ. ಈ ರೀತಿ ಸಾಂಘಿಕ ಜೀವನವೆಂದರೆ ನಿಯಂತ್ರಿತ ಮತ್ತು ವ್ಯವಸ್ಥಿತ ಜೀವನ ಎಂದು ಅರ್ಥವಾಗುತ್ತದೆ. ಸಾಮಾನ್ಯವಾಗಿ ಸಮಾಜದಲ್ಲಿ ರೂಢಿ ಸಂಪ್ರದಾಯ ಮುಂತಾದ ಸಾಮಾಜಿಕ ನಿಯಮಗಳನ್ನು ಎಲ್ಲರೂ ಪಾಲಿಸುತ್ತಾರೆ. ಉದಾ :- ಮಕ್ಕಳು ತಮ್ಮ ತಂದೆ ತಾಯಿಗಳಿಗೆ ವಿಧೇಯರಾಗಿರಬೇಕು ಇತ್ಯಾದಿ. ಇವುಗಳನ್ನು ಪಾಲಿಸಬೇಕೆಂಬ ಕಡ್ಡಾಯವೂ ಇಲ್ಲ. ಆದಾಗ್ಯೂ ಈ ಸಂಪ್ರದಾಯಗಳಿಗೆ ವಿರುದ್ಧವಾಗಿ ವರ್ತಿಸಿದರೆ ಸಾಮಾಜಿಕ ನಿಂದನೆ ಇತ್ಯಾದಿ ಕ್ರಮಗಳಿಗೆ ಗುರಿಯಾಗಬೇಕಾಗುತ್ತದೆ. ಆದರೆ ಸರ್ಕಾರ ಯಾವುದೇ ಶಿಕ್ಷೆಯನ್ನು ವಿಧಿಸುವದಿಲ್ಲ.

ರಾಜ್ಯದ ಉದಯದೊಡನೆ ಈ ಸಾಂಪ್ರದಾಯಿಕ ನಿಯಮಗಳಲ್ಲಿ ಅತ್ಯವಶ್ಯಕವಾದ ಕೆಲವನ್ನು ರಾಜಕೀಯ ನಿಯಮಗಳಾಗಿ ಪರಿವರ್ತಿಸಲಾಯಿತು. ಇಂತಹ ರಾಜಕೀಯ ನಿಯಮಗಳನ್ನೇ ಕಾನೂನುಗಳೆಂದು ಕರೆಯುವರು.

ರಾಜ್ಯ ತನ್ನ ಪ್ರಜೆಗಳ ಸಾಧಾರಣ ವರ್ತನೆಯನ್ನು ನಿರ್ಧರಿಸಲು ಮತ್ತು ನಿಯಂತ್ರಿಸಲು ರೂಪಿಸುವ ನಿಯಮಗಳಿಗೆ ಕಾನೂನುಗಳೆಂದು ಹೇಳಬಹುದು. ರಾಜ್ಯಕ್ಕೆ ಪರಮಾಧಿಕಾರ ಮುಖ್ಯವಾಗಿರುವಂತೆ ಪರಮಾಧಿಕಾರಕ್ಕೆ ಕಾನೂನು ಮುಖ್ಯವಾಗಿದೆ. ಹಾಗೆಯೇ ಕಾನೂನಿಗೆ ನ್ಯಾಯಪಾಲನೆ ಮುಖ್ಯವಾಗಿದೆ. ಅಂದರೆ ಪರಮಾಧಿಕಾರವಿಲ್ಲದೇ ರಾಜ್ಯವಿರುವಂತಿಲ್ಲ. ಕಾನೂನಿಲ್ಲದೇ ಪರಮಾಧಿಕಾರವಿರುವಂತಿಲ್ಲ.ನ್ಯಾಯವಿಲ್ಲದೇ ಕಾನೂನಿರುವಂತಿಲ್ಲ.

ಮನುಷ್ಯನ ನಡತೆಯನ್ನು ಅಧಿಕಾರದ ಮೂಲಕ ನಿಯಂತ್ರಿಸುವ

ನಿಯಮಗಳೇ ಕಾನೂನು ಎಂದು ಹೇಳಬಹುದು. ರಾಜ್ಯ ತನ್ನ ಇಚ್ಛೆಗಳನ್ನೂ ಕಾನೂನು ಮೂಲಕ ವ್ಯಕ್ತ ಪಡಿಸುತ್ತದೆ. ವ್ಯಕ್ತಿ ಎರಡು ಬಗೆಯ ಕಾನೂನುಗಳಿಗೆ ಬದ್ಧನಾಗಿರುತ್ತಾನೆ ಅಂದರೆ ಅವನ ಬಾಹ್ಯ ಚಟುವಟಿಕೆಗಳನ್ನು ನಿಯಂತ್ರಿಸುವ ರಾಜಕೀಯ ಕಾನೂನುಗಳಿಗೆ ಮತ್ತು ಅವನ ಯೋಚನೆ ಇತ್ಯಾದಿಗಳನ್ನು ನಿಯಂತ್ರಿಸುವ ನೈತಿಕ ಕಾನೂನುಗಳಿಗೆ. ನೈತಿಕ ಕಾನೂನುಗಳಿಗೆ ಸರಕಾರದ ಮಾನ್ಯತೆ ಇಲ್ಲದ ಕಾರಣ ಅವನ್ನು ಮುರಿದವರಿಗೆ ದೈಹಿಕ ಶಿಕ್ಷೆ ವಿಧಿಸುವಂತಿಲ್ಲ. ಆದರೆ ರಾಜಕೀಯ ಕಾನೂನುಗಳು ಸರ್ಕಾರದ ಮಾನ್ಯತೆ ಪಡೆದಿರುವದರಿಂದ ಅವುಗಳನ್ನು ಉಲ್ಲಂಘಿಸಿದವರಿಗೆ ದೈಹಿಕ ಶಿಕ್ಷೆ ವಿಧಿಸಲಾಗುವದು. ಗ್ರೀಕ್ ರಾಜಕೀಯ ತತ್ವಜ್ಞಾನಿಯಾದ ಪ್ಲೇಟೋರ ಕಾಲದಿಂದಲೂ ರಾಜ್ಯದ ಕಾರ್ಯ-ಚಟುವಟಿಕೆಯಲ್ಲಿ ಕಾನೂನಿನ ಮಾಹತ್ವವು ತತ್ವಜ್ಞಾನಿಗಳಿಗೆ ಒಂದು ಪ್ರಮುಖವಾದ ವಿಷಯವಾಗಿದೆ. ಪ್ರಾರಂಭದಲ್ಲಿ ಪ್ಲೇಟೋ ಕಾನೂನಿನ ಮೂಲಕ ತತ್ವಜ್ಞಾನಿ ಅರಸನ ಆಳ್ವಿಕೆಗೆ ಹೆಚ್ಚಿನ ಮಹತ್ವವನ್ನು ನೀಡಿದ್ದರೆ,ನಂತರದ ಕಾಲದಲ್ಲಿ ಕಾನೂನಿಗೆ ಮಹತ್ತರ ಸ್ಥಾನವನ್ನು ಕೊಟ್ಟಿದ್ದಾನೆ. ಅರಿಸ್ಟಾಟಲ್‌ರು ಕೂಡಾ ಕಾನೂನಿಗೆ ನೀಡಿರುವ ಮಹತ್ವವನ್ನು ಆತನ ಬರವಣಿಗೆಯಲ್ಲಿಯೇ ಕಾಣಬಹುದು. ರೋಮನ್ನರು ಮತ್ತು ಮಧ್ಯಯುಗದ ಚಿಂತಕರು ಕೂಡಾ ರಾಜ್ಯದ ಆಡಳಿತ ವ್ಯವಹಾರದಲ್ಲಿ ಕಾನೂನಿಗೆ ಪ್ರಥಮ ಆದ್ಯತೆಯನ್ನು ನೀಡಿದ್ದಾರೆ. ಆದರೆ ಇಂದಿನ ದಿನಗಳಲ್ಲಿ ವ್ಯಕ್ತಿಯ ಆಳ್ವಿಕೆಗೆ ಸಂಬಂಧಿಸಿದಂತೆ ಕಾನೂನಿನ ಆಳ್ವಿಕೆಗೆ ಹೆಚ್ಚಿನ ಆಧ್ಯತೆಯನ್ನು ನೀಡಲಾಗಿದೆ.

ಕಾನೂನು ಎಂಬ ಪದವನ್ನು ವಿವಿಧ ಕ್ಷೇತ್ರಗಳಲ್ಲಿ ವಿವಿಧ ಅರ್ಥ ಅಥವಾ ರೂಪದಲ್ಲಿ ಬಳಸಲಾಗಿದೆ. ಭೌತಶಾಸ್ತ್ರದಲ್ಲಿ ಕಾನೂನನ್ನು ಕಾರಣ ಮತ್ತು ಪರಿಣಾಮವನ್ನು ಸೂಚಿಸಲು ಬಳಲಾಗಿದೆ. ಉದಾ : ನ್ಯೂಟನ್ನನ ಗುರುತ್ವಾಕರ್ಷಣ ಶಕ್ತಿಯ ನಿಯಮವೆಂದು ತಿಳಿಸಲಾಗಿದೆ. ನೀತಿಶಾಸ್ತ್ರದಲ್ಲಿ ವ್ಯಕ್ತಿಯು ಯಾವಾಗಲೂ ಸತ್ಯವನ್ನು ನುಡಿಯಬೇಕು. ದುರ್ಬಲರಿಗೆ ಸಹಾಯ ಮಾಡಬೇಕು ಎಂಬ ನೈತಿಕ ನಿಯಮ ಅಥವಾ ಕಾನೂನುಗಳ ಬಗ್ಗೆ ಮಾತನಾಡುತ್ತೇವೆ. ಕಾನೂನು ಶಾಸ್ತ್ರದಲ್ಲಿ ಕ್ರಿಮಿನಲ್‌ಲಾ, ಸಿವಿಲ್ ಲಾ ಅಫ್ ದ ಲ್ಯಾಂಡ್ ಎಂದು ಪ್ರಯೋಗಿಸುತ್ತೇವೆ. ಅರ್ಥಶಾಸ್ತ್ರದಲ್ಲಿ ಬೇಡಿಕೆಯ ನಿಯಮ, ಪೂರೈಕೆಯ ನಿಯಮ ಮುಂತಾದವನ್ನು ಕಾಣುತ್ತೇವೆ. ರಾಜ್ಯಶಾಸ್ತ್ರದಲ್ಲಿ ರಾಜ್ಯದ ಕಾರ್ಯಕ್ಷೇತ್ರವನ್ನು ಗುರುತಿಸಲು ಹಾಗೂ ವ್ಯಕ್ತಿಯ ವರ್ತನೆಯನ್ನು ನಿಯಂತ್ರಿಸಲು ರಚಿಸಿರುವ ನಿಯಮಗಳೇ ಕಾನೂನುಗಳಾಗಿವೆ.

ಕಾನೂನು ಎಂಬ ಪದವು ಅಸ್ಪಷ್ಟವಾಗಿದ್ದು ಇದರ ಅರ್ಥದ ಬಗ್ಗೆ ರಾಜ್ಯಶಾಸ್ತ್ರಜ್ಞರಲ್ಲಿ ಅಲ್ಪಸ್ವಲ್ಪ ಒಮ್ಮತವಿದ್ದರೂ ನಿರ್ಣಯಾತ್ಮಕ ಉತ್ತರವಿಲ್ಲ. ಕಾನೂನು **(Law)** ಎಂಬ ಪದವು **(Lag)** ಎಂಬ ಓಲ್ಡ್ ಟ್ಯುಟಾನಿಕ್ ರೂಟ್ **(Old Teutonic Root)** ದಿಂದ ಬಂದಿರುತ್ತದೆ. ಲ್ಯಾಗ್ ಎಂದರೆ ಯಾವುದಾದರೂ ವಿಷಯವನ್ನು

ಸ್ಥಿರಪಡಿಸುವದು ಅಥವಾ ಒಂದೇ ಸಮನಾಗಿರಿಸುವದು ಅಥವಾ ನಿಶ್ಚತ ನಿಯಮ ಎಂದರ್ಥವಾಗುತ್ತದೆ.

ರಾಜ್ಯಶಾಸ್ತ್ರದಲ್ಲಿ ಕಾನೂನು ಎಂಬ ಪದದ ಅರ್ಥವನ್ನು ನಿರ್ದಿಷ್ಟ ರೀತಿಯಲ್ಲಿ ಕೊಡಲು ಸಾಧ್ಯವಿಲ್ಲದಿರುವದರಿಂದ ವಿವಿಧ ರಾಜಕೀಯ ಚಿಂತಕರು ಮತ್ತು ನ್ಯಾಯಶಾಸ್ತ್ರಜ್ಞರು ನಾನಾರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅವು ಕೆಳಗಿನಂತಿವೆ,

ಬಾರ್ಕರ 'ಮಾನವನ ವಿಧಿಬದ್ಧ ಅಧಿಕಾರದಿಂದ ಜಾರಿಗೊಳಿಸಬಹುದಾದ ಯಾವುದೇ ಪ್ರಜೆಯಿಂದ ನಿವೇದಿಸಿಕೊಳ್ಳಬಹುದಾದ ಮತ್ತು ಮಾನ್ಯ ಮಾಡಲ್ಪಟ್ಟ ಮೌಲ್ಯಯುತ ರೂಢಿಯನ್ನು ಕಾನೂನು' ಎನ್ನಲಾಗಿದೆ.

ಜಾನ್ ಆಸ್ಟಿನ್ 'ನಿರ್ದಿಷ್ಟ ಶ್ರೇಷ್ಟ ವ್ಯಕ್ತಿಯು ಕನಿಷ್ಠ ವ್ಯಕ್ತಿಗೆ ನೀಡುವ ಆಜ್ಞೆಯೇ ಕಾನೂನು.'

ಜಾನ್ ಎರಸ್ಕಿನ್ 'ಸರಕಾರವು ತನ್ನ ಪ್ರಜೆಗಳ ಮೇಲೆ ಕಡ್ಡಾಯವಾಗಿ ಹೇರುವ ನಿಯಮಗಳೇ ಕಾನೂನುಗಳು'

ಟಿ. ಎಚ್. ಗ್ರೀನ್ 'ರಾಜ್ಯದಿಂದ ಆದೇಶಿಸಲ್ಪಟ್ಟ ಹಕ್ಕು ಮತ್ತು ಕರ್ತವ್ಯಗಳ ವ್ಯವಸ್ಥೆಯೇ ಕಾನೂನು'

ಪ್ರೊ.ಹಾಲೆಂಡ್ 'ಸ್ವತಂತ್ರ ರಾಜಕೀಯ ಪರಮಾಧಿಕಾರವು ಕಡ್ಡಾಯವಾಗಿ ಜಾರಿಗೆ ತರುವ, ಮಾನವನ ಬಾಹ್ಯ ಚಟುವಟಿಕೆಗಳನ್ನು ನಿಯಂತ್ರಿಸುವ ಸಾಮಾನ್ಯ ನಿಯಮವೇ ಕಾನೂನು.'

ಗೆಟೆಲ್ 'ಅಧಿಕೃತವಾಗಿ ಅಧಿಕಾರದಲ್ಲಿರುವವರು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಕೊಡುವ ಆದೇಶಗಳೇ ಕಾನೂನುಗಳು.'

ಮೇಲ್ಕಂಡ ವ್ಯಾಖ್ಯಾನಗಳನ್ನು ಗಮನಿಸಿದಾಗ ಅನಾದಿ ಕಾಲದಿಂದ ಅಸ್ತಿತ್ವದಲ್ಲಿರುವ ರೂಢಿ ಅಥವಾ ಸಂಪ್ರದಾಯಗಳು ಅಥವಾ ಸಾಮಾಜಿತ ನಿಯಮಗಳು ಕಾನೂನಾಗಿ ಪರಿವರ್ತಿತಗೊಂಡಿವೆ. ಇವುಗಳು ಮಾನವನ ಬಾಹ್ಯ ಚಟುವಟಿಕೆಗಳನ್ನು ಹಾಗೂ ನಡತೆಯನ್ನು ಕಟ್ಟುನಿಟ್ಟಾಗಿ ನಿಯಂತ್ರಿಸುವ ಸಾಮಾಜಿಕ ನಿಯಮಗಳಾಗಿವೆ. ನ್ಯಾಯಾಲಯದ ಮನ್ನಣೆ ಪಡೆದ ರೂಢಿ ಸಂಪ್ರದಾಯಗಳೇ ಕಾನೂನುಗಳಾಗಿ ರೂಪುಗೊಂಡಿದ್ದು ಅವುಗಳನ್ನು ಉಲ್ಲಂಘಿಸಿದವರಿಗೆ ಸೂಕ್ತ ಶಿಕ್ಷೆಯನ್ನು ನೀಡುವ ಸಾಮರ್ಥ್ಯವನ್ನು ಅವು ಹೊಂದಿವೆ. ರಾಜ್ಯವು ತನ್ನ ಪರಮಾಧಿಕಾರವನ್ನು ಕಾನೂನಿನ ಮೂಲಕ ಚಲಾಯಿಸುತ್ತದೆ. ಅವಶ್ಯಕವಾದಾಗ ರಾಜ್ಯವು ಬಲಪ್ರಯೋಗದ ಮೂಲಕ ಕಾನೂನನ್ನು ಜಾರಿಗೊಳಿಸಿ ಶಿಸ್ತು, ಶಾಂತಿ ಮತ್ತು ಸುವ್ಯವಸ್ಥೆಯನ್ನು ಕಾಪಾಡುತ್ತದೆ.

ಕಾನೂನಿಗೆ ಸಮಾನಾರ್ಥವಾಗಿ ಅನೇಕ ಪದಗಳು ಬಳಕೆಯಲ್ಲಿವೆ ಉದಾ:- ಶಾಸನ, ವಿಧಿ, ನಿಯಮ, ಆಜ್ಞೆ, ಆದೇಶ, ಅಪ್ಪಣೆ ಇವೆ ಮುಂತಾದವುಗಳು. ಇವುಗಳೆಲ್ಲ ಬಾಹ್ಯ ನೋಟಕ್ಕೆ ಒಂದೇ ರೀತಿಯಾಗಿ ಕಂಡರೂ ಒಂದೊಂದು ತನ್ನದೇ ಅದ ವಿಶೇಷತೆಯನ್ನು ಹೊಂದಿಕೊಂಡಿದೆ. ಉದಾ :- ವಿಜ್ಞಾನ ಕ್ಷೇತ್ರದಲ್ಲಿ ನಿಯಮ ಎಂಬ ಪದವು ಒಂದು ನಿರ್ದಿಷ್ಟವಾದ ಅರ್ಥವನ್ನು ಕೊಡುತ್ತದೆ. ಇಲ್ಲಿ ನಿಯಮವು ಒಂದು ವಿಷಯದ ಕಾರಣಗಳು ಮತ್ತು ಪರಿಣಾಮಕ್ಕೆ ಸಂಬಂದಿಸಿದೆ. ಹಾಗೂ ಸಾರ್ವತ್ರಿಕ-ವಾದುದಾಗಿದೆ. ಉದಾ :- ಗುರುತ್ವಾಕರ್ಷಣ ಶಕ್ತಿಯ ನಿಯಮಗಳು ಹಾಗೂ ಅರ್ಕಿಮಿಡಿಸ್‌ನ ತತ್ವ ಇತ್ಯಾದಿ. ಈ ನಿಯಮಗಳು ಸಾರ್ವತ್ರಿಕವೂ, ಕರಾರುವಾಕ್ಕಾದ ನಿಯಮಗಳೂ ಆಗಿವೆ. ಅದೇ ಪ್ರಕಾರ ವಿಧಿ ಎಂಬುದು ಕಾನೂನಿನ ಒಂದು ಅಂಶವಾದರೆ ಅಜ್ಞೆ ಎಂಬುದು ಕಾನೂನನ್ನು ಇತರರು ಪಾಲಿಸುವಂತೆ ಮಾಡಲು ಇರುವ ಅಧಿಕಾರಕ್ಕೆ ಅನ್ವಯವಾಗುತ್ತದೆ.

## ಕಾನೂನಿನ ವಿಧಗಳು

ಕಾನೂನುಗಳನ್ನು ಅನೇಕ ಅಂಶಗಳ ಆಧಾರದ ಮೇಲೆ ವರ್ಗೀಕರಿಸಲಾಗಿದೆ. ಕೆಲವರು ಕಾನೂನುಗಳನ್ನು ರಚಿಸಿದ ಅಂಶದ ಆಧಾರದಮೇಲೆ ಕಾನೂನುಗಳನ್ನು ವರ್ಗೀಕರಿಸಿದರೆ ಮತ್ತೆ ಕೆಲವರು ಸಂಬಂಧಪಟ್ಟ ವ್ಯಕ್ತಿಗಳ ಖಾಸಗಿ ಮತ್ತು ಸಾರ್ವತ್ರಿಕ ವರ್ತನೆಯ ಆಧಾರದಮೇಲೆ ಕಾನೂನುಗಳನ್ನು ವರ್ಗೀಕರಣ ಮಾಡಿದ್ದಾರೆ. ಸಾಮಾನ್ಯವಾಗಿ ರಾಜಕೀಯ ಕಾನೂನನ್ನು ಕೆಳಗೆ ನಮೂದಿಸಿದ ರೀತಿಯಲ್ಲಿ ವರ್ಗೀಕರಣ ಮಾಡಲಾಗಿದೆ.

### ೧. ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಕಾನೂನು

ತನ್ನ ಪ್ರಜೆಗಳ ವರ್ತನೆಯನ್ನು ನಿಯಂತ್ರಿಸಲು ರಾಜ್ಯ ನಿರ್ಮಿಸುವ ಕಾನೂನೇ ರಾಷ್ಟ್ರೀಯ ಕಾನೂನು. ರಾಜ್ಯದ ಶಾಸಕಾಂಗದಿಂದ ರೂಪಿತವಾಗುವ ಈ ಕಾನೂನು ರಾಜ್ಯಕ್ಕೂ ಅದರ ಪ್ರಜೆಗಳಿಗೂ ಇರುವ ಸಂಬಂಧವನ್ನು ನಿರ್ಣಯಿಸುತ್ತದೆ. ರಾಜ್ಯದ ವ್ಯಾಪ್ತಿಗೆ ಒಳಪಟ್ಟಿರುವವರೆಲ್ಲಾ ರಾಷ್ಟ್ರೀಯ ಕಾನೂನಿಗೆ ವಿಧೇಯರಾಗಿರಬೇಕು. ಈ ಕಾನೂನನ್ನು ಮುರಿದವರಿಗೆ ದೈಹಿಕ ಶಿಕ್ಷೆಯನ್ನು ಬೇಕಾದರೂ ವಿಧಿಸಬಹುದು. ಹಿಂದೆ ಈ ಕಾನೂನನ್ನು ಸ್ಥಳೀಯ ಕಾನೂನೆಂದು ಕರೆಯಲಾಗುತ್ತಿತ್ತು.

ರಾಷ್ಟ್ರೀಯ ಕಾನೂನಿಗೆ ಪ್ರತಿಯಾದ ಕಾನೂನಿಗೆ ಅಂತರಾಷ್ಟ್ರೀಯ ಕಾನೂನು ಎಂದು ಹೆಸರು. ರಾಜ್ಯದ ಪ್ರಜೆಗಳ ನಡವಳಿಕೆಯನ್ನು ನಿಯಂತ್ರಿಸಲು ಕಾನೂನು-ಗಳಿರುವಂತೆ ವಿಶ್ವದಲ್ಲಿರುವ ಎಲ್ಲ ರಾಜ್ಯಗಳ ಪರಸ್ಪರ ಸಂಬಂಧಗಳನ್ನು ನಿಯಂತ್ರಿಸಲು ಕಾನೂನುಗಳಿವೆ. ಇವೇ ಅಂತರಾಷ್ಟ್ರೀಯ ಕಾನೂನುಗಳು. ರಾಜ್ಯದ ಕಾನೂನಿಗೆ ರಾಜ್ಯದ

ಶಕ್ತಿಯ ಬೆಂಬಲವಿರುವದರಿಂದ ಅವನ್ನು ಮುರಿದವರಿಗೆ ಸರಕಾರ ಶಿಕ್ಷೆಯನ್ನು ವಿಧಿಸುತ್ತದೆ. ಆದರೆ ಅಂತರರಾಷ್ಟ್ರೀಯ ಕಾನೂನಿಗೆ ಈ ವಿಧವಾದ ಬೆಂಬಲವಿಲ್ಲ. ಈ ಕಾನೂನಿಗೆ ವಿಧೇಯತೆ ತೋರಿಸುವದರ ಮೂಲಕ ವಿಶ್ವಶಾಂತಿಯನ್ನು ಸ್ಥಾಪಿಸುವ ಕಾರ್ಯದಲ್ಲಿ ಸಹಕರಿಸಬೇಕಾದುದು ರಾಜ್ಯಗಳ ನೈತಿಕ ಕರ್ತವ್ಯ. ಒಂದುವೇಳೆ ಕೆಲವು ರಾಜ್ಯಗಳು ಈ ಕಾನೂನಿಗೆ ವಿಧೇಯತೆ ತೋರಿಸಲು ತಪ್ಪಿದಲ್ಲಿ ಅವುಗಳನ್ನು ಶಿಕ್ಷಿಸಲು ತಕ್ಕ ಅಧಿಕಾರ ಹೊಂದಿರುವ ಯಾವ ಸಂಸ್ಥೆಯೂ ಇಲ್ಲ. ಏಕೆಂದರೆ ವಿಶ್ವದಲ್ಲಿರುವ ರಾಜ್ಯಗಳೆಲ್ಲಾ ಸರ್ವಸ್ವತಂತ್ರ ರಾಜ್ಯಗಳು. ಆದ್ದರಿಂದ ಈ ಕಾನೂನಿಗೆ ವಿಧೇಯತೆ ತೋರಿಸುವಂತೆ ಯಾವ ರಾಜ್ಯವನ್ನು ಬಲವಂತಪಡಿಸುವದು ತಾತ್ವಿಕವಾಗಿ ಸಾಧ್ಯವಿಲ್ಲ. ವಿಶ್ವಸಂಸ್ಥೆಯ ಭದ್ರತಾ ಸಮಿತಿ ರಾಜ್ಯಗಳ ಮೇಲೆ ಈ ಕಾನೂನನ್ನು ಒತ್ತಾಯದಿಂದ ಹೇರುವ ಸ್ವಲ್ಪಮಟ್ಟಿನ ಅಧಿಕಾರವನ್ನು ಪಡೆದಿದೆ ಎಂದು ಹೇಳಬಹುದು. ಆದರೂ ಇದಕ್ಕೆ ಹಲವಾರು ಮಿತಿಗಳಿವೆ. ಈ ಕಾರಣಗಳಿಂದ ಕೆಲವರು ಅಂತರಾಷ್ಟ್ರೀಯ ಕಾನೂನನ್ನು ಅಂತರರಾಷ್ಟ್ರೀಯ ನಡತೆ ಎಂದು ಕರೆಯುವರು. ವಿಶ್ವರಾಜ್ಯ ಸ್ಥಾಪನೆಗಾಗಿ ವಿಶ್ವದ ಸಮಸ್ತ ರಾಜ್ಯಗಳೂ ತಮ್ಮ ಪರಮಾಧಿಕಾರವನ್ನು ಅದಕ್ಕೆ ವಶಪಡಿಸಿದಾಗ ಮಾತ್ರ ಅಂತರರಾಷ್ಟ್ರೀಯ ಕಾನೂನು ಪೂರ್ಣ ಕಾನೂನಿನ ಸ್ವರೂಪವನ್ನು ಪಡೆಯುತ್ತದೆ.

## ೨. ಸಂವಿಧಾನಾತ್ಮಕ ಮತ್ತು ಸಾಧಾರಣ ಕಾನೂನು

ಲಿಖಿತ ಸಂವಿಧಾನವನ್ನು ಹೊಂದಿರುವ ರಾಜ್ಯಗಳಲ್ಲಿ ಸಂವಿಧಾನಾತ್ಮಕ ಕಾನೂನು ಹಾಗೂ ಸಾಧಾರಣ ಕಾನೂನು ಎಂಬ ವಿಂಗಡಣೆಯನ್ನು ಮಾಡಬಹುದು. ಒಂದು ನಿರ್ದಿಷ್ಟವಾದ ತಜ್ಞರ ಸಮಿತಿಯ ಪ್ರಯತ್ನದ ಫಲವಾಗಿ ಸಂವಿಧಾನವು ಅಸ್ತಿತ್ವಕ್ಕೆ ಬಂದಿರುತ್ತದೆ. ಸಂವಿಧಾನವು ಸರಕಾರದ ವಿವಿಧ ಅಂಗಗಳ ರಚನೆ, ಅವುಗಳ ಅಧಿಕಾರ ವ್ಯಾಪ್ತಿ, ರಾಜ್ಯದ ಕರ್ತವ್ಯ, ಜನರ ಹಕ್ಕು ಮತ್ತು ಕರ್ತವ್ಯಗಳು, ಪ್ರಜೆಗಳಿಗೂ ರಾಜ್ಯಕ್ಕೂ ಇರುವ ಸಂಬಂಧ ಮುಂತಾದವುಗಳನ್ನು ನಿರ್ಧರಿಸುತ್ತದೆ. ಸಂವಿಧಾನಾತ್ಮಕ ಕಾನೂನನ್ನು ಬದಲಾಯಿಸಲು ವಿಶೇಷವಾದ ಒಂದು ವಿಧಾನವನ್ನು ಅನುಸರಿಸಲಾಗುವದಲ್ಲದೆ ಇದಕ್ಕೆ ವಿಶೇಷ ಬಹುಮತವೂ ಸಹ ಅಗತ್ಯ. ಭಾರತ ದೇಶದ ಸಂವಿಧಾನಾತ್ಮಕ ಕಾನೂನು ೧೯೫೦ ಜನೆವರಿ ೨೬ರಂದು ಜಾರಿಗೆ ಬಂದಿದೆ. ಅದರ ತಿದ್ದುಪಡಿಯ ವಿಧಾನ ೩೬೮ನೇ ನಿಯಮದಲ್ಲಿದೆ. ಸರಕಾರವು ಈ ಸಂವಿಧಾನದ ನಿರ್ದೇಶನದಂತೆ ತನ್ನ ಕೆಲಸಕಾರ್ಯಗಳನ್ನು ನಿರ್ವಹಿಸಬೇಕು.

ರಾಜ್ಯವು ತನ್ನ ನಾಗರಿಕರ ಕಾರ್ಯಚಟುವಟಿಕೆಗಳನ್ನು ನಿಯಂತ್ರಿಸಲು ರಚಿಸಿರುವ ಕಾನೂನುಗಳನ್ನು ಸಾಮಾನ್ಯಕಾನೂನು ಎಂದು ಕರೆಯಲಾಗುವದು. ಸಾಮಾನ್ಯ ಕಾನೂನು ವ್ಯಕ್ತಿಗಳ ಪರಸ್ಪರ ಸಂಬಂಧ, ವ್ಯಕ್ತಿಗೂ ಹಾಗೂ ರಾಜ್ಯಕ್ಕೂ ಇರುವ ಸಂಬಂಧವನ್ನು ತಿಳಿಸುತ್ತದೆ. ರಾಜ್ಯದ ಎಲ್ಲ ಜನರು ಈ ಕಾನೂನುಗಳನ್ನು ಪಾಲಿಸಲೇಬೇಕು. ಸಾಮಾನ್ಯ

ಕಾನೂನಿನ ವಿರುದ್ಧವಾಗಿ ವರ್ತಿಸಿದರೆ ಸರ್ಕಾರವು ಶಿಕ್ಷೆಯನ್ನು ವಿಧಿಸುತ್ತದೆ. ಪ್ರತಿಯೊಂದು ರಾಜ್ಯದ ಶಾಸನಸಭೆಗಳೂ ಒಂದು ಗೊತ್ತಾದ ಪದ್ಧತಿಯನ್ನು ಅನುಸರಿಸಿ ಈ ಕಾನೂನುಗಳನ್ನು ರಚಿಸುತ್ತವೆ. ರಾಜ್ಯದ ನ್ಯಾಯಾಲಯಗಳು ಸಹ ಕಾನೂನುಗಳನ್ನು ಅನುಸರಿಸುತ್ತವೆ.

## ೩. ಸಾರ್ವಜನಿಕ ಕಾನೂನು ಮತ್ತು ಖಾಸಗಿ ಕಾನೂನು

ಸಾಧಾರಣ ಕಾನೂನಿನಲ್ಲಿ ಎರಡು ವಿಧಗಳಿವೆ.

೧.ಸಾರ್ವಜನಿಕ ಕಾನೂನು

೨. ಖಾಸಗಿ ಕಾನೂನು

೧. ಸಾರ್ವಜನಿಕ ಕಾನೂನಿನಲ್ಲಿ ರಾಜ್ಯವು ಒಂದು ಪಕ್ಷವಾಗಿರುವದಲ್ಲದೆ ರಾಜ್ಯವೇ ಈ ಕಾನೂನುಗಳನ್ನು ಜನರು ಪರಿಪಾಲನೆ ಮಾಡುವಂತೆ ಮಾಡುತ್ತದೆ. ಸಾರ್ವಜನಿಕ ಕಾನೂನು ರಾಜ್ಯ ಮತ್ತು ಪೌರರ ನಡುವೆ ಇರುವ ಸಂಬಂಧವನ್ನು ತಿಳಿಸುವದರಿಂದ ಇದು ರಾಜ್ಯ ಮತ್ತು ಪೌರರಿಬ್ಬರಿಗೂ ಸಂಬಂಧಿಸಿದುದಾಗಿದೆ. ಜನರ ಅನುಕೂಲಕ್ಕಾಗಿ ರಾಜ್ಯವು ಈ ಕಾನೂನುಗಳನ್ನು ರಚಿಸುತ್ತದೆ. ಅಲ್ಲದೆ ಸಾರ್ವಜನಿಕ ಕಾನೂನುಗಳನ್ನು ಉಲ್ಲಂಘಿಸಿದವರಿಗೆ ರಾಜ್ಯ ವು ಶಿಕ್ಷೆಯನ್ನು ವಿಧಿಸಬಹುದಾದ ಅಧಿಕಾರವನ್ನು ಹೊಂದಿದೆ.

೨.ವ್ಯಕ್ತಿಗಳ ಪರಸ್ಪರ ಸಂಬಂಧವನ್ನು ತಿಳಿಸುವ ಕಾನೂನುಗಳನ್ನು ಖಾಸಗಿ ಕಾನೂನುಗಳೆಂದು ಕರೆಯಲಾಗುವದು. ಖಾಸಗಿ ಕಾನೂನುಗಳು ಜನರು ಒಬ್ಬರನ್ನೊಬ್ಬರು ಹೊಂದಿರುವ ಸಂಬಂಧವನ್ನು ನಿಯಂತ್ರಿಸುತ್ತದೆ. ಈ ಕಾನೂನುಗಳು ಇರುವದರಿಂದಲೆ ಪ್ರತಿಯೊಬ್ಬ ವ್ಯಕ್ತಿಯು ತನ್ನ ಹಕ್ಕುಗಳನ್ನು ಯಾವ ಆತಂಕವಿಲ್ಲದೆ ಅನುಭವಿಸಲು ಸಾಧ್ಯವಿದೆ.

## ೪. ಸಾಂಪ್ರದಾಯಿಕ ಕಾನೂನು ಮತ್ತು ಲೌಕಿಕ ಕಾನೂನು

ಸಾಂಪ್ರದಾಯಿಕ ಅಥವಾ ರೂಢಿಗತ ಕಾನೂನುಗಳೂ ಇಂಗ್ಲೆಂಡ್ ದೇಶಕ್ಕೆ ಸಂಬಂಧಪಟ್ಟವುಗಳಾಗಿವೆ. ಈ ಕಾನೂನುಗಳು ಇಂಗ್ಲೆಂಡ್ ದೇಶದಲ್ಲಿರುವ ಅಲಿಖಿತ ಕಾನೂನುಗಳಾಗಿವೆ. ಈ ಕಾನೂನುಗಳನ್ನು ರೂಢಿ ಮತ್ತು ಪದ್ಧತಿಯೋಪಾದಿಯಲ್ಲಿ ಜನರು ಅನುಸರಿಸುತ್ತಿರುತ್ತಾರೆ. ಯಾವ ಕಾನೂನಿನ ಪುಸ್ತಕದಲ್ಲಿಯೂ ಅಧಿಕೃತವಾಗಿ ಈ ಅಲಿಖಿತ ಕಾನೂನುಗಳ ತಿರುಳು ವಿವರಿಸಲ್ಪಟ್ಟಿಲ್ಲ. ಆದರೂ ಲಿಖಿತ ಕಾನೂನುಗಳ ರೀತಿಯಲ್ಲಿಯೇ ಈ ರೂಢಿಗತ ಕಾನೂನುಗಳು ಜನರಿಂದ ಅನುಸರಿಸಲ್ಪಡುತ್ತವೆ. ಇದಕ್ಕೆ ಪ್ರತಿಯಾಗಿ ಲೌಕಿಕ ಕಾನೂನು ಲಿಖಿತ ರೂಪದಲ್ಲಿರುತ್ತವೆ.

## ಇ. ಆಡಳಿತಾತ್ಮಕ ಹಾಗೂ ಸಾಮಾನ್ಯ ಕಾನೂನು

ಆಡಳಿತಾತ್ಮಕ ಕಾನೂನು ಯುರೋಪ್ ಖಂಡದ ಕೆಲವು ಭಾಗಗಳಲ್ಲಿ ವಿಶೇಷವಾಗಿ ಫ್ರಾನ್ಸ್‌ದಲ್ಲಿ ಅಸ್ತಿತ್ವದಲ್ಲಿರುವದಾಗಿ ತಿಳಿದುಬಂದಿದೆ. ಆಡಳಿತಾತ್ಮಕ ಕಾನೂನು ರಾಜ್ಯ ಮತ್ತು ಸರ್ಕಾರದ ನೌಕರ ಇವರುಗಳ ನಡುವಣ ಸಂಬಂಧವನ್ನು ನಿಯಂತ್ರಿಸುತ್ತವೆ. ಆದರೆ ಸಾಮಾನ್ಯ ಕಾನೂನು ರಾಜ್ಯ ಮತ್ತು ರಾಜ್ಯದ ಖಾಸಗಿ ಜನರ ಸಂಬಂಧವನ್ನು ನಿಯಂತ್ರಿಸುತ್ತದೆ.

**ಆಜ್ಞೆ (Ordinance) :-** ಕಾರ್ಯಾಂಗ ಹೊರಡಿಸಿದ ಒಂದು ಕಾನೂನನ್ನು ಆಜ್ಞೆ ಎಂದು ಕರೆಯಲಾಗುವದು. ಕಾರ್ಯಾಂಗವು ತನಗಿರುವ ಅಧಿಕಾರ ವ್ಯಾಪ್ತಿಯೊಳಗೆ ಹೊರಡಿಸುವ ಕಾನೂನನ್ನೇ ಆಜ್ಞೆ ಎಂದು ಕರೆಯಲಾಗುವದು. ಈ ಆಜ್ಞೆಗಳು ಶಾಶ್ವತವಾಗಿ ಉಳಿಯದೆ ಇರಬಹುದು. ಕೆಲವು ವಿಶೇಷ ಸಂದರ್ಭದಲ್ಲಿ ಆಡಳಿತದ ಅನುಕೂಲತೆಗೋಸ್ಕರ ಕಾರ್ಯಾಂಗವು ಇಂತಹ ಆಜ್ಞೆಗಳನ್ನು ಹೊರಡಿಸಬಹುದು.

## ಈ. ಸ್ವಾತಂತ್ರ್ಯ

### *ಸ್ವರೂಪ ಮತ್ತು ಮಹತ್ವ

ಪ್ರಾರಂಭದಿಂದಲೂ ಮಾನವ ಜನಾಂಗ ಮತ್ತು ರಾಜ್ಯಗಳೆರಡೂ ಸ್ವಾತಂತ್ರ್ಯದ ರಕ್ಷಣೆಗಾಗಿ ಬಹಳ ಶ್ರಮಿಸಿವೆ. ವ್ಯಕ್ತಿಯಾಗಲಿ ಅಥವಾ ರಾಜ್ಯವಾಗಲಿ ಸ್ವಾತಂತ್ರ್ಯವಿಲ್ಲದೆ ಯಾವುದೇ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಿಲ್ಲ. ಪುರಾತನ ಹಾಗೂ ಮಧ್ಯಯುಗದಲ್ಲಿ ಬ್ರಿಟನ್ನಿನ ನಿರಂಕುಶ ದೊರೆಗಳು ಸ್ವಾತಂತ್ರ್ಯದ ಹಕ್ಕನ್ನು ಕಡೆಗಣಿಸಿದ್ದರು. ಕ್ರಿ.ಶ.೧೬೮೮ ರ ರಕ್ತರಹಿತ ಕ್ರಾಂತಿಯಿಂದ ಬಹುಕಾಲದಿಂದ ಮುಂದುವರಿದುಕೊಂಡು ಬಂದಿದ್ದ ಕ್ರೂರದೊರೆಗಳ ನಿರಂಕುಶ ಆಡಳಿತವು ಅಂತ್ಯಗೊಂಡಿತು. ಈ ಕ್ರಾಂತಿಯು ಕ್ರಿ.ಶ. ೧೭೮೯ ಫ್ರಾನ್ಸ್ ಕ್ರಾಂತಿಗೂ ಕಾರಣವಾಯಿತು. ಹೀಗೆ ಜನತೆಯ ವ್ಯಕ್ತಿ ಸ್ವಾತಂತ್ರ್ಯದ ಹೋರಾಟವನ್ನು ಮುಂದುವರಿಸಿದಂತೆ ಪರಕೀಯರ ವಶದಲ್ಲಿದ್ದ ರಾಷ್ಟ್ರಗಳು ಸ್ವಾತಂತ್ರ್ಯ ಪಡೆಯಲು ತಮ್ಮ ಹೋರಾಟವನ್ನು ಮುಂದುವರಿಸಿದವು. ೧೯ನೇ ಶತಮಾನದಲ್ಲಿ ಇಟಲಿ, ೨೦ನೇ ಶತಮಾನದಲ್ಲಿ ಭಾರತ, ಮುಂತಾದ ರಾಷ್ಟ್ರಗಳು ತಮ್ಮ ಹೋರಾಟ, ಬಲಿದಾನದಿಂದ ಸ್ವತಂತ್ರ ರಾಷ್ಟ್ರಗಳಾಗಿ ಜನ್ಮತಾಳಿದವು.

ಸ್ವಾತಂತ್ರ್ಯ ಎಂಬ ಪರಿಕಲ್ಪನೆಯು ಎಲ್ಲ ಕಾಲದಲ್ಲಿಯೂ ಮಾನವನಿಗೆ ಒಂದು ಪ್ರಮುಖವಾದ ಬೇಡಿಕೆಯಾಗಿದೆ. ಆದುದರಿಂದ ಇದರ ಇತಿಹಾಸವು ರಾಜಕೀಯ

ತತ್ವಶಾಸ್ತ್ರದಷ್ಟೇ ಹಳೆಯದು. ಪ್ರತಿಯೊಬ್ಬ ಮಾನವನು ಅನಿರ್ಭಂಧಿತನಾಗಿ ಸ್ವತಂತ್ರನಾಗಿರಲು ಇಷ್ಟಪಡುತ್ತಾನೆ. ಅವನು ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಮತ್ತು ಜೀವನವನ್ನು ನೆಮ್ಮದಿಯಿಂದ ನಡೆಸಲು ಸ್ವಾತಂತ್ರ್ಯ ಅತ್ಯಗತ್ಯ. ಯಾವ ವಿಧವಾದ ಕಟ್ಟುಪಾಡುಗಳೂ ಇಲ್ಲದೆ ತನ್ನ ವ್ಯಕ್ತಿತ್ವವನ್ನು ವಿಕಾಸಪಡಿಸಿಕೊಳ್ಳಲು ಸ್ವಾತಂತ್ರ್ಯ ಬಹಳ ಮುಖ್ಯ. ಆದರೆ ಸರ್ಕಾರವು ಅನೇಕ ತರದ ಕಾನೂನುಗಳನ್ನು ಮಾಡಿ ಜನರ ಚಟುವಟಿಕೆಗಳನ್ನು ನಿಯಂತ್ರಿಸುತ್ತದೆ. ಆದ್ದರಿಂದ ಈ ಕಾನೂನುಗಳು ಜನರ ಸ್ವಾತಂತ್ರ್ಯಕ್ಕೆ ಧಕ್ಕೆಯನ್ನುಂಟು ಮಾಡಿವೆ ಎಂದು ತಿಳಿಯಬಾರದು. ಸರಕಾರವು ರಚಿಸುವ ಕಾನೂನುಗಳು ಮಾನವನ ಸ್ವಾತಂತ್ರ್ಯವನ್ನು ರಕ್ಷಣೆ ಮಾಡುವಂಥವುಗಳಾಗಿ ಸ್ವಾತಂತ್ರ್ಯದ ಅನುಭೋಗಕ್ಕೆ ಸಹಾಯಕವಾಗಿವೆ. ವಿನಹ ಸ್ವಾತಂತ್ರ್ಯವನ್ನು ಕಸಿದುಕೊಳ್ಳವದಿಲ್ಲ. ಮಿಗಿಲಾಗಿ ಕಾನೂನುಗಳು ಮನುಷ್ಯನ ಸ್ವಾತಂತ್ರ್ಯಕ್ಕೆ ರಕ್ಷಣೆಯನ್ನು ಕೊಡುತ್ತವೆ.

**ಲಿಬರ್ಟಿ** ಎಂಬ ಆಂಗ್ಲಪದವು ಲ್ಯಾಟಿನ್ ಭಾಷೆಯ **ಲಿಬರ್** ಎಂಬ ಪದದಿಂದ ಬಂದಿದೆ. **ಲಿಬರ್** ಎಂದರೆ ಎಲ್ಲಾ ಬಂಧನಗಳಿಂದ ಮುಕ್ತವಾಗುವದೆಂದರ್ಥ. ಸ್ವಾತಂತ್ರ್ಯವೆಂದರೆ ಯಾವ ಹೊರಗಿನ ಪ್ರಭಾವಕ್ಕೂ ಒಳಗಾಗದೆ ತಾನು ಇಚ್ಛಿಸಿದ ರೀತಿಯಲ್ಲಿ ವರ್ತಿಸಬಹುದಾದ ಅಧಿಕಾರ ಎಂದಾಗುತ್ತದೆ. ಆದರೆ ಯಾರೂ ಈ ರೀತಿಯಾದ ಸ್ವಾತಂತ್ರ್ಯವನ್ನು ಅನುಭವಿಸಲು ಸಾಧ್ಯವಿಲ್ಲ. ಸ್ವಾತಂತ್ರ್ಯ ಎಂದರೆ ಸ್ವೇಚ್ಛಾಚಾರದಿಂದ ನಡೆಯಬಹುದಾದ ಅಧಿಕಾರ ಎಂದು ಭಾವಿಸಿದರೆ ತಪ್ಪಾಗುತ್ತದೆ. ಸಮಾಜದಲ್ಲಿ ಯಾವ ವ್ಯಕ್ತಿಯೂ ಸ್ವೇಚ್ಛಾಚಾರಿಯಾಗಿ ವರ್ತಿಸಲು ಸಾಧ್ಯವಿಲ್ಲ. ತನ್ನಂತೆಯೇ ಇತರರು ಸಮಾಜದಲ್ಲಿ ವಾಸಿಸುತ್ತಿರುವದರಿಂದ ಪ್ರತಿಯೊಬ್ಬರೂ ಇತರರೊಡನೆ ವಾಸಿಸಬೇಕಾದುದರಿಂದ ಎಲ್ಲರು ಕೆಲವು ನಿರ್ಬಂಧಗಳಿಗೆ ಒಳಗಾದರೆ ಎಲ್ಲರೂ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಅನುಭವಿಸಲು ಸಾಧ್ಯವಾಗುತ್ತದೆ. ವ್ಯಕ್ತಿಯು ಅನಿರ್ಬಂದಿತನಾಗಿದ್ದರೆ ಆತನು ತನ್ನ ಸ್ವಾತಂತ್ರ್ಯವನ್ನು ಅನುಭವಿಸಲು ಸಾಧ್ಯವಿಲ್ಲ. ಆದ್ದರಿಂದ ಎಲ್ಲರೂ ಸ್ವಾತಂತ್ರ್ಯ ಅನುಭವಿಸಬೇಕಾದರೆ ಎಲ್ಲರೂ ಕೆಲವಾರು ಸಾರ್ವತ್ರಿಕ ಕಟ್ಟುಪಾಡುಗಳಿಗೆ ಒಳಗಾಗಬೇಕು. ಉದಾ :- ಸಂಜೆ ವೇಳೆ ದೀಪವಿಲ್ಲದೆ ವಾಹನ ನಡೆಸಬಾರದು, ವಾಹನಗಳನ್ನು ಎಡಭಾಗದಲ್ಲಿ ಓಡಿಸಬೇಕು ಇತ್ಯಾದಿ. ಇವುಗಳನ್ನು ಪಾಲಿಸದಿದ್ದಲ್ಲಿ ಮಾನವನ ಜೀವಕ್ಕೆ ಅಪಾಯ.

ಸ್ವಾತಂತ್ರ್ಯದ ಅರ್ಥವಿವರಣೆಯ ಬಗ್ಗೆ ಅನೇಕ ರಾಜ್ಯಶಾಸ್ತ್ರಜ್ಞರು ತಮ್ಮದೇ ಆದ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಅವು ; **ಪ್ರೋ.ಶೀಲೆ** 'ಸ್ವಾತಂತ್ರ್ಯವೆಂದರೆ ಎಲ್ಲೆ ಮೀರಿದ ಸರಕಾರಕ್ಕೆ ವಿರೋಧವಾದುದು'.

**ಬರ್ನ್** 'ವ್ಯಕ್ತಿಯೊಬ್ಬನಿಗೆ ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಅಭಿವೃದ್ಧಿ ಹೊಂದಲು ಇರುವ ಅವಕಾಶವೇ ಸ್ವಾತಂತ್ರ್ಯ.'

ಲಾಸ್ಕಿ 'ಯಾವ ವಾತಾವರಣದಲ್ಲಿ ಮಾನವ ತನ್ನ ಬಯಕೆಗಳನ್ನು ಈಡೇರಿಸಿಕೊಳ್ಳಲು ಸಾಧ್ಯವೋ ಆ ಸನ್ನಿವೇಶವನ್ನು ಸೃಷ್ಟಿಸಿ ಅದನ್ನು ಕಾಯ್ದುಕೊಂಡು ಬರುವ ಆಕಾಂಕ್ಷೆ.'

ಹರ್ಬರ್ಟ್‌ಸ್ಪೆನ್ಸರ್ 'ಮತ್ತೊಬ್ಬನ ಸ್ವಾತಂತ್ರ್ಯಕ್ಕೆ ಧಕ್ಕೆಬಾರದಂತೆ ಪ್ರತಿಯೊಬ್ಬನೂ ಸ್ವೇಚ್ಛಾಚಾರಿಯಾಗಿ ವರ್ತಿಸಲು ಸ್ವತಂತ್ರನಾಗಿರುವದೆ ಸ್ವಾತಂತ್ರ್ಯ.'

ಗಾಂಧೀಜಿ 'ಸ್ವಾತಂತ್ರ್ಯವು ನಿರ್ಬಂಧಗಳ ಮುಕ್ತ ವಾತಾವರಣವಾಗಿರುವದಿಲ್ಲ ಆದರೆ ಇದು ಸ್ವಾತಂತ್ರ್ಯದ ಬೆಳವಣಿಗೆಯಲ್ಲಿರುತ್ತದೆ.'

ಮೇಲ್ಕಂಡ ವ್ಯಾಖ್ಯೆಗಳ ಆಧಾರದ ಮೇಲೆ ಮಾನವನು ತನ್ನ ವ್ಯಕ್ತಿತ್ವವನ್ನು ಅಭಿವೃದ್ಧಿ ಪಡಿಸಿಕೊಳ್ಳಲು ಇರುವ ಮೌಲ್ಯಯುತ ಸೌಲಭ್ಯವೆ ಸ್ವಾತಂತ್ರ್ಯ ಎಂದು ಹೇಳಬಹುದು. ಕಾನೂನಿನ ಆಶ್ರಯದಲ್ಲಿ ರಾಜ್ಯದೊಳಗಿರುವ ಒಬ್ಬವ್ಯಕ್ತಿಯು ತನ್ನ ಇಚ್ಛೆಯಂತೆ ಯೋಚಿಸುವ, ವ್ಯಕ್ತಪಡಿಸುವ ಮತ್ತು ವರ್ತಿಸಲು ಹೊಂದಿರುವ ಅಧಿಕಾರವನ್ನು ಸ್ವಾತಂತ್ರ್ಯವೆನ್ನಲಾಗಿದೆ.

## ✸ಸ್ವಾತಂತ್ರ್ಯದ ವಿಧಗಳು

ಸ್ವಾತಂತ್ರ್ಯ ಎಂಬ ಪದವನ್ನು ನಾನಾ ಅರ್ಥಗಳಲ್ಲಿ ಬಳಸಲಾಗಿದೆ. ಈ ಎಲ್ಲಾ ವಿಧವಾದ ಅರ್ಥವನ್ನು ಅಭ್ಯಸಿಸಿದಾಗ ಮಾತ್ರ ಸ್ವಾತಂತ್ರ್ಯ ಎಂಬ ಪದದ ಸಂಪೂರ್ಣ ಅರಿವನ್ನು ಮಾಡಿಕೊಳ್ಳಲು ಸಾಧ್ಯ.

೧. **ನೈಸರ್ಗಿಕ ಸ್ವಾತಂತ್ರ್ಯ :** ಯಾವ ವಿಧವಾದ ನಿರ್ಬಂಧಗಳೂ ಇಲ್ಲದ ಸ್ವಾತಂತ್ರ್ಯವೇ ನೈಸರ್ಗಿಕ ಸ್ವಾತಂತ್ರ್ಯ. ಇದು ಪ್ರಕೃತಿದತ್ತವಾಗಿರುವ ಸ್ವಾತಂತ್ರ್ಯ. ಸಮಾಜ ಅಥವಾ ರಾಜ್ಯ ಸ್ಥಾಪನೆಯಾಗುವದಕ್ಕೆ ಮೊದಲೇ ಮನುಷ್ಯನಿಗೆ ಈ ವಿಧವಾದ ಸ್ವಾತಂತ್ರ್ಯವಿತ್ತೆಂದು ಹಾಬ್ಸ್,ಲಾಕ್ ಮತ್ತು ರೂಸೋ ಎಂಬ ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಕಾರಣ ರೂಸೋ 'ಮನುಷ್ಯನು ಸ್ವತಂತ್ರನಾಗಿ ಹುಟ್ಟಿದರೂ ಎಲ್ಲೆಲ್ಲಿಯೂ ಅವನು ಸಂಕೋಲೆಯಲ್ಲಿರುವನು' ಎಂದು ನೈಸರ್ಗಿಕ ಸ್ವಾತಂತ್ರ್ಯ ನಾಶವಾಗುವದಕ್ಕೆ ವಿಷಾದಪಟ್ಟಿರುವನು.

ನೈಸರ್ಗಿಕ ಸ್ವಾತಂತ್ರ್ಯವೆಂದರೆ ಅನಿರ್ಬಂಧ ಸ್ವಾತಂತ್ರ್ಯವಾದುದರಿಂದ ಅದನ್ನು ಅನುಭವಿಸುವದು ಸಾಧ್ಯವಿಲ್ಲ. ಈ ವಿಧವಾದ ಸ್ವಾತಂತ್ರ್ಯಕ್ಕೆ ಇಂದು ಬೆಲೆ ಇಲ್ಲವಾದರೂ ಅದನ್ನು ಬೇರೆಯೇ ಅರ್ಥದಲ್ಲಿ ಬಳಸಬಹುದು. ನಮಗೆ ನೈಸರ್ಗಿಕವಾಗಿ ಬಂದಿರುವ ಸ್ವಾತಂತ್ರ್ಯಗಳಲ್ಲಿ ಕೆಲವನ್ನು ಉಚಿತ ರೀತಿಯಲ್ಲಿ ಉಪಯೋಗಿಸಿ ಸರ್ವರ ಕ್ಷೇಮವನ್ನು ಸಾಧಿಸಬಹುದು. ನೈಸರ್ಗಿಕ ದೃಷ್ಟಿಯಲ್ಲಿ ನಾವೆಲ್ಲಾ ಸಮಾನರು, ಪ್ರಕೃತಿ ಎಲ್ಲರಿಗೂ

ಒಂದೇ ವಿಧವಾದ ಹಕ್ಕುಗಳನ್ನು ಕೊಟ್ಟಿದೆ. ಅನ್ಯರ ಹಕ್ಕುಗಳನ್ನು ಅಪಹರಿಸುವದು ಪ್ರಕೃತಿಯ ನಿಯಮಕ್ಕೆ ವಿರುದ್ಧ ಎಂಬುದನ್ನು ಎಂದಿಗೂ ಮರೆಯಬಾರದು. ಇದರಿಂದ ಎಲ್ಲರಿಗೂ ಕ್ಷೇಮ.

೨. ನಾಗರಿಕ ಸ್ವಾತಂತ್ರ್ಯ : ಸಮಾಜಜೀವಿಯಾದ ವ್ಯಕ್ತಿಯು ಸಮಾಜದಲ್ಲಿ ಇತರರೊಂದಿಗೆ ಅನುಭವಿಸುವ ಸ್ವಾತಂತ್ರ್ಯ. ನಾಗರಿಕ ಸ್ವಾತಂತ್ರ್ಯವನ್ನು ಸರ್ಕಾರ ಕಾನೂನಿನ ಮೂಲಕ ಮಾನ್ಯ ಮಾಡಿರುತ್ತದೆ. ಕಾನೂನಿನ ಪರಿಮಿತಿಯಲ್ಲಿ ವ್ಯಕ್ತಿಯು ತನಗಿಷ್ಟ ಬಂದಂತೆ ಮಾಡುವದರಲ್ಲಿ ನಾಗರಿಕ ಹಕ್ಕುಗಳಿಗೆ ರಕ್ಷಣೆಯನ್ನು ಕೊಡುತ್ತದೆ. ಯಾವ ವ್ಯಕ್ತಿಯ ಸ್ವಾತಂತ್ರ್ಯಕ್ಕಾದರೂ ಧಕ್ಕೆಯಾದರೆ, ಆ ವ್ಯಕ್ತಿಯು ಕಾನೂನಿನ ಪ್ರಕಾರ ಪರಿಹಾರವನ್ನು ಪಡೆಯಲು ಅವಕಾಶವಿದೆ. ಸಾಮಾನ್ಯರಿಗೆ ಬಳಕೆಯಲ್ಲಿರುವ ಕೆಲವು ನಾಗರಿಕ ಹಕ್ಕುಗಳೆಂದರೆ ಜೀವಿಸುವ ಹಕ್ಕು, ದುಡಿಮೆಯ ಹಕ್ಕು, ಧಾರ್ಮಿಕ ಸ್ವಾತಂತ್ರ್ಯ, ಆಸ್ತಿಯ ಹಕ್ಕು ಇತ್ಯಾದಿ. ಇವುಗಳಲ್ಲಿ ಜೀವಿಸುವ ಹಕ್ಕು ಅತ್ಯಂತ ಪ್ರಮುಖವಾದುದು ಎಂದು ಹೇಳಬಹುದು ಏಕೆಂದರೆ ಇತರ ಎಲ್ಲಾ ಹಕ್ಕುಗಳು ಇದರ ಆಧಾರದ ಮೇಲೆ ನಿಂತಿವೆ. ಆದ್ದರಿಂದ ಆತ್ಮಹತ್ಯೆಗೆ ಪ್ರಯತ್ನ ಪಟ್ಟು ವಿಫಲರಾದವರನ್ನು ರಾಜ್ಯವು ಶಿಕ್ಷೆಗೆ ಗುರಿಪಡಿಸುತ್ತದೆ. ಗುಲಾಮಗಿರಿಯನ್ನು ವಿಶ್ವದಾದ್ಯಂತ ಖಂಡಿಸಿರುವದನ್ನು ನಾವು ಕಾಣಬಹುದು. ಆದರೆ ಕಮ್ಯೂನಿಷ್ಟ್ ರಾಜ್ಯಗಳಲ್ಲಿ ವ್ಯಕ್ತಿಯ ನಾಗರಿಕ ಹಕ್ಕಿಗೆ ರಕ್ಷಣೆ ಇರುವದಿಲ್ಲ. ಉದಾ : ಚೀನಾ.

**೩. ರಾಜಕೀಯ ಸ್ವಾತಂತ್ರ್ಯ:-** ಪೌರತ್ವದ ಆಧಾರದ ಮೇಲೆ ವ್ಯಕ್ತಿಗೆ ರಾಜಕೀಯ ಸ್ವಾತಂತ್ರ್ಯವನ್ನು ಕೊಡಲಾಗಿದೆ. ರಾಜ್ಯದ ಓರ್ವ ಸದಸ್ಯನಾಗಿ, ವ್ಯಕ್ತಿಗಳು ಸರಕಾರದ ರಚನೆಯಲ್ಲಿ ಪಾಲ್ಗೊಂಡು ಅದನ್ನು ನಿಯಂತ್ರಿಸಬಹುದಾದ ಅಧಿಕಾರವನ್ನು ಹೊಂದಿದ್ದಾರೆ. ಸಾರ್ವತ್ರಿಕ ಮತದಾನ ಪದ್ಧತಿಯ ಮುಖಾಂತರ ಪೌರನು ಸರಕಾರದ ರಚನೆಯಲ್ಲಿ ಪಾಲ್ಗೊಳ್ಳುತ್ತಾನೆ. ರಾಜಕೀಯಹಕ್ಕು ಪೌರನಿಗೆ ರಾಜಕೀಯದಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸುವ ಅಧಿಕಾರವನ್ನು ಕೊಡುತ್ತದೆ. ಇದರ ಪ್ರಕಾರ ಚುನಾವಣೆಯಲ್ಲಿ ಮತಚಲಾಯಿಸುವ, ಸ್ಪರ್ಧಿಸುವ ಅಧಿಕಾರವನ್ನು ಪೌರನು ಹೊಂದಿದ್ದಾನೆ. ಎಲ್ಲಾ ಪ್ರಜಾಪ್ರಭುತ್ವ ರಾಜ್ಯಗಳು ಈ ಹಕ್ಕನ್ನು ತನ್ನ ಪೌರನಿಗೆ ಕೊಟ್ಟಿವೆ. ಈ ಹಕ್ಕುಗಳಿಲ್ಲದೇ ಪ್ರಜಾಪ್ರಭುತ್ವ ಯಶಸ್ವಿಯಾಗಿ ನಡೆಯಲು ಸಾಧ್ಯವಿಲ್ಲ. ಈ ಸಂದರ್ಭದಲ್ಲಿ ಗಿಲ್‌ಕ್ರಿಸ್ಟರವರು 'ರಾಜಕೀಯ ಸ್ವಾತಂತ್ರ್ಯ ಪ್ರಜಾಪ್ರಭುತ್ವದ ಮತ್ತೊಂದು ಹೆಸರು' ಎಂದು ಹೇಳಿರುವ ಮಾತನ್ನು ಸ್ಮರಿಸಿಕೊಳ್ಳಬಹುದು.

೪. ಆರ್ಥಿಕ ಸ್ವಾತಂತ್ರ್ಯ :- ಇದು ಮನುಷ್ಯನಿಗೆ ಬೇಕಾದ ಅತ್ಯಗತ್ಯವಾದ ಒಂದು ಸ್ವಾತಂತ್ರ್ಯವಾಗಿದೆ. ಎಲ್ಲಿ ಆರ್ಥಿಕ ಸ್ವಾತಂತ್ರ್ಯವಿರುವದಿಲ್ಲವೋ ಅಲ್ಲಿ ರಾಜಕೀಯ ಮತ್ತು ನಾಗರಿಕ ಸ್ವಾತಂತ್ರ್ಯಗಳು ನಿಷ್ಪ್ರಯೋಜಕವಾದವು. ಇನ್ನಿತರ ಸ್ವಾತಂತ್ರ್ಯ ಗಳಿಗೆ ಬೆಲೆ

ಸಿಗಬೇಕಾದರೆ ಆರ್ಥಿಕ ಸ್ವಾತಂತ್ರ್ಯದ ಇರುವಿಕೆ ಅಗತ್ಯ. ಆರ್ಥಿಕ ಸ್ವಾತಂತ್ರ್ಯ ಇದ್ದರೆ ಮಾತ್ರ ವ್ಯಕ್ತಿಯು ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಸಾಧ್ಯ. ಎಲ್ಲಿ ವ್ಯಕ್ತಿ ಬಡತನ, ಹಸಿವು, ಶೋಷಣೆ, ಭಯ ಮುಂತಾದವುಗಳಿಂದ ಕಷ್ಟಪಡುತ್ತಿರುವನೋ ಅಂತಹ ಪರಿಸ್ಥಿತಿಯಲ್ಲಿ ಆತನು ನಾಗರಿಕ ಸ್ವಾತಂತ್ರ್ಯವನ್ನು ಹೊಂದಿದ್ದರೂ ಸಹ ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ಅವನು ದಿನನಿತ್ಯದ ಜೀವನವನ್ನು ನೆಮ್ಮದಿಯಿಂದ ನಡೆಸಲು ಅವಶ್ಯಕವಾಗಿ ಬೇಕಾದಷ್ಟನ್ನು ಸಂಪಾದಿಸಿಕೊಳ್ಳಲು ಸರಕಾರವು ಅವನಿಗೆ ಅವಕಾಶವನ್ನು ಕಲ್ಪಿಸಿಕೊಡಬೇಕು. ಮಾನವನ ಜೀವನಕ್ಕೆ ಮಾರಕವಾದ ಬಡತನ, ಹಸಿವು, ಇವುಗಳಿಂದ ಮುಕ್ತಿ ಮಾಡುವದನ್ನು ಆರ್ಥಿಕ ಸ್ವಾತಂತ್ರ್ಯ ಎಂದು ಹೇಳಬಹುದು. ಪ್ರಜಾಪ್ರಭುತ್ವದ ಯಶಸ್ಸಿಗೆ ಆರ್ಥಿಕ ಸ್ವಾತಂತ್ರ್ಯ ಅಗತ್ಯ. ದೇಶದಲ್ಲಿರುವ ಆರ್ಥಿಕ ಅಸಮಾನತೆಯನ್ನು ಹೋಗಲಾಡಿಸಿ ಎಲ್ಲರೂ ಆರ್ಥಿಕ ಸ್ವಾತಂತ್ರ್ಯವನ್ನು ಅನುಭವಿಸುವಂತೆ ನೋಡಿಕೊಳ್ಳುವದು ಪ್ರತಿಯೊಂದು ಪ್ರಜಾಪ್ರಭುತ್ವ ರಾಜ್ಯದ ಹೊಣೆಯಾಗಿದೆ. ಇಲ್ಲವಾದರೆ ಅಂತಹ ಪ್ರಜಾಪ್ರಭುತ್ವದ ಬಗ್ಗೆ ಜನರು ತಮ್ಮ ವಿಶ್ವಾಸವನ್ನು ಕಳೆದುಕೊಳ್ಳಬಹುದು.

೫. ರಾಷ್ಟ್ರೀಯ ಸ್ವಾತಂತ್ರ್ಯ:- ಒಂದು ರಾಜ್ಯವು ಇತರ ಯಾವ ರಾಜ್ಯಕ್ಕೂ ಆಧೀನವಾಗಿರದೇ ತನ್ನ ಆಡಳಿತವನ್ನು ನಡೆಸಬಹುದಾದ ಅಧಿಕಾರವನ್ನು ತಾನು ಹೊಂದಿರುವದನ್ನು ರಾಷ್ಟ್ರೀಯ ಸ್ವಾತಂತ್ರ್ಯವೆಂದು ಕರೆಯಲಾಗುವದು. ಉದಾ :- ಅಮೇರಿಕಾ ದೇಶದ ವಸಹಾತುಗಳು ೧೭೭೬ರ ಯುದ್ಧದಲ್ಲಿ ಜಯಗಳಿಸುವದಕ್ಕೂ ಮುನ್ನ ಆಂಗ್ಲರ ಆಳ್ವಿಕೆಗೆ ಒಳಪಟ್ಟಿದ್ದವು. ಆದರಂತೆ ಭಾರತದೇಶವು ಕೂಡಾ ೧೯೪೭ ರ ಅಗಷ್ಟ ೧೫ ಕ್ಕಿಂತ ಮೊದಲು ಬ್ರಿಟೀಶ ಆಳ್ವಿಕೆಯಲ್ಲಿದ್ದರಿಂದ ಅದು ರಾಷ್ಟ್ರೀಯ ಸ್ವಾತಂತ್ರ್ಯವನ್ನು ಹೊಂದಿರಲಿಲ್ಲ. ೧೯೪೭ ರ ಅಗಷ್ಟ ೧೫ ರ ನಂತರ ಭಾರತ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಪಡೆಯಿತು. ಇಂದು ನಮ್ಮ ದೇಶವು ತನ್ನದೇ ಆದ ಸರಕಾರವನ್ನು ಹೊಂದಿದ್ದು ಒಂದು ಸ್ವತಂತ್ರ ರಾಜ್ಯವಾಗಿದೆ. ರಾಷ್ಟ್ರೀಯ ಸ್ವಾತಂತ್ರ್ಯವು ಮನುಷ್ಯರ ಇತರ ಎಲ್ಲಾ ವಿಧವಾದ ಸ್ವಾತಂತ್ರ್ಯಕ್ಕೂ ತಳಹದಿಯಾಗಿದೆ. ಸ್ವತಂತ್ರವಾಗಿರುವ ಜನರು ಮಾತ್ರ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಅನುಭವಿಸಲು ಸಾಧ್ಯ.

## ೮. ಸಮಾನತೆ

### * ಸ್ವರೂಪ ಮತ್ತು ಮಹತ್ವ

ಮಾನವ ಉತ್ತಮ ಮಟ್ಟದ ಜೀವನ ನಡೆಸಲು ಸ್ವಾತಂಂತ್ರ್ಯವು ಹೇಗೆ ಮುಖ್ಯವೋ ಅಂತೆಯೆ ಸಮಾನತೆ ಅತ್ಯಗತ್ಯವಾಗಿದೆ. ಸ್ವಾತಂತ್ರ್ಯದಂತೆ ಸಮಾನತೆಯೂ ಸಹ ಪ್ರಜಾಪ್ರಭುತ್ವದ ಒಂದು ಆಧಾರಸ್ತಂಭವಾಗಿದೆ. ಸಮಾನತೆ ಎಂಬ ಪದವು ೧೮ನೇ

ಶತಮಾನದವರೆಗೂ ಹೆಚ್ಚಿನ ಬಳಕೆಯಲ್ಲಿರಲಿಲ್ಲ. ಸಮಾನತೆ ಎಂಬ ಶಬ್ದವು ಫ್ರೆಂಚ್ ಮಹಾಕ್ರಾಂತಿ ಮತ್ತು ಅಮೇರಿಕೆಯ ಸ್ವಾತಂತ್ರ್ಯ ಘೋಷಣೆಯಲ್ಲಿ ಅಡಕವಾಗಿದೆ. ಕಿ.ಶ. ೧೭೮೯ರಲ್ಲಿ ಫ್ರಾನ್ಸಿನ ರಾಷ್ಟ್ರೀಯ ಸಭೆಯು ಪ್ರಕಟಿಸಿದ 'ಮಾನವರ ಹಕ್ಕುಗಳ ಘೋಷಣೆ'ಯ ಪ್ರಕಾರ ಸ್ವಾತಂತ್ರ್ಯ ಮತ್ತು ಸಮಾನತೆಗಳನ್ನು ಮಾನವರು ಹುಟ್ಟದಾರಭ್ಯ ಪಡೆದು ಜೀವನದ ಉದ್ದಕ್ಕೂ ಅವುಗಳನ್ನು ಅನುಭವಿಸುವರು. ಕಿ.ಶ. ೧೭೭೬ರಲ್ಲಿ ಹೊರಡಿಸಿದ ಅಮೇರಿಕೆಯ ಸ್ವಾತಂತ್ರ್ಯ ಘೋಷಣೆಯ ಪ್ರಕಾರ 'ದೇವರು ಎಲ್ಲ ಮನುಷ್ಯರನ್ನು ಸಮನಾಗಿ ಹುಟ್ಟಿಸಿದ್ದಾನೆ.' ಈ ಸತ್ಯವನ್ನು ನಾವು ಕಣ್ಣಿಗೆ ಕಾಣುವ ಸತ್ಯವೆಂದು ನಂಬುತ್ತೇವೆ. ಈ ಘೋಷಣೆಗಳು ನೈಸರ್ಗಿಕ ಸಮಾನತೆಯನ್ನು ಪ್ರತಿಪಾದಿಸುತ್ತವೆ. ಏಕೆಂದರೆ ಮನುಷ್ಯನು ಸ್ವಾಭಾವಿಕವಾಗಿ ಸಮಾನತೆಯ ಸ್ಥಿತಿಯಲ್ಲಿ ಹುಟ್ಟಿದ್ದಾನೆಂದು ಹೇಳುತ್ತೇವೆ. ಆದರೆ ಈ ರೀತಿಯ ವಿಚಾರಗಳು ಕಾಲ್ಪನಿಕ ಮತ್ತು ಅಸಾಧ್ಯವಾದವುಗಳೆಂದು ಕೆಲವು ಪಂಡಿತರು ಅಭಿಪ್ರಾಯ ಪಡುತ್ತಾರೆ. ನಿಜ ಪ್ರಪಂಚದಲ್ಲಿ ನಾವು ಕಾಣುವದು ವ್ಯಕ್ತಿಗಳಲ್ಲಿರುವ ಅಸಮಾನತೆಯನ್ನಲ್ಲ. ಆದರೆ ನಮ್ಮ ಸಮಾಜವನ್ನು ಪರೀಕ್ಷಿಸಿದಾಗ ಪ್ರಕೃತಿಯು ಎಲ್ಲ ಮಾನವರನ್ನು ಸಮಾನವಾಗಿ ಸೃಷ್ಟಿಸಿಲ್ಲವೆಂಬುದು ಗಮನಕ್ಕೆ ಬರುತ್ತದೆ. ಉದಾ: ಮಾನಸಿಕವಾಗಿ, ದೈಹಿಕವಾಗಿ ಹಾಗೂ ನೈತಿಕವಾಗಿ ಯಾವುದೇ ಇಬ್ಬರು ವ್ಯಕ್ತಿಗಳು ಸರಿಸಮ ಇರಲಾರರು. ಅವರ ಬುದ್ಧಿಯಲ್ಲಿ, ಶಕ್ತಿಯಲ್ಲಿ, ಬಣ್ಣದಲ್ಲಿ, ಎತ್ತರದಲ್ಲಿ ಹಾಗೂ ಗುಣಗಳಲ್ಲಿ ವ್ಯತ್ಯಾಸ ಕಾಣುತ್ತೇವೆ. ಎಲ್ಲ ಮಾನವರು ಸಮಾನರು ಎನ್ನುವ ಮಾತು ಪೃಥ್ವಿಯು ಸಪಾಟಾಗಿದೆ ಎಂದು ಹೇಳುವಷ್ಟೇ ಅಸಂಗತವಾದುದು ಎಂದು ಡಾ.ಅಪ್ಪಾದೊರೈ ಹೇಳಿದ್ದಾರೆ. ಈ ದೃಷ್ಟಿಯಿಂದ ವಿಚಾರಿಸಲು ಅಸಮಾನತೆಯೆ ವ್ಯಕ್ತಿ-ವ್ಯಕ್ತಿಗಳಲ್ಲಿ ಹೆಚ್ಚಾಗಿ ಎದ್ದು ಕಾಣುತ್ತದೆ ಎಂಬುದು ಸಿದ್ಧವಾಗುವದು. ನೈಸರ್ಗಿಕವಾಗಿ ಬಂದ ಕೆಲವು ಅಸಮಾನತೆಗಳನ್ನು ಹೋಗಲಾಡಿಸಲು ಸಾಧ್ಯವಿಲ್ಲ. ಉದಾ : ಗಿಡ್ಡರನ್ನು ಎತ್ತರ ಮಾಡಲಿಕ್ಕೆ, ಕಪ್ಪು ಬಣ್ಣದವರನ್ನು ಕೆಂಪು ಮಾಡಲಿಕ್ಕೆ, ಬುದ್ಧಿ ಇಲ್ಲದವರನ್ನು ಪಂಡಿತರನ್ನಾಗಿ ಮಾಡಲು ಸಾಧ್ಯವಿಲ್ಲ. ಆದರೆ ಮಾನವ ನಿರ್ಮಿತ ಅಸಮಾನತೆಯನ್ನು ತೆಗೆದು ಹಾಕಬಹುದು. ಉದಾ : ಮಧ್ಯಯುಗದಲ್ಲಿ ಸರದಾರರು, ಶ್ರೀಮಂತರು ಹಾಗೂ ಪಾದ್ರಿಗಳು ಇತರರಿಗಿಂತ ಹೆಚ್ಚೆಂದು ಅವರಿಗೆ ವಿಶೇಷ ಸೌಲಭ್ಯಗಳು ಇದ್ದವು. ಆದರೆ ಈಗಿನ ಪ್ರಜಾಪ್ರಭುತ್ವ ಯುಗದಲ್ಲಿ ವಿಶೇಷ ಸವಲತ್ತುಗಳನ್ನು ಹಾಗೂ ಸೌಲಭ್ಯಗಳನ್ನು ತೆಗೆದು ಹಾಕಲಾಗಿದೆ

ಈ ರೀತಿಯಾಗಿ ಸಮಾನತೆ ಎಂಬ ಪದಕ್ಕೆ ರಾಜಕೀಯ ಚಿಂತಕರು ವಿವಿಧ ಅರ್ಥವನ್ನು ಕೊಟ್ಟಿದ್ದು ನಿಶ್ಚಿತವಾದ ಮತ್ತು ಸಾರ್ವತ್ರಿಕವಾಗಿ ಒಪ್ಪಿಕೊಳ್ಳುವಂತಹ ಅರ್ಥವನ್ನು ಕೊಡಲು ಸಾಧ್ಯವಾಗಿಲ್ಲ.

ಸಮಾನತೆಯ ಸರಿಯಾದ ಅರ್ಥ ಸಮಾಜದಲ್ಲಿ ಭಿನ್ನತೆಯನ್ನು ತೊಡೆದುಹಾಕಿ ಜೀವನದ ಅಗತ್ಯಗಳು ಎಲ್ಲರಿಗೂ ದೊರಕುವಂತಹ ವಾತಾವರಣ ಕಲ್ಪಿಸಿಕೊಡುವದು. ಧರ್ಮ, ಜಾತಿ, ಪಂಗಡ, ಲಿಂಗ, ಬಣ್ಣ, ಸಂಪತ್ತು ಇತ್ಯಾದಿಗಳ ಆಧಾರದ ಮೇಲೆ

ತಾರತಮ್ಯ ತೋರಿಸಿ ಆ ಮೂಲಕ ಅಸಮಾನತೆಗೆ ಎಡೆಗೊಡದೆ ಎಲ್ಲರಿಗೂ ಮುಂದುವರಿಯಲು ಅವಕಾಶಕೊಡುವದು. ಲಾಸ್ಕಿ ಹೇಳಿದಂತೆ ಸಮಾನತೆಯೆಂದರೆ ಮೊದಲನೆಯದಾಗಿ ವಿಶೇಷ ಸವಲತ್ತುಗಳಿರಕೂಡದು. ಎರಡನೆಯದಾಗಿ ಎಲ್ಲರಿಗೂ ಸಾಕಷ್ಟು ಸದಾವಕಾಶಗಳು ದೊರೆಯಬೇಕು.

ಕೃತಕ ಅಸಮಾನತೆಯನ್ನು ತೊಡೆದುಹಾಕಿ ಮಾನವನು ಸ್ವಾಭಾವಿಕವಾದ ಗುಣಗಳನ್ನು ಅಭಿವೃದ್ಧಿಗೊಳಿಸಲು ಸಹಾಯ ಮಾಡುವದೇ ಸಮಾನತೆಯ ಗುರಿ. ಯಾವ ವ್ಯಕ್ತಿಗೆ ಆಗಲಿ, ಯಾವ ಗುಂಪಿಗೆ ಆಗಲಿ, ವಿಶೇಷ ಸೌಲಭ್ಯಗಳಿರಕೂಡದು. ಎಲ್ಲರಿಗೂ ಸಮಾನ ಅವಕಾಶಗಳಿರಬೇಕು,ಸಮಾನ ಹಕ್ಕುಗಳಿರಬೇಕು. ಜೀವನದ ಸುಖವನ್ನು ಸವಿಯಲು ಎಲ್ಲರಿಗೂ ಸಮಾನ ಅವಕಾಶಗಳಿರಬೇಕೆಂಬುದೇ ಸಮಾನತೆಯ ಅರ್ಥ. ಹೆರಾಲ್ಡ್.ಜೆ. ಲಾಸ್ಕಿಯವರ ಪ್ರಕಾರ ''ಸಮಾನತೆಯೆಂದರೆ ಮೂಲಭೂತವಾಗಿ ಸರಿಸಮಾನತೆ ಸಾಧಿಸುವದಾಗಿದೆ.'' ಜೆ.ಎ.ಕೋರೇ ಅವರ ಪ್ರಕಾರ ಸಮಾನತೆ ಎಂದರೆ ರಾಜಕೀಯ ಸಮಾನತೆಯೆಂದು ಹೇಳುತ್ತಾ ಸಮಾನತೆಯ ಆದರ್ಶವೆಂದರೆ ರಾಜಕೀಯವಾಗಿ ಮಾನವರೆಲ್ಲರೂ ಸಮಾನರು, ರಾಜಕೀಯ ಜೀವನದಲ್ಲಿ ಎಲ್ಲರೂ ಭಾಗವಹಿಸಬಹುದು, ಮತದಾನದ ಹಕ್ಕುಹೊಂದಿ ಅಧಿಕಾರಪಡೆಯಲು ಸ್ವತಂತ್ರರು.

**ಪ್ರಕಾರಗಳು :** ಸಮಾನತೆಯನ್ನು ಅನೇಕ ರಾಜ್ಯಶಾಸ್ತ್ರಜ್ಞರು ನಾನಾವಿಧವಾಗಿ ವಿಂಗಡಿಸಿದ್ದಾರೆ. ಉದಾ: ಎಚ್ ಜೆ ಲಾಸ್ಕಿಯವರು ತಮ್ಮ ಪುಸ್ತಕವಾದ ಗ್ರಾಮರ್ ಆಫ್ ಪೊಲಿಟಿಕ್ಸ್ ದಲ್ಲಿ ಸಮಾನತೆಯನ್ನು ರಾಜಕೀಯ ಸಮಾನತೆ ಮತ್ತು ಆರ್ಥಿಕ ಸಮಾನತೆ ಎಂಬುದಾಗಿ ವಿಂಗಡಿಸಿದ್ದಾರೆ. ಹೀಗೆ ಅರ್ನೆಸ್ಟ್ ಬಾರ್ಕರವರು ಶಾಸನೀಯ ಸಮಾನತೆ ಎಂಬುದಾಗಿಯೂ, ಲಾರ್ಡ ಬ್ರೈಸ್‌ರವರು ನ್ಯಾಯಿಕ ಸಮಾನತೆ, ರಾಜಕೀಯ ಸಮಾನತೆ ಆರ್ಥಿಕ ಸಮಾನತೆ ಮತ್ತು ನೈಸರ್ಗಿಕ ಸಮಾನತೆ ಎಂಬುದಾಗಿಯೂ ವರ್ಗೀಕರಿಸಿದ್ದಾರೆ.

೧. ನೈಸರ್ಗಿಕ ಸಮಾನತೆ :- ನೈಸರ್ಗಿಕ ಸಮಾನತೆಯ ಪ್ರಕಾರ ಹುಟ್ಟುವಾಗ ಎಲ್ಲ ಮಾನವರೂ ಸಮಾನತೆಯನ್ನು ಹೊಂದಿರುತ್ತಾರೆ. ಪ್ರಕೃತಿಯು ವ್ಯಕ್ತಿಗಳ ನಡುವೆ ಯಾವ ಪಕ್ಷಪಾತವನ್ನು ಮಾಡುವುದಿಲ್ಲ. ನಿಸರ್ಗದಿಂದ ಕೊಡಲ್ಪಟ್ಟಿರುವ ಎಲ್ಲವನ್ನು ಎಲ್ಲರೂ ಸರಿಸಮಾನವಾಗಿ ಅನುಭವಿಸುತ್ತಾರೆ. ಸಮಾನತೆಯು ನೈಸರ್ಗಿಕ ನಿಯಮವಾಗಿದೆ.

ಮೇಲಿನ ಅಭಿಪ್ರಾಯವನ್ನು ಕೆಲವು ವಿದ್ವಾಂಸರು ಒಪ್ಪುವದಿಲ್ಲ. ಅವರ ಪ್ರಕಾರ ಹುಟ್ಟುವಾಗ ಎಲ್ಲರ ಬುದ್ಧಿ,ಶಕ್ತಿ, ಗುಣ ಮುಂತಾದವುಗಳು ಒಂದೇ ರೀತಿಯಾಗಿರುವದಿಲ್ಲ. ಆದ್ದರಿಂದ ಎಲ್ಲ ಮಾನವರು ಸರಿಸಮಾನರಾಗಿ ಹುಟ್ಟುತ್ತಾರೆ ಎಂದು ಹೇಳುವದು ಸರಿಯಲ್ಲ ಎಂಬುದು ಅವರ ಅಭಿಪ್ರಾಯವಾಗಿದೆ.

ಜನರು ನಿಸರ್ಗದತ್ತ ಬಂದಿರುವ ಅಸಮಾನತೆಯನ್ನು ಸಹಿಸುತ್ತಾರೆ. ಇವುಗಳನ್ನು ನಿರ್ಮೂಲನ ಮಾಡಲು ಯಾರಿಗೂ ಸಾಧ್ಯವಿಲ್ಲ. ಆದರೆ ಸಮಾಜದಲ್ಲಿರುವ ಮಾನವರಿಂದಲೇ ಸೃಷ್ಟಿಸಲ್ಪಟ್ಟಿರುವ ಅಸಮಾನತೆಯನ್ನು ಜನರು ಸಹಿಸುವದಿಲ್ಲ. ನೈಸರ್ಗಿಕವಾಗಿ ಅಸಮಾನತೆ ಇದ್ದರೂ ಉಳಿದ ವಿಷಯಗಳಲ್ಲಿ ಅಸಮಾನತೆ ಇರಬೇಕಾದ ಅವಶ್ಯಕತೆ ಇಲ್ಲ. ಇದಕ್ಕೂ ಹೆಚ್ಚಾಗಿ ನೈಸರ್ಗಿಕ ಅಸಮಾನತೆಯ ಕಾರಣದಿಂದಾಗಿ ಬೇರೆ ವಿಷಯಗಳಲ್ಲಿ ಅಸಮಾನತೆ ಉಂಟಾಗದಂತೆ ನೋಡಿಕೊಳ್ಳುವದೇ ನೈಸರ್ಗಿಕ ಸಮಾನತೆಯ ಮುಖ್ಯ ಕೆಲಸವಾಗಿದೆ.

ಅದರ ಪ್ರಕಾರವಾಗಿ ಎಲ್ಲ ಮಾನವರು ರಾಜಕೀಯ, ಆರ್ಥಿಕ ಮತ್ತು ನಾಗರಿಕ ಈ ಎಲ್ಲ ಸಮಾನತೆಗಳನ್ನು ಪಡೆದುಕೊಳ್ಳುವಂತಿರಬೇಕು.

**೨.ನಾಗರಿಕ ಸಮಾನತೆ :** ನಾಗರಿಕ ಸಮಾನತೆಯು ಸಮಾನತೆಗಳ ಮತ್ತೊಂದು ವಿಧವಾಗಿದೆ. ಈ ಸಮಾನತೆಯ ಪ್ರಕಾರ ಮಾನವರೆಲ್ಲರೂ ಸಮಾನವಾದ ಹಕ್ಕು ಮತ್ತು ಸ್ವಾತಂತ್ರ್ಯಗಳನ್ನು ಹೊಂದಿರುತ್ತಾರೆ. ಕಾನೂನಿನ ದೃಷ್ಟಿಯಲ್ಲಿ ವ್ಯಕ್ತಿಗಳ ನಡುವೆ ಯಾವ ವಿಧವಾದ ಭೇದಭಾವನೆಯು ಇರುವದಿಲ್ಲ. ನಾಗರಿಕ ಸಮಾನತೆಯ ಪ್ರಕಾರ ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸರಿಸಮಾನರು, ಜಾತಿ, ಮತ, ಲಿಂಗ, ಶ್ರೀಮಂತಿಕೆ ಇನ್ನೂ ಮುಂತಾದವುಗಳ ಆಧಾರದ ಮೇಲೆ ಯಾವ ವಿಧವಾದ ಭೇದ ಭಾವನೆಯನ್ನು ಎಣಿಸದೆ, ನಾಗರಿಕ ಸಮಾನತೆ ಎಲ್ಲರಿಗೂ ಸಮವಾದ ಹಕ್ಕುಗಳನ್ನು ಕೊಡುತ್ತದೆ. ಕಾನೂನು ಎಲ್ಲ ಜನರಿಗೂ ಒಂದೇ ತೆರನಾಗಿ ಅನ್ವಯವಾಗುತ್ತದೆ. ತಪ್ಪಿತಸ್ಥರು ಯಾರೇ ಆದರೂ ಅವರು ಕಾನೂನಿನ ಪ್ರಕಾರ ಶಿಕ್ಷೆಗೆ ಗುರಿಯಾಗುತ್ತಾರೆ. ಕಾಯಿದೆಯು ಪಕ್ಷಪಾತ ಮಾಡಿದಾಗ ಆ ಪಕ್ಷಪಾತತನದಿಂದ ತೊಂದರೆಗೀಡಾದವರು ನ್ಯಾಯಾಲಯದ ಮೂಲಕ ಸೂಕ್ತ ಪರಿಹಾರವನ್ನು ಪಡೆಯಲು ಅವಕಾಶವುಂಟು. ಅಂತೆಯೇ ಪಕ್ಷಪಾತವಾಗಿರುವ ಕಾನೂನನ್ನು ತಿದ್ದುಪಡಿ ಮಾಡಲು ಅಥವಾ ರದ್ದುಪಡಿಸುವಂತೆ ಸರ್ಕಾರವನ್ನು ಜನರು ಒತ್ತಾಯಿಸಬಹುದು. ನ್ಯಾಯಾಲಯಗಳು ನ್ಯಾಯ ನಿರ್ಣಯವನ್ನು ನಿಷ್ಪಕ್ಷಪಾತವಾಗಿ ನೀಡಿದರೆ ಮಾತ್ರ ಜನರು ನಾಗರಿಕ ಸಮಾನತೆಯನ್ನು ಅನುಭವಿಸಲು ಸಾಧ್ಯ.

**೩. ರಾಜಕೀಯ ಸಮಾನತೆ :** ಸಮಾನತೆಯೇ ಪ್ರಜಾಪ್ರಭುತ್ವ ಸರಕಾರದ ಆಧಾರವಾಗಿದೆ. ಎಲ್ಲಾ ಜನರುಸಮಾನವಾಗಿ ರಾಜಕೀಯ ಹಕ್ಕುಗಳನ್ನು ಹೊಂದಿ ಅನುಭವಿಸುವದೇ ರಾಜಕೀಯ ಸಮಾನತೆ. ಸಮಾನತೆಯ ನಿರಾಕರಣೆ ಗಮನಾರ್ಹ. ಆದ್ದರಿಂದ ಇಂದೆಲ್ಲಾ ಪ್ರಜಾಪ್ರಭುತ್ವ ರಾಜ್ಯಗಳು ಜನರಿಗೆ ರಾಜಕೀಯ ಹಕ್ಕುಗಳನ್ನು ನೀಡಿವೆ. ಚುನಾವಣೆಯಲ್ಲಿ ಉಮೇದುವಾರನಾಗಿ ನಿಲ್ಲುವ ಹಕ್ಕು, ಮತ ಚಲಾಯಿಸುವ ಹಕ್ಕು ಇತ್ಯಾದಿ ರಾಜಕೀಯ ಹಕ್ಕುಗಳಾಗಿವೆ. ಜಾತಿ, ಮತ, ಲಿಂಗ ಭಾಷೆ, ಶ್ರೀಮಂತಿಕೆ

ಇವುಗಳ ಆಧಾರದ ಮೇಲೂ ಭೇದ-ಭಾವವನ್ನೆಣಿಸದೆ ಎಲ್ಲರಿಗೂ ಸರಿಸಮನಾಗಿ ರಾಜಕೀಯ ಹಕ್ಕುಗಳನ್ನು ಕೊಡಲಾಗಿದೆ.

ಬಹಳ ಕಾಲದವರೆಗೆ ಲಕ್ಷಾಂತರ ಜನರಿಂದ ರಾಜಕೀಯ ಹಕ್ಕು ದೊರೆತಿರಲಿಲ್ಲ. ೧೯೧೮ರ ವರೆಗೆ ಇಂಗ್ಲೆಂಡಿನಲ್ಲಿ ಸ್ತ್ರೀಯರಿಗೆ ಮತದಾನದ ಹಕ್ಕು ಇರಲಿಲ್ಲ. ಇಂದೂ ಸಹ ಅನೇಕ ಕಡೆ ರಾಜಕೀಯ ಸಮಾನತೆಯನ್ನು ಎಲ್ಲರೂ ಅನುಭವಿಸುತ್ತಿಲ್ಲ ಎಂದು ತಿಳಿದು ಬಂದಿದೆ. ಇದಕ್ಕಿಂತಲೂ ಹೆಚ್ಚಾಗಿ ಆರ್ಥಿಕ ಸಮಾನತೆ ಮುಖ್ಯ. ರಾಜಕೀಯ ಸಮಾನತೆ ಮತ್ತು ಆರ್ಥಿಕ ಸಮಾನತೆಗೆ ನಿಕಟ ಬಾಂಧವ್ಯವಿದೆ. ಆರ್ಥಿಕ ಸಮಾನತೆ ಇಲ್ಲದಿದ್ದರೆ ಶ್ರೀಮಂತ ವರ್ಗ ಬಡವರನ್ನು ಶೋಷಣೆ ಮಾಡುತ್ತದೆ. ಬಡವರು ಚುನಾವಣೆಗೆ ತಗಲುವ ವೆಚ್ಚಗಳನ್ನು ಅನುಭವಿಸಲು ಸಾಧ್ಯವಿಲ್ಲ. ಆದ್ದರಿಂದ ರಾಜಕೀಯ ಸಮಾನತೆಯ ಪೂರ್ಣ ಅನುಭೋಗ ಆರ್ಥಿಕ ಸಮಾನತೆಯನ್ನು ಅವಲಂಬಿಸಿದೆ.

**೪. ಆರ್ಥಿಕ ಸಮಾನತೆ :** ಆರ್ಥಿಕ ಸಮಾನತೆಯ ಮಾತು ಬಹಳ ಹಿಂದಿನ ಕಾಲದಿಂದಲೂ ಕೇಳಿ ಬರುತ್ತಿರುವ ಮಾತಾಗಿದೆ. ಬಡವರು, ಬಲ್ಲಿದರ ಶೋಷಣೆಗೆ ಒಳಗಾಗುವದು ನಿಂತು ಬಡವನಿಗೂ ನ್ಯಾಯ ಸಿಗುವಂತಾಗಬೇಕು ಎಂಬ ಹೋರಾಟವೂ ನಿರಂತರವಾಗಿ ನಡೆಯುತ್ತಲೇ ಬಂದಿದೆ.

ಜನರ ನಡುವೆ ಇರುವ ಆರ್ಥಿಕ ಅಸಮಾನತೆಯನ್ನು ನಿರ್ಮೂಲನೆ ಮಾಡುವದೇ ಆರ್ಥಿಕ ಸಮಾನತೆಯ ಅರ್ಥವಾಗಿದೆ. ಧನಿಕರ ಮತ್ತು ಬಡವರ ನಡುವೆ ಇರುವ ಅಂತರವನ್ನು ಕಡಿಮೆಗೊಳಿಸಿ ಪ್ರತಿಯೊಬ್ಬ ಮನುಷ್ಯನು ತನ್ನ ಜೀವನಕ್ಕೆ ಆಗತ್ಯವಾಗಿ ಬೇಕಾದ ಮೂಲಭೂತ ಬೇಡಿಕೆಗಳನ್ನು ದೊರಕಿಸಿಕೊಳ್ಳಲು ಅವಕಾಶವನ್ನು ಕಲ್ಪಿಸಿಕೊಡುವದೇ ಆರ್ಥಿಕ ಸಮಾನತೆಯಾಗಿದೆ. ವ್ಯಕ್ತಿಯ ಮೂಲಭೂತ ಬೇಡಿಕೆಗಳ ಪೂರೈಕೆಗೆ ಆರ್ಥಿಕ ಸಮಾನತೆ ಅಗತ್ಯ. ಯಾವ ವ್ಯಕ್ತಿಗೂ ತನ್ನ ಅವಶ್ಯಕತೆಗಳನ್ನೂ ದೊರಕಿಸಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಇರಬಾರದು. ನಿರುದ್ಯೋಗ, ಬಡತನ, ಆರ್ಥಿಕ ಶೋಷಣೆ ಮುಂತಾದವುಗಳಿರಬಾರದು. ಎಲ್ಲಿ ಆರ್ಥಿಕ ಅಸಮಾನತೆ ಇರುತ್ತದೆಯೋ ಅಲ್ಲಿ ರಾಜಕೀಯ ಅಧಿಕಾರವು ಆರ್ಥಿಕ ಶಕ್ತಿಯ ಕೈಗೊಂಬೆಯಾಗುತ್ತದೆ. ಅಂದರೆ ಶ್ರೀಮಂತನು ಚುನಾವಣೆಯಲ್ಲಿ ಅಪಾರವಾಗಿ ಹಣವನ್ನು ಖರ್ಚುಮಾಡಿ ಜಯಗಳಿಸಿ ಆಧಿಕಾರಕ್ಕೆ ಬಂದು ತಮ್ಮ ಅನುಕೂಲಕ್ಕೆ ತಕ್ಕಂತೆ ಅಧಿಕಾರವನ್ನು ನಡೆಸಬಹುದು.

ಆರ್ಥಿಕ ಸಮಾನತೆ ಎಂದರೆ ದೇಶದ ಐಶ್ವರ್ಯವನ್ನು ಸಮನಾಗಿ ಹಂಚುವದು ಅಥವಾ ಎಲ್ಲ ಜನರೂ ಒಂದೇ ತೆರನಾದ ಆದಾಯವನ್ನು ಹೊಂದುವದು ಎಂದು ಭಾವಿಸಿದರೆ ತಪ್ಪಾಗುತ್ತದೆ. ಅವಶ್ಯಕತೆಗೆ ತಕ್ಕಂತೆ, ಜೀವನದ ಆಗತ್ಯಗಳನ್ನು ಪೂರೈಸುವದು. ದುಡಿಮೆಗೆ ತಕ್ಕಂತೆ ಪ್ರತಿಫಲವನ್ನು ದೊರಕಿಸಿಕೊಡುವದು. ಇದೇ

ಆರ್ಥಿಕ ಸಮಾನತೆಯ ಧ್ಯೇಯವಾಗಿದೆ. ಆರ್ಥಿಕ ಸಮಾನತೆ ದೊರಕದ ಹೊರತು ಪ್ರಜಾಪ್ರಭುತ್ವ ಯಶಸ್ವಿಯಾಗಿ ನಡೆಯಲಾರದು.

ನಮ್ಮ ದೇಶದ ಸಂವಿಧಾನದಲ್ಲಿ ಆರ್ಥಿಕ ಸಮಾನತೆಯನ್ನು ತರಲು ಅನೇಕ ಏರ್ಪಾಡುಗಳನ್ನು ರಾಷ್ಟ್ರ ನಿರ್ದೇಶಕ ತತ್ವಗಳಲ್ಲಿ ಮಾಡಲಾಗಿದೆ.

**೫.ಸಾಮಾಜಿಕ ಸಮಾನತೆ :** ಸಮಾಜದಲ್ಲಿ ಜಾತಿ, ಮತ, ಧರ್ಮ, ವರ್ಣ, ವರ್ಗ ಸ್ಥಾನಮಾನ ಇನ್ನೂ ಮುಂತಾದವುಗಳ ಆಧಾರದ ಮೇಲೆ ಯಾವ ಭೇದಭಾವ, ವಿಶೇಷಾಧಿಕಾರಕ್ಕೆ ಅವಕಾಶವಿರದೆ ಎಲ್ಲರಿಗೂ ಸಮಾನವಾದ ಅಧಿಕಾರ ಅವಕಾಶಗಳಿರುವದೆ ಸಾಮಾಜಿಕ ಸಮಾನತೆ.

ಅನೇಕ ವಿಷಯದಲ್ಲಿ ನಮ್ಮಲ್ಲಿ ಸಾಮಾಜಿಕ ಸಮಾನತೆ ಬಹಳ ಕಾಲದವರೆಗೂ ಇರಲಿಲ್ಲ. ಉದಾ :- ಹರಿಜನರು ಬೇರೆ ವರ್ಗದ ಜನರಿಗೆ ಸರಿ ಸಮಾನವಾದ ಸ್ಥಾನಮಾನವನ್ನು ಹೊಂದಿಕೊಂಡಿಲ್ಲ. ಇಂದೂ ಸರಕಾರಗಳು ಸಮಾಜದಲ್ಲಿರುವ ಸಾಮಾಜಿಕ ಭಿನ್ನತೆಯನ್ನು ನಿರ್ಮೂಲನೆ ಮಾಡುವ ನಿರಂತರ ಪ್ರಯತ್ನದಲ್ಲಿ ತೊಡಗಿವೆ. ಆದರೂ ಸರ್ಕಾರಗಳ ಈ ಪ್ರಯತ್ನಕ್ಕೆ ಸಂಪೂರ್ಣ ಯಶಸ್ಸು ದೊರೆತಿಲ್ಲ. ಸಂಪ್ರದಾಯಗಳು, ಉತ್ತಮ ಶಿಕ್ಷಣದ ಅಭಾವ, ಆರ್ಥಿಕ ಅಸಮಾನತೆ, ವೈಜ್ಞಾನಿಕ ದೃಷ್ಟಿ ಇಲ್ಲದಿರುವಿಕೆ, ರಾಜಕೀಯವಾಗಿ ಹಿಂದುಳಿಯುವಿಕೆ ಇತ್ಯಾದಿ ಸಾಮಾಜಿಕ ಮನೋಭಾವನೆಯಿಂದ ಹೊರಬಂದು ಸಮಾನತೆಯನ್ನು ಉಂಟು ಮಾಡಲು ಸಾಧ್ಯವಾಗದಿರುವದಕ್ಕೆ ಕಾರಣಗಳಾಗಿವೆ. ಜನರು ಸಂಕುಚಿತ ಮನೋಭಾವನೆಯಿಂದ ಸಾಮಾಜಿಕ ಸಮಾನತೆಯನ್ನು ತರಲು ಕಂಕಣಬದ್ಧರಾದರೆ ಮಾತ್ರ ಇದು ಸಾಧ್ಯ. ಈ ದಿಶೆಯಲ್ಲಿ ಅನೇಕ ಪ್ರಯತ್ನಗಳು ನಡೆದಿವೆ. ಆದರೂ ಸಾಮಾಜಿಕ ಸಮಾನತೆಯನ್ನು ಸುಲಭವಾಗಿ ಸಾಧಿಸಲು ಸಾಧ್ಯವಿಲ್ಲ.

**ಸ್ವಾತಂತ್ರ್ಯ ಮತ್ತು ಸಮಾನತೆ :-** ಸ್ವಾತಂತ್ರ್ಯ ಮತ್ತು ಸಮಾನತೆಯ ಸಂಬಂಧದ ಬಗ್ಗೆ ಎರಡು ರೀತಿ ವಿರುದ್ಧ ಅಭಿಪ್ರಾಯಗಳಿವೆ. ಲಾರ್ಡ್ ಆ್ಯಕ್ಟನ್ ಮತ್ತು ಇತರ ಲೇಖಕರ ಪ್ರಕಾರ ಸ್ವಾತಂತ್ರ್ಯ ಮತ್ತು ಸಮಾನತೆಗಳು ಪರಸ್ಪರ ವಿರುದ್ಧವಾಗಿವೆ. ಹೆಚ್ಚಿನ ಸಮಾನತೆಯನ್ನು ಬಯಸಿದರೆ ವ್ಯಕ್ತಿ ಸ್ವಾತಂತ್ರ್ಯದ ಹರಣವಾಗುತ್ತದೆ ಎಂದು ಅವರ ವಿಚಾರ. ಒಬ್ಬ ವ್ಯಕ್ತಿಗೆ ಬೇಕಾದಷ್ಟು ಸಂಪತ್ತನ್ನು ಗಳಿಸುವ ಹಾಗೂ ಬೇಕಾದಷ್ಟು ಅಧಿಕಾರ ಪಡೆಯುವ ಅನಿರ್ಬಂಧ ಸ್ವಾತಂತ್ರ್ಯವನ್ನು ಕೊಟ್ಟರೆ, ಕೆಲವು ಬುದ್ಧಿವಂತ ಜನರು ಮನಬಂದಂತೆ ಹಣವನ್ನು ಸಂಪಾದಿಸಿ ಸರಕಾರದ ಅಧಿಕಾರವನ್ನು ತಮ್ಮ ಕೈಯಲ್ಲಿಟ್ಟುಕ್ಕೊಂಡು ಬಹುಸಂಖ್ಯಾತ ಜನರನ್ನು ಬಡವರನ್ನಾಗಿ ಮಾಡುತ್ತಾರೆ ಹಾಗೂ ಸಮಾಜದಲ್ಲಿ ಅಸಮಾನತೆಯನ್ನು ಹೆಚ್ಚಿಸುತ್ತಾರೆ. ಅನಿರ್ಬಂಧಿತ ಸ್ವಾತಂತ್ರ್ಯವು ಸಮಾನತೆಯನ್ನು ತರಲಾರದು. ಒಂದು ವೇಳೆ ಸಮಾಜದಲ್ಲಿ ಸಮಾನತೆಯನ್ನು

ತರಬೇಕಾದರೆ ಕೆಲವೇ ಜನರ ಕೈಯಲ್ಲಿ ಸಂಪತ್ತನ್ನು ಕೂಡಿ ಬೀಳುವದನ್ನು ಪ್ರತಿಬಂಧಿಸಬೇಕಾಗುವದು. ಈ ದೃಷ್ಟಿಯಿಂದ ಸ್ವಾತಂತ್ರ್ಯ ಮತ್ತು ಸಮಾನತೆ ಪರಸ್ಪರ ವಿರುದ್ಧ ಎಂಬುದು ಸಿದ್ಧವಾಗುವದು.

ಆದರೆ ಲಾಸ್ಕಿ ಮತ್ತು ಇತರರು ಈ ವಾದವನ್ನು ತಿರಸ್ಕರಿಸಿ ಸ್ವಾತಂತ್ರ್ಯ ಮತ್ತು ಸಮಾನತೆ ವಿರೋಧ ಪದಗಳಲ್ಲ. ಅವೆರಡೂ ಪರಸ್ಪರ ಪೂರಕವಾಗಿವೆ ಎಂದು ಹೇಳಿದ್ದಾರೆ. ಪೋಲಂಡರ ಪ್ರಕಾರ 'ಸ್ವಾತಂತ್ರ್ಯದ ಸಮಸ್ಯೆಗೆ ಏಕೈಕ ಪರಿಹಾರ ಸಮಾನತೆಯಲ್ಲಿ ಮಾತ್ರ ದೊರೆಯುತ್ತದೆ.'

ಸ್ವಾತಂತ್ರ್ಯ ಮತ್ತು ಸಮಾನತೆಗೆ ಇರುವ ಸಂಬಂಧ ಬಹಳ ನಿಕಟವಾದುದು. ಸಮಾನತೆಯಿಲ್ಲದೇ ಸ್ವಾತಂತ್ರ್ಯವಿರುವದು ಸಾಧ್ಯವಿಲ್ಲ. ಸಮಾನತೆ ಇಲ್ಲದಿದ್ದಲ್ಲಿ ಇತರ ಸ್ವಾತಂತ್ರ್ಯಗಳು ಅರ್ಥರಹಿತವಾಗುತ್ತವೆ. ಆರ್ಥಿಕ ಸಮಾನತೆ ಇಲ್ಲದಿದ್ದ ಪಕ್ಷದಲ್ಲಿ ದೇಶದ ಸಂಪತ್ತು ಕೇವಲ ಕೆಲವರಲ್ಲಿ ಕೇಂದ್ರೀಕೃತಗಾಗುತ್ತದೆ. ಪರಿಣಾಮವಾಗಿ, ನಾಗರಿಕ ಮತ್ತು ರಾಜಕೀಯ ಸ್ವಾತಂತ್ರ್ಯಗಳು ನಾಶವಾಗುತ್ತವೆ. ಸ್ವಾತಂತ್ರ್ಯ ಅನುಭವಿಸಲು ಸಮಾನತೆ ಅತ್ಯವಶ್ಯಕವೆಂಬುದು ಇದರಿಂದ ವೇದ್ಯವಾಗುವದು. ಸಮಾನತೆ ಇಲ್ಲದ ಸ್ವಾತಂತ್ರ್ಯಕ್ಕೆ ಬೆಲೆ ಇಲ್ಲದಂತೆ ಸ್ವಾತಂತ್ರ್ಯವಿಲ್ಲದ ಸಮಾನತೆಗೂ ಬೆಲೆಯಿಲ್ಲ. ಸಮಾನತೆ ಪಡೆಯಲು ಸ್ವಾತಂತ್ರ್ಯ ಅಗತ್ಯ. ಸ್ವಾತಂತ್ರ್ಯ ಅನುಭವಿಸಲು ಸಮಾನತೆ ಅಗತ್ಯ. ವ್ಯಕ್ತಿಯ ವ್ಯಕ್ತಿತ್ವದ ಅಭಿವೃದ್ಧಿಗೆ ಸ್ವಾತಂತ್ರ್ಯ ಮತ್ತು ಸಮಾನತೆ ಅತ್ಯವಶ್ಯಕ. ಸಮಾನತೆಯನ್ನು ಸ್ಥಾಪಿಸುವ ಸಲುವಾಗಿಯೇ ಸ್ವಾತಂತ್ರ್ಯ ಹುಟ್ಟಿದೆ. ಇವೆರಡೂ ಒಂದೇ ನಾಣ್ಯದ ಎರಡು ಮುಖಗಳು ಎಂದರೆ ತಪ್ಪಾಗಲಾರದು.

ಸಮಾನತೆ ಸಾಧಿಸುವ ಉದ್ದೇಶದಿಂದ ರಾಜ್ಯ ಸೂಕ್ತ ಕಾನೂನುಗಳನ್ನು ರೂಢಿಸಿ ಕಾರ್ಯರೂಪಕ್ಕೆ ತಂದಾಗ ಕೆಲವರ ಸ್ವೇಚ್ಛಾಚಾರಕ್ಕೆ ಧಕ್ಕೆ ತಗಲುವದು ಸ್ವಾಭಾವಿಕ. ಸಮಾನತೆ ಸಾಧಿಸಲು ಹೊರಟಾಗ ಸಂಪತ್ತನ್ನು ಉತ್ಪಾದಿಸುವ ಮತ್ತು ಅದನ್ನು ಇಷ್ಟಬಂದಂತೆ ಅನುಭವಿಸುವದಕ್ಕೆ ಇರುವ ಸ್ವಾತಂತ್ರ್ಯಕ್ಕೆ ಧಕ್ಕೆ ತಗಲುವದೆಂದೂ, ಖಾಸಗಿ ಆಸ್ತಿ ಹೊಂದಿರುವವರ ಹಕ್ಕನ್ನು ಮೊಟಕುಗೊಳಿಸುವದರಿಂದ ಖಾಸಗಿ ಆಸ್ತಿಹೊಂದಿರುವವರ ಸ್ವಾತಂತ್ರ್ಯವನ್ನು ಕಸಿದುಕೊಂಡಂತಾಗುತ್ತದೆ ಎಂದು ಕೆಲವರ ವಾದ. ಆದರೆ ಈ ವಾದ ಸರಿಯಲ್ಲ. ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರವಲ್ಲ. ಮನಸ್ಸಿಗೆ ಬಂದುದೆಲ್ಲವನ್ನು ಯಾವ ನಿರ್ಬಂಧಗಳೂ ಇಲ್ಲದೆ ಮಾಡುವದು ಎಂದರ್ಥವಲ್ಲ. ಇಂತಹ ಸ್ವೇಚ್ಛಾಚಾರಗಳಿಗೆ ಸಾಮಾಜಿಕ ಜೀವನ ಎಡೆಕೊಡುವದಿಲ್ಲ. ಸಮಾಜದ ದೃಷ್ಟಿಯಿಂದ ಇಂತಹ ಸ್ವೇಚ್ಛಚಾರವನ್ನು ಕಟ್ಟುಪಾಡು ಮತ್ತು ನಿಯಮಗಳ ಮೂಲಕ ಸಮಾಜ ನಿಯಂತ್ರಿಸುತ್ತದೆ. ಇಲ್ಲದಿದ್ದರೆ ಸ್ವಾತಂತ್ರ್ಯ ಸ್ವೇಚ್ಛಾಚಾರ ಕ್ಕೆ ಎಡೆಕೊಟ್ಟು ಇಡೀ ಸಮಾಜವನ್ನೇ ಹಾಳುಗೆಡಬಹುದು.

## ಊ. ನ್ಯಾಯ

### *ಮಹತ್ವ ಮತ್ತು ಸ್ವರೂಪ

ರಾಜಕೀಯ ಸಿದ್ಧಾಂತದಲ್ಲಿ ನ್ಯಾಯ ಪರಿಕಲ್ಪನೆಯು ಒಂದು ಪ್ರಮುಖವಾದ ಸ್ಥಾನವನ್ನು ಪಡೆದಿದೆ. ಅನಾದಿ ಕಾಲದಿಂದಲೂ ತತ್ವಜ್ಞಾನಿಗಳು ತಮ್ಮ ಬರವಣಿಗೆಗಳಲ್ಲಿಯೂ ಸಹ ನ್ಯಾಯಕ್ಕೆ ಒಂದು ಮಹತ್ವದ ಸ್ಥಾನಮಾನ ಕೊಟ್ಟಿದ್ದಾರೆ. ರಾಜಕೀಯ ಸಿದ್ಧಾಂತದ ಇನ್ನಿತರ ಪರಿಕಲ್ಪನೆಗಳಂತೆ ನ್ಯಾಯ ಪರಿಕಲ್ಪನೆಯ ಬಗ್ಗೆ ನಿರ್ದಿಷ್ಟ ವ್ಯಾಖ್ಯೆಯನ್ನು ಕೊಡಲು ಅಸಮರ್ಥರಾಗಿದ್ದಾರೆ. ಈ ಹಿಂದೆ ನ್ಯಾಯವೆಂದು ಪರಿಗಣಿಸಲ್ಪಟ್ಟಿದ್ದು ವರ್ತಮಾನದಲ್ಲಿ ನ್ಯಾಯವೆಂದು ಪರಿಗಣಿಸಲ್ಪಡುತ್ತಿರುವದು. ನಾಳೆ ಭವಿಷ್ಯದಲ್ಲಿ ನ್ಯಾಯವೆಂದು ಪರಿಗಣಿಸಲ್ಪಡದೇ ಇರಬಹುದು. ನ್ಯಾಯ ಪರಿಕಲ್ಪನೆಯು ಅಸ್ಪಷ್ಟವಾಗಿದ್ದು ವಾಸ್ತವವಾಗಿ ಕಾರ್ಯಾಚರಣೆ ತರುವಾಗ ಸಮಸ್ಯೆಯಾಗುತ್ತದೆ.

ಕೆಲವು ರಾಜಕೀಯ ಚಿಂತಕರು ನ್ಯಾಯವೆಂದರೆ ಸಮಾನತೆ ಎಂದು ಅರ್ಥೈಸಿದ್ದಾರೆ . ಮತ್ತೆ ಕೆಲವರು ನಿಷ್ಪಕ್ಷಪಾತ ಎಂದು ಅರ್ಥೈಸುತ್ತಾರೆ. ನ್ಯಾಯವೆಂಬ ಪದದ ಅರ್ಥವು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿದ್ದು ನ್ಯಾಯವು ರಾಜ್ಯಶಾಸ್ತ್ರ, ನೀತಿಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರಗಳ ಒಂದು ಅಧ್ಯಾಯದ ಭಾಗವಾಗಿದೆ. ಒಟ್ಟಾರೆ ನ್ಯಾಯದ ಪರಿಕಲ್ಪನೆಯು ಬಹಳ ಪುರಾತನವಾದುದು. ನ್ಯಾಯದ ಪರಿಕಲ್ಪನೆಯು ಪುರಾತನ ಬುಡಕಟ್ಟುಗಳಲ್ಲಿ 'ಸೇಡಿಗೆ ಸೇಡು' ಎಂಬ ತತ್ವಾಧಾರಿತವಾಗಿತ್ತು. ಹೀಗೆ ಅಂದಿನ ಶಿಕ್ಷೆಯು ಬಹಳ ಕ್ರೂರವಾಗಿತ್ತು.

ಪುರಾತನ ಗ್ರೀಸ್‌ದಲ್ಲಿ ನ್ಯಾಯದ ಹಲವಾರು ಅಳತೆಮಾನಗಳಿದ್ದವು. ಕೆಲವರು ಸತ್ಯವನ್ನು ಮಾತನಾಡುವದೇ ನ್ಯಾಯವೆಂದಿದ್ದಾರೆ. ಮತ್ತೆ ಕೆಲವರು ಪ್ರತಿಯೊಬ್ಬನಿಗೆ ಸಲ್ಲಿಸಬೇಕಾದುದನ್ನು ಸಲ್ಲಿಸುವದೇ ನ್ಯಾಯವೆಂದಿದ್ದಾರೆ. ಪ್ಲೇಟೋ ತನ್ನ 'ರಿಪಬ್ಲಿಕ್' ಗ್ರಂಥದಲ್ಲಿ ಶ್ರೇಷ್ಟ ಸದ್ಗುಣವೇ ನ್ಯಾಯವೆಂದಿದ್ದಾರೆ. ಅರಿಸ್ಟಾಟಲ್‌ರು ನ್ಯಾಯ ಪರಿಕಲ್ಪನೆಯನ್ನು ಆಧುನಿಕರಿಸಿ ಸಮಾನತೆಯ ನಿರ್ಧಿಷ್ಟ ದರ್ಜೆಯೇ ನ್ಯಾಯ ಎನ್ನುತ್ತಾನೆ.

ಸ್ಟೋಯಿಕರು ನ್ಯಾಯವು ಕಾನೂನು ಮತ್ತು ಸಂಪ್ರದಾಯಕ್ಕಿಂತಲೂ ಶ್ರೇಷ್ಟವಾದುದು. ನೈಸರ್ಗಿಕ ಕಾನೂನು ಎಲ್ಲರಿಗೂ ಸಮಾನವಾಗಿ ಕಾಣುತ್ತದೆ. ಇದೇ ನ್ಯಾಯ ವೆಂದಿದ್ದಾರೆ. ಕ್ರೈಸ್ತರು ಪರರ ಬಗ್ಗೆ ಹೊಂದಿರುವ ದಯೆ ಮತ್ತು ಪ್ರೀತಿಯೇ ನ್ಯಾಯವೆಂದು ಅರ್ಥೈಸಿದ್ದಾರೆ .

ಅರ್ನೆಸ್ಟ್ ಬಾರ್ಕರ್ ರ ಪ್ರಕಾರ ರಾಜಕೀಯ ಮೌಲ್ಯಗಳ ಸಂಯೋಜನೆ ಮತ್ತು ಸಮನ್ವಯವೇ ನ್ಯಾಯ. ಲಾಸ್ಕಿ ಮತ್ತು ಮೆಕೈವರ್ ಪ್ರಕಾರ 'ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಯೇ ನ್ಯಾಯ' ವೆಂದು ಅಭಿಪ್ರಾಯ ಪಟ್ಟಿದ್ದಾರೆ.

ಹೀಗೆ ನ್ಯಾಯದ ಪರಿಕಲ್ಪನೆಯು ಕಾಲದಿಂದ ಕಾಲಕ್ಕೆ ನಿರಂತರವಾಗಿ ರೂಪಾಂತರಗೊಳ್ಳುತ್ತಾ ಬಂದಿದ್ದು ಅಂದಿನಿಂದ ಇಂದಿನವರೆಗೂ ಮಹತ್ವದ ಸ್ಥಾನ ಹೊಂದಿದೆ.

'ಜಸ್ಟಿಸ್' ಎಂಬ ಆಂಗ್ಲ ಪದವು ಲ್ಯಾಟಿನ್ ಭಾಷೆಯ 'ಜಸ್ಟಿಸಿಯಾ' ಎಂಬ ಪದದಿಂದ ಬಂದಿದೆ. ಜಸ್ಟಿಸ್ ಎಂಬ ಪದದ ಕನ್ನಡಾನುವಾದವೇ ನ್ಯಾಯ. ಜಸ್ಟಿಸಿಯಾ ಅಂದರೆ ಜೋಡಿಸುವದು ಅಥವಾ ಹೊಂದಿಸುವದು. ಕಾರ್ಮಿಕರು, ವಿದ್ಯಾರ್ಥಿಗಳು, ಶಿಕ್ಷಕರು, ರೈತರು ಮತ್ತು ಸಾಮಾನ್ಯ ನಾಗರಿಕರು ಮುಂತಾದ ಜನರನ್ನೊಳಗೊಂಡ ಮಾನವ ಸಮಾಜದಲ್ಲಿ ಎಲ್ಲಾ ಜನರನ್ನು ಒಟ್ಟು ವ್ಯವಸ್ಥೆಗೆ ಹೊಂದಾಣಿಕೆ ಮಾಡುವದು ನ್ಯಾಯ ಎನ್ನಲಾಗಿದೆ.

ರಾಫೇಲ್ '' ಸಮಾಜವನ್ನು ಸಾಮಾನ್ಯ ವ್ಯವಸ್ಥೆಗೆ ಒಳಪಡಿಸುವದರೊಡನೆ ಸರಳವಾಗಿ ಸಂಬಂಧಿಸಿದೆ.'' ಬೆನ್ ಮತ್ತು ಪೀಟರ್ಸ ''ನಿರ್ಧಿಷ್ಟ ವ್ಯತ್ಯಾಸವಿರುವ ಸಂದರ್ಭಗಳನ್ನು ಹೊರತು ಪಡಿಸಿ ಉಳಿದೆಲ್ಲಾ ಜನರನ್ನು ಸಮಾನವಾಗಿ ಪರಿಗಣಿಸುವದು'' - ನ್ಯಾಯ.

ಪ್ಲೇಟೊ'' ವ್ಯಕ್ತಿಯ ಸ್ವಾಭಾವಿಕ ಸಾಮರ್ಥ್ಯ ಮತ್ತು ತರಬೇತಿಗೆ ತಕ್ಕಂತೆ ಪ್ರತಿಯೊಬ್ಬನಿಗೂ ಕಾರ್ಯಭಾರವನ್ನು ಹಂಚುವದೇ ನ್ಯಾಯ''.

## *ನ್ಯಾಯದ ವಿಧಗಳು

೧. ಶಾಸನಬದ್ಧ ನ್ಯಾಯ : ಜಾನ್ ಆಸ್ಟಿನ್ ಮತ್ತು ಹಾಬ್ಸ್ ಮುಂತಾದವರು ಶಾಸನಬದ್ಧ ನ್ಯಾಯವನ್ನು ಪ್ರತಿಪಾದಿಸಿದ್ದಾರೆ. ಶಾಸನವು ನ್ಯಾಯದ ಪ್ರಮುಖ ಸಾಧನವಾಗಿದೆ. ಹಾಗೂ ಶಾಸನವಿಲ್ಲದೇ ನ್ಯಾಯವಿರಲೂ ಸಾಧ್ಯವಿಲ್ಲವೆಂದೂ ಅವರು ಹೇಳಿದ್ದಾರೆ. ಸಮುದಾಯದ ಎಲ್ಲ ಸದಸ್ಯರು ಆ ಕಾನೂನಿಗೆ ಸಂಬಂಧಿಸಿರುತ್ತಾರೆ. ಕಾನೂನಿನ ದೃಷ್ಟಿಯಲ್ಲಿ ಸರ್ವರೂ ಸಮಾನರು ಹಾಗೂ ಕಾನೂನಿಗಿಂತ ಮಿಗಿಲಾದವರು ಯಾರೂ ಇಲ್ಲ ಎಂಬುದೇ ಶಾಸನಬದ್ಧ ನ್ಯಾಯದ ಅರ್ಥ. ಶಾಸನವನ್ನು ಅರ್ಥೈಸಲು ನ್ಯಾಯಾಲಯಗಳು ಮತ್ತು ಅರೆನ್ಯಾಯ ಪೀಠಗಳಿರಬೇಕು ಮತ್ತು ವ್ಯಾಜ್ಯಗಳು ಪ್ರಚಲಿತದಲ್ಲಿರುವ ಶಾಸನಗಳನ್ವಯವಾಗಿ ಇತ್ಯರ್ಥವಾಗ- ಬೇಕೆಂಬುದಾಗಿದೆ.

೨. ರಾಜಕೀಯ ನ್ಯಾಯ : ನ್ಯಾಯದ ರಾಜಕೀಯ ರೂಪದ ಏಳ್ಗೆಯೇ 'ರಾಜಕೀಯ ಸಮಾನತೆ' ರಾಷ್ಟ್ರ ರಾಜಕಾರಣದಲ್ಲಿ ಜನತೆಯು ಭಾಗವಹಿಸಲು ಮುಕ್ತ ಅವಕಾಶವಿರಬೇಕು. ಪ್ರಜಾಪ್ರತಿನಿಧಿಗಳಿಂದ ಹೇರಲ್ಪಡದ ತೆರಿಗೆಗಳನ್ನು ಕೊಡಲು ಒತ್ತಾಯ ಮಾಡಬಾರದು. ವಯಸ್ಕ ಮತದಾನ ಪದ್ಧತಿ, ಮೂಲಭೂತ ಹಕ್ಕುಗಳ ಸೌಲಭ್ಯ ಸರ್ವರಿಗೂ ಸಿಗುವಂತೆ ಮಾಡುವದೇ ರಾಜಕೀಯ ನ್ಯಾಯ.

೩. **ಸಾಮಾಜಿಕ ನ್ಯಾಯ** : ಪುರಾತನ ಮತ್ತು ಮಧ್ಯಯುಗದ ಸಮುದಾಯದಲ್ಲಿ ಶ್ರೇಣಿಗಳು ಮತ್ತು ಜಾತಿಗಳು ಎಂಬುದಾಗಿ ವಿಭಜಿಸಲ್ಪಟ್ಟ ಶ್ರೇಣಿಕೃತ ಸಮಾಜವಿತ್ತು. ವಿಭಜಿತ ಮತ್ತು ಶ್ರೇಣಿಕೃತ ಸಮಾಜವೇ ನ್ಯಾಯಯುತವಾದದ್ದಾಗಿತ್ತು. ಈ ಸಮಾಜದಲ್ಲಿ ಒಡೆಯರು ಮತ್ತು ಗುಲಾಮರು ಇದ್ದರು. ಒಡೆಯರು ಮತ್ತು ಲಾರ್ಡ್‌ಗಳು ಹುಟ್ಟಿನಿಂದ ಆಳುವವರಾಗಿದ್ದು ಗುಲಾಮರು ಮಾತ್ರ ಹುಟ್ಟಿನಿಂದ ದುಡಿಯುವದಕ್ಕಾಗಿಯೇ ಇದ್ದವರು. ಇದೇ ಸಾಮಾಜಿಕ ನ್ಯಾಯವಾಗಿತ್ತು. ವರ್ಗೀಕೃತ ಮತ್ತು ಶ್ರೇಣೀಕೃತ ರೀತಿಯ ಭಾರತೀಯ ಸಮಾಜವು ಕರ್ಮ ಮತ್ತು ಧರ್ಮವನ್ನು ಅವಲಂಬಿಸಿತ್ತು. ಸಾಮಾಜಿಕ ನ್ಯಾಯವೆಂದರೆ ಸಮಾಜದ ಸರ್ವಸದಸ್ಯರ ಕಲ್ಯಾಣ ಸಾಧನೆ ಹಾಗೂ ಸಮಾಜದಲ್ಲಿನ ಎಲ್ಲಾ ವಿಧವಾದ ಪಕ್ಷಪಾತವನ್ನು ನಿರ್ಮೂಲನ ಮಾಡಿ ಯಾವುದೇ ಜಾತಿ, ಲಿಂಗ, ವರ್ಣ, ಧರ್ಮ, ಮತ್ತು ಹುಟ್ಟಿನ ಆಧಾರವನ್ನು ಪರಿಗಣಿಸದೇ ಸರ್ವರಿಗೂ ಸಕಲ ಸೌಲಭ್ಯವನ್ನು ಒದಗಿಸಿ ಕೊಡುವದು ಸಾಮಾಜಿಕ ನ್ಯಾಯ.

೪. **ನೈಸರ್ಗಿಕ ನ್ಯಾಯ** : ನೈಸರ್ಗಿಕ ಕಾನೂನಿನಂತೆ ನೈಸರ್ಗಿಕ ನ್ಯಾಯವು ನಿಸರ್ಗದತ್ತವಾದುದು ಎಂದು ನಂಬಲಾಗಿದೆ. ರಾಜ್ಯವು ಸ್ವಾಭಾವಿಕ ಸಂಸ್ಥೆಯಾಗಿದ್ದು ಸಮಾಜದಲ್ಲಿ ಜೀವಿಸುವ ವ್ಯಕ್ತಿಗಳು ತಾವು ಏನನ್ನೂ ಪಡೆಯಲು ಇಚ್ಛಿಸುತ್ತಾರೋ ಅದನ್ನು ಬೇರೆಯವರು ಪಡೆಯಲು ಬಿಡುವದು. ಅಂದರೆ 'ಬದುಕು ಹಾಗೂ ಬದುಕಲು ಬಿಡು' ಎಂಬ ತತ್ವವೇ ನೈಸರ್ಗಿಕ ನ್ಯಾಯವಾಗಿದೆ.

೫. **ಆರ್ಥಿಕ ನ್ಯಾಯ** : ಇತ್ತೀಚಿನ ದಿನಗಳಲ್ಲಿ ಆರ್ಥಿಕ ನ್ಯಾಯವು ಮಹತ್ತರ ಸ್ಥಾನವನ್ನುಪಡೆದುಕೊಂಡಿದೆ. ಆರ್ಥಿಕನ್ಯಾಯವಿಲ್ಲದೇ ಸಾಮಾಜಿಕ ಮತ್ತು ರಾಜಕೀಯ ನ್ಯಾಯವು ಅರ್ಥಹೀನವಾಗುತ್ತದೆ. ಹಸಿದ ಹೊಟ್ಟೆಗಳಿಗೆ ರಾಜಕೀಯ ಸ್ವಾತಂತ್ರ್ಯದ ಅವಶ್ಯಕತೆಯಿಲ್ಲ. ಹಾಗೂ ಅರ್ಥಹೀನವಾಗಿರುತ್ತದೆ. ಆದುದರಿಂದ ಆರ್ಥಿಕ ನ್ಯಾಯವೆಂದರೆ ರಾಜ್ಯದ ಎಲ್ಲ ಸದಸ್ಯರ ಮೂಲ ಬೇಡಿಕೆಗಳ ಪೂರೈಕೆಯಾಗಿದೆ. ಆರ್ಥಿಕ ಕ್ಷೇತ್ರದಲ್ಲಿ ಅ ಸಮಾನತೆ ಇರಬಾರದು. ಸಮಾನ ಕೆಲಸಕ್ಕೆ ಸಮಾನ ವೇತನದ ನಿಯಮ ಜಾರಿಯಲ್ಲಿರಬೇಕು. ಲಾಸ್ಕಿಯವರ ಪ್ರಕಾರ 'ಒಬ್ಬರಿಗೊಂದು ಸೂರು ಸಿಗುವತನಕ ೨೦ಕೋಣೆಗಳಿರುವ ಮನೆ ಒಬ್ಬನಿಗಿರಬಾರದು.' ಎಂಬುದೇ ಆರ್ಥಿಕ ನ್ಯಾಯವಾಗಿದೆ.

ಸ್ವಾತಂತ್ರ್ಯ ಸಮಾನತೆಗಳು ನ್ಯಾಯ ಪರಿಕಲ್ಪನೆಯ ಎರಡು ಆಧಾರದ ಸ್ತಂಬಗಳು. ರಾಜಕೀಯ ಸ್ವಾತಂತ್ರ್ಯ ಮತ್ತು ಆರ್ಥಿಕ ಸಮಾನತೆಯಿರದ ನ್ಯಾಯವಿರಲು ಸಾಧ್ಯವಿಲ್ಲ. ಜನತೆಯು ತಮ್ಮ ದೇಶದ ಆಡಳಿತದಲ್ಲಿ ತಮ್ಮದೇ ಆದ ಭಾಗವನ್ನು ಹೊಂದಿರಬೇಕು. ಜನತೆಯು ಹಸಿವು, ಬಡತನ ಮತ್ತು ನಿರುದ್ಯೋಗದಿಂದ ಪಾರಾಗಿರಬೇಕು. ಇವೇ ನ್ಯಾಯದ ಹಲವಾರು ರೂಪಗಳು.

## ೫. ಹಕ್ಕುಗಳು

ಹಕ್ಕುಗಳು ಮಾನವನ ಅವಿಭಾಜ್ಯ ಅಂಗಗಳಾಗಿವೆ. ಹಕ್ಕುಗಳ ಬಗ್ಗೆ ಇಂದು ವಿಶ್ವದ್ಯಂತ ಚರ್ಚೆಗಳು ಇಂದು ಹಕ್ಕುಗಳನ್ನು ಕುರಿತಂತೆ ಪರಿಭಾಷೆಯೊಂದು ರೂಢಿಗೆ ಬಂದಿದೆ. ಮಾನವ ಹಕ್ಕುಗಳು ಹಾಗೂ ಅವುಗಳ ಉಲ್ಲಂಘನೆ ಕುರಿತಂತೆ ತೀವ್ರ ಚರ್ಚೆಗಳು ನಡೆಯುತ್ತವೆ. ಹಕ್ಕುಗಳನ್ನು ಕುರಿತಂತೆ ಸಿದ್ಧಾಂತವು ಪಶ್ಚಿಮದಲ್ಲಿ ರೂಪಗೊಂಡಿತು ಎಂಬ ವಾದವೊಂದಿದೆ. ಪಾಶ್ಚಿಮಾತ್ಯ ನಾಗರಿಕತೆಯ ಕೊಡುಗೆ ಹಕ್ಕುಗಳು ಎಂದು ಹೇಳಲಾಗಿದೆ. ಹಕ್ಕುಗಳು ಪ್ರಜಾಪ್ರಭುತ್ವದ ಬುನಾದಿಯಾಗಿವೆ. ಪ್ರಜಾಪ್ರಭುತ್ವದಲ್ಲಿ ಹಕ್ಕುಗಳು ಮೂರುಬಗೆಯ ಪಾತ್ರ ನಿರ್ವಹಿಸುತ್ತವೆ ಎಂದು ಅಮರ್ತ್ಯಸೇನ್ ಅಭಿಪ್ರಾಯಪಡುತ್ತಾರೆ.

೧. ಹಕ್ಕುಗಳು ತಮ್ಮಷ್ಟಕ್ಕೆ ಅವು ಮಹತ್ವ ಪಡೆದಿವೆ. ಅವು ಅಂತಸ್ಥವಾದ ಗುಣವನ್ನು ಪಡೆದಿವೆ.

೨. ಹಕ್ಕುಗಳು ಉಪಕರಣವಾದಿ ಮಹತ್ವ ಪಡೆದಿವೆ. ಬದುಕನ್ನು ಕಟ್ಟಿಕೊಳ್ಳಲು ಬಡತನ - ಬರಗಾಲದ ವಿರುದ್ಧ ಹೋರಾಡಲು, ಆಹಾರ ಭದ್ರತೆ ಸಾಧಿಸಿಕೊಳ್ಳಲು ಹಕ್ಕುಗಳು ಅವಶ್ಯಕ.

೩. ಹಕ್ಕುಗಳಿಗೆ ವಿಧಾಯಕ ಮಹತ್ವವಿದೆ. ಪ್ರಜಾಪ್ರಭುತ್ವವನ್ನು ಕಟ್ಟಿಕೊಳ್ಳಲು, ಸಹಭಾಗಿತ್ವವಾದಿ ರಾಜಕಾರಣವನ್ನು ರೂಪಿಸಲು ಹಕ್ಕುಗಳು ಅಗತ್ಯ.

ಹಕ್ಕುಗಳು ಮನುಷ್ಯನ ಬದುಕಿನ ಗುರಿಗಳೂ ಹೌದು ಮತ್ತು ಬದುಕನ್ನು ಕಟ್ಟಿಕೊಳ್ಳಲು ಅಗತ್ಯವಾದ ಸಾಧನಗಳೂ ಹೌದು.

### ✸ಸ್ವರೂಪ ಮತ್ತು ಮಹತ್ವ

ಮನುಷ್ಯನ ವ್ಯಕ್ತಿತ್ವದ ಘಟನೆ ಹಾಗೂ ಯೋಗ್ಯತೆಯ ಅಂತರ್ಗತ ಭಾಗವಾಗಿ ಹಕ್ಕುಗಳು ಹುಟ್ಟಿಕೊಂಡಿವೆ. ಮನುಷ್ಯನ ಘನತೆ ಹಾಗೂ ಸ್ವಾತಂತ್ರ್ಯವನ್ನು ಘೋಷಿಸುವ ಸಂಗತಿಗಳನ್ನು ಹಕ್ಕುಗಳೆಂದು ಕರೆಬಹುದು. ಭಾರತದ ಸಂವಿಧಾನದಲ್ಲಿ ನಿರ್ವಹಿಸಿರುವಂತೆ ಸ್ವಾತಂತ್ರ್ಯ, ಸಮಾನತೆ ಮತ್ತು ವ್ಯಕ್ತಿತ್ವದ ಘನತೆಯನ್ನು ಘೋಷಿಸುವಂತಹ ಸಂವಿಧಾನಾತ್ಮಕ ರಕ್ಷಣೆಗಳನ್ನು ಹಕ್ಕುಗಳೆಂದು ಕರೆಯಲಾಗಿದೆ. ಹಕ್ಕುಗಳಿಗೆ ಸಂಬಂಧಿಸಿದಂತೆ ಕೇಂದ್ರ ಬಿಂದುವೆಂದರೆ 'ಮನುಷ್ಯನ ವ್ಯಕ್ತಿತ್ವ'.

ವಿಶ್ವಸಂಸ್ಥೆಯ ಸಾಮಾನ್ಯ ಸಭೆಯಲ್ಲಿ ಮಾನವ ಹಕ್ಕುಗಳನ್ನು ಕುರಿತಂತೆ ಡಿಸೆಂಬರ ೧೦, ೧೯೪೮ ರಂದು ಘೋಷಣೆಯೊಂದನ್ನು ಹೊರಡಿಸಲಾಯಿತು. ಅದನ್ನು 'ಮಾನವ ಹಕ್ಕುಗಳ ಜಾಗತಿಕ ಘೋಷಣೆ' ಯೆಂದು ಕರೆಯಲಾಗಿದೆ. (ಯು ಡಿ ಎಚ್ ಆರ್). ಈ ಘೋಷಣೆಯ ಪೀಠಿಕೆಯಲ್ಲಿನ ಮೊದಲ ವಾಕ್ಯ ಹೀಗಿದೆ :

‘‘ಮಾನವ ಜಗತ್ತಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿತ್ವದ ಅಂತರ್ಗತ ಭಾಗವಾಗಿರುವ ಘನತೆ, ಸಮಾನತೆ ಹಾಗೂ ಪರಭಾರೆ ಮಾಡಲಾಗಿದ್ದ ಹಕ್ಕುಗಳು ಸ್ವಾತಂತ್ರ್ಯ, ನ್ಯಾಯ ಮತ್ತು ಶಾಂತಿಯ ಅಡಿಪಾಯವಾಗಿದೆ.’’

ಭಾರತದಲ್ಲಿ ಹಕ್ಕುಗಳು ವಿಕಾಸ ಹೊಂದಿದ ಬಗೆಗೆ ಸಂಬಂಧಿಸಿದಂತೆ ದೀರ್ಘಕಾಲದ ಇತಿಹಾಸವಿದೆ. ಹಕ್ಕುಗಳನ್ನು ಕುರಿತಂತೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸು ೧೮೯೫ರಲ್ಲಿ ರೂಪಿಸಿದ ಸಂವಿಧಾನದ ಪ್ರನಾಳಿಕೆಯಲ್ಲಿ ಚರ್ಚೆ ಮಾಡಲಾಗಿದೆ. ಮುಂದೆ ೧೯೨೫ರಲ್ಲಿ ಮೂಲಭೂತ ಹಕ್ಕುಗಳ ಘೋಷಣೆಯನ್ನು ಸಂವಿಧಾನದಲ್ಲಿ ಸೇರಿಸಬೇಕು ಎಂಬ ಬೇಡಿಕೆಯನ್ನು ಕಾಂಗ್ರೆಸ್ ಸರ್ಕಾರದ ಮುಂದಿಟ್ಟಿತು.

ಹಕ್ಕುಗಳ ಪರಿಭಾಷೆಯ ವಿಕಾಸದಲ್ಲಿ ಸಂವಿಧಾನವನ್ನು ದೇಶಕ್ಕೆ ಸಮರ್ಪಿಸಿದ ಜನವರಿ ೨೬, ೧೯೫೦ ಒಂದು ಮೈಲಿಗಲ್ಲು. ಎರಡು ಭಾಗದಲ್ಲಿ ಅದು ಭಾರತಿಯರಿಗೆ ಹಕ್ಕುಗಳನ್ನು ಒದಗಿಸಿದೆ. ಮೊದಲನೆಯದು ಸಂವಿಧಾನದ ಮೂರನೇಯ ಭಾಗದಲ್ಲಿರುವ ‘ಮೂಲಭೂತ ಹಕ್ಕುಗಳು’ ಮತ್ತು ಎರಡನೇಯದಾಗಿ ರಾಜ್ಯ ನಿರ್ದೇಶನ ತತ್ವಗಳು.

ಭಾರತದ ಸಂವಿಧಾನದ ಮೂರನೇಯ ಭಾಗದಲ್ಲಿ ಒದಗಿಸಲಾದ ಮೂಲಭೂತ ಹಕ್ಕುಗಳ ವಿವರಗಳು ಹೀಗಿವೆ:

## ಭಾರತದ ಸಂವಿಧಾನದ ಮೂಲಭೂತ ಹಕ್ಕುಗಳು

### ೧. ಸಮಾನತೆಯ ಹಕ್ಕು

ಪರಿಚ್ಛೇದ - ೧೪ ಕಾನೂನಿನ ಎದುರು ಸಮಾನತೆ

ಪರಿಚ್ಛೇದ - ೧೫ ಹುಟ್ಟಿದ ಸ್ಥಳ, ಜಾತಿ, ಜನಾಂಗ, ಧರ್ಮ ಮತ್ತು ಲಿಂಗದ ಆಧಾರದ ಮೇಲೆ ತಾರತಮ್ಯದ ನಿಷೇಧ

ಪರಿಚ್ಛೇದ - ೧೬ ಸಾರ್ವಜನಿಕ ಉದ್ಯೋಗದಲ್ಲಿ ಸಮಾನ ಅವಕಾಶ

ಪರಿಚ್ಛೇದ - ೧೭ ಅಸ್ಪಶ್ಯತೆಯ ನಿಷೇಧ

ಪರಿಚ್ಛೇದ - ೧೮ ಬಿರುದು ಬಾವಳಿಗಳ ರದ್ಧತಿ

### ೨. ಸ್ವಾತಂತ್ರ್ಯದ ಹಕ್ಕು

ಪರಿಚ್ಛೇದ - ೧೯ ವಾಕ್ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ಕೆಲವು ಹಕ್ಕುಗಳ ರಕ್ಷಣೆ

ಪರಿಚ್ಛೇದ - ೨೦ ಅಪವಾದಗಳಿಗೆ ಸಂಬಂಧಿಸಿದ ಶಿಕ್ಷೆಗಳ ರಕ್ಷಣೆ

ಪರಿಚ್ಛೇದ - ೨೧ ಜೀವ ಮತ್ತು ವ್ಯಕ್ತಿಗತ ಸ್ವಾತಂತ್ರ್ಯದ ರಕ್ಷಣೆ

ಪರಿಚ್ಛೇದ - ೨೨ ಕೆಲವು ವಿಷಯದಲ್ಲಿ ಬಂಧನದ ವಿರುದ್ಧ ರಕ್ಷಣೆ

೩. ಶೋಷಣೆಯ ವಿರುದ್ಧದ ಹಕ್ಕು

ಪರಿಚ್ಛೇದ - ೨೩ ಬಲವಂತದಿಂದ ದುಡಿಮೆ ಮಾಡಿಸಿಕೊಳ್ಳುವ ಮತ್ತು ಮನುಷ್ಯನ ಮಾರಾಟದ ನಿಷೇಧ

ಪರಿಚ್ಛೇದ - ೨೪ ಕಾರ್ಖಾನೆಯಲ್ಲಿ ಬಾಲಕಾರ್ಮಿಕರ ನಿಷೇಧ

೪. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು

ಪರಿಚ್ಛೇದ - ೨೫ ಧರ್ಮದ ಪ್ರಚಾರ, ವೃತ್ತಿ-ಕಸುಬು ಕೈಗೊಳ್ಳುವ ಸ್ವಾತಂತ್ರ್ಯ

ಪರಿಚ್ಛೇದ - ೨೬ ಧಾರ್ಮಿಕ ಚಟುವಟಿಕೆಗಳ ನಿರ್ವಹಣೆಯ ಸ್ವಾತಂತ್ರ್ಯ

ಪರಿಚ್ಛೇದ - ೨೭ ಯಾವುದೇ ನಿರ್ದಿಷ್ಟ ಧರ್ಮದ ಪ್ರಸಾರಕ್ಕಾಗಿ ತೆರಿಗೆ ಪಾವತಿಸುವ ಸ್ವಾತಂತ್ರ್ಯ

ಪರಿಚ್ಛೇದ - ೨೮ ಕೆಲವು ಶೈಕ್ಷಣಿಕ ಸಂಸ್ಥೆಗಳು ನಡೆಸುವ ಧಾರ್ಮಿಕ ಆಚರಣೆ ಮತ್ತು ಧಾರ್ಮಿಕ ಉಪದೇಶ ಸಭೆಗಳಲ್ಲಿ ಹಾಜರಾಗುವ ಸ್ವಾತಂತ್ರ್ಯ

೫. ಸಾಂಸ್ಕೃತಿಕ ಶೈಕ್ಷಣಿಕ ಹಕ್ಕು

ಪರಿಚ್ಛೇದ - ೨೯ ಅಲ್ಪ ಸಂಖ್ಯಾತರ ಹಿತಾಸಕ್ತಿಗಳ ರಕ್ಷಣೆ

ಪರಿಚ್ಛೇದ - ೩೦ ಶೈಕ್ಷಣಿಕ ಸಂಸ್ಥೆಗಳನ್ನು ತೆರೆಯುವ ಮತ್ತು ನಡೆಸುವ ಅಲ್ಪ ಸಂಖ್ಯಾತರ ಸ್ವಾತಂತ್ರ್ಯ

ಪರಿಚ್ಛೇದ - ೩೧ ಕೆಲವು ಕಾನೂನು, ನೀತಿ, ನಿಯಮಗಳಿಗೆ ರಕ್ಷಣೆ

೬. ಸಂವುಧಾನಾತ್ಮಕ ಪರಿಹಾರದ ಹಕ್ಕು

ಪರಿಚ್ಛೇದ - ೩೨ ಸಂವಿಧಾನದಲ್ಲಿ ಕೊಡಮಾಡಿರುವ ಹಕ್ಕುಗಳನ್ನು ಜಾರಿಯಾಗುವಂತೆ ಮಾಡುವ ಹಕ್ಕು

ಭಾರತದಲ್ಲಿ ಸಂವಿಧಾನದಲ್ಲಿ ನಾಗರಿಕರಿಗೆ ಒದಗಿಸಿರುವ ಮೂಲಭೂತ ಹಕ್ಕುಗಳ ರಕ್ಷಣೆಗಾಗಿ ಸರ್ವೋಚ್ಛ ನ್ಯಾಯಾಲಯವಿದೆ. ಮೂಲಭೂತ ಹಕ್ಕುಗಳ ಉಲ್ಲಂಘನೆಯಾದಾಗ ಅದನ್ನು ಸರಿಪಡಿಸಿಕೊಳ್ಳಲು ಸಂಬಂಧಿಸಿದ ವ್ಯಕ್ತಿ ಅಥವಾ ಸಂಸ್ಥೆಯು ಸರ್ವೋಚ್ಛ ನ್ಯಾಯಾಲಯದ ಮೊರೆ ಹೊಗಬಹುದು.

## ಹಕ್ಕುಗಳ ಮಹತ್ವ

ಪ್ರಸಿದ್ಧ ತತ್ವಜ್ಞಾನಿ ರೂಸೊ ಹೇಳಿದಂತೆ '' ಮನುಷ್ಯನು ಸ್ವತಂತ್ರನಾಗಿ ಹುಟ್ಟುತ್ತಾನೆ ಹಾಗೂ ಸದಾಕಾಲ ಅವನು ಸಂಕೋಲೆಯಲ್ಲಿದ್ದಾನೆ'' ಎಂಬ ಮಾತು ನೂರಕ್ಕೆ ನೂರರಷ್ಟು ಸತ್ಯ. ಏಕೆಂದರೆ ಸಮಾಜದಲ್ಲಿ ಅನೇಕ ಬಗೆಯ ಬಂಧನಗಳು ಮನುಷ್ಯನಿಗಿರುತ್ತವೆ, ಈ ಸಂಕೋಲೆಗಳಿಂದ ರಕ್ಷಣೆ ಕೊಡುವ ಸಂಗತಿಗಳೇ ಹಕ್ಕುಗಳು.

ಹಕ್ಕುಗಳ ವಿಷಯದಲ್ಲಿ ಅವುಗಳ ಅನುಷ್ಠಾನ ಬಹಳ ಮುಖ್ಯ. ಹಕ್ಕುಗಳ ಅನುಷ್ಠಾನ ಸಮರ್ಪಕವಾಗಿದೆಯೋ ಅಥವಾ ಇಲ್ಲವೋ ಎಂಬುದನ್ನು ನೋಡಿಕೊಳ್ಳಲು ಭಾರತದಲ್ಲಿ ಸರ್ವೋಚ್ಛ ನ್ಯಾಯಾಲಯವಿದೆ. ಮೂಲಭೂತ ಹಕ್ಕುಗಳು ನೈಸರ್ಗಿಕ ಹಕ್ಕುಗಳಿಗಿಂತ ಮುಖ್ಯವಾಗಿವೆ. ಏಕೆಂದರೆ ನೈಸರ್ಗಿಕ ಹಕ್ಕುಗಳ ಉಲ್ಲಂಘನೆಯನ್ನು ತಡೆಯಲು ಯಾವುದೇ ಸಂಸ್ಥೆಗಳಿಲ್ಲ.ಆದರೆ ಶಾಸನಾತ್ಮಕ ಮೂಲಭೂತ ಹಕ್ಕುಗಳ ಉಲ್ಲಂಘನೆಯಾದಾಗ ಅದರ ವಿರುದ್ಧ ನಾಗರಿಕರು ಸರ್ವೋಚ್ಛ ನ್ಯಾಯಾಲಯಕ್ಕೆ ದೂರು ನೀಡಬಹುದು.ರಾಜ್ಯಶಾಸ್ತ್ರದ ಸಿದ್ಧಾಂತಗಳು ಹಾಗೂ ರಾಜನೀತಿ ಎರಡರಲ್ಲೂ ಹಕ್ಕುಗಳ ಪರಿಭಾಷೆ ಬಳಕೆಯಾಗುತ್ತಿರುವದು ಕಾಣಬಹುದು.

ಮಾನವ ಹಕ್ಕುಗಳನ್ನು ಕುರಿತು ಚರ್ಚೆಯಲ್ಲಿ ಕಂಡುಬರುವ ಒಂದು ಕೊರತೆಯೆಂದರೆ ಅದರಲ್ಲಿ ಅಭಿವೃದ್ಧಿ ಬಗ್ಗೆಯಾಗಲಿ ಅಥವಾ ಬಡತನ ಬಗ್ಗೆಯಾಗಲಿ ಹಕ್ಕುಗಳಿಲ್ಲ. ಮಾನವ ಹಕ್ಕುಗಳಲ್ಲಿ ಇವು ಅಂತರ್ಗತವಾಗಿವೆಯೆಂದು ಹೇಳಬಹುದು. ಮಾನವ ಹಕ್ಕುಗಳಲ್ಲಿ ಮಾನವನ ಘನತೆ, ಸಮಾನತೆ, ತಾರತಮ್ಯ ಮತ್ತು ಶೋಷಣೆಯಿಂದ ವಿಮೋಚನೆ, ಸಾಮಾಜಿಕ ಭದ್ರತೆ, ಗೌರವಯುತವಾಗಿ ಬಾಳುವ ಹಕ್ಕು. ನಾಗರಿಕನು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಅವಕಾಶ ಮುಂತಾದ ಸಂಗತಿಗಳಿಗೆ ಮಹತ್ವ ನೀಡಲಾಗಿದೆ. ಆದರೆ ಅಭಿವೃದ್ಧಿಯ ಹಕ್ಕಿನ ಬಗ್ಗೆ ಚರ್ಚೆಯಿಲ್ಲ.

ಅಭಿವೃದ್ಧಿಶೀಲ ದೇಶಗಳಲ್ಲಿ ಬಡತನವು ಜನರನ್ನು ಕಿತ್ತು ತಿನ್ನುತ್ತಿದೆ. ನಿರುದ್ಯೋಗ ತಾಂಡವವಾಡುತ್ತಿದೆ. ಬರಗಳಿಂದ ಜನರು ಜರ್ಜರಿತರಾಗಿದ್ದಾರೆ. ವಾಸ್ತವವಾಗಿ ಇಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಯಾಗುತ್ತಿದೆ.

ಮಾನವ ಹಕ್ಕುಗಳನ್ನು ಪಾಲಿಸಲು ಮತ್ತು ಪೋಷಿಸಲು ಅಭಿವೃದ್ಧಿ ಅಗತ್ಯ. ಅಭಿವೃದ್ಧಿಯೆಂದರೆ ಕೇವಲ ವರಮಾನದ ವರ್ಧನೆಯಲ್ಲ, ಬಡವರನ್ನು, ಮಹಿಳೆಯರನ್ನು, ದಲಿತರನ್ನು ಕೇಂದ್ರವಾಗಿಟ್ಟುಕೊಂಡು ಅಭಿವೃದ್ಧಿಯನ್ನು ಯೋಜಿಸಬೇಕಾಗಿದೆ. ಭಾರತದಲ್ಲಿ ಸರಿಸುಮಾರು ೨೫ ಕೋಟಿ ದಲಿತರಿದ್ದಾರೆ. ಅನೂಚಾನವಾಗಿ ಹರಿದುಕೊಂಡು ಬಂದಿರುವ ಅನೇಕ ಸಾಮಾಜಿಕ ಅನಿಷ್ಟಗಳಿಂದ ಅವರು ನರಳುತ್ತಿದ್ದಾರೆ.ಮಾನವ ಹಕ್ಕುಗಳು ದಲಿತರನ್ನು ಕೇಂದ್ರವಾಗಿಟ್ಟು ಕೊಳ್ಳಬೇಕಾಗಿದೆ. ಮಹಿಳೆಯರು ಅನೇಕ ವ್ಯಕ್ತಿತ್ವ, ಘನತೆ ಮತ್ತು ಅಸ್ತಿತ್ವವನ್ನು ರಕ್ಷಿಸುವಂತಾಗಬೇಕು.

## *ಹಕ್ಕುಗಳ ವಿಧಗಳು

ಹಕ್ಕುಗಳನ್ನು ಸ್ಥೂಲವಾಗಿ ನೈತಿಕ ಹಕ್ಕು ಮತ್ತು ಶಾಸನ ಬದ್ಧ ಹಕ್ಕುಗಳೆಂದು ವರ್ಗೀಕರಿಸಬಹುದು. ನೈತಿಕ ಹಕ್ಕುಗಳು ವ್ಯಕ್ತಿನಿಷ್ಠವಾದ ಸಂಗತಿಗಳಾಗಿವೆ. ಇವು

ಸಾಮುದಾಯಿಕವಾದ ಹಕ್ಕುಗಳು. ಇವುಗಳನ್ನು ಪಾಲಿಸುವದು ಸಾಮಾಜಿಕ ಅಗತ್ಯವೇ ವಿನಾ ಕಾನೂನಿ ಅಗತ್ಯವಲ್ಲ.ನೈತಿಕ ಹಕ್ಕುಗಳನ್ನು ಕುರಿಂತೆ ಹೆಚ್ಚು ಚರ್ಚೆ ಮಾಡುವ ಅಗತ್ಯವಿಲ್ಲ. ಏಕೆಂದರೆ ಅವು ಸ್ವ ಇಚ್ಛೆಯಿಂದ ಪಾಲಿಸುವ ಹಕ್ಕುಗಳಾಗಿವೆ. ಈ ಬಗೆಯ ಹಕ್ಕುಗಳನ್ನುಪಾಲಿಸದಿದ್ದರೆ ಯಾವುದೇ ಶಿಕ್ಷೆ ಇರುವುದಿಲ್ಲ. ಅನೇಕ ಸಂದರ್ಭಗಳಲ್ಲಿ ನೈತಿಕ ಹಕ್ಕುಗಳು ಜನವಿರೋಧಿಯಾಗಿರಬಹುದು. ಉದಾರಹಣೆಗೆ ನಮ್ಮ ಸಮಾಜದ ಒಂದು ವರ್ಗವು ಅಸ್ಪೃಶ್ಯತೆಯನ್ನು ನೈತಿಕ ನಿಯಮವೆನ್ನವಂತೆ ಪಾಲಿಸುತ್ತಿತ್ತು. ಆದರೆ ಅದೊಂದು ಅಮಾನವೀಯ ಆಚರಣೆಯಾಗಿತ್ತು. ಬಾಲ್ಯ ವಿವಾಹದಂತಹ ಆಚರಣೆಗಳು ಒಂದು ಕಾಲಕ್ಕೆ ನಮ್ಮ ದೇಶದಲ್ಲಿದ್ದವು ಅವುಗಳನ್ನು ಜನರ ಹಕ್ಕುಗಳೆಂದು ಮನ್ನಿಸಲು ಸಾಧ್ಯವಿಲ್ಲ.

ಇಂದು ವಿಶ್ವಾದ್ಯಂತ ಪ್ರಚಲಿತದಲ್ಲಿರುವದು ಶಾಸನ ಬದ್ಧ ಹಕ್ಕುಗಳು. ಹೆಸರೆ ಸೂಚಿಸುವಂತೆ ಪ್ರಭುತ್ವ ಅಥವಾ ಸರಕಾರವು ಜಾರಿಗೆ ತರುವ ಹಕ್ಕುಗಳು ಶಾಸನ ಬದ್ಧ ಹಕ್ಕುಗಳು ಈ ಹಕ್ಕುಗಳನ್ನು ಪಾಲಿಸುವಂತೆ ಸರ್ಕಾರವು ನಾಗರಿಕರನ್ನು ಒತ್ತಾಯಿಸುತ್ತದೆ. ಈ ಹಕ್ಕುಗಳ ಉಲ್ಲಂಘನೆಗೆ ಶಿಕ್ಷೆ ಇರುತ್ತದೆ.ಶಾಸನಬದ್ಧ ಹಕ್ಕುಗಳು ಸಂವಿಧಾನಾತ್ಮಕ-ವಾಗಿರಬಹುದು. ರಾಜ್ಯಶಾಸ್ತ್ರದಲ್ಲಿ ಹಕ್ಕುಗಳನ್ನು ಕುರಿತ ಚರ್ಚೆಯು ಮೂಲತಃ ಶಾಸನಬದ್ಧ ಹಕ್ಕುಗಳನ್ನು ಕುರಿತದ್ದಾಗಿದೆ.

ಶಾಸನಬದ್ಧ ಹಕ್ಕುಗಳು

ನಾಗರಿಕ ಮತ್ತು ರಾಜಕೀಯ ಹಕ್ಕುಗಳು

ಆರ್ಥಿಕ, ಸಾಮಾಜಿಕ, ಮತ್ತು ಸಾಂಸ್ಕೃತಿಕ ಹಕ್ಕುಗಳು

ಇದು ಅತ್ಯಂತ ಮಹತ್ವವಾದ ಹಾಗೂ ಉಪಯುಕ್ತ ವರ್ಗಿಕರಣವಾಗಿದೆ. ಭಾರತದ ದೃಷ್ಟಿಯಿಂದ ಈ ವರ್ಗಿಕರಣವು ಮುಖ್ಯವಾದುದಾಗಿದೆ. ಇವೆರಡು ಗುಂಪುಗಳಲ್ಲಿ ಯಾವುದು ಮುಖ್ಯ, ಯಾವುದು ಮುಖ್ಯವಲ್ಲ. ಎಂಬುದರ ಬಗ್ಗೆ ತೀವ್ರ ಚರ್ಚೆಗಳು ಇಂದಿಗೂ ನಡೆಯುತ್ತವೆ. ಭಾರತವನ್ನು ಸೇರಿಸಿಕೊಂಡು ಏಷ್ಯಾದ ಅನೇಕ ದೇಶಗಳು ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಹಕ್ಕುಗಳು ಮುಖ್ಯವೆಂದೂ, ನಾಗರಿಕ ಮತ್ತು ರಾಜಕೀಯ ಹಕ್ಕುಗಳು ಮುಖ್ಯವಲ್ಲವೆಂದೂ ವಾದಿಸುತ್ತಿವೆ.

ನಾಗರಿಕ ಮತ್ತು ರಾಜಕೀಯ ಹಕ್ಕುಗಳನ್ನು ತಕ್ಷಣವೇ ಸಾಧಿಸಿಕೊಂಡು ಬಿಡಬಹುದು ಆದರೆ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳನ್ನು ಸಾಧಿಸಿಕೊಳ್ಳಲು ದೀರ್ಘಕಾಲ ಬೇಕಾಗುತ್ತದೆ. ಏಕೆಂದರೆ ಅವುಗಳನ್ನು ಸಾಧಿಸಿಕೊಳ್ಳಲು ಅಪಾರ ಸಂಪನ್ಮೂಲಗಳು ಬೇಕಾಗುತ್ತವೆ. ಇವೆರಡೂ ಬಗೆಯ ಹಕ್ಕುಗಳ ನಡುವಣ ವ್ಯತ್ಯಾಸವನ್ನು ಬಾಬಾಸಾಹೇಬ ಅಂಬೇಡ್ಕರ್ ಅವರು ಅತ್ಯಂತ ಸ್ಪಷ್ಟವಾಗಿ ೧೯೫೦ರಲ್ಲೇ ಗುರುತಿಸಿದ್ದರು.

''ಜನವರಿ ೨೬, ೧೯೫೦ ರಂದು ಭಾರತವು ವೈರುಧ್ಯಗಳ ಬದುಕನ್ನು ಪ್ರವೇಶಿಸುತ್ತಿದೆ. ರಾಜಕೀಯ ಸಮಾನತೆ ಇರುತ್ತದೆ. ಆದರೆ ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆ ಮುಂದುವರೆಯುತ್ತದೆ.''

ಮುಂದುವರಿದ ದೇಶಗಳು ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಬಗ್ಗೆ ಒತ್ತಾಯಿಸುತ್ತಿದ್ದರೆ ಅಭಿವೃದ್ಧಿಶೀಲ ದೇಶಗಳು ಆರ್ಥಿಕ ಮತ್ತು ಸಾಮಾಜಿಕ ಹಕ್ಕುಗಳನ್ನು ಒತ್ತಾಯಿಸುತ್ತಿವೆ. ಈ ದೇಶಗಳು ಅಭಿವೃದ್ಧಿಗಾಗಿ ನಾಗರಿಕ ಹಕ್ಕುಗಳ ಮೇಲೆ ನಿರ್ಬಂಧ ವಿಧಿಸಬೇಕಾಗುತ್ತದೆ. ಎಂದು ವಾದಿಸುತ್ತಿವೆ. ಜಾಗತಿಕ ಮಟ್ಟದಲ್ಲಿ ಇವೆರಡೂ ಬಗೆಯ ಹಕ್ಕುಗಳ ನಡುವೆ ಅಂತರ ಅಧಿಕವಾಗುತ್ತಿದೆ. ಅಮೇರಿಕ, ಇಂಗ್ಲೆಂಡ್, ಜರ್ಮನಿ ಮುಂತಾದ ದೇಶಗಳು ಮಾನವ ಹಕ್ಕುಗಳನ್ನು ಮನ್ನಿಸುವಂತೆ ಅಭಿವೃದ್ಧಿಶೀಲ ದೇಶಗಳನ್ನು ಒತ್ತಾಯಿಸುತ್ತಿವೆ. ಆದರೆ ಅಭಿವೃದ್ಧಿಶೀಲ ದೇಶಗಳು ಸಾಮಾಜಿಕ ಸಂದರ್ಭವು ಮಾನವ ಹಕ್ಕುಗಳನ್ನು ಮನ್ನಿಸಲು ಪಕ್ವವಾಗಿಲ್ಲವೆಂದೂ ಹೇಳುತ್ತಿವೆ.

ಮಾನವ ಹಕ್ಕುಗಳು ಜಾಗತಿಕ ಸಂಗತಿಗಳು ಎಂಬುದರ ಬಗ್ಗೆ ಎರಡು ಮಾತು ಸಾಧ್ಯವಿಲ್ಲ. ಆದರೆ ರಾಷ್ಟ್ರಗಳ ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ವಿಭಿನ್ನತೆಗಳನ್ನು ನಿರ್ಲಕ್ಷಿಸುವದು ಸಾಧ್ಯವಿಲ್ಲ. ಏಷ್ಯಾದ ಅನೇಕ ದೇಶಗಳು ಇಂತಹ ವಿಚಾರಗಳನ್ನು ಪ್ರಸ್ತಾಪ ಮಾಡುತ್ತಿವೆ.

ಈ ಬಗೆಯ ವೈರುಧ್ಯಗಳನ್ನು ಕುರಿತಂತೆ ಅಮರ್ತ್ಯಸೇನ್ ಚರ್ಚಿಸಿದ್ದಾರೆ. ಅಮರ್ತ್ಯಸೇನ್ ಪ್ರಕಾರ ಎರಡು ಬಗೆಯ ಹಕ್ಕುಗಳಲ್ಲಿ ಯಾವುದು ಮುಖ್ಯ, ಯಾವುದು ಮೊದಲು ಎಂಬ ಪ್ರಶ್ನೆಯಿಲ್ಲ. ಅಭಿವೃದ್ಧಿಯನ್ನು ನಿರ್ವಹಿಸಲಾಗದ ಪ್ರಭುತ್ವಗಳು ಎರಡು ಗುಂಪಿನ ಹಕ್ಕುಗಳ ನಡುವೆ ನಡುವೆ ಭಿನ್ನತೆಯನ್ನೆಣಿಸುತ್ತವೆ. ಸೇನ್ ಪ್ರಕಾರ ಅಭಿವೃದ್ಧಿ ಮತ್ತು ಸ್ವಾತಂತ್ರ್ಯಗಳು ಬೇರೆ ಬೇರೆಯಲ್ಲ. ಸ್ವಾತಂತ್ರ್ಯ- ಸಮಾನತೆಯಿಲ್ಲದ ಸ್ಥಿತಿಯಲ್ಲಿ ಅಭಿವೃದ್ಧಿಗೆ ಅರ್ಥವಿಲ್ಲ. ಅಭಿವೃದ್ಧಿಗೆ ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ಸಮಾನತೆಗಳು ಅಡ್ಡಿಯಾಗಿವೆ. ಎಂಬ ವಾದದಲ್ಲಿ ಹುರುಳಿಲ್ಲ. ಮಾನವ ಹಕ್ಕುಗಳು ಅಭಿವೃದ್ಧಿ ಅವಿಭಾಜ್ಯ ಅಂಗಗಳು. ಮಾನವ ಹಕ್ಕುಗಳು ಅಭಿವೃದ್ಧಿಯ ಮಾನದಂಡವಾಗಿದೆ. ಪ್ರಜಾಪ್ರಭುತ್ವದಲ್ಲಿ ನಾಗರಿಕ ಮತ್ತು ರಾಜಕೀಯ ಹಕ್ಕುಗಳು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳಿಗೆ ಪೂರಕವೇ ವಿನಾ ಮಾರಕವಲ್ಲ. ಎರಡೂ ಬಗೆಯ ಹಕ್ಕುಗಳನ್ನು ಸಾಧಿಸಿಕೊಳ್ಳುವ ಬಗ್ಗೆ ಭಾರತವು ಯೋಚಿಸಬೇಕಿದೆ.

**ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ವಿಧಗಳು**

ಈ ಗುಂಪಿನಲ್ಲಿ ಬರುವ ಹಕ್ಕುಗಳು ಹೀಗಿವೆ.

೧. ದುಡಿಯುವ ಹಕ್ಕು

೨. ಶಿಕ್ಷಣದ ಹಕ್ಕು
೩. ಸಾಂಸ್ಕೃತಿಕ ಬದುಕಿನಲ್ಲಿ ಭಾಗವಹಿಸುವ ಹಕ್ಕು
೪. ಕಾರ್ಮಿಕ ಸಂಘಗಳ ಹಕ್ಕು
೫. ಆರೋಗ್ಯಭಾಗ್ಯದ ಹಕ್ಕು
೬. ಆಸ್ತಿಯ ಹಕ್ಕು
೭. ಕುಟುಂಬದ ಹಕ್ಕು

ನಾಗರಿಕ ಮತ್ತು ರಾಜಕೀಯ ಹಕ್ಕುಗಳ ವಿಧಗಳು

೧. ಜೀವಿಸುವ ಹಕ್ಕು
೨. ಸ್ವಾತಂತ್ರ್ಯದ ಹಕ್ಕು
೩. ಖಾಸಗಿತನದ ಹಕ್ಕು
೪. ಧಾರ್ಮಿಕ ಹಕ್ಕು
೫. ವಾಕ್ ಹಕ್ಕು
೬. ಸಂಚಾರದ ಹಕ್ಕು
೭.ಸಂಘಟನೆ ಹಾಗೂ ಸಭೆ ಸೇರುವ ಹಕ್ಕು
೮.ರಾಜಕೀಯ ಸಹಭಾಗಿತ್ವದ ಹಕ್ಕು
೯. ಮತದಾನದ ಹಾಗೂ ಚುನಾವಣೆ ಸ್ಪರ್ಧಿಸುವ ಹಕ್ಕು
೧೦. ಸರಕಾರಿ ಸೇವೆಯಲ್ಲಿ ಸೇರುವ ಹಕ್ಕು

**ಕೇವಲ ಮುಖ್ಯ ಹಕ್ಕುಗಳ ವಿವರಣೆ**

**೧. ದುಡಿಯುವ ಹಕ್ಕು**

ಮಾನವ ಹಕ್ಕುಗಳಗುಂಪಿಗೆ ಇತ್ತಿಚಗೆ ಸೇರ್ಪಡೆಯಾದ ಹಕ್ಕು ಇದಾಗಿದೆ. ದುಡಿಯುವ ಸಾಮರ್ಥ್ಯವಿರುವ ನಾಗರಿಕನಿಗೆ ದುಡಿಮೆಯ ಅವಕಾಶ ಇರಬೇಕಾದುದು ನ್ಯಾಯ. ದುಡಿಮೆಯ ಅವಕಾಶಗಳು ಇಲ್ಲದಿದ್ದಾಗ ಜನರ ಬದುಕು ಮೂರಾಬಟ್ಟೆಯಾಗುತ್ತದೆ.

ದುಡಿಮೆಯ ಅವಕಾಶಗಳು ಅನೇಕ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಂದ ಸೀಮಿತಗೊಳ್ಳಬಹುದು. ಅಕ್ಷರ ಸಂಸ್ಕೃತಿಯ ಕೊರತೆಯಿಂದಾಗಿ ದುಡಿಮೆಯ ಅವಕಾಶ ಸೀಮಿತವಾಗಿರಬಹುದು. ಮಹಿಳೆಯ ಬಗೆಗಿನ ಮೂಢ ನಂಬಿಕೆಯಿಂದಾಗಿ ಅವಳ ದುಡಿಮೆಯ ಅವಕಾಶ ಸೀಮಿತವಾಗಿರಬಹುದು. ಅಸ್ಪೃಶ್ಯತೆ, ಜಾತಿಯತೆ, ಜನಾಂಗೀಯ ಭಾವನೆ, ಕೋಮುಭಾವನೆ ಮುಂತಾದ ಕಾರಣಗಳಿಂದಲೂ

ದುಡಿಮೆಯ ಅವಕಾಶಗಳು ಸಮಾಜದ ಕೆಲವು ವರ್ಗಗಳಿಗೆ ಸೀಮಿತವಾಗಿರಬಹುದು. ಇಲ್ಲಿ ದುಡಿಮೆಯ ಅವಕಾಶದಿಂದ ವಂಚಿತವಾದ ವರ್ಗಗಳ ಮಾನವ ಹಕ್ಕು ಉಲ್ಲಂಘನೆಯಾಗುತ್ತಿದೆಯೆಂದು ತಿಳಿಯಬಹುದು.

ಆರ್ಥಿಕ ದುಸ್ಥಿತಿಯಿಂದಾಗಿ ದುಡಿಮೆಯ ಅವಕಾಶಗಳು ಸೀಮಿತವಾಗಿದ್ದರೆ ಅದನ್ನು ಅರ್ಥ ಮಾಡಿಕೊಳ್ಳಬಹುದು ಕಷ್ಟ. ಆದ್ದರಿಂದ ದುಡಿಯುವವನ ಹಕ್ಕನ್ನು ಮನ್ನಿಸಬೇಕೆಂದು ಒತ್ತಾಯಿಸಲಾಗುತ್ತಿದೆ.

**೨. ಜೀವಿಸುವ ಹಕ್ಕು**

ಇದೊಂದು ಬಹಳ ಮುಖ್ಯವಾದ ಮಾನವ ಹಕ್ಕು. ಸಮಾಜದಲ್ಲಿ ನಾಗರಿಕರೆಲ್ಲರಿಗೂ ಜೀವಿಸುವ, ತನ್ನ ಬದುಕನ್ನು ತನ್ನ ಇಚ್ಛೆಗೆ ತಕ್ಕಂತೆ ಕಟ್ಟಿಕೊಳ್ಳುವ, ತನ್ನ ಅಭಿಲಾಷೆ ಮತ್ತು ಅಭಿರುಚಿಯಂತೆ ಬದುಕುವ ಹಕ್ಕು ಇರುತ್ತದೆ. ಇದರಲ್ಲಿ ವ್ಯತ್ಯಯವಾದರೆ ಅಲ್ಲಿ ನಾಗರಿಕನ ಹಕ್ಕು ಉಲ್ಲಂಘನೆಯಾಗಿದೆಯೆಂದು ತಿಳಿಯಬೇಕು. ಜೀವಿಸುವ ಹಕ್ಕಿಗೆ ಕುತ್ತು ಮುಖ್ಯವಾಗಿ ಯುದ್ಧದಿಂದ ಉಂಟಾಗುತ್ತದೆ. ಮಾನವ ಹಕ್ಕುಗಳ ಉಲ್ಲಂಘನೆಗೆ ಬಹು ಮುಖ್ಯ ಕಾರಣವೆನೆಂದರೆ ಯುದ್ಧ. ಯುದ್ಧಕ್ಕೆ ಯಾವ ರೀತಿಯಲ್ಲೂ ಕಾರಣರಾಗದ, ಯುದ್ಧ ನಡೆಯುತ್ತಿರುವ ದೇಶಗಳಿಗೆ ಸೇರದ ಜನರ ಜೀವಿಸುವ ಹಕ್ಕು ಯುದ್ಧದಿಂದಾಗಿ ಉಲ್ಲಂಘನೆಯಾಗಬಹುದು. ಕೋಮು ಗಲಭೆ, ಬಡತನ ಬರಗಾಲ, ಪ್ರವಾಹ ಮುಂತಾದ ಸಂಗತಿಗಳು ಜೀವಿಸುವ ಹಕ್ಕಿಗೆ ಕಂಟಕ ಉಂಟು ಮಾಡಬಹುದು. ಇಂತಹ ಸಂಗತಿಗಳ ವಿರುದ್ಧ ನಾಗರಿಕನಿಗೆ ರಕ್ಷಣೆ ಒದಗಿಸಬೇಕಾದುದು ಸರ್ಕಾರದ, ಸಮಾಜದ ಕೆಲಸವಾಗಿದೆ. ಇದು ಕೇವಲ ಮನುಷ್ಯ ಜೀವಿಗೆ ಮಾತ್ರ ಸೀಮಿತವಾಗಬೇಕಾಗಿಲ್ಲ. ಇದು ಸಕಲ ಜೀವ ಜಂತುಗಳಿಗೂ ಅನ್ವಯವಾಗಬಹುದು.

**೩. ಸ್ವಾತಂತ್ರ್ಯದ ಹಕ್ಕು**

ಅಮರ್ತ್ಯಸೇನ್ ಅವರು ಇತ್ತೀಚೆಗೆ ಪ್ರಕಟಿಸಿರುವ ಪುಸ್ತಕದ ಹೆಸರು 'ಸ್ವಾತಂತ್ರ್ಯವಾಗಿ ಅಭಿವೃದ್ಧಿ'. ಅವರ ಪ್ರಕಾರ ಸ್ವಾತಂತ್ರ್ಯವು ಅಭಿವೃದ್ಧಿಯ ಅಂತರ್ಗತ ಸಂಗತಿ. ಇವೆರಡೂ ಪರಸ್ಪರ ಪೂರಕ ಸಂಬಂಧ ಪಡೆದಿದ್ದವೆ ವಿನಾ ವಿರುದ್ಧವಲ್ಲ. ಅನೇಕ ಮಿಲಿಟರಿ ಸರ್ಕಾರಗಳು ಸ್ವಾತಂತ್ರ್ಯವು ಅಭಿವೃದ್ಧಿಗೆ ಮಾರಕವೆಂದು ಪರಿಭಾವಿಸಿ ಕೊಂಡಿವೆ. ಇದು ತಪ್ಪು. ಸ್ವಾತಂತ್ರ್ಯವೆಂದರೆ ಬದುಕನ್ನು ಕಟ್ಟಿಕೊಳ್ಳಲು ಹಾಗೂ ಉತ್ತಮಪಡಿಸಿಕೊಳ್ಳಲು ಲಭ್ಯವಿರುವ ಅವಕಾಶಗಳಲ್ಲಿ ತನಗೆ ಸೂಕ್ತವಾದುದನ್ನು ಹಾಗೂ ಯೋಗ್ಯವಾದುದನ್ನು ಆಯ್ಕೆ ಮಾಡಿಕೊಳ್ಳುವದಾಗಿದೆ. ಈ ಕ್ರಿಯೆಗೆ ಅನೇಕ ಸಂಕೋಲೆಗಳಿರಬಹುದು. ಮಹಿಳೆಯರು, ಪರಿಶಿಷ್ಟ ಜನರು ಹಿಂದುಳಿದ ವರ್ಗಗಳು ನಮ್ಮ ದೇಶದಲ್ಲಿ ಸ್ವಾತಂತ್ರ್ಯದಿಂದ ವಂಚಿತರಾಗಿದ್ದಾರೆ. ಸ್ವಾತಂತ್ರ್ಯವನ್ನು ರಾಜಕೀಯಕ್ಕೆ

ಮಾತ್ರ ಸೀಮಿತಗೊಳಿಸುವ ಅಗತ್ಯವಿಲ್ಲ. ಇಂದು ಅಭಿವೃದ್ಧಿಯನ್ನು ಒಂದು ಹಕ್ಕನ್ನಾಗಿ ಒತ್ತಾಯಿಸಲಾಗುತ್ತದೆ.ಈ ದೃಷ್ಟಿಯಿಂದ ಸ್ವಾಂತಂತ್ರ್ಯಕ್ಕೆ ಹೆಚ್ಚಿನ ಮಹತ್ವ ನೀಡಬೇಕಾದ ಅಗತ್ಯವಿದೆ.

**೪. ರಾಜಕೀಯ ಸಹಭಾಗಿತ್ವದ ಹಕ್ಕು**

ಸಹಭಾಗಿತ್ವವೆಂಬುದು ರಾಜಕೀಯ ಸಿದ್ಧಾಂತವಾಗಿ ಇಂದು ಚರ್ಚೆಯಾಗುತ್ತಿದೆ. ಸರ್ಕಾರದ ನೀತಿ ನಿರೂಪಣೆಗಳು ಪ್ರತಿಯೊಬ್ಬ ನಾಗರಿಕನ ಮೇಲೂ ಪರಿಣಾಮ ಬೀರುವ ಸಂಗತಿಗಳಾಗಿವೆ.ಈ ನೀತಿ ನೀರೂಪಣೆಗಳಲ್ಲಿ, ನಿರ್ಧಾರ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ನಾಗರಿಕರಿಗೆ ಭಾಗವಹಿಸಲು ಅವಕಾಶವಿರಬೇಕು. ಸರ್ಕಾರ ಅನೇಕ ಸಂದರ್ಭಗಳಲ್ಲಿ ನಾಗರಿಕರಿಗೆ ಅಪಾಯ ಉಂಟು ಮಾಡುವಂತಹ ನಿರ್ಧಾರಗಳನ್ನು ಒತ್ತಡದ ಕಾರಣದಿಂದ ತೆಗೆದುಕೊಂಡು ಬಿಡಬಹುದು. ಇದರಿಂದ ನಾಗರಿಕ ಹಕ್ಕುಗಳ ಉಲ್ಲಂಘನೆಯಾಗುತ್ತದೆ. ರಾಜಕಾರಣ ಪ್ರಕ್ರಿಯೆಯಲ್ಲಿ ಜನರು ಪಾಲುಗೊಳ್ಳಲು ಅವಕಾಶವಾಗುವಂತಹ ಸಂಸ್ಥೆಗಳನ್ನು ಕಟ್ಟಬೇಕಾಗುತ್ತದೆ.

**೫. ಆರೋಗ್ಯಭಾಗ್ಯದ ಹಕ್ಕು**

ನಾಗರಿಕರು ಆರೋಗ್ಯಕಾಯಕರಾಗಿ, ಅಂಗವಿಕಲತೆಯಿಲ್ಲದಂತೆ, ಬುದ್ಧಿಮಾಂದ್ಯದಿಂದ ಮುಕ್ತರಾಗಿ ದೀರ್ಘಕಾಲ ಬದುಕುವ ಸ್ಥಿತಿ ಸಮಾಜದಲ್ಲಿರಬೇಕು. ಪರಿಸರ ಮಾಲಿನ್ಯ, ವಿಷಯುಕ್ತ ತ್ಯಾಜ್ಯದ ಹರುಡುವಿಕೆಯಿಂದ, ಸಿಎಫ್‌ಸಿ ಅಧಿಕ ಬಳಕೆಯಿಂದ, ಅಣುವಿಕಿರಣದಿಂದ ಇಂದು ನಾಗರಿಕರು ಆರೋಗ್ಯದಿಂದ ಬದುಕುವ ಹಕ್ಕಿನಿಂದ ವಂಚಿತರಾಗುತ್ತಿದ್ದಾರೆ. ಇದು ಆರ್ಥಿಕ ಅಭಿವೃದ್ಧಿ ಸಂಬಂಧಿ ಹಕ್ಕು. ಭಾರತದಲ್ಲಿ ಸರಾಸರಿ ಆಯುರ್ಮಾನ ೬೫ ವರ್ಷಗಳು ಆದರೆ ಅನೇಕ ನಾಗರಿಕರು ಅಲ್ಪಾಯುಗಳಾಗಿ ಮರಣ ಹೊಂದುತ್ತಾರೆ. ಇದು ಆರೋಗ್ಯ ದುಸ್ಥಿತಿಯ ಸೂಚಿ. ಹೆರಿಗೆಯ ಸಂದರ್ಭದಲ್ಲಿ ಮರಣ ಹೊಂದುವ ತಾಯಂದಿರ ಪ್ರಮಾಣ ಭಾರತದಲ್ಲಿ ಅಧಿಕವಾಗಿದೆ. ಇಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಯಾಗುತ್ತಿದೆ. ಆರೋಗ್ಯ ಭದ್ರತೆಯನ್ನು ನಾಗರಿಕರಿಗೆ ಒದಗಿಸಬೇಕಾಗುತ್ತದೆ.

**೬. ಪತ್ರಿಕಾ ಸ್ವಾಂತಂತ್ರ್ಯ, ವಾಕ್ ಸ್ವಾಂತಂತ್ರ್ಯ, ಸಂಘಟಿತರಾಗುವ ಮತ್ತು ಸಭೆ ಸೇರುವ ಹಕ್ಕು**

ಇವೆಲ್ಲವೂ ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಗುಂಪಿಗೆ ಸೇರುತ್ತವೆ ಇವುಗಳನ್ನು ಅಮುಖ್ಯವೆಂದೂ, ಅಭಿವೃದ್ಧಿಗೆ ಕಂಟಕವೆಂದೂ ತಳ್ಳಿಹಾಕಲು ಸಾಧ್ಯವಿಲ್ಲ. ಏಕೆಂದರೆ ಅಮರ್ತ್ಯಸೇನ್ ಅವರು ಪತ್ರಿಕೆಗಳು, ವಿರೋಧ ಪಕ್ಷಗಳು, ಚಿಂತಕರು,

ಸಂಘಟನೆಗಳು ಎಲ್ಲಿ ಕ್ರಿಯಾಶೀಲವಾಗಿರುತ್ತವೋ ಅಲ್ಲಿ ಕ್ಷಾಮಡಾಮರಗಳು ಸಂಭವಿಸಲು ಸಾಧ್ಯವಿಲ್ಲವೆಂಬುದನ್ನು ಅನೇಕ ಅಧ್ಯಯನಗಳ ಮೂಲಕ ದೃಢಪಡಿಸಿದ್ದಾರೆ. ಪತ್ರಿಕೆ, ಸುದ್ದಿ ಮಾಧ್ಯಮಗಳು ಬಹುಮುಖ್ಯವಾದ ಕಾರ್ಯ ಮಾಡುತ್ತಿವೆ. ಮಾನವ ಹಕ್ಕುಗಳ ಉಲ್ಲಂಘನೆಯನ್ನು ಇವು ಸಾರ್ವಜನಿಕರ ಚರ್ಚೆಗೆ ಒಳಪಡಿಸುತ್ತವೆ. ಇದರಿಂದಾಗಿ ಸರ್ಕಾರಗಳು ಮಾನವ ಹಕ್ಕುಗಳ ಉಲ್ಲಂಘನೆಯನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲ.

ಹಕ್ಕುಗಳನ್ನು ಆಡಳಿತದ ಅನುಕೂಲಕ್ಕೆ ಅನೇಕ ವಿಧಗಳಾಗಿ ವಿಂಗಡಿಸಲಾಗಿದೆ. ಈ ವರ್ಗೀಕರಣವವು ಅತ್ಯಂತ ಸ್ಥೂಲವಾದುದು. ಮೂಲದಲ್ಲಿ ಎಲ್ಲ ಹಕ್ಕುಗಳೂ ಮಾನವನ ಘನತೆಯನ್ನು, ವ್ಯಕ್ತಿತ್ವವನ್ನು, ಮಾನವತ್ವವನ್ನು ರಕ್ಷಿಸುವ ಗುರಿ ಹೊಂದಿದ್ದಾನೆ. ಅವುಗಳು ಜಾಗತಿಕವೂ ಹೌದು ಮತ್ತು ರಾಷ್ಟ್ರ ನಿರ್ದಿಷ್ಟವೂ ಹೌದು ಭಾರತದಲ್ಲಿ ಮಾನವ ಹಕ್ಕುಗಳ ಬಗ್ಗೆ ಜನರನ್ನು ಜಾಗೃತಗೊಳಿಸುವ ಪ್ರಯತ್ನಗಳು ಇಂದು ನಡೆಯುತ್ತಿವೆ. ಅವುಗಳ ಉಲ್ಲಂಘನೆ ಬಗ್ಗೆ ಸುದ್ದಿ ಮಾಧ್ಯಮಗಳು ಜನರ ಗಮನ ಸೆಳೆಯುತ್ತಿವೆ. ಮಾನವ ಹಕ್ಕುಗಳ ವಿವಿಧ ಆಯಾಮಗಳ ಬಗ್ಗೆ ತಿಳಿದುಕೊಳ್ಳಬೇಕಾದುದು ವಿದ್ಯಾರ್ಥಿಗಳ ಕರ್ತವ್ಯವಾಗಿದೆ.

## ಪ್ರಶ್ನೆಗಳು

ಅ :- ಒಂದು ಅಂಕದ ಪ್ರಶ್ನೆಗಳು. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

೧. ಪರಮಾಧಿಕಾರವೆಂದರೇನು ?
೨. ಕಾನೂನಿನ ವ್ಯಾಖ್ಯೆ ನೀಡಿರಿ.
೩. ಸ್ವಾತಂತ್ರ್ಯ ಎಂದರೇನು ?
೪. ಸಮಾನತೆಯ ಅರ್ಥಕೊಡಿರಿ ?
೫. ಕಾಯಿದೆಗಳನ್ನು ಪಾಸು ಮಾಡುವ ಅಂಗ ಯಾವುದು ?
೬. ಅಧಿಕಾರ ಎಂದರೇನು ?
೭. ನ್ಯಾಯ ಎಂದರೇನು ?
೮. ಅಂತರರಾಷ್ಟ್ರೀಯ ಕಾನೂನು ಎಂದರೇನು ?
೯. ಸಂವಿಧಾನಾತ್ಮಕ ಕಾನೂನು ಎಂದರೇನು ?
೧೦. ಸಾಮಾಜಿಕ ಸಮಾನತೆ ಎಂದರೇನು ?

ಪ್ರ ಆ. :- ಎರಡು ಅಂಕಗಳ ಪ್ರಶ್ನೆಗಳು. ೨-೩ ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೧೧. ಆಂತರಿಕ ಹಾಗೂ ಬಾಹ್ಯ ಪರಮಾಧಿಕಾರದ ವಿವರಣೆ ಕೊಡಿರಿ
೧೨. ಸಂವಿಧಾನಾತ್ಮಕ ಕಾನೂನು ಹಾಗೂ ಸಾಮಾನ್ಯ ಕಾನೂನುಗಳ ವ್ಯತ್ಯಾಸ ವಿವರಿಸಿ.

೧೩. ಸ್ವಾತಂತ್ರ್ಯದ ವಿವಿಧ ಪ್ರಕಾರಗಳಾವವು ?

೧೪. ಆರ್ಥಿಕ ಸಮಾನತೆಯ ಅರ್ಥವಿವರಿಸಿರಿ.

೧೫. ಕಾನೂನುಗಳ ಉಗಮ ಸ್ಥಾನಗಳನ್ನು ವಿವರಿಸಿರಿ.

೧೬. ಕಾನೂನಿನ ವಿವಿಧ ಪ್ರಕಾರಗಳನ್ನು ಬರೆಯಿರಿ.

೧೭. ಸಮಾನತೆಯ ವಿವಿಧ ಪ್ರಕಾರಗಳನ್ನು ತಿಳಿಸಿರಿ.

೧೮. ಜನಮತಗಣನೆ ಮತ್ತು ಜನಾಭಿಪ್ರಾಯ ಇವುಗಳ ಅರ್ಥವಿವರಿಸಿ.

೧೯. ರಾಜಕೀಯ ಸ್ವಾತಂತ್ರ್ಯದ ವಿವರಣೆ ನೀಡಿ ?

೨೦. ಕಾನೂನು ಮತ್ತುನೈತಿಕತೆಯ ನಡುವಿನ ವ್ಯತ್ಯಾಸವೇನು ?

೨೧. ಆಡಳಿತಾತ್ಮಕ ಕಾನೂನು ಎಂದರೇನು ?

೨೨. ರಾಷ್ಟ್ರೀಯ ಸ್ವಾತಂತ್ರ್ಯ ಎಂದರೇನು ?

ಇ .:- ಐದು ಅಂಕಗಳ ಪ್ರಶ್ನೆಗಳು ೫-೧೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೨೩. ಪರಮಾಧಿಕಾರದ ಪ್ರಕಾರಗಳನ್ನು ವಿವರಿಸಿರಿ .

೨೪. ಪರಮಾಧಿಕಾರವೆಂದರೇನು .

೨೫. ಕಾನೂನು ಬದ್ಧ ಪರಮಾಧಿಕಾರ ಎಂದರೇನು ?

೨೬. ರಾಜಕೀಯ ಪರಮಾಧಿಕಾರದ ಅರ್ಥ ತಿಳಿಸಿ.

೨೭. ಶಕ್ತಿಬದ್ಧ ಪರಮಾಧಿಕಾರ ಎಂದರೇನು ?

೨೮. ಸ್ವಾತಂತ್ರ್ಯದ ರಕ್ಷಣೋಪಾಯಗಳನ್ನು ವಿವರಿಸಿರಿ .

೨೯. ರಾಜಕೀಯ ಅಧಿಕಾರದ ಲಕ್ಷಣಗಳಾವವು ?

೩೦. ಕಾಯಿದೆಯ ಪ್ರಕಾರಗಳಾವವು ?

೩೧. ಉತ್ತಮ ಪೌರತ್ವದ ಲಕ್ಷಣಗಳೇನು ?

೩೨. ಸಮಾನತೆಯ ಪ್ರಕಾರಗಳಾವವು ?

೩೩. ನ್ಯಾಯದ ಪ್ರಕಾರಗಳಾವವು ?

೩೪. ಕಾಯಿದೆ ಮತ್ತು ಸ್ವಾತಂತ್ರ್ಯದ ನಡುವಿನ ಸಂಬಂಧವನ್ನು ವಿವರಿಸಿರಿ .

೩೫. ನೈಸರ್ಗಿಕ ಸ್ವಾತಂತ್ರ್ಯದ ಅರ್ಥ ಬರೆಯಿರಿ .

ಈ :- ಹತ್ತು ಅಂಕಗಳ ಪ್ರಶ್ನೆಗಳು ೩೦-೪೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೩೬. ಪರಮಾಧಿಕಾರವೆಂದರೇನು ? ಅದರ ಲಕ್ಷಣಗಳನ್ನು ವಿವರಿಸಿರಿ .

೩೭. ಕಾಯಿದೆ ಎಂದರೇನು ? ಅದರ ಪ್ರಕಾರಗಳಾವವು ?

೩೮. ಸ್ವಾತಂತ್ರ್ಯ ಮತ್ತು ಸಮಾನತೆಯ ನಡುವಿನ ಸಂಬಂಧದ ಬಗ್ಗೆ ವಿವರಿಸಿರಿ

೩೯. ಹಕ್ಕುಗಳ ಪ್ರಕಾರಗಳಾವವು ?

❑ ❑

## ಅಧ್ಯಾಯ ೪

# ಸಂವಿಧಾನ ಮತ್ತು ಸರಕಾರ

### ಅ. ಸಂವಿಧಾನ ಮತ್ತು ಸಂವಿಧಾನಾತ್ಮಕ ಸರಕಾರ

ಸುಖಕರವಾದ ಜೀವನ ನಡೆಸಬೇಕೆಂಬುದು ಮನುಷ್ಯನ ಮಹದಾಶೆಗಳಲ್ಲಿ ಒಂದು. ಮನುಷ್ಯ ಸಮಾಜದಲ್ಲಿ ವಾಸಿಸಿದರೆ ಮಾತ್ರ ಅವನ ಈ ಆಸೆ ಸುಲಭವಾಗಿ ಈಡೇರುತ್ತದೆ. ಸಮಾಜದಲ್ಲಿ ಶಾಂತಿ ಇದ್ದಲ್ಲಿ ಮಾತ್ರ ಮನುಷ್ಯ ಸುಖಕರವಾದ ಜೀವನವನ್ನು ನಡೆಸಬಹುದು. ಸಮಾಜದಲ್ಲಿ ಶಾಂತಿ ಇರಬೇಕಾದರೆ ನಿಯಮ ಹಾಗೂ ಕಟ್ಟಳೆಗಳ ಮೂಲಕ ಮನುಷ್ಯನ ವರ್ತನೆಗಳನ್ನು ಹತೋಟಿಯಲ್ಲಿಡಬೇಕು. ಸಮಾಜದಲ್ಲಿ ಶಿಸ್ತನ್ನು ನೆಲೆಗೊಳಿಸಿ ವ್ಯವಸ್ಥೆಯನ್ನೇರ್ಪಡಿಸುವ ಈ ನಿಯಮ ಮತ್ತು ಕಟ್ಟಳೆಗಳನ್ನು ರಾಜ್ಯಶಾಸ್ತ್ರದಲ್ಲಿ ಕಾನೂನುಗಳೆಂದು ಕರೆಯಲಾಗುತ್ತದೆ.

ಮನುಷ್ಯರಿರುವ ಕಡೆ ಕಾನೂನುಗಳು ಇರಲೇಬೇಕು. ಕಾನೂನನ್ನೂ ರೂಪಿಸುವ ಅದನ್ನು ಜಾರಿಗೆ ತರುವ ಅದಕ್ಕೆ ತಪ್ಪಿ ನಡೆದವರನ್ನು ಶಿಕ್ಷಿಸುವ ಅಧಿಕಾರವನ್ನು ಯಾವ ಸಂಸ್ಥೆ ಹೊಂದಿದೆಯೋ ಅದನ್ನು ನಾವು ಸರಕಾರ ಎನ್ನುತ್ತೇವೆ. ಸರಕಾರದ ಅಧಿಕಾರಕ್ಕೆ ಎಲ್ಲರೂ ಒಳಪಟ್ಟಿರುವಂತೆ ಕೆಲವೊಂದು ನಿಯಂತ್ರಣಗಳಿಗೆ ಸರಕಾರವೂ ಒಳಪಟ್ಟಿರುತ್ತದೆ. ಅದು ತನಗೆ ಇಷ್ಟಬಂದ ರೀತಿಯಲ್ಲಿ ಆಡಳಿತ ನಡೆಸುವಂತಿಲ್ಲ. ಸರಕಾರವೂ ಮಾನವರನ್ನೊಳಗೊಂಡ ಸಂಸ್ಥೆಯಾಗಿರುವರಿಂದ ಅದನ್ನು ಹತೋಟಿಯಲ್ಲಿಡುವದು ಅಗತ್ಯ. ಜನರನ್ನು ನಿಯಂತ್ರಣದಲ್ಲಿಡಲು ಕಾನೂನುಗಳಿವೆ. ಈ ಮೂಲಭೂತ ಕಾನೂನುಗಳನ್ನು ಸಂವಿಧಾನಾತ್ಮಕ ಕಾನೂನುಗಳೆಂದು ಕರೆಯಲಾಗುತ್ತದೆ. ಸರಕಾರ ಈ ಕಾನೂನುಗಳಿಗೆ ಅನುಸಾರವಾಗಿಯೇ ಆಡಳಿತ ನಡೆಸಬೇಕು. ಅದರಂತೆ ಪ್ರಜೆಗಳು ತಮ್ಮ ಹಕ್ಕುಗಳನ್ನು ಅನುಭವಿಸುವದೂ, ಕರ್ತವ್ಯಗಳನ್ನು ಪಾಲಿಸುವದೂ ಈ ಕಾನೂನುಗಳಿಗೆ ಅನುಸಾರವಾಗಿಯೇ ಇರುತ್ತದೆ.

ಸರಕಾರವು ಯಾವ ನಿಯಮಗಳಿಗೆ ಅನುಸಾರವಾಗಿ ಆಡಳಿತ ನಡೆಸುತ್ತದೆಯೋ ಪ್ರಜೆಗಳು ಯಾವ ನಿಯಮಗಳಿಗೆ ಅನುಸಾರವಾಗಿ ತಮ್ಮ ಹಕ್ಕುಗಳನ್ನು ಅನುಭವಿಸಿ ಕರ್ತವ್ಯಗಳನ್ನು ಪಾಲಿಸುತ್ತಾರೆಯೋ ಅವುಗಳ ಸಂಕಲನವನ್ನು ನಾವು ಸಂವಿಧಾನವೆನ್ನುತ್ತೇವೆ. ಸರಕಾರವಿದ್ದಲ್ಲಿ ಸಂವಿಧಾನ ಇರಲೇಬೇಕು. ಪ್ರತಿಯೊಂದು ರಾಜ್ಯದ ಸರಕಾರವು ಸಂವಿಧಾನಕ್ಕನುಗುಣವಾಗಿ ರೂಪಿತವಾಗಿರುತ್ತದೆ ಹಾಗೂ ಆಡಳಿತ ನಡೆಸುತ್ತದೆ. ಪ್ರಜೆಗಳು ಸಂವಿಧಾನಕ್ಕನುಗುಣವಾಗಿ ತಮ್ಮ ಹಕ್ಕುಗಳನ್ನು ಅನುಭವಿಸಿ

ಕರ್ತವ್ಯಗಳನ್ನು ಪಾಲಿಸುತ್ತಾರೆ.ಸರಕಾರವು ಜನರನ್ನು ನಿಯಂತ್ರಣದಲ್ಲಿಡುವಂತೆ ಸಂವಿಧಾನವು ಸರಕಾರವನ್ನು ನಿಯಂತ್ರಣದಲ್ಲಿಡುತ್ತದೆ.

ಎಲ್ಲ ಪ್ರಜಾಸತ್ತಾತ್ಮಕ ಹಾಗೂ ಸಮತಾವಾದಿ ರಾಷ್ಟ್ರಗಳಿಗೂ ಸಂವಿಧಾನ ಅತ್ಯಾವಶ್ಯಕ. ಅದು ಲಿಖಿತ ಅಥವಾ ಅಲಿಖಿತ ಇರಬಹುದು. ಸರಕಾರಗಳು ವ್ಯಕ್ತಿ ಆಧಾರಿತ ಸರಕಾರವಾಗಿರದೇ ಕಾನೂನು ಆಧಾರಿತ ಸರ್ಕಾರಗಳಾಗಿವೆ. ಯಾವ ರೀತಿ ತಲೆಯಿಲ್ಲದ ಒಬ್ಬ ವ್ಯಕ್ತಿ ಸಂಪೂರ್ಣ ಮಾನವನಾಗಲು ಸಾಧ್ಯವಿಲ್ಲವೋ ಅದೇ ರೀತಿ ಸಂವಿಧಾನವಿಲ್ಲದೇ ರಾಜ್ಯದಕಲ್ಪನೆ ಕೂಡಾ ಸಾಧ್ಯವಿಲ್ಲ. ರಾಜ್ಯ ಎಷ್ಟೇ ಶ್ರೀಮಂತವಾಗಿದ್ದರೂ, ಬಡವಾದರೂ, ಚಿಕ್ಕದಾದರೂ, ದೊಡ್ಡದಾದರೂ ಸಂವಿಧಾನ ಅತ್ಯವಶ್ಯಕವಾಗಿದೆ. ಹಿಂದಿನ ಕಾಲದ ರಾಜ್ಯಗಳಲ್ಲಿ ಸಂವಿಧಾನಗಳು ಇರಲಿಲ್ಲವೆಂಬುದನ್ನು ಅಲ್ಲಗಳೆಯುವಂತಿಲ್ಲ ಆದರೆ ಆಧುನಿಕ ರಾಜ್ಯಗಳು ಸಂವಿಧಾನಗಳಿಲ್ಲದೇ ಇರುವದು ಸಾಧ್ಯವೇ ಇಲ್ಲ. ಜೆಲ್ಲಿನೆಕ್ ಎಂಬ ಲೇಖಕರು ಹೇಳಿರುವಂತೆ ಸಂವಿಧಾನವಿಲ್ಲದ ರಾಜ್ಯ ರಾಜ್ಯವೇ ಅಲ್ಲ. ಅದೊಂದು ಅರಾಜಕತೆಯ ಪ್ರಭುತ್ವ. ಆದುದರಿಂದ ಪ್ರತಿಯೊಂದು ರಾಜ್ಯವು ಸಂವಿಧಾನವನ್ನು ಹೊಂದಿರಲಿಕ್ಕೆಬೇಕು. ಸಂವಿಧಾನವಿಲ್ಲದ ರಾಜ್ಯವನ್ನು ಊಹಿಸಲು ಸಾಧ್ಯವಿಲ್ಲ.

ಸಂವಿಧಾನದ ಮುಖ್ಯ ಉದ್ದೇಶ ಸರ್ಕಾರವು ದಬ್ಬಾಳಿಕೆ ನಡೆಸದಂತೆ ಅದನ್ನು ಹತೋಟಿಯಲ್ಲಿಟ್ಟು ಆ ಮೂಲಕ ಪ್ರಜೆಗಳ ಹಕ್ಕುಗಳನ್ನು ಸಂರಕ್ಷಿಸುವದು.ಈ ರೀತಿಯಾಗಿ ಸಂವಿಧಾನವು ಸರ್ಕಾರವನ್ನು ರಚಿಸುವದೇ ಅಲ್ಲದೇ ಅದರ ಮೇಲೆ ನಿರ್ಬಂಧಗಳನ್ನು ಹೇರುತ್ತದೆ. ಆದ್ದರಿಂದ ಸರ್ಕಾರ ಮತ್ತು ಸಂವಿಧಾನಗಳು ಒಂದೇ ನಾಣ್ಯದ ಎರಡು ಮುಖಗಳೆಂದು ಹೇಳಿದರೆ ತಪ್ಪಾಗಲಾರದು.ಸಂವಿಧಾನದಲ್ಲಿ ನಮೂದಿಸಿರುವ ನಿರ್ದಿಷ್ಟವಾದ ನಿಯಮಗಳಿಗೆ ಅನುಗುಣವಾಗಿ ರಾಜ್ಯಾಡಳಿತ ನಡೆಸುವ ಸರಕಾರವೇ ಸಂವಿಧಾನ ಬದ್ಧ ಸರಕಾರ. ಇದು ವೈಯಕ್ತಿಕ ಸರಕಾರಕ್ಕಿಂತ ವಿಭಿನ್ನವಾಗಿರುತ್ತದೆ. ಯಾಕೆಂದರೆ ಅದು ರಾಜಕೀಯ ಅಧಿಕಾರವನ್ನು ಹೊಂದಿದವರ ಇಚ್ಛೆ ಹಾಗೂ ಕಲ್ಪನೆಯ ಮೇಲೆ ಅವಲಂಬಿಸಿರುವದಿಲ್ಲ. ಇದು ಸರಕಾರದ ಮೇಲೆ ಕೆಲವೊಂದು ಮಿತಿಗಳನ್ನು ಹಾಕುತ್ತದೆ. ಹಾಗೂ ನಾಗರಿಕರ ಸ್ವಾತಂತ್ರ್ಯವನ್ನು ರಕ್ಷಿಸುತ್ತದೆ. ಈ ಕರಾರು ಪೂರೈಸಿದರೆ ರಾಜ್ಯ ಸಂವಿಧಾನಾತ್ಮಕ ಸರಕಾರವನ್ನು ಹೊಂದಿದೆ ಎಂದು ಹೇಳಬಹುದು.ಕೆಲವೊಂದು ಶಕ್ತಿಗಳು ಸಂವಿಧಾನಾತ್ಮಕ ಸರಕಾರದ ವಿರುದ್ಧ ಕಾರ್ಯಾಚರಣೆಗೈಯ್ಯುತ್ತವೆ. ಇವು ಕೆಳಗಿನಂತಿವೆ.

೧. ಯುದ್ಧದ ವೇಳೆ ಅಥವಾ ಯುದ್ಧ ಪ್ರಾರಂಭವಾಗುವ ಸಮಯದಲ್ಲಿ ಸರಕಾರ ಕಾರ್ಯಾಚರಣೆಗೈಯ್ಯಲು ಹೆಚ್ಚಿನ ಸ್ವಾತಂತ್ರ್ಯವನ್ನು ಬಯಸುತ್ತದೆ. ಅಂಥವೇಳೆಯಲ್ಲಿ ಜನರು ಹೆಚ್ಚಿನ ಅಧಿಕಾರವನ್ನು ಸರಕಾರಕ್ಕೆ ದಯಪಾಲಿಸುತ್ತಾರೆ. ಆಗ ಸಂವಿಧಾನಾತ್ಮಕ ಸರಕಾರಕ್ಕೆ ವಿರೋಧ ಇರುತ್ತದೆ. ಆಗ ಇದನ್ನು ವೈಯಕ್ತಿಕ ಸ್ವಾತಂತ್ರ್ಯದ ಹರಣ ಎಂದು ಪರಿಗಣಿಸಲಾಗದು.

೨. ಆರ್ಥಿಕ ಮುಗ್ಗಟ್ಟು, ಬರ ಇತ್ಯಾದಿ ಇಂಥ ಪ್ರಸಂಗಗಳು ಸರಕಾರದಿಂದ ವಿಶೇಷಅಧಿಕಾರಗಳನ್ನು ಚಲಾಯಿಸುವದನ್ನು ಸಮರ್ಥಿಸುತ್ತವೆ. ತುರ್ತುಪರಿಸ್ಥಿತಿ ಸಂವಿಧಾನಾತ್ಮಕ ಸರಕಾರಕ್ಕೆ ಸಹಾಯಕಾರಿಯಾಗಲಾರದು

೩. ನಿರಂಕುಶವಾದ, ಇದು ಸಂವಿಧಾನಾತ್ಮಕ ಸರಕಾರ ಅಂದರೆ ವೈಯಕ್ತಿಕ ಸ್ವಾತಂತ್ರ್ಯದ ಇನ್ನೊಂದು ವೈರಿ. ನಿರಂಕುಶವಾದ ಹೆಚ್ಚಾದಂತೆಲ್ಲಾ ಸಂವಿಧಾನಾತ್ಮಕ ಸರಕಾರ ಕುಸಿಯುತ್ತದೆ.ಸಂವಿಧಾನಾತ್ಮಕ ಸರಕಾರಕ್ಕೆ ಪ್ರಜಾಪ್ರಭುತ್ವದ ಅವಶ್ಯವಿದ್ದಾಗ್ಯೂ ತುರ್ತುಪರಿಸ್ಥಿತಿಯಲ್ಲಿ ಸಂವಿಧಾನಾತ್ಮಕ ಸರಕಾರವನ್ನು ತಾತ್ಕಲಿಕವಾಗಿ ರದ್ದು ಪಡಿಸಲಾಗುತ್ತದೆ.

ಸಂವಿಧಾನದ ಕಲ್ಪನೆಯು ಪುರಾತನವಾಗಿದ್ದು ಗ್ರೀಕರಿಗೆ, ರೋಮನ್ನರಿಗೆ ಹಾಗೂ ಮಧ್ಯಯುಗದ ಜನರಿಗೂ ತಿಳಿದಿತ್ತು. ಅರಿಸ್ಟಾಟಲ್‌ರ ಮಹಾಕೃತಿ 'ದಿ ಪಾಲಿಟಿಕ್ಸ್' ೧೫೮ ಸಂವಿಧಾನಗಳ ಅಧ್ಯಯನದ ಫಲವಾಗಿದೆ. ೧೩ನೇ ಶತಮಾನದಲ್ಲಿ ಬ್ರಿಟಿಶ್ ಸಂವಿಧಾನ ಅಸ್ತಿತ್ವಕ್ಕೆ ಬಂದಾಗ ಸಂವಿಧಾನ ಕಲ್ಪನೆಯು ವ್ಯವಸ್ಥಿತವಾಗಿ ಬೆಳಕಿಗೆ ಬಂದಿತು. ಅನಂತರ ೧೮ನೇ ಶತಮಾನದಲ್ಲಿ ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಫಿಲಡೆಲ್ಫಿಯಾ ಸಮ್ಮೇಳನದಿಂದ ೦೪ನೇ ಮಾರ್ಚ್ ೧೭೮೯ ರಂದು ಅಸ್ತಿತ್ವಕ್ಕೆ ಬಂದ ವಿಶ್ವದ ಪ್ರಪ್ರಥಮ ಲಿಖಿತ ಸಂವಿಧಾನವು ವಿಶ್ವವಿಡೀ ಜನಪ್ರಿಯಗೊಂಡಿತು.

## ✸ ಸಂವಿಧಾನದ ಅರ್ಥ ಮತ್ತು ಮಹತ್ವ

ಕಾನ್ಸ್‌ಸ್ಟಿಟ್ಯೂಶನ್ ಎಂಬ ಇಂಗ್ಲಿಷ್ ಪದ ಕಾನ್ಸ್‌ಸ್ಟಿಟ್ಯೂಟ್ ಎಂಬ ಪದದಿಂದ ಬಂದಿದೆ. ಕಾನ್ಸ್‌ಸ್ಟಿಟ್ಯೂಟ್ ಎಂದರೆ ಸಂಯೋಜಿಸು ಅಥವಾ ವಿಧಿವತ್ತಾಗಿ ಸ್ಥಾಪಿಸು ಎಂದಾಗುತ್ತದೆ. ಅಂದರೆ ಒಂದು ರಾಜ್ಯದ ಸರ್ಕಾರದ ರಚನಾ ಕ್ರಮ ಸರ್ಕಾರದ ವಿವಿಧ ಅಂಗಗಳ ಅಧಿಕಾರವ್ಯಾಪ್ತಿ ಹಾಗೂ ಕರ್ತವ್ಯಗಳು ಹಾಗೂ ಸರ್ಕಾರ ಹಾಗೂ ಪ್ರಜೆಗಳ ನಡುವಿನ ಸಂಬಂಧವನ್ನು ನಿಶ್ಚಯಿಸುವ ಲಿಖಿತ ಅಥವಾ ಅಲಿಖಿತ ನಿಯಮಗಳ ಸಂಗ್ರಹವೇ ಸಂವಿಧಾನ.

ಸಂವಿಧಾನದ ಅರ್ಥವಿವರಣೆಯ ಬಗ್ಗೆ ವಿವಿಧ ಲೇಖಕರು ವಿವಿಧ ವ್ಯಾಖ್ಯಾನಗಳನ್ನು ಕೊಟ್ಟಿದ್ದಾರೆ.

ರಾಜ್ಯಶಾಸ್ತ್ರದ ಪಿತಾಮಹನೆನಿಸಿಕೊಂಡಿರುವ ಅರಿಸ್ಟಾಟಲ್ ಅವರ ಅಭಿಪ್ರಾಯದಲ್ಲಿ ''ರಾಜ್ಯದ ಆಡಳಿತ ಮತ್ತು ಅಧಿಕಾರವನ್ನು ಅದರಲ್ಲಿಯೂ ಪರಮಾಧಿಕಾರವನ್ನು ವ್ಯವಸ್ಥೆಗೊಳಿಸುವದೇ ಸಂವಿಧಾನ.''

ಮೆಕೈವರ್ ಅವರ ಪ್ರಕಾರ ಸಂವಿಧಾನವೆಂದರೆ 'ರಾಜ್ಯವನ್ನಾಳುವ ಕಾನೂನು' ಎಂದು ಅರ್ಥ.

ಲಾರ್ಡ್‌ಬ್ರೈಸ್ '' ಸರ್ಕಾರದ ಅಧಿಕಾರಗಳನ್ನು, ಪ್ರಜೆಗಳ ಹಕ್ಕುಗಳನ್ನು ಸಮನ್ವಯ ಮಾಡುವ ತತ್ವಗಳೇ ಸಂವಿಧಾನ.''

ವುಲ್ಸೆ ''ಸರ್ಕಾರದ ಅಧಿಕಾರದ ವ್ಯಾಪ್ತಿ, ಪ್ರಜೆಗಳ ಹಕ್ಕುಭಾದ್ಯತೆ ಹಾಗೂ ಸರಕಾರ ಮಾತ್ತು ಪ್ರಜೆಗಳ ನಡುವಣ ಸಂಬಂಧವನ್ನು ಹೊಂದಾಣಿಕೆ ಮಾಡುವ ಮೂಲ ತತ್ವಗಳ ಸಂಗ್ರಹವೇ ಸಂವಿಧಾನ''.

ಗೆಟೆಲ್ ''ರಾಜ್ಯದ ಸ್ವರೂಪವನ್ನು ನಿರ್ಧರಿಸುವ ಮೂಲ ತತ್ವಗಳೇ ಸಂವಿಧಾನ''

ಫೈನರ್ '' ರಾಜಕೀಯ ಸಂಸ್ಥೆಗಳ ಮೂಲ ಪದ್ಧತಿಯ ನಿರೂಪಣೆಯೇ ಸಂವಿಧಾನ ಹಾಗೂ ಅಧಿಕಾರ ಬಾಂಧವ್ಯದ ಆತ್ಮಕಥನವೇ ಸಂವಿಧಾನ.''

ಕೆ. ಸಿ. ವೇರ್ ''ಸರ್ಕಾರದ ಪದ್ಧತಿ ಹಾಗೂ ಅದರ ಸ್ವರೂಪವನ್ನು ನಿರ್ಧರಿಸುವ ಹಾಗೂ ಸರ್ಕಾರವನ್ನು ನಿಯಂತ್ರಿಸುವ ವಿಧಾನವನ್ನು ತಿಳಿಸುವ ಮೂಲ ಶಾಸನಗಳ ಸಂಕಲನವೇ ಸಂವಿಧಾನ.''

ಗಿಲ್ಕ್ರಿಸ್ಟ್ '' ಸಂವಿಧಾನವು ಲಿಖಿತ ಅಥವಾ ಅಲಿಖಿತ ರೂಪದಲ್ಲಿದ್ದು ಸರ್ಕಾರದ ರಚನೆ, ಸರ್ಕಾರದ ವಿವಿಧ ಅಂಗಗಳ ನಡುವಿನ ಅಧಿಕಾರ ವಿಭಜನೆ ಹಾಗೂ ಅಧಿಕಾರವನ್ನು ಚಲಾಯಿಸುವ ಸಾಮಾನ್ಯ ತತ್ವಗಳನ್ನೊಳಗೊಂಡ ನಿಯಮ ಮತ್ತು ಕಾನೂನುಗಳಾಗಿವೆ.''

ಸಿ .ಎಫ್. ಸ್ಟ್ರಾಂಗ್ '' ಸಂವಿಧಾನವು ರಾಜ್ಯದ ಮೂಲಭೂತ ತತ್ವಗಳ ಸಂಗ್ರಹವಾಗಿದ್ದು ಸರಕಾರದ ಅಧಿಕಾರ ಹಾಗೂ ಪ್ರಜೆಗಳ ಹಕ್ಕುಗಳನ್ನು ನಿರ್ಧರಿಸುತ್ತದೆ ಮತ್ತು ಇಬ್ಬರ ನಡುವಿನ ಸಂಬಂಧವನ್ನು ಹೊಂದಿಸುತ್ತದೆ.''

**ಆದರ್ಶ ಸಂವಿಧಾನದಲ್ಲಿರಬೇಕಾದ ಅಂಶಗಳು :** ಎಲ್ಲ ದೇಶದ ಸಂವಿಧಾನಗಳು ಒಂದೇ ರೀತಿ ಇರುವದಿಲ್ಲ. ಇದಕ್ಕೆ ಕಾರಣ ಒಂದು ದೇಶದ ಸಂವಿಧಾನದಲ್ಲಿರುವ ಅಂಶಗಳು ಇನ್ನೊಂದು ದೇಶದ ಸಂವಿಧಾನದ ಅಂಶಗಳಂತಿರುವದಿಲ್ಲ. ಇದು ಆಯಾ ಕಾಲದಲ್ಲಿ ಅಸ್ತಿತ್ವದಲ್ಲಿರುವ ವಿಚಾರಗಳನ್ನು ಹೊಂದಿದ ನಿರ್ಮಾಪಕರ ಮೇಲೆ ಅವಲಂಬಿಸಿರುತ್ತದೆ. ಆಧುನಿಕ ಸಂವಿಧಾನದಲ್ಲಿ ಸಾಮಾನ್ಯವಾಗಿ ಈ ಕೆಳಗಿನ ಅಂಶಗಳು ಇರುತ್ತವೆ.

**೧. ಪೀಠಿಕೆ (ಧ್ಯೇಯ ಧೋರಣೆಗಳು) :** ಪ್ರತಿಯೊಂದು ದೇಶವೂ ಕೆಲವು ಧ್ಯೇಯ ಧೋರಣೆಗಳನ್ನು ಹೊಂದಿರಬೇಕು. ಆದ್ದರಿಂದ ಆಧುನಿಕ ರಾಜ್ಯದ ಸಂವಿಧಾನವು ಸಾಮಾಜಿಕ ಹಾಗೂ ಆರ್ಥಿಕ ಧ್ಯೇಯ - ಧೋರಣೆಗಳ ಪಟ್ಟಿಯನ್ನು ಒಳಗೊಂಡಿರುತ್ತದೆ. ದೇಶದ ಧ್ಯೇಯಧೋರಣೆಗಳೇನು ಎಂಬುದನ್ನು ಸಾಮಾನ್ಯವಾಗಿ ಆಯಾ ದೇಶದ ಸಂವಿಧಾನದ ಪೀಠಿಕೆ ಸ್ಪಷ್ಟೀಕರಿಸುತ್ತದೆ. ಉದಾ : ಭಾರತ ಸಂವಿಧಾನದ ಪೀಠಿಕೆ ರಾಜ್ಯದ

ಉದ್ದೇಶವನ್ನು ಹೀಗೆ ನಿರೂಪಿಸಿದೆ, ''ಭಾರತದ ಪ್ರಜೆಗಳಾದ ನಾವು ಈ ರಾಷ್ಟ್ರವನ್ನು ಒಂದು ಸರ್ವಸ್ವತಂತ್ರ, ಪ್ರಜಾಸತ್ತಾತ್ಮಕ, ಗಣರಾಜ್ಯ, ಸಮಾಜವಾದಿ ಹಾಗೂ ಜಾತ್ಯಾತೀತ ರಾಜ್ಯವನ್ನಾಗಿ ನಿರ್ಮಿಸಬೇಕೆಂದು ನಿಶ್ಚಯ ಮಾಡಿದ್ದೇವೆ.'' ಪೀಠಿಕೆಯಲ್ಲಿ ಕಂಡುಬರುವ ಸಮಾಜವಾದ ಮತ್ತು ಜಾತ್ಯಾತೀತ ಈ ತತ್ವಗಳನ್ನು ಸಂವಿಧಾನದ ೪೨ನೇ ತಿದ್ದುಪಡಿ ಪ್ರಕಾರ ಸೇರಿಸಲಾಗಿದೆ.

**೨. ರಾಜ್ಯದ ಸ್ವರೂಪ :** ರಾಜ್ಯದ ಸ್ವರೂಪವನ್ನು ಸಂಯುಕ್ತ ಅಥವಾ ಏಕಾತ್ಮಕವೆಂದು ಸಂವಿಧಾನವೇ ನಿರ್ಧರಿಸುತ್ತದೆ. ಉದಾ : ಇಗ್ಲೆಂಡ್ ಏಕಾತ್ಮಕ ರಾಜ್ಯವಾದರೆ ಅಮೇರಿಕಾ ಸಂಯುಕ್ತ ರಾಜ್ಯವಾಗಿದೆ.

**೩. ಸರಕಾರ ಪದ್ಧತಿ :** ಸಂಸದೀಯ ಸರಕಾರ ಪದ್ಧತಿಯಿರಬೇಕೇ ಅಥವಾ ಅಧ್ಯಕ್ಷೀಯ ಪದ್ಧತಿಯ ಸರಕಾರವಿರಬೇಕೇ ಎಂಬುದನ್ನು ಸಂವಿಧಾನವೇ ನಿರ್ಧರಿಸುತ್ತದೆ. ಉದಾ : ಭಾರತದಲ್ಲಿ ಸಂಸದೀಯ ಸರಕಾರದ ಪದ್ಧತಿಯಿದೆ. ಆದರೆ ಅಮೇರಿಕೆಯಲ್ಲಿ ಅಧ್ಯಕ್ಷೀಯ ಪದ್ಧತಿಯ ಸರಕಾರವಿದೆ.

**೪. ಸರಕಾರದ ವಿವಿಧ ಅಂಗಗಳ ರೂಪರೇಷೆಗಳು :** ಸಂವಿಧಾನವು ವಿವಿಧ ಸರಕಾರ-ಗಳ ಅಂಗಗಳ ಅಂದರೆ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗ ಇವುಗಳ ರಚನಾಕ್ರಮ, ಅಧಿಕಾರ ವ್ಯಾಪ್ತಿ ಮತ್ತು ಕರ್ತವ್ಯಗಳನ್ನು ವಿವರಿಸುತ್ತದೆ.

**೫. ಮೂಲಭೂತ ಹಕ್ಕುಗಳ ಪಟ್ಟಿ :** ಪೌರರ ಮೂಲಭೂತ ಹಕ್ಕುಗಳ ಬಗ್ಗೆ ಸಂವಿಧಾನದಲ್ಲಿ ಉಲ್ಲೇಖವಿರುತ್ತದೆ. ಉದಾ : ೨೬ನೇ ಜನವರಿ ೧೯೫೦ರಲ್ಲಿ ಅಸ್ತಿತ್ವಕ್ಕೆ ಬಂದ ಭಾರತದ ಸಂವಿಧಾನವು ಮೂಲಭೂತ ಹಕ್ಕುಗಳನ್ನು ನೀಡಿತ್ತು. ಅದರಲ್ಲಿ ಆಸ್ತಿಯ ಹಕ್ಕನ್ನು ೧೯೭೬ ರ ೪೨ ನೇ ಸಂವಿಧಾನ ತಿದ್ದುಪಡಿಯ ಮೂಲಕ ಮೂಲಭೂತ ಹಕ್ಕುಗಳ ಪಟ್ಟಿಯಿಂದ ತೆಗೆದು ಕಾನೂನುಹಕ್ಕೆಂದು ಘೋಷಿಸಲಾಯಿತು. ಈ ಹಕ್ಕುಗಳನ್ನು ಸರಕಾರವು ಕಸಿದುಕೊಳ್ಳಲಾರದು. ಒಂದು ವೇಳೆ ಕಸಿದುಕೊಂಡರೆ ಉಚ್ಚನ್ಯಾಯಾಲಯದ ಮೂಲಕ ನಾಗರಿಕರು ತಮ್ಮ ಹಕ್ಕುಗಳನ್ನು ಕಾಪಾಡಿಕೊಳ್ಳಬಲ್ಲರು. ಇದೇ ಪ್ರಕಾರ ೧೯೭೬ರ ೪೨ ನೇ ಸಂವಿಧಾನ ತಿದ್ದುಪಡಿಯ ಪ್ರಕಾರ ಮೂಲಭೂತ ಕರ್ತವ್ಯಗಳನ್ನು ಭಾರತ ರಾಜ್ಯಾಂಗದಲ್ಲಿ ಸೇರಿಸಲಾಯಿತು.

**೬. ಸಂವಿಧಾನ ತಿದ್ದುಪಡಿಯ ವಿಧಾನ :** ಸಂವಿಧಾನ ನಿರ್ಮಾಪಕರು ಭವಿಷತ್ತಿನ ಅನಿರೀಕ್ಷಿತ ಘಟನೆಗಳನ್ನು ಊಹಿಸುವದು ಸಾಧ್ಯವಿಲ್ಲ. ಹೊಸ ಪರಿಸ್ಥಿತಿ ಉದ್ಭಸಿದಂತೆಲ್ಲಾ ಹಳೆಯ ನಿಯಮ ಪರಿಷ್ಕೃತವಾಗಬೇಕು. ಇಲ್ಲವೇ ಅದರ ಜೊತೆಗೆ ಹೊಸಾಂಶ ಸೇರಿಸಿಕೊಳ್ಳಬೇಕು. ಇದು ಅನಿವಾರ್ಯ ಆದ್ದರಿಂದ ಪ್ರತಿಯೊಂದು ಸಂವಿಧಾನದಲ್ಲೂ ಅವಶ್ಯಕ ಮಾರ್ಪಾಡುಗಳನ್ನು ಮಾಡಲು ಅವಕಾಶ ಮಾಡಿಕೊಡಲಾಗಿರುತ್ತದೆ. ಇಲ್ಲವಾದಲ್ಲಿ ಸಂವಿಧಾನವು ಇವುಗಳನ್ನು ನಿಂತ ನೀರಿನಂತಾಗಿ ತನ್ನ ಪ್ರಾಮುಖ್ಯತೆ ಹಾಗೂ ಔಚಿತ್ಯವನ್ನು ಕಳೆದುಕೊಳ್ಳುತ್ತದೆ. ಉದಾ :- ಭಾರತದ ಸಂವಿಧಾನದ ೩೬೮ ನೇ

ನಿಯಮದಲ್ಲಿ ತಿದ್ದುಪಡಿ ವಿಧಾನವಿದೆ. ಇದರಂತೆ ಅಮೇರಿಕೆಯ ಸಂವಿಧಾನದ ೫ನೇ ನಿಯಮದಲ್ಲಿ ತಿದ್ದುಪಡಿಯ ನಿಯಮವಿದೆ. ಆದರೆ ವಿಭಿನ್ನ ರಾಜ್ಯಗಳ ಸಂವಿಧಾನಗಳ ತಿದ್ದುಪಡಿಯ ವಿಧಾನ ವಿಭಿನ್ನವಾಗಿರುತ್ತವೆ.

## ಆ. ಸರಕಾರದ ಪ್ರಕಾರಗಳು

ಪ್ರಜಾಪ್ರಭುತ್ವ; ಆಧುನಿಕ ಯುಗವು ಪ್ರಜಾಪ್ರಭುತ್ವದ ಯುಗವೆಂದು ಹೇಳಬಹುದು. ಯಾಕೆಂದರೆ ವಿಶ್ವದ ಬಹುತೇಕ ರಾಜ್ಯಗಳಲ್ಲಿನ ಸರಕಾರಗಳು ಪ್ರಜಾಪ್ರಭುತ್ವದ ಕೆಲವು ತತ್ವಗಳ ಆಧಾರದ ಮೇಲೆ ನಿರ್ಮಿತವಾಗಿವೆ. ಪ್ರಜಾಪ್ರಭುತ್ವದ ತತ್ವ ರೂಪಿಸಿ ಅದನ್ನು ಮೊದಲು ಕಾರ್ಯಾಚರಣೆಗೆ ತಂದ ಕೀರ್ತಿ ಪ್ರಾಚೀನ ಗ್ರೀಕರಿಗೆ ಸಲ್ಲುತ್ತದೆ. ಗ್ರೀಕ್ ನಗರ ರಾಜ್ಯಗಳಾದ ಅಥೆನ್ಸ್, ಸ್ಪಾರ್ಟಾ ಇವುಗಳಲ್ಲಿ ಪ್ರತ್ಯಕ್ಷ ಪ್ರಜಾಪ್ರಭುತ್ವ ರೂಢಿಯಲ್ಲಿತ್ತು. ಪ್ರಾಚೀನ ಭಾರತದ ವೈಶಾಲಿ, ಲಿಚ್ಛವಿ, ಕುಶಾಲ ಮುಂತಾದ ಸಣ್ಣ ರಾಜ್ಯಗಳಲ್ಲಿ ಪ್ರತ್ಯಕ್ಷ ಪ್ರಜಾಪ್ರಭುತ್ವ ರೂಢಿಯಲ್ಲಿತ್ತು. ಇವುಗಳನ್ನು ಗಣರಾಜ್ಯಗಳೆಂದು ಕರೆಯಲಾಗುತ್ತಿತ್ತು.

ಪ್ರಜಾಪ್ರಭುತ್ವ ಚೆನ್ನಾಗಿ ಬೆಳೆದು ಪ್ರಾಬಲ್ಯಕ್ಕೆ ಬಂದುದು ಆಧುನಿಕ ಯುಗದಲ್ಲಿ ಎಂದು ಹೇಳಬಹುದು. ಆಧುನಿಕ ಯುಗದಲ್ಲಿ ಪ್ರಜಾಪ್ರಭುತ್ವವನ್ನು ಮೊದಲಬಾರಿಗೆ ಸ್ಥಾಪಿಸಿದ ಕೀರ್ತಿ ಇಂಗ್ಲೆಂಡಿಗೆ ಸೇರುತ್ತದೆ. ಇಂಗ್ಲೆಂಡಿನ ದೊರೆ ಮೊದಲನೆ ಚಾರ್ಲ್ಸ್‌ನ ವಿರುದ್ಧ ದಂಗೆ ನಡೆದು ಅವನ ಶಿರಚ್ಛೇದನ ಮಾಡಲಾಯಿತು. ಎರಡನೆಯ ಜೇಮ್ಸ್‌ನನ್ನು ಅಧಿಕಾರದಿಂದ ಉರುಳಿಸಿ ಪ್ರಜಾಪ್ರಭುತ್ವದ ಸಿದ್ಧಾಂತ ವನ್ನು ಎತ್ತಿ ಹಿಡಿದರು. ಇಂಗ್ಲೆಂಡ್ ತೋರಿಸಿಕೊಟ್ಟ ಮಾರ್ಗವನ್ನು ಅನುಸರಿಸಿದ ನಂತರ ಯುರೋಪಿಯನ್ ರಾಜ್ಯಗಳಲ್ಲೂ ಕ್ರಮೇಣ ಪ್ರಜಾಪ್ರಭುತ್ವ ಸ್ಥಾಪಿಸಲಾಯಿತು.

ಹದಿನೆಂಟನೆಯ ಶತಮಾನದಲ್ಲಿ ಇಂಗ್ಲೆಂಡಿನೊಡನೆ ಸ್ವಾತಂತ್ರ್ಯ ಹೋರಾಟ ನಡೆಸಿ ಜಯಗಳಿಸಿದ ಅಮೇರಿಕದ ಜನತೆ ಪ್ರಜಾಪ್ರಭುತ್ವ ತತ್ವ ತಳಹದಿ ಮೇಲೆ ಹೊಸ ಸರಕಾರವನ್ನು ಸ್ಥಾಪಿಸಿತು.

ಫ್ರಾನ್ಸ್‌ದೇಶದಲ್ಲೂ ದೊರೆಯ ದಬ್ಬಾಳಿಕೆ ಮಿತಿಮೀರಿತು. ಪರಿಣಾಮವಾಗಿ ಜನರು ದೊಂಬಿ ಎದ್ದು ರಾಜ -ರಾಣಿಯರ ಶಿರಚ್ಛೇದ ಮಾಡಿ ಅರಸೊತ್ತಿಗೆಯನ್ನೇ ನಾಶಗೊಳಿಸಿದರು. ಅನಂತರ ಪ್ರಜಾಪ್ರಭುತ್ವದ ತತ್ವವನ್ನು ಅನುಸರಿಸಿ ಗಣರಾಜ್ಯವನ್ನು ಸ್ಥಾಪಿಸಿದರು. ಫ್ರಾನ್ಸ್‌ನ ಈ ಮಹಾ ಕ್ರಾಂತಿ ಇಡೀ ಯುರೋಪಿನ ಇತಿಹಾಸವನ್ನೇ ಬದಲಾಯಿಸಿತು.

ವಿಶ್ವದ ಎರಡನೇ ಯುದ್ಧದ ನಂತರ ಸ್ವತಂತ್ರಗೊಂಡ ಏಷ್ಯಾದ ಮತ್ತು ಆಫ್ರಿಕಾದ ಅನೇಕ ರಾಜ್ಯಗಳಲ್ಲಿ ಪ್ರಜಾಸತ್ತಾತ್ಮಕ ಸರಕಾರಗಳು ಸ್ಥಾಪಿತವಾದವು. ಸ್ವಾತಂತ್ರ್ಯದ ನಂತರ ಭಾರತದಲ್ಲೂ ಪ್ರಜಾಪ್ರಭುತ್ವ ಸ್ಥಾಪಿತವಾಯಿತು. ಭಾರತ ವಿಶ್ವದಲ್ಲೇ ಅತಿ ದೊಡ್ಡ

ಪ್ರಜಾಪ್ರಭುತ್ವ ರಾಷ್ಟ್ರವೆನಿಸಿಕೊಂಡಿತು. ಆದರೆ ಅನೇಕ ರಾಷ್ಟ್ರಗಳಲ್ಲಿ ಪ್ರಜಾಸತ್ತಾತ್ಮಕ ಸರಕಾರ ವಿಕೃತರೂಪ ತಾಳಿರುವದು ದುರದೃಷ್ಟಕರ. ಪಾಕಿಸ್ಥಾನದಲ್ಲಿ ನಿಯಂತ್ರಿತ ಪ್ರಜಾಪ್ರಭುತ್ವದ ವೇಷದಲ್ಲಿ ಅಯೂಬ್ ಖಾನ್‌ರ ಮಿಲಿಟರಿ ಸರ್ವಾಧಿಕಾರವು ಅಸ್ತಿತ್ವಕ್ಕೆ ಬಂದು ಜನರಲ್ ಜಿಯಾ ಉಲ್‌ಹಕ್ ಬದುಕುಳಿಯುವವರೆಗೆ ಮುಂದುವರಿಯಿತು. ಆದರೆ ೧೯೯೯ರ ಅಕ್ಟೋಬರ್ ೧೨ ರಂದು ಜನರಲ್ ಮುಷರಫ್ ಮಿಲಿಟರಿ ಆಡಳಿತ ಪ್ರಾರಂಭವಾಗಿದೆ. ರಷ್ಯಾದಂತಹ ಸಮತಾವಾದಿ ರಾಜ್ಯಗಳು ೨೦ನೆಯ ಶತಮಾನದ ಕೊನೆಗೆ ಪ್ರಜಾಪ್ರಭುತ್ವದ ಮೋಹಕ್ಕೆ ಒಳಗಾಗಿವೆ.

**ಮಹತ್ವ :-** ಎಲ್ಲ ಪ್ರಕಾರದ ಪ್ರಭುತ್ವಗಳಲ್ಲಿ ಪ್ರಜಾಪ್ರಭುತ್ವವು ಶ್ರೇಷ್ಠ ಸ್ಥಾನವನ್ನು ಗಳಿಸಿದೆ. ಪ್ರಜಾಪ್ರಭುತ್ವವನ್ನು ಬಿಟ್ಟು ಬೇರಾವ ಪ್ರಭುತ್ವದಲ್ಲಿಯೂ ಮಾನವನು ತನ್ನ ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಯನ್ನು ಮಾಡಿಕೊಳ್ಳಲಾರನು. ಪ್ರಜಾ-ಪ್ರಭುತ್ವದಲ್ಲಿ ಮಾತ್ರ ಮಾನವನ ವ್ಯಕ್ತಿತ್ವದ ಬೆಳವಣಿಗೆಗೆ ಬೇಕಾಗುವ ಎಲ್ಲ ನಾಗರಿಕ ಮತ್ತು ರಾಜಕೀಯ ಹಕ್ಕುಗಳು ಕೊಡಲ್ಪಟ್ಟಿರುತ್ತವೆ. ಇಂತಹ ಹಕ್ಕುಗಳ ಮೂಲಕ ಅವನು ಸ್ವಾತಂತ್ರ್ಯವನ್ನು ಮತ್ತು ಸಮಾನತೆಯನ್ನು ಅನುಭವಿಸುತ್ತಾನೆ. ಇಂತಹ ಸೌಲಭ್ಯಗಳು ಇತರ ಪ್ರಭುತ್ವಗಳಲ್ಲಿ ಸಿಗಲಾರವು. ಆದ್ದರಿಂದಲೇ ಇಂದು ಪ್ರಜಾಪ್ರಭುತ್ವಕ್ಕೆ ಎಂದೂ ಇಲ್ಲದ ಮಹತ್ವ ಪ್ರಾಪ್ತವಾಗಿದೆ.

**ಅರ್ಥವಿವರಣೆ ಹಾಗೂ ವ್ಯಾಖ್ಯೆಗಳು :** ಡೆಮಾಕ್ರಸಿ ಎಂಬ ಇಂಗ್ಲೀಷ್ ಶಬ್ದ ಗ್ರೀಕ್ ಭಾಷೆಯ ಡೆಮೊಸ್ **(Demos)** ಮತ್ತು ಕ್ರೇಶಿಯಾ **(Kratia)** ಎಂಬ ಎರಡು ಪದಗಳಿಂದ ರೂಪಿತವಾಗಿದೆ. ಡೆಮೋಸ್ ಎಂದರೆ ಜನರು ಮತ್ತು ಕ್ರೇಶಿಯಾ ಎಂದರೆ ಶಕ್ತಿ. ಆದ್ದರಿಂದ ಡೆಮಾಕ್ರಸಿ ಎಂದರೆ ಜನಶಕ್ತಿ ಅಥವಾ ಜನಬಲ ಎಂದು ಅರ್ಥವಾಗುತ್ತದೆ. ಇದಕ್ಕೆ ಪ್ರಜಾಪ್ರಭುತ್ವ ಅಥವಾ ಪ್ರಜಾರಾಜ್ಯ ಎಂದು ಕರೆಯಲಾಗುತ್ತದೆ.

ಇದೊಂದು ಪ್ರಕಾರದ ಸರಕಾರ, ಇಲ್ಲಿ ಜನರು ತಮ್ಮನ್ನು ಪ್ರತ್ಯಕ್ಷ ವಾಗಿಯಾಗಲಿ ಅಥವಾ ತಮ್ಮ ಪ್ರತಿನಿಧಿಗಳ ಮೂಲಕ ಅಪ್ರತ್ಯಕ್ಷವಾಗಿಯಾಗಲಿ ಆಳುತ್ತಾರೆ. ಪ್ರಜಾಪ್ರಭುತ್ವ ಕೇವಲ ಒಂದು ಪ್ರಕಾರದ ಸರಕಾರವಾಗಿದೆ. ಅಲ್ಲದೆ ಒಂದು ಪ್ರಕಾರದ ರಾಜ್ಯ ಹಾಗೂ ಒಂದು ಪ್ರಕಾರದ ಸಮಾಜವೂ ಹೌದು. ಆದರೆ ಪ್ರಜಾಸತ್ತಾತ್ಮಕ ರಾಜ್ಯ ಪ್ರಜಾಸತ್ತಾತ್ಮಕ ಸರಕಾರವನ್ನು ಹೊಂದದೇ ಇರಬಹುದು ಯಾಕೆಂದರೆ ಜನರು ಆರಿಸಿ ಕಳುಹಿಸಿದ ರಾಷ್ಟ್ರಾಧ್ಯಕ್ಷ ಸರ್ವಾಧಿಕಾರಿಯಾಗಬಹುದು. ಉದಾ : ಪಾಕಿಸ್ತಾನದ ಅಧ್ಯಕ್ಷರಾಗಿದ್ದ ಭುಟ್ಟೋ. ಇದರಂತೆ ಪ್ರಜಾಸತ್ತಾತ್ಮಕ ಸಮಾಜ ಪ್ರಜಾಸತ್ತಾತ್ಮಕ ಸರಕಾರ ಮತ್ತು ಪ್ರಜಾಸತ್ತಾತ್ಮಕ ರಾಜ್ಯವನ್ನು ಹೊಂದಿರದೆ ಇರಬಹುದು. ಪ್ರಜಾಸತ್ತಾತ್ಮಕ ಸಮಾಜದಲ್ಲಿ ಸಮಾನತೆ ಹಾಗೂ ಬಂಧುತ್ವದ ಭಾವನೆ ಇರುತ್ತದೆ. ಉದಾ : ಮುಸ್ಲಿಂ ಸಮಾಜವನ್ನು ಹೊಂದಿದ ಅಫಘಾನಿಸ್ತಾನ ಪ್ರಜಾಸತ್ತಾತ್ಮಕ ಸಮಾಜವನ್ನು ಹೊಂದಿದ್ದು

ಸರ್ವಾಧಿಕಾರ ಸರಕಾರವನ್ನು ಹೊಂದಿರುತ್ತದೆ. ಬೇರೆ ಬೇರೆ ರಾಜ್ಯಶಾಸ್ತ್ರಜ್ಞರು ಬೇರೆ ಬೇರೆ ರೀತಿಯಿಂದ ಪ್ರಜಾಪ್ರಭುತ್ವದ ಅರ್ಥವಿವರಣೆಯನ್ನು ನೀಡಿದ್ದಾರೆ. ಅವು

**ಹೆರೋಡಾಟಿಸ್** ''ಯಾವ ರಾಜ್ಯದಲ್ಲಿ ಪರಮಾಧಿಕಾರ ಸಂಪೂರ್ಣವಾಗಿ ಪ್ರಜೆಗಳಿಗೆ ಸೇರಿರುತ್ತದೆಯೋ ಅದೇ ಪ್ರಜಾಪ್ರಭುತ್ವ.'' ಇದನ್ನು ಕ್ರಿ.ಪೂ. 5ನೇ ಶತಮಾನದಲ್ಲಿ ಹೇಳಿದ್ದಾರೆ.

**ಹಾಲ್** '' ಸಾರ್ವಜನಿಕ ಅಭಿಪ್ರಾಯದ ನಿಯಂತ್ರಣದಲ್ಲಿರುವ ರಾಜಕೀಯ ಸಂಸ್ಥೆಯ ಸ್ವರೂಪವೇ ಪ್ರಜಾಪ್ರಭುತ್ವ.''

**ಅರ್ನೆಸ್ಟ್ ಬಾರ್ಕರ್** '' ಚರ್ಚೆ ಮತ್ತು ವಿಮರ್ಶೆಗಳ ಮೂಲಕ ನಡೆಯುವ ಸರಕಾರವೇ ಪ್ರಜಾಪ್ರಭುತ್ವ ಸರಕಾರ.''

**ಅಬ್ರಹಂ ಲಿಂಕನ್** ''ಪ್ರಜೆಗಳ, ಪ್ರಜೆಗಳಿಂದ, ಪ್ರಜೆಗಳಿಗಾಗಿ ಇರುವ ಸರಕಾರವೇ ಪ್ರಜಾಪ್ರಭುತ್ವ.'' ಇವರು ಅಮೇರಿಕಾ ದೇಶದ ಅದ್ಯಕ್ಷರಾಗಿದ್ದರು.

**ಪೋಸೀಲೆ** ''ಸರಕಾರದ ಆಡಳಿತದಲ್ಲಿ ಪ್ರತಿಯೊಬ್ಬ ಪ್ರಜೆಯ ಪಾಲು ಇರುವದೇ ಪ್ರಜಾಪ್ರಭುತ್ವ.''

**ಡೈಸಿ** '' ಯಾವ ರಾಜ್ಯ ಪದ್ಧತಿಯಲ್ಲಿ ಆಡಳಿತಾಂಗವು ಸಮಗ್ರ ರಾಷ್ಟ್ರದ ಬಹುಭಾಗದವರ ಪರವಾಗಿ ಆಳುವ ಸರಕಾರವಾಗಿದೆಯೋ ಅದೇ ಪ್ರಜಾಪ್ರಭುತ್ವ.''

**ಜೆ.ಎಸ್.ಮಿಲ್** '' ಪ್ರಜಾಪ್ರಭುತ್ವದಲ್ಲಿ ಜನತೆಯ ಬಹುಭಾಗವು ಆಡಳಿತಾಧಿಕಾರವನ್ನು ಪ್ರತಿನಿಧಿಗಳ ಮೂಲಕ ನಡೆಸುತ್ತದೆ.''

ಪ್ರಜಾಪ್ರಭುತ್ವದಲ್ಲಿ ಸಾರ್ವಭೌಮ ಅಧಿಕಾರವು ಯಾರೊಬ್ಬರ ಕೈಯಲ್ಲಿರದೆ ಅದು ಅಪ್ರತ್ಯಕ್ಷವಾಗಿಯಾದರೂ ಅಂತಿಮವಾಗಿ ವಯಸ್ಕ ಪ್ರಜೆಗಳ ಕೈಯಲ್ಲಿರುತ್ತದೆ. ಇಲ್ಲಿ ಆಳುವವರು ಪ್ರಜೆಗಳೆ ಮತ್ತು ಆಳಿಸಿಕೊಳ್ಳುವವರು ಪ್ರಜೆಗಳೆ. ಪ್ರಜೆಗಳು ತಮ್ಮ ಪ್ರತಿನಿಧಿಗಳ ಮೂಲಕ ತಮ್ಮನ್ನು ತಾವೇ ಆಳಿಸಿಕೊಳ್ಳುತ್ತಾರೆ. ಹೀಗೆ ಪ್ರಜಾಪ್ರಭುತ್ವದಲ್ಲಿ ಬಹುಮತಪಡೆದ ಪಕ್ಷದ ಪ್ರತಿನಿಧಿಗಳು ಸರಕಾರವನ್ನು ರಚಿಸುತ್ತಾರೆ. ಆದರೆ ಅಲ್ಪಮತದವರಿಗೆ ಅಲ್ಲಿ ಸ್ಥಾನವಿಲ್ಲವೆಂದು ತಿಳಿದುಕೊಳ್ಳಬಾರದು. ಅಲ್ಪಮತದವರಿಗೂ ಯೋಗ್ಯರಕ್ಷಣೆಯನ್ನು ನೀಡಲಾಗುವದು. ಕಾಲಕಾಲಕ್ಕೆ ನಡೆಯುವ ಚುನಾವಣೆಗಳ ಮೂಲಕ ಬಹುಮತ ಪಡೆಯುವ ಪಕ್ಷವು ಯಾವುದೆಂಬುದನ್ನು ನಿರ್ಧರಿಸಲಾಗುವದು. ಒಂದೇ ಪಕ್ಷವು ಕೊನೆಯವರೆಗೂ ಬಹುಮತದಲ್ಲಿರುತ್ತದೆಂದು ಹೇಳಲೂಬಾರದು.

## ✸ ಪ್ರಜಾಪ್ರಭುತ್ವ ಮತ್ತು ಪ್ರಜಾಪ್ರಭುತ್ವೇತರ

**ಪ್ರಜಾಪ್ರಭುತ್ವದ ಪ್ರಕಾರಗಳು :** ಪ್ರಜಾಪ್ರಭುತ್ವದಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳುಂಟು.

೧. **ಪ್ರತ್ಯಕ್ಷ ಪ್ರಜಾಪ್ರಭುತ್ವ :** ಇದರ ಸಮರ್ಥಕ ಫ್ರೆಂಚ್ ಲೇಖಕರಾದ ರೂಸೋ ಪ್ರಾಚೀನ ಕಾಲದಲ್ಲಿ ನೇರ ಅಥವಾ ಪ್ರತ್ಯಕ್ಷ ಪ್ರಜಾಪ್ರಭುತ್ವ ಬಹಳ ಪ್ರಚಾರದಲ್ಲಿತ್ತು. ಯಾಕೆಂದರೆ ಆಗಿನ ರಾಜ್ಯಗಳ ವಿಸ್ತಾರ ಮತ್ತು ಜನಸಂಖ್ಯೆ ಮಿತವಾಗಿದ್ದವು. ಅಥೆನ್ಸ್ ಮತ್ತು ಸ್ಪಾರ್ಟಾ ಮೊದಲಾದ ಅನೇಕ ಪ್ರಾಚೀನ ಗ್ರೀಕ್ ನಗರ - ರಾಜ್ಯಗಳ ವಿಸ್ತಾರವು ಬಹಳ ಚಿಕ್ಕದಿದ್ದು ಜನಸಂಖ್ಯೆಯೂ ಸಹ ಬಹಳ ಕಡಿಮೆಯಾಗಿತ್ತು. ಇದರಿಂದಾಗಿ ರಾಜ್ಯದ ಪ್ರಜೆಗಳೆಲ್ಲರೂ ನೇರವಾಗಿ ರಾಜ್ಯದಾಡಳಿತದಲ್ಲಿ ಭಾಗವಹಿಸಲು ಸಾಧ್ಯವಾಗಿತ್ತು. ಎಲ್ಲ ಪ್ರಜೆಗಳು ಒಂದು ಕಡೆ ಸಭೆ ಸೇರಿ ರಾಜ್ಯದಾಡಳಿತ ಸೂತ್ರವನ್ನು ನಿರ್ಣಯಿಸುತ್ತಿದ್ದರು. ಕಾಯದೆಗಳು ಎಲ್ಲ ಪ್ರಜೆಗಳ ಅಥವಾ ಪೌರಸಭೆಗಳಲ್ಲಿ ಪಾಸಾಗುತ್ತಿದ್ದವು. ಹೀಗಾಗಿ ತಾವೇ ಸ್ವತಃ ಪಾಸುಮಾಡಿದ ಕಾಯದೆಗಳನ್ನು ಅವರು ಆತ್ಮ ಸಂತೋಷದಿಂದ ಪಾಲಿಸುತ್ತಿದ್ದರು. ಆಧುನಿಕ ಕಾಲದಲ್ಲಿ ಇಂತಹ ನೇರ ಪ್ರಜಾಪ್ರಭುತ್ವಗಳು ಸ್ವಿಟ್ಜರ್ಲೆಂಡ್‌ದ ಕೆಲವು ಕ್ಯಾಂಟೀನಗಳಲ್ಲಿ ಮಾತ್ರ ಸ್ವಲ್ಪ ಮಟ್ಟಿಗೆ ಆಚರಣೆಯಲ್ಲಿವೆ.

೨. **ಪ್ರಾತಿನಿಧಿಕ ಅಥವಾ ಅಪ್ರತ್ಯಕ್ಷ ಪ್ರಜಾಪ್ರಭುತ್ವ :** ಇಂದಿನ ರಾಷ್ಟ್ರಗಳ ವಿಸ್ತಾರ ಮತ್ತು ಜನಸಂಖ್ಯೆಗಳು ಮಿತಿಮೀರಿ ಬೆಳೆದಿರುವದರಿಂದ ನೇರ ಪ್ರಜಾಪ್ರಭುತ್ವವನ್ನು ಆಚರಿಸುವದು ಸಾಧ್ಯವಿಲ್ಲ. ಅತಿ ವಿಸ್ತಾರವಾದ ಕ್ಷೇತ್ರವುಳ್ಳ ಮತ್ತು ಅತಿ ಹೆಚ್ಚು ಜನ ಸಂಖ್ಯೆಯುಳ್ಳ ಈಗಿನ ರಾಷ್ಟ್ರಗಳಲ್ಲಿ ಎಲ್ಲ ಪ್ರಜೆಗಳು ಒಂದು ಕಡೆ ಸೇರಿ ರಾಜ್ಯದ ಆಡಳಿತ ಸೂತ್ರಗಳನ್ನು ನಿರ್ಣಯಿಸಲು ಸಾಧ್ಯವಿಲ್ಲ. ಇಂದಿನ ರಾಜ್ಯಗಳು ಪ್ರಾಚೀನ ಕಾಲದ ನಗರ ರಾಜ್ಯಗಳಾಗಿಲ್ಲ. ಅವು ವಿಸ್ತಾರವಾದ ರಾಷ್ಟ್ರರಾಜ್ಯಗಳಾಗಿವೆ. ಉದಾ : ಭಾರತದ ಕ್ಷೇತ್ರ ೨,೬೬,೯೮೦ ಚದುರ ಮೈಲು ಮತ್ತು ಜನಸಂಖ್ಯೆ ೧೦೨ ಕೋಟಿ. ಇಲ್ಲಿಯ ಪ್ರೌಢ ನಾಗರಿಕರ ಸಂಖ್ಯೆ ೬೦ ಕೋಟಿ. ಇಷ್ಟು ಜನರು ಒಂದು ಕಡೆಗೆ ಸೇರಿ, ಚರ್ಚಿಸಿ, ಕಾನೂನು ಮಾಡುವದು ಕಲ್ಪನೆಗೂ ಮೀರಿದ ಮಾತಾಗಿದೆ. ಆದಕಾರಣ ನಾವು ಪ್ರಾತಿನಿಧಿಕ ಪ್ರಜಾಪ್ರಭುತ್ವವನ್ನು ಅನುಸರಿಸಬೇಕಾಗಿದೆ. ಈ ಪದ್ಧತಿಯಲ್ಲಿ ದೇಶದ ಪ್ರೌಢನಾಗರಿಕರು ಸಾರ್ವತ್ರಿಕ ಚುನಾವಣೆಯಲ್ಲಿ ತಮ್ಮ ಪ್ರತಿನಿಧಿಗಳನ್ನು ಶಾಸನ ಸಭೆಗಳಿಗೆ ಆರಿಸಿ ಕಳಿಸುವರು. ಅಂಥ ಪ್ರತಿನಿಧಿಗಳು ಕಾಯಿದೆ ಪಾಸು ಮಾಡುವರು ಹಾಗೂ ಸರಕಾರವನ್ನು ರಚಿಸುವರು. ಆದರೆ ಅವರು ಸರಿಯಾಗಿ ಕೆಲಸ ಮಾಡದಿದ್ದರೆ ಪ್ರಜೆಗಳು ಬೇರೆಯವರನ್ನು ಆರಿಸುವದುಂಟು. ಇಂಗ್ಲೆಂಡ್, ಅಮೇರಿಕಾ, ಫ್ರಾನ್ಸ್ ಮತ್ತು ಭಾರತ ಮೊದಲಾದ ರಾಷ್ಟ್ರಗಳಲ್ಲಿ ಪ್ರತಿನಿಧಿ ಪ್ರಭುತ್ವ ಆಚರಣೆಯಲ್ಲಿದೆ. ಪ್ರತಿನಿಧಿ ಪ್ರಜಾಪ್ರಭುತ್ವದಲ್ಲೂ ಸಂಸದೀಯ ಹಾಗೂ ಅಧ್ಯಕ್ಷೀಯ ಸರಕಾರವೆಂದು ಎರಡು ವಿಧಗಳು.

## ✸ ಪ್ರಜಾಪ್ರಭುತ್ವೇತರ ಸರಕಾರದ ಸ್ವರೂಪ ಮತ್ತು ಲಕ್ಷಣಗಳು

ಪೀಠಿಕೆ : ಸರ್ವಾಧಿಕಾರತ್ವವೂ ಕೂಡಾ ಒಂದು ಮಾದರಿಯ ಸರಕಾರ ಪದ್ಧತಿಯಾಗಿದೆ. 'ಡಿಕ್ಟೇಟರ್'ಎಂಬ ಇಂಗ್ಲಿಷ್ ಪದ ಲ್ಯಾಟೀನ್ ಪದದಿಂದ ಬಂದಿದೆ. ಇದು ಪ್ರಜಾ-ಪ್ರಭುತ್ವಕ್ಕೆ ತದ್ವಿರುದ್ಧವಾದ ಸರಕಾರ ಪದ್ಧತಿ. ನಿರಂಕುಶ ಪ್ರಭುತ್ವವೂ ಪ್ರಾಚೀನ ಗ್ರೀಕ್ ದೇಶದ ನಗರ-ರಾಜ್ಯಗಳ ಕಾಲದಿಂದಲೂ ಅಸ್ತಿತ್ವದಲ್ಲಿದೆ ಎಂದು ತಿಳಿದುಬಂದಿದೆ. ಈ ಪದ್ಧತಿಯು ರೋಮ್ ದೇಶದಲ್ಲಿ ಇದ್ದುದಕ್ಕೆ ಆಧಾರಗಳಿವೆ. ರೋಮ್ ದೇಶದಲ್ಲಿ ಸುಲ್ಲಾ ಜ್ಯುಲಿಯಸ್ ಸೀಜರ್ ಅಗಸ್ಟಸ್‌ಇವರುಗಳ ಸರ್ವಾಧಿಕಾರ ಸರಕಾರ ಗಮನಾರ್ಹವಾದವು. ಫ್ರಾನ್ಸಿನ ನೆಪೋಲಿಯನ್‌ನ ನಿರಂಕುಶಾಧಿಕಾರವು ವಿಶ್ವವಿಖ್ಯಾತವಾದುದಾಗಿದೆ. ಜರ್ಮನಿಯ ಹಿಟ್ಲರ್ ಹಾಗೂ ಇಟಲಿಯ ಮುಸೋಲಿನಿ ಪ್ರಮುಖ ಸರ್ವಾಧಿಕಾರಿಗಳಾಗಿದ್ದರು. ಜರ್ಮನಿಯಲ್ಲಿ ಹಿಟ್ಲರನ ಕಾಲದಲ್ಲಿ ಸರ್ವಾಧಿಕಾರತ್ವ ಸಾಮ್ರಾಜ್ಯಶಾಹಿತ್ವ, ಜನಾಂಗವಾದ ಹಾಗೂ ಸೈನಿಕವಾದದ ರೂಪವನ್ನು ತಾಳಿತು. ಹಿಟ್ಲರ್ ಜಗತ್ತನ್ನೇ ಗೆದ್ದು ಚಕ್ರವರ್ತಿಯಾಗಬೇಕೆಂಬ ಹಂಬಲ ದಿಂದ ಸೈನಿಕ ಬಲವನ್ನು ಹೆಚ್ಚಿಸಲು ಹೆಚ್ಚು ಮಕ್ಕಳನ್ನು ಪಡೆಯುವ ತಾಯಂದಿರಿಗೆ ಬಹುಮಾನ ಕೊಡುವದಾಗಿ ಸಾರಿದ. ಜರ್ಮನ್ ಜನಾಂಗ ಶ್ರೇಷ್ಠವೆಂದು ಯುಹೂದಿಗಳನ್ನು ಕೊಲ್ಲಲು ಆಜ್ಞೆ ಮಾಡಿದ.

೨೦ನೇ ಶತಮಾನದಲ್ಲಿಯೂ ಸಹ ವಿಶೇಷವಾಗಿ ಮೊದಲನೆಯ ಮಹಾಯುದ್ಧದ ನಂತರ ನಿರಂಕುಶ ಪ್ರಭುತ್ವವು ಹೆಚ್ಚಿನ ಜನಪ್ರಿಯತೆಯನ್ನು ಪಡೆದುಕೊಂಡಿತು. ೧೯೧೭ರಲ್ಲಿ ರಷ್ಯಾ ದೇಶದಲ್ಲಿ ಕಾರ್ಮಿಕರ ನಿರಂಕುಶ ಪ್ರಭುತ್ವ ಸ್ಥಾಪನೆಯಾಯಿತು. ಹೀಗೆ ಸರ್ವಾಧಿಕಾರವು ಬಹಳ ಹಿಂದಿನ ಕಾಲದಿಂದಲೂ ಅಸ್ತಿತ್ವದಲ್ಲಿರುವ ಒಂದು ಪ್ರಮುಖವಾದ ಪದ್ಧತಿಯಾಗಿದೆ.

ನಿರಂಕುಶ ಪ್ರಭುತ್ವವೆಂದರೆ ಏಕವ್ಯಕ್ತಿ ಅಥವಾ ಏಕಪಕ್ಷದ ಆಳ್ವಿಕೆ. ಉದಾ : ಚೀನಾದಲ್ಲಿ ಅಧಿಕಾರವೆಲ್ಲ ಒಂದೇ ಒಂದು ಪಕ್ಷ ಅಂದರೆ ಕಮ್ಯುನಿಸ್ಟ್ ಪಕ್ಷದಲ್ಲಿದೆ. ನಿರಂಕುಶ ಪ್ರಭುತ್ವದಲ್ಲಿ ಸರ್ವಾಧಿಕಾರಿ ಮನಸ್ಸಿಗೆ ಬಂದಂತೆ ಆಡಳಿತ ನಡೆಸುವನು. ಆತನ ಆದೇಶಗಳೇ ಕಾನೂನುಗಳು. ಯಾರಿಗೂ ಆತನ ಸರಕಾರವನ್ನು ಟೀಕಿಸುವ ಮತ್ತು ತಿದ್ದುವ ಸ್ವಾತಂತ್ರ್ಯವಿರುವದಿಲ್ಲ. ವ್ಯಕ್ತಿಯ ವ್ಯಕ್ತಿತ್ವಕ್ಕೆ ಯಾವ ಬೆಲೆಯೂ ಇರುವದಿಲ್ಲ. ಪ್ರಜಾಭಿಪ್ರಾಯಕ್ಕೆ ಎಡೆಯಿಲ್ಲ. ಸರಕಾರದಲ್ಲಿ ಜನತೆಯ ಭಾಗವಿಲ್ಲ ಹಾಗೂ ಪಾತ್ರವಿಲ್ಲ.

ಅರಸೊತ್ತಿಗೆ ಸಹ ಏಕನಾಯಕನ ಆಳ್ವಿಕೆಯಾಗಿರುವದರಿಂದ ಕೆಲವರು ನಿರಂಕುಶ ಪ್ರಭುತ್ವವೆಂದರೆ ಅರಸೊತ್ತಿಗೆಯೆಂದು ಭಾವಿಸುತ್ತಾರೆ. ಇದು ಸರಿಯಲ್ಲ. ಕೆಲವು ದೊರೆಗಳ ಆಳ್ವಿಕೆ ನಿರಂಕುಶ ಪ್ರಭುಗಳ ಆಳ್ವಿಕೆಯನ್ನು ಹೋಲಿದರೂ ನಿರಂಕುಶ ಪ್ರಭುತ್ವ ಮತ್ತು ಅರಸೊತ್ತಿಗೆ ಎರಡೂ ಒಂದೇ ವಿಧವಾದ ಪದ್ಧತಿಗಳಲ್ಲ. ಇಂಗ್ಲೆಂಡಿನ

ಅರಸೊತ್ತಿಗೆಯನ್ನು ಸಂವಿಧಾನಾತ್ಮಕ ಅರಸೊತ್ತಿಗೆ ಎಂದು ಹೇಳಬಹುದೇ ವಿನಃ ಅದನ್ನು ನಿರಂಕುಶ ಪ್ರಭುತ್ವ ಎನ್ನುವಂತಿಲ್ಲ. ಅರಸರು ವಂಶಪಾರಂಪರ್ಯದಿಂದ ಅಧಿಕಾರ ಪಡೆದರೆ ನಿರಂಕುಶ ಪ್ರಭುಗಳು ಕ್ರಾಂತಿಯ ಮೂಲಕ ಅಥವಾ ಬೇರೆ ಮಾರ್ಗಗಳಿಂದ ಪಡೆಯುತ್ತಾರೆ. ಪ್ರಥಮ ಮಹಾಯುದ್ಧವು ಪಾಶ್ಚಾತ್ಯ ದೇಶಗಳ ಮೇಲೆ ಭೀಕರ ಪರಿಣಾಮವನ್ನುಂಟು ಮಾಡಿತು. ಯುದ್ಧದ ಸಾವುನೋವುಗಳು ಘರ್ಷಣೆಯ ಜ್ವಾಲೆಯನ್ನು ಹಬ್ಬಿಸಿದವು. ಆಗಿನ ಪ್ರಜಾಪ್ರಭುತ್ವ ಸರಕಾರಗಳು ತಮ್ಮ ಜನತೆಯ ಸಂಕಷ್ಟಗಳನ್ನು ನಿವಾರಿಸಲು ಅಸಮರ್ಥವಾದವು. ತಮ್ಮ ಸಂಕಷ್ಟಗಳನ್ನು ಯಾರು ಪರಿಹರಿಸುತ್ತಾರೋ ಅವರಿಗೆ ವಿಧೇಯರಾಗಲು ಜನರು ಬಯಸಿದರು.೧೯೨೨ರಲ್ಲಿ ಇಟಲಿ ಮತ್ತು ೧೯೩೩ರಲ್ಲಿ ಜರ್ಮನಿಯು ನಿರಂಕುಶ ಪ್ರಭುತ್ವಕ್ಕೊಳಗಾದವು. ೧೯೧೭ರಲ್ಲಿ ರಷ್ಯಾದಲ್ಲಿ ಕ್ರಾಂತಿ ಸಂಭವಿಸಿ, ಬೋಲ್ಷೆವಿಕ್ ಪಕ್ಷವು ಸರ್ವಾಧಿಕಾರವನ್ನು ವಹಿಸಿಕೊಂಡು ಸಮತಾವಾದಿ ಸರಕಾರವನ್ನು ಸ್ಥಾಪಿಸಿತು.೧೯೯೧ರಲ್ಲಿ ಆ ದೇಶದಲ್ಲಿ ಸಮತಾವಾದವು ಕುಸಿಯಿತು.

**ವ್ಯಾಖ್ಯೆಗಳು**

**ಲಾರ್ಡ್ ಬ್ರೈಸ್** '' ಪ್ರಜೆಗಳ ಹಕ್ಕುಭಾದ್ಯತೆಗಳನ್ನು ಹತ್ತಿಕ್ಕುವ, ಮನುಷ್ಯನ ವ್ಯಕ್ತಿತ್ವವನ್ನು ನಿರಾಶೆಗೊಳಿಸುವ , ದೇಶದಲ್ಲಿ ಸ್ವಹಿತಾಸಕ್ತಿಗಳಿಂದ ದಬ್ಬಾಳಿಕೆ ನಡೆಸುವ ಹಾಗೂ ಪ್ರಜೆಗಳನ್ನೆಲ್ಲಾ ಪಶುಗಳನ್ನಾಗಿ ಪರಿವರ್ತಿಸುವ ಪ್ರವೃತ್ತಿಯೇ ಸರ್ವಾಧಿಕಾರತ್ವ.''

**ಆಕ್ಸ್‌ಫರ್ಡ್** ಆಂಗ್ಲ ಶಬ್ದಕೋಶದಲ್ಲಿ ಸರ್ವಾಧಿಕಾರಿ ಹಾಗು ಸರ್ವಾಧಿಕಾರತ್ವ ಎರಡು ಪದಗಳನ್ನು ಹೀಗೆ ವ್ಯಾಖ್ಯಾನಿಸುತ್ತದೆ. ಶಕ್ತಿಯ ಬಲದಿಂದ ಅಧಿಕಾರ ಪಡೆದು ಸಮಗ್ರ ದೇಶದಮೇಲೆ ಕೆಟ್ಟಮಾರ್ಗದಿಂದ ಅಧಿಕಾರ ಚಲಾಯಿಸುವವನು ಸರ್ವಾಧಿಕಾರಿಯಾಗಿರುವನು. ಸರ್ವಾಧಿಕಾರಿ ಅಧಿಕಾರ ಚಲಾಯಿಸುವ ಪದ್ಧತಿಯೇ ಸರ್ವಾಧಿಕಾರತ್ವವಾಗಿದೆ.

ಎಫ್.ನ್ಯೂಮನ್‌ರ ಪ್ರಕಾರ ''ದೇಶದ ಅಧಿಕಾರವನ್ನು ವಶಪಡಿಸಿಕೊಂಡು ಯಾವುದೇ ಬಂಧನವಿಲ್ಲದೆ ಚಲಾಯಿಸುವ ಪದ್ಧತಿಯೇ ನಿರಂಕುಶ ಪದ್ಧತಿಯಾಗಿದೆ.''

ಆರ್.ಎಚ್.ಸಾಲ್ಟೋವ್ ''ಮೂಲವಾಗಿ ಪಿತ್ರಾರ್ಜಿತವಾಗಿ ಬಂದ ಅಧಿಕಾರವನ್ನು ಬಲತ್ಕಾರದಿಂದಾಗಲಿ, ಇಲ್ಲವೇ ಸರ್ವಾನುಮತದಿಂದಾಗಲಿ, ಸಾಮಾನ್ಯವಾಗಿ ಇವೆರಡರ ಸಂಯೋಜನೆಯಿಂದ ಪಡೆದ ಏಕನಾಯಕನ ಸರಕಾರವೇ ಸರ್ವಾಧಿಕಾರ''.

ಸರ್ವಾಧಿಕಾರ''.

**ಆಧುನಿಕ ನಿರಂಕುಶ ಪ್ರಭುತ್ವದ ಮುಖ್ಯ ಲಕ್ಷಣಗಳು :**

**೧. ನಿರಂಕುಶ ಪ್ರಭುತ್ವವು ಸರ್ವಾಧಿಕಾರ ಸಿದ್ಧಾಂತಕ್ಕೆ ಹೊಂದಿಕೊಂಡಿದೆ:** ಸರ್ವಾಧಿಕಾರ ಸಿದ್ಧಾಂತದ ಪ್ರಕಾರ ಮಾನವನ ಇಡೀ ಜೀವನವನ್ನು ಸರಕಾರ ನಿಯಂತ್ರಿಸುತ್ತದೆ. ಪ್ರತಿಯೊಂದು ಸಂಘ ಸಂಸ್ಥೆಗಳು ಸರಕಾರಕ್ಕೆ ಸೇರಿದವು-ಗಳಾಗಿರುತ್ತವೆ. ಇವುಗಳನ್ನು ಸರಕಾರ ತನಗೆ ಇಷ್ಟಬಂದ ಹಾಗೆ ನಿಯಂತ್ರಿಸಬಹುದು. ಹಿಟ್ಲರ್ ಹಾಗೂ ಮುಸೋಲಿನಿ ''ಪ್ರತಿಯೊಂದು ರಾಜ್ಯದ ಹತೋಟಿಯಲ್ಲಿ, ರಾಜ್ಯದಿಂದ ಹೊರಗಡೆ ಮತ್ತು ರಾಜ್ಯದ ಹೊರತಾಗಿ ಯಾವುದು ಇಲ್ಲ'' ಎಂದು ಹೇಳಿರುವದನ್ನು ಇಲ್ಲಿ ಸ್ಮರಿಸಬಹುದು. ಇವರುಗಳ ಕೈಯಲ್ಲಿ ಇಡೀ ರಾಜ್ಯದ ಸಮಸ್ತ ಸರಕಾರವು ಕೇಂದ್ರೀಕೃತವಾಗಿತ್ತು. ಪ್ರತಿಯೊಬ್ಬ ವ್ಯಕ್ತಿಯು ರಾಜ್ಯಕ್ಕಾಗಿ ತ್ಯಾಗ ಮಾಡಲು ಸಿದ್ಧನಿರಬೇಕು. ರಾಜ್ಯದ ಹಿತ ವ್ಯಕ್ತಿ ಸ್ವಾತಂತ್ರ್ಯಕ್ಕಿಂತ ಮುಖ್ಯ. ಎಲ್ಲ ಪ್ರಸಾರ ಮಾಧ್ಯಮಗಳು ಅಂದರೆ ರೇಡಿಯೊ, ಟೆಲಿವಿಜನ್, ಪತ್ರಿಕೆ, ಸಿನೆಮಾ ಮೊದಲಾದವುಗಳು ರಾಜ್ಯದ ನಿಯಂತ್ರಣದಲ್ಲಿರಬೇಕು. ಮಾನವನ ಜೀವನದ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ನೈತಿಕ, ವೈಯಕ್ತಿಕ ಮೊದಲಾದ ಕ್ಷೇತ್ರಗಳಲ್ಲಿ ಪ್ರವೇಶಿಸುವ ಅಧಿಕಾರ ರಾಜ್ಯಕ್ಕಿದೆ.

**೨. ಆಧುನಿಕ ನಿರಂಕುಶ ಪ್ರಭುತ್ವ ಏಕಪಕ್ಷೀಯ :** ಆಧುನಿಕ ಸರಕಾರದಲ್ಲಿ ಒಂದೇ ಒಂದು ಪಕ್ಷವು ಅತ್ಯಂತ ಪ್ರಭಲವಾಗಿದ್ದು ಆ ಪಕ್ಷವು ಸರ್ವಾಧಿಕಾರಿಯ ಅಧಿಕಾರದ ಪ್ರಮುಖ ಸ್ಥಾನವಾಗಿದೆ. ''ಏಕನಾಯಕ ಏಕಪಕ್ಷ'' ಪ್ರಸ್ತುತ ನಿರಂಕುಶ ಪ್ರಭುತ್ವದ ಪ್ರಮುಖ ಲಕ್ಷಣ. ಇಡೀ ದೇಶದ ಜನರು ಒಂದೇ ಪಕ್ಷದಲ್ಲಿ ಮತ್ತು ಒಬ್ಬನೇ ನಾಯಕನಲ್ಲಿ ತಮ್ಮ ನಿಷ್ಠೆಯನ್ನು ವ್ಯಕ್ತಪಡಿಸಬೇಕಾಗುತ್ತದೆ. ಉದಾ : ಚೀನಾ ಹಾಗೂ ವಿಶ್ವದ ಇತರ ಕಮ್ಯುನಿಸ್ಟ್ ರಾಜ್ಯಗಳಲ್ಲಿ ಅಧಿಕಾರವೆಲ್ಲ ಕಮ್ಯುನಿಸ್ಟ್ ಪಕ್ಷಕ್ಕೆ ಸೇರಿರುವದನ್ನು ನಾವು ಕಾಣಬಹುದು. ಪಕ್ಷವನ್ನು ವಿರೋಧಿಸುವದು ರಾಷ್ಟ್ರ ದ್ರೋಹವೆಂಬ ಭಾವನೆಯಿದೆ. ಈ ದೇಶದಲ್ಲಿ ವಿರೋಧ ಪಕ್ಷಗಳ ಅಸ್ತಿತ್ವಕ್ಕೆ ಅವಕಾಶವಿಲ್ಲ. ಅಧಿಕಾರದಲ್ಲಿರುವ ಒಂದೇ ಪಕ್ಷ ಮಾನ್ಯವಾದುದು. ನಿರಂಕುಶ ಪ್ರಭುತ್ವದಲ್ಲಿ ಭಿನ್ನಾಭಿಪ್ರಾಯಕ್ಕೆ ಮಾನ್ಯತೆ ಇಲ್ಲ. ಇಡೀ ರಾಷ್ಟ್ರದ ಜನತೆ ಒಂದೇ ಪಕ್ಷಕ್ಕೆ ವಿಧೇಯರಾಗಿರುವದರಿಂದ ಎಲ್ಲರೂ ಒಂದೇ ರೀತಿಯಾಗಿ ಯೋಚಿಸಬೇಕು. ಏಕಪ್ರಕಾರವಾಗಿ ನಡೆದುಕೊಳ್ಳಬೇಕು.

**೩. ನಿರಂಕುಶ ಪ್ರಭುತ್ವದಲ್ಲಿ ವ್ಯಕ್ತಿ ಸ್ವಾತಂತ್ರ್ಯವಿಲ್ಲ :** ಸರ್ವಾಧಿಕಾರದಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲ. ಸರ್ವಾಧಿಕಾರ ರಾಷ್ಟ್ರಗಳಲ್ಲಿ ಜನರಿಗೆ ರಾಜಕೀಯ ಸ್ವಾತಂತ್ರ್ಯ, ಮೂಲಭೂತಹಕ್ಕುಗಳು ಇರುವದಿಲ್ಲ. ಮಾನವರ ಎಲ್ಲ ಕಾರ್ಯಚಟುವಟಿಕೆಗಳು

ಸರಕಾರದ ನಿಯಂತ್ರಣಕ್ಕೆ ಒಳಪಟ್ಟಿರುತ್ತವೆ. ಪ್ರತಿಯೊಬ್ಬ ವ್ಯಕ್ತಿ, ಅವನ ಆಸ್ತಿ ಎಲ್ಲವೂ ಸರಕಾರದ ಸ್ವತ್ತಾಗಿದ್ದು ಅವುಗಳನ್ನು ಸರಕಾರ ತನಗಿಷ್ಟಬಂದ ಹಾಗೆ ನಿಯಂತ್ರಿಸಬಹುದಾಗಿದೆ.

೪. ಜನರ ಬೆಂಬಲವಿಲ್ಲ : ಸರ್ವಾಧಿಕಾರವೂ ಜನರ ಬೆಂಬಲವನ್ನು ಹೊಂದಿರುವದಿಲ್ಲ. ಸೈನಿಕ ಶಕ್ತಿಯೇ ಅದರ ಮೂಲಾಧಾರವಾಗಿದೆ. ಅಂತೆಯೆ ಸರ್ವಾಧಿಕಾರಿಯು ಜನರಿಗೆ ಜವಾಬ್ದಾರಿಯಾಗಿರುವದಿಲ್ಲ. ಜನರಿಗೆ ಜವಾಬ್ದಾರಿಯಾಗಿರದ ಒಬ್ಬ ವ್ಯಕ್ತಿಯಾಗಲಿ ಒಂದು ರಾಜಕೀಯ ಪಕ್ಷವಾಗಲಿ ಸರಕಾರದ ಅಧಿಕಾರವನ್ನು ಚಲಾಯಿಸುತ್ತದೆ.

**೫. ದಬ್ಬಾಳಿಕೆ ಮತ್ತು ಬಲ ಪ್ರಯೋಗ** : ನಿರಂಕುಶ ಪ್ರಭುಗಳು ರಾಜ್ಯದ ಒಳಗೆ ಮತ್ತು ಹೊರಗೆ ದಬ್ಬಾಳಿಕೆ ನಡೆಸುತ್ತಾರೆ. ಯುದ್ಧಮಾಡದೆ ಸುಮ್ಮನೇ ಇರುವದು ಹೇಡಿಗಳ ಲಕ್ಷಣ ಎಂಬ ಅಭಿಪ್ರಾಯ ಇವರದಾಗಿದೆ. ಸ್ತ್ರೀಯರಿಗೆ ಮಕ್ಕಳನ್ನು ಹೆರುವದು ಎಷ್ಟು ಸ್ವಾಭಾವಿಕವೋ ಪುರುಷರಿಗೆ ಯುದ್ಧವು ಅಷ್ಟೇ ಸ್ವಾಭಾವಿಕ ಎಂಬುದಾಗಿ ನಿರಂಕುಶ ಪ್ರಭುಗಳು ಪ್ರತಿಪಾದಿಸುತ್ತಾರೆ. ಆದುದರಿಂದ ಜನರನ್ನು ಇವರು ನಿರ್ದಾಕ್ಷಿಣ್ಯವಾಗಿ ತಮಗೆ ಇಷ್ಟಬಂದಂತೆ ಬಲಪ್ರಯೋಗವನ್ನು ಮಾಡಿ ಬಳಸಿಕೊಳ್ಳುತ್ತಾರೆ. ಹಿಂಸೆ, ನೋವು, ಭಯ, ಅಪನಂಬಿಕೆ ಮುಂತಾದವುಗಳು ಇಲ್ಲಿ ಸರ್ವೇಸಾಮಾನ್ಯವಾಗಿದ್ದು ಸದಾ ಭೀತಿ ವಾತಾವರಣ ಇರುತ್ತದೆ.

**೬. ಶಾಂತಿ ಮಾರ್ಗಗಳಿಗೆ ಇಲ್ಲಿ ಬೆಲೆಯಿಲ್ಲ** : ಜನರ ಧಾರ್ಮಿಕ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವದು, ರಾಷ್ಟ್ರದ ಪರ ಹೋರಾಟ ನಡೆಸಲು ಕಡ್ಡಾಯವಾಗಿ ಸೈನ್ಯಕ್ಕೆ ಸೇರಿಸಿಕೊಳ್ಳುವದು, ಯಾವ ರೀತಿಯ ವಿಚಾರಣೆಯನ್ನು ನಡೆಸದೆ ಶಿಕ್ಷೆಯನ್ನು ಕೊಡುವದು, ನಿರಂಕುಶ ಪ್ರಭುತ್ವದಲ್ಲಿ ಸರ್ವೇಸಾಮಾನ್ಯ. ತಮ್ಮ ದೇಶದ ಸಾಹಿತ್ಯ, ಕಲೆ, ಭಾಷೆ ಬೇರೆಯವರಿಗಿಂತ ಶ್ರೇಷ್ಠವಾದವುಗಳು. ತಮ್ಮಂತೆ ಬೇರಾರೂ ವಿಶ್ವಕ್ಕೆ ವಿಶಿಷ್ಟವಾದ ಕಾಣಿಕೆಯನ್ನು ಸಲ್ಲಿಸಿಲ್ಲವೆಂಬ ಭಾವನೆ ಸರ್ವಾಧಿಕಾರಿ ರಾಷ್ಟ್ರಗಳಲ್ಲಿರುತ್ತದೆ. ಇಂದಿನ ಸರ್ವಾಧಿಕಾರವು ವಿಶ್ವಭ್ರಾತೃತ್ವಕ್ಕೆವಿರುದ್ಧವಾಗಿದೆ. ತಾನು ಎಲ್ಲ ದೇಶಗಳೊಂದಿಗೆ ಒಂದಾಗಿ ಬಾಳಬೇಕೆನ್ನುವ ಬದಲು ಬೇರೆಲ್ಲ ದೇಶಗಳು ತನ್ನ ಅಧೀನದಲ್ಲಿರಬೇಕೆಂದು ಬಯಸುತ್ತವೆ. ನೆರೆ ರಾಜ್ಯಗಳನ್ನು ಆಕ್ರಮಿಸಿಕೊಂಡು ತನ್ನ ರಾಜ್ಯವನ್ನು ವಿಸ್ತರಿಸಿಕೊಳ್ಳುವದು ಇವುಗಳ ಗುರಿ. ಅಂತರಾಷ್ಟ್ರೀಯತೆ ಕೈಲಾಗದವರ ಹೇಡಿಗಳ ಮಾತು ಎಂಬ ನಂಬಿಕೆ ಇವರದು. ಗುರಿಸಾಧನೆಯೇ ಇದರ ಪ್ರಮುಖ ಗುರಿಯಾಗಿರುವದರಿಂದ ಗುರಿಸಾಧನೆಗಾಗಿ ಯಾವ ಮಾರ್ಗವನ್ನು ಬೇಕಾದರೂ ಸರ್ವಾಧಿಕಾರಿಗಳು ಅನುಸರಿಸುತ್ತಾರೆ.

೭. ನಿರಂಕುಶ ಪ್ರಭುತ್ವವು ವಿಳಂಬವನ್ನು ಸಹಿಸುವದಿಲ್ಲ : ನಿರಂಕುಶ ಪ್ರಭುತ್ವವು ವಿಳಂಬ ನೀತಿಯನ್ನಾಗಲಿ ಅಥವಾ ಮಂದಗತಿಯ ಪ್ರಗತಿಯನ್ನಾಗಲಿ ಸಹಿಸುವದಿಲ್ಲ.

ಸರ್ವಾಧಿಕಾರಿಯು ಯಾವುದೇ ವಿಷಯಕ್ಕೆ ಶೀಘ್ರ ನಿರ್ಣಯವನ್ನು ಕೈಗೊಳ್ಳುತ್ತಾನೆ ಮತ್ತೆ ಅದನ್ನು ಅಷ್ಟೇ ಶೀಘ್ರವಾಗಿ ಕಾರ್ಯರೂಪಕ್ಕಿಳಿಸುತ್ತಾನೆ. ಹಿಟ್ಲರ್‌ಮತ್ತು ಮುಸೋಲಿನಿ ಅವರು ತ್ವರಿತ ನಿರ್ಣಯ ಮತ್ತು ತ್ವರಿತ ಪ್ರವೃತ್ತಿಯಿಂದ ಜನರಿಗೆ ನೀಡಿದ ಆಶ್ವಾಸನೆಗಳನ್ನು ಪೂರೈಸಿದರು. ಅವರು ಎಲ್ಲರಿಗೂ ಉದ್ಯೋಗ ಅವಕಾಶಗಳನ್ನು ನೀಡಿದರು. ಆಹಾರ ವಸ್ತುಗಳನ್ನುನೀಡಿದರು ಮತ್ತು ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿದರು. ತನ್ಮೂಲಕ ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಿದರು.

## ಇ. ಸಂಸದೀಯ ಹಾಗೂ ಅಧ್ಯಕ್ಷೀಯ ಸರಕಾರ

ಶಾಸಕಾಂಗದೊಡನೆ ಕಾರ್ಯಾಂಗಕ್ಕಿರುವ ಸಂಬಂಧದ ಆಧಾರದಮೇಲೆ ಕಾರ್ಯಾಂಗವನ್ನು ಸಂಸದೀಯ ಸರಕಾರ ಹಾಗೂ ಅಧ್ಯಕ್ಷೀಯ ಸರಕಾರ ಎಂದು ವರ್ಗೀಕರಿಸಲಾಗಿದೆ. ಕಾರ್ಯಾಂಗವು ತನ್ನ ಉಳಿವಿಗಾಗಿ ಶಾಸಕಾಂಗದ ಮೇಲೆ ಆಧಾರವಾಗಿದ್ದರೆ ಅದು ಸಂಸದೀಯ ಸರಕಾರ ಮತ್ತು ಕಾರ್ಯಾಂಗವು ಶಾಸಕಾಂಗದಿಂದ ಸ್ವತಂತ್ರವಾಗಿದ್ದರೆ ಅಂತಹ ಪದ್ಧತಿಯನ್ನು ಅಧ್ಯಕ್ಷೀಯ ಸರಕಾರ ಎನ್ನುತ್ತಾರೆ.

### ✸ಸಂಸದೀಯ ಸರಕಾರದ ಸ್ವರೂಪ ಮತ್ತು ಲಕ್ಷಣಗಳು

ಇದಕ್ಕೆ ಹೊಣೆಗಾರ ಸರಕಾರ ಅಥವಾ ಮಂತ್ರಿಮಂಡಳ ಸರಕಾರವೆಂದು ಕರೆಯಲಾಗುತ್ತದೆ. ಶಾಸಕಾಂಗಕ್ಕೆ ಜವಾಬ್ದಾರಿಯಾದ ಕಾರ್ಯಾಂಗವೇ ಸಂಸದೀಯ ಸರಕಾರ. ಸಾರ್ವತ್ರಿಕ ಚುನಾವಣೆಯಲ್ಲಿ ಬಹುಮತ ಗಳಿಸಿದ ರಾಜಕೀಯ ಪಕ್ಷದ ನಾಯಕನು ಪ್ರಧಾನಮಂತ್ರಿ ಆಗುವನು. ಆತನ ಸಲಹೆಯ ಮೇರೆಗೆ ಇತರ ಮಂತ್ರಿಗಳು ನೇಮಕವಾಗುವರು. ಪ್ರಧಾನಮಂತ್ರಿ ಮತ್ತು ಇತರ ಮಂತ್ರಿಗಳನ್ನು ಒಟ್ಟಿಗೆ ಸಚಿವ ಸಂಪುಟ ಎನ್ನುತ್ತಾರೆ. ಅದು ಸರ್ಕಾರದ ಕಾರ್ಯಾಂಗದ ಅಧಿಕಾರವನ್ನು ವಹಿಸಿಕೊಂಡು ಆಡಳಿತವನ್ನು ನಿರ್ವಹಿಸುತ್ತದೆ. ಸಚಿವಸಂಪುಟವು ಸಂಸತ್ತಿನ ಕೆಳಮನೆಯು ವಿಶ್ವಾಸವನ್ನು ಪಡೆದಿರುವವರೆಗೆ ಮಾತ್ರ ಅಧಿಕಾರದಲ್ಲಿರುತ್ತದೆ. ಸಂಸತ್ತಿನ ಕೆಳಮನೆಯು ಅವಿಶ್ವಾಸವನ್ನು ವ್ಯಕ್ತಪಡಿಸಿದರೆ ಸಚಿವ ಸಂಪುಟವು ಅಧಿಕಾರವನ್ನು ತ್ಯಜಿಸಬೇಕಾಗುತ್ತದೆ. ಅಂದರೆ ಸಂಸದೀಯ ಸರಕಾರದ ಸದಸ್ಯರು ಶಾಸನಸಭೆಯಿಂದ ಆಯ್ಕೆಯಾಗುತ್ತಾರೆ. ಶಾಸನಸಭೆಯ ವಿಶ್ವಾಸವನ್ನು ಪಡೆದಿರುವವರೆಗೆ ಆಡಳಿತ ನಡೆಸುತ್ತಾರೆ. ಆಡಳಿತದ ರೀತಿನೀತಿಗಳಿಗೆ ಸಚಿವಸಂಪುಟವು ಶಾಸಕಾಂಗಕ್ಕೆ ವಿವರಣೆ ನೀಡುವ ಹೊಣೆ ಹೊತ್ತಿರುತ್ತದೆ.

ಪ್ರೊ. ಇ. ಬಿ. ಷೂಲ್ಜರ್ ಪ್ರಕಾರ 'ಕಾರ್ಯನಿರತವಾದ ಕಾರ್ಯಾಂಗ ಅಥವಾ ಸಚಿವ ಸಂಪುಟವನ್ನು ತನ್ನ ಇಚ್ಛೆಗನುಗುಣವಾಗಿ ತೆಗೆದುಹಾಕುವ ಅವಕಾಶ

ಶಾಸಕಾಂಗಕ್ಕೆ ಇರುವದೇ ಸಂಸದೀಯ ಅಥವಾ ಮಂತ್ರಿಮಂಡಳ ಸರ್ಕಾರದ ಮುಖ್ಯ ಲಕ್ಷಣ '. ಈ ಪದ್ಧತಿಯು ೧೯ನೇ ಶತಮಾನದ ಪ್ರಥಮಾರ್ಧದಲ್ಲಿ ಇಂಗ್ಲೆಂಡಿನಲ್ಲಿ ಹುಟ್ಟಿಬೆಳೆಯಿತು. ಮುಂದೆ ಭಾರತ, ಕೆನಡಾ, ಜಪಾನ್, ಆಸ್ಟ್ರೇಲಿಯಾ ಮೊದಲಾದ ದೇಶಗಳು ಇಂಗ್ಲೆಂಡನ್ನು ಅನುಸರಿಸಿದವು.

**ಸಂಸದೀಯ ಸರಕಾರದ ಲಕ್ಷಣಗಳು**

**೧. ಮಂತ್ರಿಮಂಡಳ ನಿಜವಾದ ಕಾರ್ಯಾಂಗ :** ಸಂಸದೀಯ ಪದ್ಧತಿಯಲ್ಲಿ ನಾಮಮಾತ್ರ ಕಾರ್ಯಾಂಗ ಮತ್ತು ನೈಜ ಕಾರ್ಯಾಂಗ ಎಂದು ಎರಡು ಬಗೆಯ ಕಾರ್ಯಾಂಗವಿರುತ್ತವೆ. ನಾಮಮಾತ್ರ ಕಾರ್ಯಾಂಗದ ಕಾರ್ಯಗಳು ಕೇವಲ ಔಪಚಾರಿಕವಾಗಿರುತ್ತವೆ. ಭಾರತದ ರಾಷ್ಟ್ರಪತಿ ಹಾಗೂ ಬ್ರಿಟನ್ನಿನ ರಾಣಿ ಇವರು ಕೇವಲ ಉತ್ಸವಮೂರ್ತಿಗಳಾಗಿದ್ದು ಅವರ ಹೆಸರಿನಲ್ಲಿ ರಾಜ್ಯದ ಆಡಳಿತವು ನಡೆಯುತ್ತದೆ.

ಕಾರ್ಯಾಂಗದ ನಿಜವಾದ ಅಧಿಕಾರವು ಪ್ರಧಾನಮಂತ್ರಿಯ ನಾಯಕತ್ವದ ಮಂತ್ರಿಮಂಡಲಕ್ಕೆ ಸೇರಿರುತ್ತದೆ. ಈ ಮಂತ್ರಿಮಂಡಳವು ಸಂಸತ್ತಿನ ಕೆಳಮನೆಗೆ ಹೊಣೆಯಾಗಿರುತ್ತದೆ ಮತ್ತು ಅದರ ವಿಶ್ವಾಸವನ್ನು ಹೊಂದಿರುವವರೆಗೆ ಮಾತ್ರ ಅಧಿಕಾರದಲ್ಲಿರುತ್ತದೆ. ನಾಮಮಾತ್ರ ಕಾರ್ಯಾಂಗವು ನಿಜವಾದ ಕಾರ್ಯಾಂಗದ ಸಲಹೆಯಂತೆ ನಡೆದುಕೊಳ್ಳಬೇಕಾಗುತ್ತದೆ. ಸಂಸತ್ತಿನಲ್ಲಿ ಪಾಸಾದ ಮಸೂದೆಗಳು ಕಾನೂನುಗಳಾಗಬೇಕಾದರೆ ಅವುಗಳಿಗೆ ನಾಮಮಾತ್ರ ಕಾರ್ಯಾಂಗದ ಒಪ್ಪಿಗೆ ಅವಶ್ಯ.' ಬ್ರಿಟನ್ನಿನ ರಾಣಿ ಆಳುತ್ತಾರೆ ಹೊರತು ಸರಕಾರ ನಡೆಸುವದಿಲ್ಲ' ಎಂಬ ಹೇಳಿಕೆ ಬ್ರಿಟನ್ನಿನಲ್ಲಿ ದೆ.

**೨. ಮಂತ್ರಿಮಂಡಳ ಸಂಸತ್ತಿನಿಂದ ರಚಿಸಲ್ಪಟ್ಟಿರುತ್ತದೆ.** ಸಂಸದೀಯ ಪದ್ಧತಿಯಲ್ಲಿ ಮಂತ್ರಿಮಂಡಳ ಸಂಸತ್ತಿನಿಂದ ಸೃಷ್ಟಿಸಲ್ಪಟ್ಟಿರುತ್ತದೆ. ಸಂಸತ್ತಿನ ಕೆಳಮನೆಯ ಬಹುಸಂಖ್ಯಾತ ಪಕ್ಷದ ನಾಯಕ ಪ್ರಧಾನಮಂತ್ರಿ ಆಗುತ್ತಾನೆ. ಸಾಮಾನ್ಯವಾಗಿ ತನ್ನ ಪಕ್ಷದ ಸಂಸತ್ ಸದಸ್ಯರಲ್ಲಿ ಕೆಲವರನ್ನು ಮಂತ್ರಿಪದವಿಗೆ ಆರಿಸಿಕೊಂಡು ಆತನು ಮಂತ್ರಿಮಂಡಳ ರಚಿಸುತ್ತಾನೆ. ಈ ರೀತಿ ಮಂತ್ರಿಗಳು ಶಾಸಕಾಂಗದಲ್ಲಿ ಸ್ಪಷ್ಟ ಬಹುಮತಪಡೆದಿರುವ ಏಕೈಕ ರಾಜಕೀಯ ಪಕ್ಷಕ್ಕೆ ಅಥವಾ ಪಕ್ಷಗಳಿಗೆ ಸೇರಿರುತ್ತಾರೆ. ಆದುದರಿಂದ ಮಂತ್ರಿಮಂಡಳದಲ್ಲಿ ಐಕ್ಯಮತ್ಯವಿರುತ್ತದೆ.

ಒಂದು ವೇಳೆ ಯಾವ ರಾಜಕೀಯ ಪಕ್ಷವು ಬಹುಮತಗಳಿಸದೇ ಹೋದಲ್ಲಿ ಅನೇಕ ಪ್ರಬಲ ಪಕ್ಷಗಳು ಸೇರಿ ಸಮ್ಮಿಶ್ರ ಸರಕಾರ ರಚಿಸುತ್ತವೆ. ಹೀಗೆ ಸಂಸದೀಯ ಸರಕಾರವೆಂದರೆ ಪಕ್ಷ ಸರಕಾರವೆಂದು ಅರ್ಥವಾಗುತ್ತದೆ.

**೩. ಸಾಮೂಹಿಕ ಹೊಣೆಗಾರಿಕೆ :** ಇಡೀ ಮಂತ್ರಿಮಂಡಳ ಸಂಸತ್ತಿಗೆ ಜವಾಬ್ದಾರಿಯಾಗಿರುತ್ತದೆ. ಪ್ರತಿಯೊಬ್ಬ ಮಂತ್ರಿಯು ತನ್ನ ಇಲಾಖೆಯ ಜವಾಬ್ದಾರಿ ಹೊತ್ತಿರುವದೇ

ಅಲ್ಲದೆ ಇಡೀ ಮಂತ್ರಿಮಂಡಲದ ತೀರ್ಮಾನಕ್ಕೆ ಪ್ರತಿಯೊಬ್ಬ ಮಂತ್ರಿಯು ಬದ್ಧನಾಗಿರುತ್ತಾನೆ. ಮಂತ್ರಿಗಳು ಆಟಗಾರರ ತಂಡೋಪಾದಿಯಲ್ಲಿ ಕಾರ್ಯ ನಿರ್ವಹಿಸುತ್ತಾರೆ. ದೇಶದ ಆಡಳಿತವನ್ನು ನಡಸುವದರಲ್ಲಿ ಅವರು ಸಾಮೂಹಿಕವಾಗಿಯೂ ಅಲ್ಲದೆ ವೈಯಕ್ತಿಕವಾಗಿಯೂ ಶಾಸಕಾಂಗಕ್ಕೆ ಹೊಣೆಯಾಗಿ-ರುತ್ತಾರೆ. ದಿ.ಲಾಲ್ ಬಹದ್ದೂರ ಶಾಸ್ತ್ರಿ ಅವರು ಸರ್ಕಾರದಲ್ಲಿ ರೇಲ್ವೆ ಮಂತ್ರಿಯಾಗಿದ್ದಾಗ ರೈಲುದುರಂತ ಸಂಭವಿಸಿದಾಗ ವೈಯಕ್ತಿಕ ಹೊಣೆಯನ್ನು ಹೊತ್ತು ತಮ್ಮ ಸಚಿವಸ್ಥಾನಕ್ಕೆ ರಾಜಿನಾಮೆ ನೀಡಿದ್ದರು. ರಾಜ್ಯದ ಮಹತ್ವದ ವಿಷಯಗಳ ಬಗ್ಗೆ ತೀರ್ಮಾನ ತೆಗೆದುಕೊಂಡಾಗ ಇದಕ್ಕೆ ಇಡೀ ಕ್ಯಾಬಿನೆಟ್ ಹೊಣೆಯಾಗಿರುತ್ತದೆ. ಆ ನಿರ್ಧಾರ ಯಾವ ಸಚಿವನಿಗಾದರೂ ಸರಿಬೀಳದಿದ್ದರೆ ಆತ ರಾಜಿನಾಮೆ ಕೊಡಬೇಕಾ- ಗುವದು. ಉದಾ: ಎಮ್.ಸಿ ಛಗಲಾ ವಿದೇಶ ಮಂತ್ರಿ ಇದ್ದಾಗ ಶಿಕ್ಷಣ ಮಂತ್ರಿಯಾದ ತ್ರಿಗುಣ ಸೇನರ ತ್ರಿಭಾಷಾ ಸೂತ್ರವನ್ನು ಮಂತ್ರಿಮಂಡಲವು ಒಪ್ಪಿ ಕೊಂಡಿತು. ಆದರೆ ಶ್ರೀಛಗಲಾ ಅದಕ್ಕೆ ವೈಯಕ್ತಿಕ ವಾಗಿ ವಿರೋಧಿಸಿದ್ದರಿಂದ ಅವರು ರಾಜಿನಾಮೆ ಕೊಟ್ಟರು. ಸಚಿವರೆಲ್ಲರೂ ಸರಕಾರದ ಕಾರ್ಯನೀತಿಯ ಬಗ್ಗೆ ಒಂದೇ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕು. ಅಧಿಕಾರದಲ್ಲಿರುವಾಗಲೂ ಅಧಿಕಾರವನ್ನು ಬಿಡುವಾಗಲೂ ಮಂತ್ರಿಮಂಡಲ ಒಟ್ಟಾಗಿರುವದು.

೪. **ಪ್ರಧಾನಮಂತ್ರಿಯ ನಾಯಕತ್ವ :** ಪ್ರಧಾನಮಂತ್ರಿಯ ಸ್ಥಾನ ಅತ್ಯುನ್ನತವಾದದ್ದು ಪ್ರಭಾವ ಪ್ರತಿಷ್ಠೆಗಳಿಂದ ಕೂಡಿದ್ದಾಗಿರುತ್ತದೆ. ಗ್ರೀವ್ಸ್ ಹೇಳಿರುವಂತೆ ದೇಶದ ಆಡಳಿತವು ಸರಕಾರದ ಕೈಯಲ್ಲಿದ್ದರೆ ಸರಕಾರವು ಪ್ರಧಾನಿಯ ಕೈಯಲ್ಲಿದೆ. ಪ್ರಧಾನಿಯ ಅಧಿಕಾರ ವ್ಯಾಪ್ತಿ ಸರ್ವಾಧಿಕಾರಿಯ ಅಧಿಕಾರ ವ್ಯಾಪ್ತಿಗೆ ಹೋಲಿಸುವಷ್ಟರ ಮಟ್ಟಿಗಿದೆ ಎಂದರೆ ತಪ್ಪಾಗಲಾರದು. ಮಂತ್ರಿಮಂಡಲವನ್ನು ಒಂದು ಕಮಾನಿಗೆ ಹೋಲಿಸಿದರೆ ಅದರಲ್ಲಿನ ಮಧ್ಯದ ಮುಖ್ಯ ಕಲ್ಲಿನಂತೆ ಪ್ರಧಾನಿ ಇರುತ್ತಾನೆ. ಮಂತ್ರಿಮಂಡಳದ ಹುಟ್ಟು, ಸಾವು, ಪ್ರಧಾನ ಮಂತ್ರಿಯ ಅಸ್ತಿತ್ವವನ್ನು ಅವಲಂಬಿಸಿದೆ. ಪ್ರಧಾನಮಂತ್ರಿಯು ರಾಜ್ಯನೌಕೆಯ ಚುಕ್ಕಾಣಿ ಎಂದು ರಾಮ್ಸ ಮ್ಯುರ್ ಹೇಳಿದ್ದಾರೆ. ಪ್ರಧಾನಮಂತ್ರಿಯು ಸೂರ್ಯಮಂಡಳದಲ್ಲಿರುವ ಸೂರ್ಯನಿಗಿರುವ ಮಹತ್ವವನ್ನು ಹೊಂದಿರುತ್ತಾನೆ. ಒಟ್ಟಿನಲ್ಲಿ ಯಾವುದೇ ಸರ್ವಾಧಿಕಾರಿ ಸಹ ಕಂಡು ಕರುಬವಷ್ಟು ಅಧಿಕಾರ ಹಾಗೂ ಅನುಗ್ರಹ ಶಕ್ತಿಯನ್ನು ಅವನು ಪಡೆದಿದ್ದಾನೆ. ಸರಕಾರವೆಂಬ ರಾಜರಥವನ್ನು ನಡೆಸುವ ಸಾರಥಿಯೇ ಪ್ರಧಾನಮಂತ್ರಿ. ಡಾ.ಜೆನಿಂಗ್ಸ್‌ರ ಪ್ರಕಾರ ಚುಕ್ಕೆಗಳ ಮಧ್ಯದಲ್ಲಿ ಚಂದ್ರನಂತೆ ಹಾಗೂ ಗ್ರಹಗಳ ಮಧ್ಯದಲ್ಲಿ ಸೂರ್ಯನಂತೆ ಪ್ರಧಾನಮಂತ್ರಿ ಇರುತ್ತಾನೆ. ಮಂತ್ರಿಗಳನ್ನು ನೇಮಿಸುವ ಅಧಿಕಾರ ನಾಮಮಾತ್ರ ಕಾರ್ಯ ನಿರ್ವಾಹಕನಿಗಿದ್ದರೂ ವಾಸ್ತವಿಕವಾಗಿ ಅದು ಪ್ರಧಾನಿಗೆ ಸೇರಿರುತ್ತದೆ. ತನ್ನ ಸಹೋದ್ಯೋಗಿಗಳನ್ನು ಆರಿಸುವದು ಅವರಿಗೆ ಖಾತೆಗಳನ್ನು ಹಂಚುವದು, ಅವರ ಕರ್ಮಕಾಂಡಗಳ ಮೇಲೆ ಮೇಲ್ವಿಚಾರಣೆ

ನಡೆಸುವದು, ಅವರ ಕಾರ್ಯಗಳನ್ನು ಸಮನ್ವಯಗೊಳಿಸುವದು ಪ್ರಧಾನಿಯೆ. ಲಾಸ್ಕಿ ಹೇಳಿರುವಂತೆ ಮಂತ್ರಿಮಂಡಳದ ರಚನೆಗೆ, ಅದರ ಮುಂದುವರಿಕೆಗೆ, ಅದರ ಅಂತ್ಯಕ್ಕೆ ಪ್ರಧಾನಿಯೇ ಕೇಂದ್ರ ಬಿಂದು.

**೫. ರಾಜಕೀಯ ಏಕತೆ :** ಸಂಸದೀಯ ಕಾರ್ಯಾಂಗದಲ್ಲಿ ಎಲ್ಲ ಮಂತ್ರಿಗಳು ಒಂದೇ ರಾಜಕೀಯ ಪಕ್ಷದಿಂದ ಅಥವಾ ಒಂದೇ ಅಭಿಪ್ರಾಯವಿರುವ ಪಕ್ಷಗಳಿಂದ ಕೂಡಿದ್ದು ಸಾಮಾನ್ಯ ಸಿದ್ಧಾಂತ, ಕಾರ್ಯಕ್ರಮ, ಮೌಲ್ಯಗಳು ಹಾಗೂ ನಂಬಿಕೆಗಳನ್ನು ಒಳಗೊಂಡವರಾಗಿರುತ್ತಾರೆ. ಹೀಗಾಗಿ ಕಾರ್ಯನಿರ್ವಹಿಸುವಾಗ ಉತ್ತಮ ಹೊಂದಾಣಿಕೆ ಹಾಗೂ ಪರಸ್ಪರ ಸಹಕಾರ ಸುಲಭವಾಗಿ ಮೂಡಿಬರುತ್ತದೆ. ಬೇರಬೇರೆ ತತ್ವಸಿದ್ಧಾಂತ ಕಾರ್ಯಕ್ರಮಗಳುಳ್ಳ ಪಕ್ಷಗಳಿಂದ ಮಂತ್ರಿಗಳನ್ನು ಆಯ್ಕೆ ಮಾಡಿದರೆ ಪರಸ್ಪರ ಒಡನಾಟ ಹಾಗೂ ಸಹಕಾರವಿಲ್ಲದೇ ಸರಕಾರದ ಮೂಲ ಉದ್ದೇಶಕ್ಕೆ ಧಕ್ಕೆಯಾಗುತ್ತದೆ. ಸಂಸತ್ತಿನಲ್ಲಿ ಯಾವುದೇ ಒಂದು ಪಕ್ಷಕ್ಕೆ ಸ್ಪಷ್ಟ ಬಹುಮತ ಇರದಿದ್ದರೆ ಸಮ್ಮಿಶ್ರ ಮಂತ್ರಿಮಂಡಳ ರಚನೆಯಾಗುತ್ತದೆ. ಇಂತ ಮಂತ್ರಿಮಂಡಳವು ಆತಂಕಕಾರಿ ಅಸ್ತಿತ್ವವನ್ನು ಹೊಂದಿರುವದಲ್ಲದೇ ಸರಕಾರದಲ್ಲಿ ಅಸ್ಥಿರತೆಯನ್ನುಂಟು ಮಾಡುತ್ತದೆ. ಉದಾ : ಭಾರತದಲ್ಲಿ ಕಳೆದ ೧೦ ವರ್ಷಗಳಿಂದ ಏಕಪಕ್ಷ ಸಾಮ್ರಾಧಿಪತ್ಯ ಕೊನೆಗೊಂಡಿದ್ದು ನೂತನ ಸಮ್ಮಿಶ್ರ ರಾಜಕೀಯ ಶಕೆ ಆರಂಭವಾಗಿದೆ. ೧೯೯೬ ರ ಚುನಾವಣೆಯ ನಂತರ ಬಂದ ವಾಜಪೇಯಿ ಸರಕಾರದಿಂದ ಹಿಡಿದು೧೯೯೯ ಹಾಗೂ ೨೦೦೪ರಲ್ಲಿ ನಡೆದ೧೩ನೇ ಹಾಗೂ ೧೪ನೇ ಲೋಕಸಭಾ ಚುನಾವಣೆಯ ನಂತರವೂ ಸಮ್ಮಿಶ್ರ ಸರಕಾರ ವ್ಯವಸ್ಥೆ ಮುಂದುವರೆದಿದೆ. ೧೯೯೯ರ ಹಾಗೂ ೨೦೦೪ರ ಚುನಾವಣೆಯಲ್ಲಿ ಅನುಕ್ರಮವಾಗಿ ೨೪ ಪಕ್ಷಗಳನ್ನೊಳಗೊಂಡ ಪ್ರಜಾಸತ್ತಾತ್ಮಕ ಒಕ್ಕೂಟ (NDA) ಹಾಗೂ ೧೪ ಪಕ್ಷಗಳ-ನ್ನೊಳಗೊಂಡ ಸಂಯುಕ್ತ ಪ್ರಗತಿಪರ ಒಕ್ಕೂಟ (UPA) ಸರಕಾರವು ಅಧಿಕಾರಕ್ಕೆ ಬಂದಿದ್ದು ಅದು ಸಮ್ಮಿಶ್ರ ಸರಕಾರವಾಗಿದೆ. ಈ ರೀತಿಯಾಗಿ ಭಾರತದಲ್ಲಿ ಕಳೆದ ೧೦ ವರ್ಷಗಳಲ್ಲಿ ೫ ಸರಕಾರಗಳು ಅಧಿಕಾರಕ್ಕೆ ಬರಲು ಏಕರೂಪತೆ ಹಾಗೂ ಸಾಮಾನ್ಯ ಉದ್ದೇಶದ ಅಭಾವವೇ ಕಾರಣವಾಗಿದೆ. ಇದೇರೀತಿಯಾಗಿ ಇಟಲಿಯಲ್ಲಿ ಕಳೆದ ೫೦ ವರ್ಷಗಳಲ್ಲಿ ೪೮ ಸರಕಾರಗಳು, ಜಪಾನಿನಲ್ಲಿ ೨ನೇ ಮಹಾಯುದ್ಧದ ನಂತರ ಪ್ರತಿ ೯ ತಿಂಗಳಿಗೊಮ್ಮೆ ಒಂದು ಸರಕಾರದಂತೆ ಬದಲಾಗಿವೆ. ಫ್ರಾನ್ಸಿನಲ್ಲಿ ೪ನೇ ಗಣರಾಜ್ಯ ಅಸ್ತಿತ್ವದಲ್ಲಿದ್ದಾಗ ಹಲವಾರು ರಾಜಕೀಯ ಪಕ್ಷಗಳಿದ್ದರೂ ಯಾವುದೇ ಒಂದು ಪಕ್ಷಕ್ಕೆ ಸ್ಪಷ್ಟಬಹುಮತ ಇಲ್ಲದ್ದರಿಂದ ೬ ತಿಂಗಳಿಗೊಮ್ಮೆ ಮಾನವರು ತಮ್ಮ ಶರ್ಟ್‌ಗಳನ್ನು ಬದಲಾವಣೆ ಮಾಡಿದಂತೆ ಸರಕಾರಗಳು ಪದೇ ಪದೇ ಬದಲಾದವು.

**೬. ವಿರೋಧ ಪಕ್ಷ :** ಈ ಪದ್ಧತಿಯಲ್ಲಿ ಒಂದು ಪಕ್ಷವು ಅಧಿಕಾರದಲ್ಲಿದ್ದರೆ ಇತರ ಪಕ್ಷ ಅಥವಾ ಪಕ್ಷಗಳು ವಿರೋಧ ಪಕ್ಷಗಳಾಗಿರುತ್ತವೆ. ವಿರೋಧ ಪಕ್ಷವು ಮಹತ್ವದ

ಅಥವಾ ಪಕ್ಷಗಳು ವಿರೋಧ ಪಕ್ಷಗಳಾಗಿರುತ್ತವೆ. ವಿರೋಧ ಪಕ್ಷವು ಮಹತ್ವದ ಪಾತ್ರವನ್ನು ನಿರ್ವಹಿಸುತ್ತದೆ. ಆಳುವ ಪಕ್ಷದ ತಪ್ಪುನಡೆಯನ್ನು ವಿರೋಧಿಸುವದು, ಅದರ ಲೋಪದೋಷಗಳನ್ನು ಬೆಳಕಿಗೆ ತರುವದು ಮತ್ತು ಸಮಯ ಬಂದಾಗ ಅದನ್ನು ಅಧಿಕಾರದಿಂದ ಕೆಳಗಿಳಿಸುವದು ಇದೇ ವಿರೋಧಿ ಪಕ್ಷದ ಮುಖ್ಯ ಕೆಲಸ. ಆಳುವ ಪಕ್ಷವು ಅಧಿಕಾರವನ್ನು ಕಳೆದುಕೊಂಡಾಗ ತಾನೇ ಬದಲಿ ಸರಕಾರವನ್ನು ರಚಿಸುತ್ತದೆ. ಬ್ರಿಟನ್ನಿನಲ್ಲಿ ವಿರೋಧ ಪಕ್ಷದ ಮಹತ್ವವನ್ನು ಹೀಗೆ ಚಿತ್ರಿಸಲಾಗಿದೆ. ಬ್ರಿಟೀಶ್ ಪ್ರಧಾನಿಯು ಆಲ್ಲಿನ ವಿರೋಧ ಪಕ್ಷದ ಮುಖಂಡನ ಬಗ್ಗೆ ತನ್ನ ಹೆಂಡತಿಗಿಂತಲೂ ಚೆನ್ನಾಗಿ ತಿಳಿದಿರುತ್ತಾನೆ. ವಿರೋಧ ಪಕ್ಷಗಳು ಸರಕಾರದ ಕಾರ್ಯನಿರ್ವಹಣೆಯನ್ನು ಕಾವಲು ನಾಯಿಗಳಂತೆ ಕಾಯುತ್ತವೆ.

೭. **ಶಾಸನಾಂಗ ಹಾಗೂ ಕಾರ್ಯಾಂಗದ ನಡುವಿನ ಹೊಂದಾಣಿಕೆ :** ಮಂತ್ರಿಗಳು ಶಾಸಕಾಂಗದ ಸದಸ್ಯರಾಗಿರಬೇಕಾಗಿರುವದರಿಂದ ನಿಜವಾದ ಕಾರ್ಯಾಂಗ ಮತ್ತು ಶಾಸಕಾಂಗದ ನಡುವಿನ ಜೋಡಣೆ ಅನಿವಾರ್ಯ. ಇಲ್ಲಿ ನಾವು ಅಧಿಕಾರಿಗಳ ಏಕೀಕರಣ ತತ್ವವನ್ನು ಕಾಣುತ್ತೇವೆ. ಆದರೆ ಅಧ್ಯಕ್ಷೀಯ ಕಾರ್ಯಾಂಗ ಪದ್ಧತಿಯಲ್ಲಿ ಅಧಿಕಾರಿಗಳ ಪ್ರತ್ಯೇಕೀಕರಣ ಸಿದ್ಧಾಂತವನ್ನು ಕಾಣುತ್ತೇವೆ. ಸಂಸದೀಯ ಪದ್ಧತಿಯಲ್ಲಿ ಕಾರ್ಯಾಂಗ ಹಾಗೂ ಶಾಸಕಾಂಗಗಳ ಮಧ್ಯೆ ಒಮ್ಮತದ ಸಂಬಂಧ ಹಾಗೂ ಸಹಕಾರವಿರುತ್ತದೆ. ವಾಲ್ಟ ಬಗೆಹಾಟ್ ಅವರು 'ಮಂತ್ರಿಮಂಡಲವು ಒಂದುಗೂಡಿಸುವ ಸಮಿತಿ -ರಾಜ್ಯದ ಶಾಸನಾಂಗವನ್ನು ರಾಜ್ಯದ ಕಾರ್ಯಾಂಗಕ್ಕೆ ಜೋಡಿಸುವ ಒಂದು ಕೊಂಡಿ.' ಎಂದು ಅಭಿಪ್ರಾಯಪಟ್ಟಿದ್ದಾರೆ

## ✸ ಅಧ್ಯಕ್ಷೀಯ ಸರಕಾರದ ಸ್ವರೂಪ ಮತ್ತು ಲಕ್ಷಣಗಳು

ಇದಕ್ಕೆ ಅಸಂಸದೀಯ ಸರಕಾರ ಅಥವಾ ಹೊಣೆಗಾರವಲ್ಲದ ಸರಕಾರವೆಂದೂ ಕರೆಯಲಾಗುವದು. ಇಲ್ಲಿ ಶಾಸಕಾಂಗ ಹಾಗೂ ಕಾರ್ಯಾಂಗಗಳು ಪರಸ್ಪರ ಸ್ವತಂತ್ರವಿರುತ್ತವೆ. ಅಂದರೆ ಕಾರ್ಯಾಂಗವು ಶಾಸಕಾಂಗದ ಅಧೀನದಲ್ಲಿ ಇರದೇ ಸ್ವತಂತ್ರವಾಗಿರುತ್ತದೆ. ಅದು ಶಾಸಕಾಂಗಕ್ಕೆ ಹೊಣೆಗಾರವಿರುವದಿಲ್ಲ. ಉದಾ :- ಅಮೇರಿಕೆಯ ಅಧ್ಯಕ್ಷೀಯ ಸರಕಾರವು ಮೊಟ್ಟಮೊದಲ ಬಾರಿಗೆ ಜನಾದರಣೆ ಹಾಗೂ ಯಶಸ್ಸನ್ನು ಕಂಡಿತು. ಕಾರ್ಯಾಂಗದ ಮುಖ್ಯಸ್ಥನು ಅಧ್ಯಕ್ಷನಾಗಿರುವ ಆಡಳಿತ ಪದ್ಧತಿಯೇ ಅಧ್ಯಕ್ಷೀಯ ಕಾರ್ಯಾಂಗ (ಸರಕಾರ). ಸಂಸದೀಯ ಸರಕಾರದಲ್ಲಿ ಸಚಿವ ಸಂಪುಟವು ಕಾರ್ಯಾಂಗವು ಪ್ರತಿನಿಧಿಸುವಂತೆ ಅಧ್ಯಕ್ಷೀಯ ಕಾರ್ಯಾಂಗದಲ್ಲಿ ಅಧ್ಯಕ್ಷನು ಕಾರ್ಯಾಂಗವನ್ನು ಪ್ರತಿನಿಧಿಸುತ್ತಾನೆ.

ಜನತೆಯಿಂದ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷವಾಗಿ ಚುನಾಯಿಸಲ್ಪಟ್ಟು ನಿರ್ದಿಷ್ಟ

ಕಾಲಾವಧಿಯವರೆಗೆ ಆಡಳಿತ ನಡೆಸುವ ಅಧ್ಯಕ್ಷನ ಆಡಳಿತವನ್ನು ಅಧ್ಯಕ್ಷೀಯ ಸರಕಾರವೆನ್ನುವರು. ಇಲ್ಲಿ ಅಧ್ಯಕ್ಷನು ಶಾಸಕಾಂಗದ ಸದಸ್ಯನಾಗಿರುವದಿಲ್ಲ. ಶಾಸಕಾಂಗಕ್ಕೆ ಅವನು ಜವಾಬ್ದಾರನಾಗಿರುವದಿಲ್ಲ. ಅವನ ಅಧಿಕಾರವಧಿಯು ಸಂವಿಧಾನದಿಂದ ನಿರ್ಧರಿತವಾಗಿರುತ್ತದೆ. ಅಮೇರಿಕೆಯ ಅಧ್ಯಕ್ಷನ ಕಾಲಾವಧಿ ನಾಲ್ಕು ವರ್ಷಗಳು. ಸಾಮಾನ್ಯವಾಗಿ ಅವನನ್ನು ಅಧಿಕಾರವಧಿ ಮುಗಿಯುವುದರೊಳಗೆ ಪದಚ್ಯುತ-ಗೊಳಿಸುವಂತಿಲ್ಲ. ಆದರೆ ಕಾಂಗ್ರೇಸ್ (ಕೇಂದ್ರದ ಶಾಸನಾಂಗ) ಅಧ್ಯಕ್ಷರನ್ನು ದೋಷಾರೋಪಣೆಯನ್ನು ಮಾಡುವದರ ಮೂಲಕ ೨/೩ ಬಹುಮತದಿಂದ ತೆಗೆದುಹಾಕಬಹುದು. ಅಧ್ಯಕ್ಷನು ತನಗೆ ಇಷ್ಟ ಬಂದವರನ್ನು ಸಹಾಯಕರನ್ನಾಗಿ ಅಥವಾ ಕಾರ್ಯದರ್ಶಿಗಳನ್ನಾಗಿ ನೇಮಿಸಿಕೊಳ್ಳಬಹುದು. ಅಧ್ಯಕ್ಷನಿಗೆ ಇಷ್ಟವಿರುವಷ್ಟು ಕಾಲ ಅವರು ಅಧಿಕಾರದಲ್ಲಿರುವರು. ಅವರು ಅಧ್ಯಕ್ಷರಿಗೆ ಮಾತ್ರ ಹೊಣೆಗಾರರು. ಈ ಪದ್ಧತಿಯಲ್ಲಿ ಸರಕಾರದ ಮೂರು ಅಂಗಗಳಾದ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗಗಳು ಸ್ವತಂತ್ರ ಹಾಗೂ ಸಮಾನ ಸ್ಥಾನಮಾನಗಳನ್ನು ಹೊಂದಿರುತ್ತವೆ. ಈ ಪದ್ಧತಿಗೆ ತಳಹದಿ ಮೊಟೆಸ್ಕ್ಯೂರವರ ಅಧಿಕಾರ ಪ್ರತ್ಯೇಕತಾ ಸಿದ್ಧಾಂತ.

**ಬಗ್‌ಹಾಟ್** ಎಂಬ ಲೇಖಕರ ಪ್ರಕಾರ ಸಂಸದೀಯ ಪದ್ಧತಿಯ ಸರಕಾರದ ವೈಶಿಷ್ಟ್ಯವೆಂದರೆ ಶಾಸಕಾಂಗ ಹಾಗೂ ಕಾರ್ಯಾಂಗಗಳ ನಡುವಿನ ಪರಸ್ಪರ ಹೊಂದಾಣಿಕೆ ಹಾಗೂ ಅವಲಂಬನೆ. ಆದರೆ ಅವುಗಳ ಸ್ವತಂತ್ರ ಅಧಿಕಾರಗಳ ವಿಶಿಷ್ಟತೆಯೇ ಅಧ್ಯಕ್ಷೀಯ ಪದ್ಧತಿಯ ಲಕ್ಷಣ.

ಅಮೇರಿಕೆಯಲ್ಲಿ ಅಧ್ಯಕ್ಷೀಯ ಸರಕಾರ ಸ್ಥಾಪನೆಯಾಗಲು ಕೆಲವೊಂದು ಕಾರಣಗಳಿವೆ. ಇಂಗ್ಲೆಂಡಿನ ಮೂರನೆ ಜಾರ್ಜನ ಸರಕಾರದ ವಿರುದ್ಧ ಹೋರಾಟಮಾಡಿದ್ದ ಅಮೇರಿಕೆಯ ಸಂವಿಧಾನದ ಮೂಲ ಪುರುಷರಿಗೆ ಬ್ರಿಟನ್ನಿನ ಪಕ್ಷಪದ್ಧತಿಯ ಬಗ್ಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ. ಅದು ಅಮೇರಿಕಾದ ಏಕತೆ ಮತ್ತು ಸಮಗ್ರತೆಗಳಿಗೆ ಹಾನಿಕಾರಕವೆಂದು ಅವರು ಬಗೆದಿದ್ದರು. ಬ್ರಿಟೀಷ್ ವಿರೋಧಿಭಾವನೆಯೆ ಅಲ್ಲಿ ಅಧ್ಯಕ್ಷೀಯ ಪದ್ಧತಿಯ ಸರಕಾರದ ಸ್ಥಾಪನೆಗೆ ಮುಖ್ಯ ಪ್ರೇರಣೆಯಾಗಿತ್ತು.

**ಅಧ್ಯಕ್ಷೀಯ ಸರಕಾರದ ಲಕ್ಷಣಗಳು**

೧. ಅಧಿಕಾರ ಪ್ರತ್ಯೇಕತೆ : ಅಧ್ಯಕ್ಷೀಯ ಸರಕಾರವು ಮೊಂಟೆಸ್ಕ್ಯೂರವರ ಅಧಿಕಾರ ಪ್ರತ್ಯೇಕತಾ ಸಿದ್ಧಾಂತವನ್ನು ಆಧರಿಸಿದೆ. ಅಮೇರಿಕೆಯ ಸಂವಿಧಾನದ ಎರಡನೆಯ ವಿಧಿಯ ಪ್ರಕಾರ 'ಅಮೇರಿಕಾ ಸಂಯುಕ್ತ ಸಂಸ್ಥಾನದ ನಿರ್ವಾಹಕ ಅಧಿಕಾರಗಳು ಅಧ್ಯಕ್ಷರ ಕೈಯಲ್ಲಿ ಅಡಕವಾಗಿರಬೇಕು 'ಎಂದು ಹೇಳುತ್ತದೆ. ಅಧಿಕಾರ ಪ್ರತ್ಯೇಕತಾ ಸಿದ್ಧಾಂತದ ಪ್ರಕಾರ, ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ಪರಸ್ಪರ ಸ್ವತಂತ್ರವಾಗಿದ್ದು

ನಿರ್ದಿಷ್ಟವಾಗಿ ಶಾಸನಾಂಗವು ಶಾಸನ ರಚನೆಯನ್ನು, ಕಾರ್ಯಾಂಗವು ಕಾನೂನು ನಿರ್ವಹಣೆಯನ್ನು ಮತ್ತು ನ್ಯಾಯಾಂಗವು ನ್ಯಾಯ ವಿಶ್ಲೇಷಣಾಕಾರ್ಯವನ್ನು ನಿರ್ವಹಿಸುತ್ತದೆ. ಅಧಿಕಾರ ಕೇಂದ್ರೀಕರಣವು ಅಪಾಯಕರವಾಗಿದ್ದು ಅದನ್ನು ಕ್ರಮಪಡಿಸುವ ಸಲುವಾಗಿ ಸರಕಾರದ ಮೂರೂ ಅಂಗಗಳನ್ನು ಸ್ವತಂತ್ರವಾಗಿ ರಚಿಸಲ್ಪಟ್ಟಿದೆ. ಜೇಮ್ಸ್ ಮೆಡಿಸನ್ ತಮ್ಮ 'ಪೆಡರಲಿಸ್ಟ್' ಗ್ರಂಥದಲ್ಲಿ 'ಶಾಸಕೀಯ, ನಿರ್ವಾಹಕ ಮತ್ತು ನ್ಯಾಯಿಕ ಅಧಿಕಾರಗಳು ಕ್ರೋಢೀಕೃತವಾಗಿ ಒಬ್ಬರ ಕೈಯಲ್ಲಿದ್ದರೆ ಅಂತಹ ವ್ಯವಸ್ಥೆಯನ್ನು ಸೂಕ್ತವಾಗಿ ನಿರಂಕುಶಾಧಿಕಾರವೆಂದು ಕರೆಯಬಹುದು' ಎಂದಿದ್ದಾರೆ.

ಇಲ್ಲಿ ಅಧ್ಯಕ್ಷನು ಶಾಸನಾಂಗದಿಂದ ಸ್ವತಂತ್ರನಾಗಿರುತ್ತಾನೆ. ಅವನು ಶಾಸನಾಂಗದ ಸದಸ್ಯನಲ್ಲ. ಅದಕ್ಕೆ ಹೊಣೆಯಾಗಿರುವದಿಲ್ಲ ಹಾಗೂ ಅದರಿಂದ ನಿರ್ದೇಶನ ಪಡೆಯುವದಿಲ್ಲ. ಅವನ ಅಧಿಕಾರವು ಶಾಸನಾಂಗದ ಬೆಂಬಲದ ಮೇಲೆ ನಿಂತಿರುವದಿಲ್ಲ. ಶಾಸನಾಂಗವು ಅವನನ್ನು ಅಧಿಕಾರದಿಂದ ತೆಗೆದುಹಾಕುವಂತಿಲ್ಲ. ರಾಷ್ಟ್ರಾಧ್ಯಕ್ಷನು ಶಾಸನಾಂಗವನ್ನು ವಿಸರ್ಜಿಸುವ ಅಧಿಕಾರವನ್ನು ಹೊಂದಿರುವದಿಲ್ಲ. ಅದು ತನ್ನ ಅಧಿಕಾರಾವಧಿ ಮುಗಿಯುವವರೆಗೂ ಮುಂದುವರಿಯುತ್ತದೆ. ಅಧ್ಯಕ್ಷ ಹಾಗೂ ಆತನ ಕಾರ್ಯದರ್ಶಿಗಳು (ಮಂತ್ರಿಗಳು) ಕೇವಲ ಕಾರ್ಯಾಂಗದ ಕರ್ತವ್ಯಗಳನ್ನು ಪೂರೈಸುತ್ತಾರೆ. ಅವರಿಗೆ ಶಾಸನಾಂಗದಲ್ಲಿ ಮಸೂದೆಗಳನ್ನು ಮಂಡಿಸುವ ಕಾರ್ಯಕಲಾಪಗಳಲ್ಲಿ ಭಾಗವಹಿಸುವ ಅಧಿಕಾರವಿಲ್ಲ. ಅವರು ಶಾಸನಾಂಗದ ಸದಸ್ಯರು ಅಲ್ಲ. ಕಾನೂನುಗಳು ಅಗತ್ಯವೆನಿಸಿದರೆ ಅದರ ಬಗೆಗೆ ಅವರು ಶಾಸನಾಂಗಕ್ಕೆ ತಿಳಿಸಬಹುದು.

**೨. ರಾಷ್ಟ್ರದ ಮುಖ್ಯಸ್ಥನೇ ನಿಜವಾದ ಕಾರ್ಯನಿರ್ವಾಹಕ :** ಅಧ್ಯಕ್ಷೀಯ ಪದ್ಧತಿಯಲ್ಲಿ ಅಧ್ಯಕ್ಷನು ಪ್ರಜೆಗಳಿಂದ ಚುನಾಯಿತನಾದ ನೈಜ ಕಾರ್ಯನಿರ್ವಾಹಕ-ನಾಗಿರುತ್ತಾನೆ. ಆತನ ಅಧಿಕಾರಗಳು ನೈಜ ಆಗಿರುತ್ತವೆ. ಹೀಗೆ ರಾಷ್ಟ್ರದ ಪ್ರಮುಖನೇ ಸರಕಾರದ (ಕಾರ್ಯಾಂಗ) ಪ್ರಮುಖನಾಗಿರುತ್ತಾನೆ. ಉದಾ : ಅಮೇರಿಕಾದ ಅಧ್ಯಕ್ಷನು ರಾಷ್ಟ್ರದ ಪ್ರಮುಖನು ಹೌದು, ಸರಕಾರದ ಪ್ರಮುಖನು ಹೌದು. ಆದ್ದರಿಂದ ಈ ಪದ್ಧತಿಯಲ್ಲಿ ನಾಮಮಾತ್ರ ಮತ್ತು ನೈಜಕಾರ್ಯ ನಿರ್ವಾಹಕರ ನಡುವಣ ವ್ಯತ್ಯಾಸದ ಪ್ರಶ್ನೆ ಉದ್ಭವಿಸುವದಿಲ್ಲ.

**೩. ನಿರ್ದಿಷ್ಟಅಧಿಕಾರವಧಿ :-** ಅಧ್ಯಕ್ಷೀಯ ಕಾರ್ಯನಿರ್ವಾಹಕನ ಅಧಿಕಾರವಧಿ-ಯನ್ನು ಸಂವಿಧಾನವೇ ಗೊತ್ತುಪಡಿಸುತ್ತದೆ. ಶಾಸನಸಭೆಯಲ್ಲಿ ಬಹುಮತ ಹೊಂದಿರಲಿ ಅಥವಾ ಇಲ್ಲದಿರಲಿ ಅಧ್ಯಕ್ಷ ಅಧಿಕಾರದಲ್ಲಿ ಮುಂದುವರಿಯುತ್ತಾನೆ. ಆತ ಮತದಾರರಿಗೆ ನೇರವಾಗಿ ಹೊಣೆಯಾಗಿರುತ್ತಾನೆ. ಶಾಸಕಾಂಗದ ಅಧೀನದಲ್ಲಿರದೇ ಸ್ವತಂತ್ರನಾಗಿ

ಇರುತ್ತಾನೆ ಹಾಗೂ ತನ್ನ ಅಧಿಕಾರವನ್ನು ನೇರವಾಗಿ ಸಂವಿಧಾನ ದಿಂದಲೇ ಪಡೆಯುತ್ತಾನೆ. ಉದಾ :- ಅಮೇರಿಕೆಯ ಅಧ್ಯಕ್ಷನ ಅಧಿಕಾರಾವಧಿ ೪ ವರ್ಷಗಳು. ಈ ೪ ವರ್ಷಗಳ ಅವಧಿಯೊಳಗೆ ಅವನನ್ನು ಅಧಿಕಾರದಿಂದ ತೆಗೆಯುವ ಹಾಗಿಲ್ಲ. ವಿಶೇಷ ಅಪರಾಧ ಮಾಡಿದಲ್ಲಿ ಮಾತ್ರ ದೋಷಾರೋಪಣ (ಮಹಾಭಿಯೋಗ) ವಿಧಾನದ ಮೂಲಕ ಮಾತ್ರ ಅವನನ್ನು ಅಧಿಕಾರದಿಂದ ತೆಗೆಯಬಹುದು.

**೪. ಅಧ್ಯಕ್ಷರಿಗೆ ಕಾರ್ಯದರ್ಶಿಗಳು ಆಧೀನರಾಗಿರುತ್ತಾರೆ :** ಅಧ್ಯಕ್ಷರ ಕಾರ್ಯದರ್ಶಿಗಳಾಗಿರುವ ಮಂತ್ರಿಮಂಡಲದ ಸದಸ್ಯರು ಅಧ್ಯಕ್ಷರಿಂದ ನೇಮಿಸಲ್ಪಟ್ಟು ಅಧ್ಯಕ್ಷರ ನಂಬುಗೆಗೆ ಪಾತ್ರರಾಗಿರುವವರೆಗೆ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಾರೆ. ಕಾರ್ಯದರ್ಶಿಗಳನ್ನು ನೇಮಿಸುವ ಅಥವಾ ತೆಗೆದುಹಾಕುವ ಅಧಿಕಾರ ಅಧ್ಯಕ್ಷರಿಗಿದ್ದು ಕಾರ್ಯದಕ್ಷಕರಲ್ಲದ ಅಥವಾ ತಮಗೆ ವಿರುದ್ಧವಾಗಿ ನಡೆದುಕೊಳ್ಳುವ ಕಾರ್ಯದರ್ಶಿಗಳನ್ನು ಯಾವುದೇ ಕಾರಣ ನೀಡದೇ ವಜಾಮಾಡಬಹುದು. ಕಾರ್ಯದರ್ಶಿಗಳು ಕಾಂಗ್ರೇಸಿಗಾಗಲಿ ಅಥವಾ ಪ್ರಜೆಗಳಿಗಾಗಲಿ ಜವಾಬ್ದಾರರಾಗದೇ ಕೇವಲ ಅಧ್ಯಕ್ಷರಿಗೆ ಮಾತ್ರ ಜವಾಬ್ದಾರರಾಗಿರುತ್ತಾರೆ. ವಾಲ್ಟರ್ ಬ್ಯಾಗೆಹಾಟ್ ಅಧ್ಯಕ್ಷರ ಮಂತ್ರಿಮಂಡಳವನ್ನು ಅವರ ಸಂಸಾರವೆಂದು ಕರೆದಿದ್ದಾರೆ.

**೫. ಕಾರ್ಯಾಂಗವು ಶಾಸಕಾಂಗಕ್ಕೆ ಜವಾಬ್ದಾರಿಯಲ್ಲ :** ಅಧ್ಯಕ್ಷೀಯ ಸರಕಾರದಲ್ಲಿ ಅಧ್ಯಕ್ಷರು ಪ್ರಜೆಗಳಿಂದ ನೇರವಾಗಿ ಆಯ್ಕೆಯಾಗಿದ್ದು ಶಾಸಕಾಂಗಕ್ಕೆ ಜವಾಬ್ದಾರರಾಗಿರುವದಿಲ್ಲ ಹಾಗೂ ಶಾಸನಾಂಗದ ಕಲಾಪಗಳಲ್ಲಿ ಭಾಗವಹಿಸುವಂತಿಲ್ಲ. ಅಧ್ಯಕ್ಷರು ಶಾಸನಾಂಗದಲ್ಲಿ ಮಸೂದೆಗಳನ್ನು ಪರಿಚಯಿಸುವ ಅಥವಾ ಮಸೂದೆಗಳಿಗೆ ಶಾಸನಾಂಗದ ಅಂಗೀಕಾರ ಪಡೆದುಕೊಳ್ಳುವ ಅವಶ್ಯಕತೆ ಇಲ್ಲ. ಅಮೇರಿಕಾದ ಸಂವಿಧಾನಕ್ಕೆ ಮತ್ತು ಪ್ರಜೆಗಳನ್ನು ಬಿಟ್ಟು ಯಾರಿಗೂ ಅಧ್ಯಕ್ಷರು ಹೊಣೆಯಾಗಿರುವದಿಲ್ಲ. ಲಾಸ್ಕಿ ಎಂಬ ಲೇಖಕರು ಅಧ್ಯಕ್ಷಸ್ಥಾನವನ್ನು 'ಅಧ್ಯಕ್ಷರೇ ಎಲ್ಲ ತೀರ್ಮಾನಗಳಿಗೂ ಅಂತಿಮ ಆಧಾರ' ಎಂದು ಹೇಳಿದ್ದಾರೆ.

## ಈ. ಏಕಾತ್ಮಕ ಮತ್ತು ಸಂಯುಕ್ತ ಸರಕಾರ

ಪಿಠಿಕೆ : ಆಧುನಿಕ ಸರಕಾರ ಪದ್ಧತಿಗಳನ್ನು ಏಕಾತ್ಮಕ ಮತ್ತು ಸಂಯುಕ್ತ ಪದ್ಧತಿ ಎಂದು ವರ್ಗೀಕರಿಸಲಾಗಿದೆ. ಅಧಿಕಾರ ಕೇಂದ್ರೀಕರಣ ಮತ್ತು ಅಧಿಕಾರ ವಿಕೇಂದ್ರೀಕರಣ ತತ್ವಗಳ ಆಧಾರದ ಮೇಲೆ ಅಂದರೆ ಕೇಂದ್ರಸರಕಾರ ಮತ್ತು ಸ್ಥಳೀಯ ಸರಕಾರಗಳ ನಡುವಿನ ಅಧಿಕಾರ ಹಂಚಿಕೆ ಮತ್ತು ಸಂಬಂಧದ ಸ್ವರೂಪದ ಮೇಲಿಂದ ಸಾಮಾನ್ಯವಾಗಿ ಸರಕಾರಗಳನ್ನು ಕೇಂದ್ರೀಕೃತ ಮತ್ತು ಸಂಯುಕ್ತ ಸರಕಾರಗಳೆಂದು ವಿಂಗಡಿಸಲಾಗಿದೆ.

ಏಕಾತ್ಮಕ ಸರಕಾರದ ಅರ್ಥ ವಿವರಣೆ : ಕೇಂದ್ರೀಕೃತ ಸರಕಾರದ ಪದ್ಧತಿಯಲ್ಲಿರುವಲ್ಲಿ

ಸರಕಾರದ ಎಲ್ಲಾ ಅಧಿಕಾರವು ಶಾಸನಬದ್ಧವಾದ ಏಕೈಕ ಕೇಂದ್ರಸರಕಾರದಲ್ಲಿ ಕೇಂದ್ರೀಕೃತವಾಗಿರುತ್ತದೆ. ಈ ವ್ಯವಸ್ಥೆ ಇರುವಲ್ಲಿ ಒಂದಕ್ಕಿಂತ ಹೆಚ್ಚು ಸರಕಾರಗಳಿರುವದು ಸಾಧ್ಯವಿಲ್ಲ. ಆಡಳಿತ ಅನುಕೂಲಕ್ಕಾಗಿ ದೇಶವನ್ನು ವಲಯ, ಪ್ರಾಂತ್ಯ, ಜಿಲ್ಲೆ, ನಗರ,ಗ್ರಾಮಗಳಾಗಿ ವಿಭಾಗಿಸಲಾಗಿರುತ್ತದೆ. ಆದರೆ ಈ ವಿಭಾಗಗಳಿಗೆ ಸ್ವತಂತ್ರ ಅಧಿಕಾರವಿರುವದಿಲ್ಲ. ಕೇಂದ್ರ ಸರಕಾರ ಆವುಗಳಿಗೆ ಕೆಲವು ನಿರ್ಧಿಷ್ಟ ಅಧಿಕಾರಗಳನ್ನು ಕೊಟ್ಟಿರುತ್ತದೆ. ಇವುಗಳನ್ನು ಆಡಳಿತಾತ್ಮಕ ಘಟಕಗಳೆಂದು ಕರೆಯಬಹುದು. ಇವುಗಳನ್ನು ಕೇಂದ್ರ ಸರಕಾರದ ಪ್ರತಿನಿಧಿಗಳು ಮಾತ್ರ ಎಂದು ಹೇಳಬಹುದು. ಕೇಂದ್ರ ಸರಕಾರವು ಇವುಗಳ ಅಧಿಕಾರವನ್ನು ಯಾವ ಘಳಿಗೆಯಲ್ಲಾದರೂ ಹಿಂತೆಗೆದುಕೊಳ್ಳಬಹುದು. ಇವುಗಳನ್ನು ಅಸ್ತಿತ್ವಕ್ಕೆ ತರುವ ಹಾಗೂ ರದ್ದುಪಡಿಸುವ ಅಧಿಕಾರ ಕೇಂದ್ರ ಸರಕಾರಕ್ಕೆ ಇರುತ್ತದೆ. ಹೀಗೆ ಕೇಂದ್ರೀಕೃತ ಪದ್ಧತಿಯಿರುವಲ್ಲಿ ಸರಕಾರದ ಸಮಸ್ಥ ಅಧಿಕಾರವನ್ನು ಒಂದೇ ಕೇಂದ್ರದಿಂದ ಚಲಾಯಿಸಲಾಗುತ್ತದೆ. ದೇಶಕ್ಕೆಲ್ಲ ಒಂದೇ ಸರ್ವೋನ್ನತ ಶಾಸಕಾಂಗ, ಒಂದೇ ಸರ್ವೋನ್ನತ ಕಾರ್ಯಾಂಗ ಹಾಗೂ ಒಂದೇ ಸರ್ವೋನ್ನತ ನ್ಯಾಯಾಂಗ ಇರುತ್ತದೆ.

ಉದಾ :- ಇಂಗ್ಲೆಂಡ್, ಫ್ರಾನ್ಸ, ಬೆಲ್ಜಿಯಂ, ಇಟಲಿ, ಜಪಾನ್, ಇತ್ಯಾದಿ.

ಏಕಾತ್ಮಕ ವ್ಯವಸ್ಥೆಯನ್ನು ವಿವಿಧ ಲೇಖಕರು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ.

**ಹರ್ಮನ್ ಫೈನರ್**ಅವರ ಪ್ರಕಾರ "ಎಲ್ಲ ಅಧಿಕಾರ ಶಕ್ತಿಗಳು ಏಕೈಕ ಕೇಂದ್ರದಲ್ಲಿ ಒಗ್ಗೂಡಿದ್ದು ಇಡೀ ಪ್ರದೇಶದ ಮೇಲೆ ತನ್ನಿಚ್ಛೆಯಂತೆ ತನ್ನ ಪ್ರತಿನಿಧಿಗಳ ಮೂಲಕ ಶಾಸನಬದ್ಧ ಆಡಳಿತ ನಡೆಸುವ ವ್ಯವಸ್ಥೆಯೇ ಏಕಾತ್ಮಕ ರಾಜ್ಯ ಪದ್ಧತಿ".

**ಸಿ. ಎಫ್. ಸ್ಟ್ರಾಂಗ್** " ಏಕಾತ್ಮಕ ರಾಜ್ಯ ವ್ಯವಸ್ಥೆ ಎರಡು ಮುಖ್ಯ ಲಕ್ಷಣಗಳೆಂದರೆ ಕೇಂದ್ರ ಪಾರ್ಲಿಮೆಂಟಿನ ಶ್ರೇಷ್ಠತೆ ಹಾಗೂ ಇತರ ಪರಮಾಧಿಕಾರವುಳ್ಳ ಸಂಸ್ಥೆಗಳ ಅಭಾವ."

**ಗಾರ್ನರ್** "ಸರಕಾರದ ಸಮಸ್ತ ಅಧಿಕಾರಗಳೆಲ್ಲವೂ ಸಂವಿಧಾನದ ಮೂಲಕ ಏಕೈಕ ಕೇಂದ್ರ, ಅಂಗಕ್ಕೆ ಅಥವಾ ಅಂಗಗಳಿಗೆ ಕೊಡಲ್ಪಟ್ಟಿದ್ದು ಸ್ಥಳೀಯ ಸರಕಾರಗಳು ಇದರಿಂದಲೇ ತಮ್ಮ ಅಧಿಕಾರವನ್ನು,ಅಷ್ಟೇಕೆ ಅಸ್ತಿತ್ವವನ್ನು ಪಡೆದಿರುತ್ತವೆ. ಇಂಥ ವ್ಯವಸ್ಥೆಯೇ ಏಕಾತ್ಮಕ ಸರಕಾರ ಪದ್ಧತಿ.

**ಏಕಾತ್ಮಕ ಸರಕಾರ ಪದ್ಧತಿಯ ಲಕ್ಷಣಗಳು**

**೧. ಅಧಿಕಾರದ ಕೇಂದ್ರೀಕರಣ :** ಏಕಾತ್ಮಕ ಪದ್ಧತಿಯಿರುವ ರಾಜ್ಯಪದ್ದತಿಯಲ್ಲಿ ಸರಕಾರದ ಎಲ್ಲ ಅಧಿಕಾರಗಳು ಶಾಸನಬದ್ಧವಾಗಿ ಏಕಮೇವ ಕೇಂದ್ರ ಸರಕಾರದಲ್ಲಿ ಕೇಂದ್ರೀಕೃತವಾಗಿರುತ್ತವೆ .ಎಲ್ಲಅಧಿಕಾರಗಳನ್ನು ಕೇಂದ್ರ ಸರಕಾರವೇ

ಚಲಾಯಿಸುತ್ತದೆ. ಕೇಂದ್ರ ಸರಕಾರದ ಅಧಿಕಾರಕ್ಕೆ ಮಿತಿಯಿರುವದಿಲ್ಲ. ಕೇಂದ್ರೀಕೃತ ಸರಕಾರ ಪದ್ಧತಿಯಲ್ಲಿ ಕೇಂದ್ರ ಸರಕಾರ ಮತ್ತು ಪ್ರಾಂತೀಯ ಸರಕಾರಗಳ ನಡುವೆ ಅಧಿಕಾರಗಳು ವಿಭಾಗಿಸಲ್ಪಟ್ಟಿರುವದಿಲ್ಲ. ಆದರೆ ಸಂಯುಕ್ತ ರಾಜ್ಯ ಪದ್ಧತಿಯಲ್ಲಿ ಸಂವಿಧಾನದ ಮೂಲಕ ಸರಕಾರದ ಅಧಿಕಾರಗಳು ಕೇಂದ್ರ ಮತ್ತು ರಾಜ್ಯ ಸರಕಾರಗಳಲ್ಲಿ ವಿಭಾಗಿಸಲ್ಪಟ್ಟಿರುತ್ತವೆ.

**೨. ಆಡಳಿತ ಅನುಕೂಲತೆಗಾಗಿ ಪ್ರಾಂತೀಯ ಸರಕಾರಗಳ ರಚನೆ :** ಆಡಳಿತೆಯ ಅನುಕೂಲಕ್ಕಾಗಿ ಕೇಂದ್ರ ಸರಕಾರವು ರಾಜ್ಯವನ್ನು ವಿವಿಧ ವರ್ಗದ ಸ್ಥಳೀಯ ಘಟಕಗಳಾಗಿ ವಿಭಾಗಿಸಬಹುದು. ಇಂತಹ ಸ್ಥಳೀಯ ಘಟಕಗಳಾಗಿ ಕೇಂದ್ರವು ಕೆಲವು ನಿರ್ದಿಷ್ಟ ಅಧಿಕಾರಗಳನ್ನು ಕೊಟ್ಟಿರುತ್ತದೆ. ಅವುಗಳಿಗೆ ಆಜ್ಞೆಗಳನ್ನು ನೀಡುತ್ತದೆ. ಆದ್ದರಿಂದ ಈ ಘಟಕಗಳನ್ನು ಕೇಂದ್ರದ ಕೈಕೆಳಗಿರುವ ಪ್ರತಿನಿಧಿಗಳೆಂದು ಹೇಳಬಹುದು. ಅವುಗಳನ್ನು ರಚಿಸುವದು ಕೇಂದ್ರ ಸರಕಾರವಾದ್ದರಿಂದ ಅವುಗಳ ಸ್ವರೂಪವನ್ನು ತನಗೆ ಇಷ್ಟವಾದ ರೀತಿಯಲ್ಲಿ ಬದಲಾಯಿಸುವ ಹಕ್ಕನ್ನು ಅದೇ ಪಡೆದಿರುತ್ತದೆ.

**೩. ಸ್ಥಳೀಯ ಘಟಕಗಳಿಗೆ ಸ್ವಯಮಾಧಿಕಾರವಿಲ್ಲ :** ಸ್ಥಳೀಯ ಘಟಕಗಳಿಗೆ ಕೇಂದ್ರವು ಕೆಲವು ನಿರ್ದಿಷ್ಟ ಅಧಿಕಾರಗಳನ್ನು ಕೊಟ್ಟಿರುತ್ತದೆ. ಆದರೆ ಅವುಗಳು ಸಂಪೂರ್ಣವಾಗಿ ಕೇಂದ್ರದ ಹತೋಟಿಯಲ್ಲಿರುತ್ತವೆ. ಅವುಗಳಿಗೆ ಸ್ವಯಮಾಧಿಕಾರವಾಗಲಿ, ಸ್ವಾತಂತ್ರ್ಯವಾಗಲಿ ಇರುವದಿಲ್ಲ . ಅವುಗಳ ರಚನೆ ಹಾಗೂ ಅಸ್ಥಿತ್ವ ಕೇಂದ್ರ ಸರಕಾರದ ಇಚ್ಛೆಯನ್ನು ಅವಲಂಬಿಸಿರುತ್ತದೆ. ಈ ಘಟಕಗಳು ಹೀಗೆ ಕೇಂದ್ರ ವ್ಯವಸ್ಥೆಯ ಅಂಶಗಳಾಗಿರುತ್ತವೆ. ಅವು ಅನುಭವಿಸುವ ಅಧಿಕಾರವು ಕೇಂದ್ರದತ್ತವಾದುದೇ ಹೊರತು ಸಂವಿಧಾನದತ್ತವಾದುದಲ್ಲ.

**೪. ಸಂವಿಧಾನಕ್ಕೆ ಪರಮಾಧಿಕಾರವಿರುವದಿಲ್ಲ:** ಏಕಾತ್ಮಕ ಸರಕಾರವು ಲಿಖಿತ ಸರಕಾರವನ್ನು ಹೊಂದಿರಬಹುದು ಅಥವಾ ಹೊಂದಿಲ್ಲದೆ ಇರಬಹುದು. ಸಂವಿಧಾನವು ಪರಮಾಧಿಕಾರವನ್ನು ಹೊಂದಿರಬೇಕಾದ ಅಗತ್ಯವಿಲ್ಲ. ಉದಾ:- ಏಕಾತ್ಮಕ ಸರಕಾರವನ್ನು ಹೊಂದಿರುವ ಇಂಗ್ಲೆಂಡಿನಲ್ಲಿ ಅಲಿಖಿತ ಸಂವಿಧಾನ ಇದ್ದರೆ ಅದೇ ಪದ್ಧತಿಯ ಸರಕಾರವನ್ನು ಹೊಂದಿದ್ದರೂ ಫ್ರಾನ್ಸ್ ಲಿಖಿತ ಸಂವಿಧಾನವನ್ನು ಪಡೆದಿದೆ. ಇಂಗ್ಲೆಂಡಿನಲ್ಲಿ ಪರಮಾಧಿಕಾರವನ್ನು ಹೊಂದಿರುವದು. ಸಂಸತ್ತೇ ಹೊರತು ಸಂವಿಧಾನವಲ್ಲ. ಹಾಗೆಯೇ ಸಂವಿಧಾನ ತಿದ್ದುಪಡಿ ಮಾಡುವ ಅಧಿಕಾರವನ್ನು ಕೇಂದ್ರಸರಕಾರ ಪಡೆದಿರುತ್ತದೆ. ಊದಾ :- ಇಂಗ್ಲೆಂಡಿನಲ್ಲಿ ಕೇಂದ್ರಸರಕಾರ ಈ ಅಧಿಕಾರವನ್ನು ಪಡೆದಿದೆ.

**೫. ಅನಮ್ಯ ಮತ್ತು ನಮ್ಯ ಸಂವಿಧಾನ :** ಈ ಪದ್ಧತಿಯಲ್ಲಿ ಅಧಿಕಾರವನ್ನು ಕೇಂದ್ರ

ಹಾಗೂ ಸ್ಥಳೀಯ ಸರಕಾರಗಳ ನಡುವೆ ವಿತರಣೆ ಮಾಡುವ ಪ್ರಶ್ನೆ ಇಲ್ಲದಿರುವದರಿಂದ ಏಕಾತ್ಮಕ ಸರಕಾರ ಅನಮ್ಯ ಸಂವಿಧಾನವನ್ನು ಹೊಂದಿರಬಹುದು ಅಥವಾ ಹೊಂದಿರದೇ ಇರಬಹುದು. ಉದಾ : ಗ್ರೇಟ್ ಬ್ರಿಟನ್ ನಮ್ಯ ಸಂವಿಧಾನವನ್ನು ಹೊಂದಿದೆ. ಫ್ರಾನ್ಸ್ ಅನಮ್ಯ ಸಂವಿಧಾನವನ್ನು ಹೊಂದಿದೆ.

**೬. ಒಂದೇ ಸರಕಾರ :** ಏಕಾತ್ಮಕ ಪದ್ದತಿ ಇರುವಲ್ಲಿ ಏಕೈಕ ವ್ಯವಸ್ಥೆ ಇರುತ್ತದೆ. ದೇಶಕ್ಕೆಲ್ಲಾ ಕಾನೂನು ರಚಿಸಲು ಏಕೈಕ ಶಾಸಕಾಂಗ, ದೇಶಕ್ಕೆಲ್ಲಾ ಏಕೈಕ ಕಾರ್ಯಾಂಗ ಹಾಗೂ ಏಕೈಕ ಸರ್ವೋನ್ನತ ನ್ಯಾಯಾಂಗ ಇರುತ್ತದೆ. ಉದಾ : ಏಕಾತ್ಮಕ ಪದ್ಧತಿಯ ಸರಕಾರವಿರುವ ಇಂಗ್ಲೆಂಡಿನಲ್ಲಿ ದೇಶಕ್ಕೆಲ್ಲಾ ಕಾನೂನು ರಚಿಸಲು ಒಂದೇ ಒಂದು ಸಂಸತ್ತು ಇದೆ. ಆಡಳಿತವನ್ನು ನಡೆಸಲು ಒಂದೇ ಒಂದು ಕಾರ್ಯಾಂಗ (ಸಚಿವ ಸಂಪುಟ) ಹಾಗೂ ಒಂದು ಸರ್ವೋನ್ನತ ನ್ಯಾಯಾಂಗ (ಹೌಸ್ ಆಫ್ ಲಾರ್ಡ್ಸ್ ಸಭೆಯ ನ್ಯಾಯಾಂಗ ಸಮಿತಿ) ಇದೆ.

**೭. ವಿಶೇಷ ನ್ಯಾಯಾಂಗವಿಲ್ಲ :** ಕೇಂದ್ರ ಹಾಗೂ ಸ್ಥಳೀಯ ಸರಕಾರಗಳ ನಡುವೆ ಅಧಿಕಾರ ವ್ಯಾಪ್ತಿಯ ಬಗ್ಗೆ ಉದ್ಭವಿಸಬಹುದಾದ ವಿವಾದಗಳನ್ನು ಬಗೆಹರಿಸಲು ವಿಶೇಷ ನ್ಯಾಯಾಂಗದ ಅವಶ್ಯಕತೆ ಇಲ್ಲ. ಏಕೆಂದರೆ ಸ್ಥಳೀಯ ಸರಕಾರಗಳು ಕೇಂದ್ರ ಸರಕಾರದ ಪ್ರತಿನಿಧಿಗಳು ಮಾತ್ರವಾದ್ದರಿಂದ ಅವುಗಳು ಸ್ವಯಂ ಅಧಿಕಾರಗಳನ್ನಾಗಲಿ ಇಲ್ಲವೇ ಸ್ವಾತಂತ್ರ್ಯವನ್ನಾಗಲಿ ಪಡೆದಿರುವದಿಲ್ಲ. ಆದ್ದರಿಂದ ವಿವಾದಗಳು ಉದ್ಭವಿಸಲು ಆಸ್ಪದವಿಲ್ಲ.

## *ಸ್ವರೂಪ ಮತ್ತು ಗುಣಲಕ್ಷಣಗಳು

**ಅರ್ಥವಿವರಣೆ :** ಆಧುನಿಕ ರಾಜ್ಯಗಳ ಬೆಳವಣಿಗೆಯಲ್ಲಿ ಇದು ಮಹತ್ವದ ಪಾತ್ರವನ್ನು ಹೊಂದಿದೆ. ಇದು ಅಮೇರಿಕೆಯ ಶೋಧನೆಯಾಗಿರುತ್ತದೆ. ಗ್ರೀಸ್ ಹಾಗೂ ಇಟಲಿಯಲ್ಲಿ ಕೆಲವೊಂದು ಮಟ್ಟಿಗೆ ಸಂಯುಕ್ತ ರಾಜ್ಯದ ವಿಚಾರವಿತ್ತು. ಸಂಯುಕ್ತ ರಾಜ್ಯದ ವಿಚಾರ ರಾಜ್ಯ ರಾಜ್ಯಗಳಿಂದ ವಿಭಿನ್ನವಾಗಿರುತ್ತದೆ. ಇಂಗ್ಲೀಷ್ ಪದ 'ಫೆಡರೇಶನ್' ಅಂದರೆ ಸಂಯುಕ್ತ ರಾಜ್ಯ ಪದ್ಧತಿ. ಈ ಪದವು ಫೋಡಸ್ ಎಂಬ ಲ್ಯಾಟಿನ್ ಪದದಿಂದ ಬಂದಿದೆ. ಇದರ ಅರ್ಥ ಒಪ್ಪಂದ ಅಥವಾ ಕರಾರು ಎಂದರ್ಥ. ಆದ್ದರಿಂದ ಫೆಡರೇಶನ್ ಅಂದರೆ ಹಲವು ರಾಜ್ಯಗಳ ಒಂದು ಒಕ್ಕೂಟ ಅಥವಾ ಸಂಘ. ಹಲವಾರು ಪ್ರಾಂತಗಳು ತಮ್ಮ ಪರಮಾಧಿಕಾರವನ್ನು ತ್ಯಜಿಸಿ ಒಂದೇ ಸಾಮಾನ್ಯ ಪರಮಾಧಿಕಾರದಡಿಯಲ್ಲಿ ನಿಗದಿತ ಸ್ವಾಯತ್ತತೆಯೊಂದಿಗೆ ಕೆಲಸ ಮಾಡಲು ಒಪ್ಪಿಕೊಂಡಾಗ ಸಂಯುಕ್ತ ವ್ಯವಸ್ಥೆಯು ಜಾರಿಗೆ ಬರುತ್ತದೆ. ಕೇಂದ್ರ ಮತ್ತು ಪ್ರಾಂತೀಯ ಸರಕಾರಗಳು ತಮ್ಮ ಅಧಿಕಾರವನ್ನು ಸಂವಿಧಾನದಿಂದ ಪಡೆದು ತಮ್ಮ ತಮ್ಮ ಕ್ಷೇತ್ರ ವ್ಯಾಪ್ತಿಯಲ್ಲಿ ಸ್ವತಂತ್ರವಾಗಿ ಹೊಂದಾಣಿಕೆ ಮತ್ತು ಸಹಕಾರ ಸ್ಫೂರ್ತಿಯಿಂದ ಕಾರ್ಯನಿರ್ವಹಿಸಬೇಕಾಗುತ್ತದೆ. ಉದಾ: ಅಮೇರಿಕಾ, ಸ್ವಿಟ್ಜರ್‌ಲ್ಯಾಂಡ್, ಇತ್ಯಾದಿ.

ಸಂಯುಕ್ತ ರಾಜ್ಯಪದ್ಧತಿಯನ್ನು ಎರಡು ರೀತಿಯಲ್ಲಿ ಸ್ಥಾಪಿಸಬಹುದು.

೧. ಕೇಂದ್ರಾಕರ್ಷಿತ ಶಕ್ತಿಯ ಮೂಲಕ ಮೂಲತಃ ಸ್ವತಂತ್ರ ವಾಗಿರುವ ಹಲವು ರಾಜ್ಯಗಳು ತಮ್ಮ ಆರ್ಥಿಕ ಅಭ್ಯುದಯಕ್ಕಾಗಿಯೋ ಅಥವಾ ರಕ್ಷಣೆಗಾಗಿಯೋ ಸ್ವಯಂಪ್ರೇರಣೆಯಿಂದ ಒಟ್ಟಾಗಿ ಕೂಡಲು ಬಯಸಿದಾಗ (ಕೇಂದ್ರಾಕರ್ಷಿತ) ಸಂಯುಕ್ತ ರಾಜ್ಯವು ಸ್ಥಾಪಿತ ವಾಗುತ್ತದೆ. ಒಂದು ಹೊಸ ಒಕ್ಕೂಟ ರಚನೆಗೆ ಕಾರಣವಾಗುವ ಈ ರಾಜ್ಯಗಳು ತಾವು ಮೊದಲು ಅನುಭವಿಸುತ್ತಿದ್ದ ಕೆಲವು ಅಧಿಕಾರಗಳನ್ನು ಕೇಂದ್ರ ಅಥವಾ ಸಂಯುಕ್ತ ಸರಕಾರಕ್ಕೆ ಒಪ್ಪಿಸುತ್ತವೆ. ಉದಾ:- ಅಮೇರಿಕಾ.ಸ್ವಿಟ್ಜರ್‌ಲ್ಯಾಂಡ್,ಮುಂತಾದ ದೇಶಗಳು.

೨. ಕೇಂದ್ರ ತ್ಯಾಗಿ ಶಕ್ತಿಗಳ ಮೂಲಕ ; ಮೊದಲು ಏಕಾತ್ಮಕ ರಾಜ್ಯವಾಗಿದ್ದು ನಂತರ ಹಲವು ರಾಜ್ಯಗಳಾಗಿ ವಿಭಜನೆಗೊಂಡು ಸಂಯುಕ್ತ ಮಾದರಿಯ ಸರಕಾರ ರೂಪುಗೊಂಡಿದೆ. ಅದನ್ನು ಸಂಯುಕ್ತ ರಾಜ್ಯವೆಂದು ಕರೆಯಬಹುದು. ಉದಾ: ಭಾರತ, ಕೆನಡಾ, ಮುಂತಾದ ದೇಶಗಳು.

ಒಟ್ಟಾರೆ ಸಂಯುಕ್ತ ಸರಕಾರವೆಂದರೆ ಅಧಿಕಾರವು ಕೇಂದ್ರ ರಾಜ್ಯಗಳ ನಡುವೆ ವಿತರಣೆಯಾಗಿರುವ ವ್ಯವಸ್ಥೆ ಎಂದು ಹೇಳಬಹುದು. ಸಂಯುಕ್ತ ಸರಕಾರ ಪದ್ಧತಿಯು ಏಕಾತ್ಮಕ ಸರಕಾರ ಪದ್ಧತಿಗೆ ಭಿನ್ನವಾದುದು. ಈ ಪದ್ಧತಿ ಇರುವ ದೇಶದಲ್ಲಿ ಜೋಡಿ ಸರಕಾರ (ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರಗಳು) ವ್ಯವಸ್ಥೆಯಿದ್ದು ಅವುಗಳ ನಡುವೆ ಅಧಿಕಾರ ವಿತರಣೆಯಾಗಿರುತ್ತದೆ. ಅಧಿಕಾರವನ್ನು ಈ ರೀತಿ ವಿತರಣೆ ಮಾಡುವದು ಅಲ್ಲಿನ ಸಂವಿಧಾನ. ಅಂಗ ರಾಜ್ಯಗಳ ಅಧಿಕಾರ ಸಂವಿಧಾನದತ್ತವಾದುದು. ಕೇಂದ್ರದ ಕೊಡುಗೆಯಲ್ಲ.

ಈ ರೀತಿಯಾಗಿ ಸಂಯುಕ್ತ ವ್ಯವಸ್ಥೆಯಲ್ಲಿ ಅನೇಕ ರಾಜ್ಯಗಳಿದ್ದು ಅವು ಸಂಯುಕ್ತ ರಾಜ್ಯದ ಘಟಕಗಳಾಗಿರುತ್ತವೆ. ಇವುಗಳನ್ನು ಅಂಗ ರಾಜ್ಯಗಳೆಂದು ಕರೆಯಬಹುದು. ಪ್ರತಿಯೊಂದು ಅಂಗರಾಜ್ಯವು ತನ್ನದೇ ಆದ ಸರಕಾರವನ್ನು ಹೊಂದಿರುತ್ತದೆ. ಎಷ್ಟು ಅಂಗ ರಾಜ್ಯಗಳಿರುತ್ತವೆಯೋ ಅಷ್ಟೇ ರಾಜ್ಯ ಸರಕಾರಗಳು ಹಾಗೂ ಒಂದು ಸಂಯುಕ್ತ ಸರಕಾರವಿರುತ್ತದೆ. ಸಂಯುಕ್ತ ಸರಕಾರ ಹಾಗೂ ರಾಜ್ಯ ಸರಕಾರಗಳು ತಮಗೆ ಸೇರಿದ ಅಧಿಕಾರವನ್ನು ಚಲಾಯಿಸುವದರಲ್ಲಿ ಸ್ವತಂತ್ರವಾಗಿರುತ್ತವೆ. ರಾಜ್ಯಸರಕಾರಗಳು ಸಂಯುಕ್ತ ಸರಕಾರದ ಪ್ರತಿನಿಧಿಗಳಲ್ಲ. ತಮ್ಮ ತಮ್ಮ ಕ್ಷೇತ್ರವ್ಯಾಪ್ತಿಯಲ್ಲಿ ಸ್ವತಂತ್ರ ಹಾಗೂ ಸ್ವಯಮಾಧಿಕಾರವನ್ನು ಹೊಂದಿರುತ್ತವೆ. ಇವುಗಳ ಅಧಿಕಾರ ವ್ಯಾಪ್ತಿಯಲ್ಲಿ ಸುಲಭವಾಗಿ ಬದಲಾವಣೆ ಮಾಡುವಂತಿಲ್ಲ. ಸಂವಿಧಾನದ ತಿದ್ದುಪಡಿಯ ಮೂಲಕ ಮಾತ್ರ ಇದು ಸಾಧ್ಯ. ಆದರೆ ಸಂವಿಧಾನದ ತಿದ್ದುಪಡಿಯ ವಿಧಾನ ಕಠಿಣವಾದುದು. ಅವುಗಳ ನಡುವೆ ಅಧಿಕಾರ ವ್ಯಾಪ್ತಿಯ ಬಗ್ಗೆ ಉದ್ಭವಿಸಬಹುದಾದ

ವಾದಗಳನ್ನು ತೀರ್ಮಾನಿಸಲು ವಿಶೇಷ ನ್ಯಾಯಾಲಯವಿರುತ್ತದೆ. ಈ ನ್ಯಾಯಾಲಯವು ಸಂವಿಧಾನದಿಂದಲೇ ನಿರ್ಮಿತವಾಗಿರುತ್ತದೆ.

**ವ್ಯಾಖ್ಯೆಗಳು :** ಸಂಯುಕ್ತ ಸರಕಾರದ ಬಗ್ಗೆ ಕೆಲವು ಪಂಡಿತರು ಈ ಕೆಳಗಿನಂತೆ ಮಾಡಿದ್ದಾರೆ.

**ಡೈಸಿ** ಅವರ ಪ್ರಕಾರ ''ರಾಷ್ಟ್ರೀಯ ಐಕ್ಯತೆ ಮತ್ತು ರಾಜ್ಯಗಳ ಹಕ್ಕುಗಳನ್ನು ರಕ್ಷಿಸಿಕೊಂಡು ಹೋಗುವ ರಾಜಕೀಯ ವ್ಯವಸ್ಥೆಯೇ ಸಂಯುಕ್ತ ಸರಕಾರ ''.

**ಫೈನರ್** '' ಸಂಯುಕ್ತ ರಾಜ್ಯ ಪದ್ಧತಿ ಇರುವಲ್ಲಿ ಅಧಿಕಾರದ ಒಂದು ಭಾಗವು ಸ್ಥಳೀಯ ಸಂಸ್ಥೆಗಳಲ್ಲೂ ಇನ್ನೊಂದು ಭಾಗವು ಸ್ಥಳೀಯ ಸಂಸ್ಥೆಗಳ ಉದ್ದೇಶಪೂರ್ವಕ ಸಂಯೋಗದಿಂದ ರಚಿತವಾದ ಕೇಂದ್ರ ಸಂಸ್ಥೆಯಲ್ಲೂ ಇರುತ್ತದೆ.''

**ಸರ್ ರಾಬರ್ಟ್ ಗಾರ್ನರ್** ''ಸಂಯುಕ್ತ ರಾಜ್ಯ ಪದ್ಧತಿ ಅಧಿಕಾರವು ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳಲ್ಲಿ ವಿಭಜಿಸಲ್ಪಟ್ಟಿದ್ದು ಆಯಾ ಸರಕಾರಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಒಂದರಿಂದಿನ್ನೊಂದು ಸ್ವತಂತ್ರವಾಗಿರುತ್ತವೆ.''

ಸಂಯುಕ್ತ ಸರಕಾರ ಹಾಗೂ ರಾಜ್ಯ ಸಂಘಕ್ಕೂ ವ್ಯತ್ಯಾಸವಿದೆ. ಸಂಯುಕ್ತ ಸರಕಾರದಲ್ಲಿ ಕೆಲವು ಪ್ರಾಂತ್ಯಗಳು ಅಥವಾ ಘಟಕಗಳು ಒಂದೇ ಸಾಮಾನ್ಯ ಪರಮಾಧಿಕಾರದ ಕೆಳಗೆ ವಾಸಿಸಲು ಒಪ್ಪಿಕೊಂಡು ತಮ್ಮ ಪರಮಾಧಿಕಾರವನ್ನು ತ್ಯಜಿಸಿ ಬರುವದಾಗಿದ್ದರೆ ರಾಜ್ಯ ಸಂಘವು ಸ್ವತಂತ್ರ ರಾಷ್ಟ್ರಗಳ ಸಡಿಲ ಸಂಘಟನೆಯಾಗಿದ್ದು ಪರಮಾಧಿಕಾರವನ್ನು ತ್ಯಜಿಸುವ ಅವಶ್ಯಕತೆ ಇರುವದಿಲ್ಲ. ಒಂದು ಪ್ರಾಂತ್ಯವು ರಾಜ್ಯ ಸಂಘವನ್ನು ತನ್ನ ರಾಷ್ಟ್ರೀಯ ಹಿತಾಸಕ್ತಿಗೆ ಅನುಗುಣವಾಗಿ ಸೇರಬಹುದು ಅಥವಾ ಹೊರಬರಬಹುದು. ಆದರೆ ಒಮ್ಮೆ ಸಂಯುಕ್ತ ವ್ಯವಸ್ಥೆಯನ್ನು ಒಪ್ಪಿಕೊಂಡ ಪ್ರಾಂತ್ಯವು ಒಪ್ಪಂದವನ್ನು ಮುರಿದು ಹೊರಬರುವಂತಿಲ್ಲ. ಉದಾ : ಭಾರತವು ಕಾಮನ್‌ವೆಲ್ತ ಸದಸ್ಯನಾಗಿದ್ದರೂ ತನ್ನ ಪರಮಾಧಿಕಾರವನ್ನು ಉಳಿಸಿಕೊಂಡಿದ್ದು, ಯಾವಾಗ ಬೇಕಾದರೂ ಹೊರಬರುವ ಅಧಿಕಾರ ಹೊಂದಿರುತ್ತದೆ: ಆದರೆ ಭಾರತದ ಸಂಯುಕ್ತ ವ್ಯವಸ್ಥೆಗೆ ಒಪ್ಪಿಕೊಂಡಿರುವ ಯಾವುದೇ ರಾಜ್ಯವು ಸಂಯುಕ್ತ ವ್ಯವಸ್ಥೆಯಿಂದ ಹೊರಹೋಗಲು ಸಾಧ್ಯವಿಲ್ಲ.

### ಸಂಯುಕ್ತ ಸರಕಾರದ ಲಕ್ಷಣಗಳು

**೧. ಅಧಿಕಾರ ವಿಭಜನೆ :** ಸಂಯುಕ್ತ ರಾಜ್ಯಪದ್ಧತಿ ಯಲ್ಲಿ ಸರಕಾರದ ಅಧಿಕಾರಗಳನ್ನು ಕೇಂದ್ರ ಮತ್ತು ರಾಜ್ಯಸರಕಾರಗಳ ನಡುವೆ ವಿಭಜಿಸಲಾಗುತ್ತದೆ. ಕೇಂದ್ರ ಮತ್ತು ರಾಜ್ಯ ಸರಕಾರಗಳಲ್ಲಿ ಅಧಿಕಾರಗಳ ಹಂಚಿಕೆಯನ್ನು ರಾಷ್ಟ್ರದ ಸಂವಿಧಾನದಲ್ಲಿ ಬರೆದಿಡಲಾಗುತ್ತದೆ. ಒಂದು ಸರಕಾರವು ಇನ್ನೊಂದರ ಅಧಿಕಾರದಲ್ಲಿ ಕೈಹಾಕಕೂಡದು.

ಸಾಮಾನ್ಯವಾಗಿ ರಾಷ್ಟ್ರದ ಸಮಗ್ರ ದೃಷ್ಟಿಯಿಂದ ಅವಶ್ಯವೆನಿಸಿದ ವ್ಯವಹಾರಗಳನ್ನು ಮತ್ತು ತತ್ಸಂಬಂಧವಾದ ಅಧಿಕಾರಗಳನ್ನು ಕೇಂದ್ರ ಸರಕಾರಕ್ಕೆ ಕೊಡಲಾಗುತ್ತದೆ. ಉದಾ: ರಕ್ಷಣೆ, ವಿದೇಶಿ ವ್ಯವಹಾರ, ರೇಲ್ವೆ ಹಾಗೂ ಪೋಸ್ಟ್ ಇತ್ಯಾದಿ ಸ್ಥಾನಿಕ ಮಹತ್ವವುಳ್ಳ ವ್ಯವಹಾರವನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಅಧಿಕಾರವನ್ನು ರಾಜ್ಯ ಸರಕಾರಗಳಿಗೆ ಬಿಟ್ಟುಕೊಡಲಾಗುತ್ತದೆ. ಉದಾ : ಭೂಕಂದಾಯ, ಪೋಲಿಸ್, ಆರೋಗ್ಯ, ಅರಣ್ಯ, ಒಕ್ಕಲುತನ, ರಾಜ್ಯದಲ್ಲಿ ಶಾಂತಿ ಕಾಪಾಡುವದು ಇತ್ಯಾದಿ. ಈ ವಿಷಯಗಳಲ್ಲಿ ರಾಜ್ಯ ಸರಕಾರಗಳು ತಮಗೆ ಬೇಕಾದ ಕಾನೂನುಗಳನ್ನು ಪಾಸುಮಾಡಿಕೊಳ್ಳುವ ಸ್ವಾತಂತ್ರ್ಯವಿದೆ.

ಅಧಿಕಾರ ವಿಭಜನೆಯ ಪದ್ಧತಿಯು ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಆಗಿರುತ್ತದೆ. ಆದರೂ ಸಹ ಈ ಕೆಳಗಿನ ಮೂರು ಪದ್ದತಿಗಳು ಪ್ರಚಲಿತದಲ್ಲಿವೆ.

೧. **ಅಮೇರಿಕ ಪದ್ಧತಿ :** ಅಮೇರಿಕಾ, ಆಸ್ಟ್ರೇಲಿಯಾ, ಸ್ವಿಟ್ಜರ್‌ಲ್ಯಾಂಡ್ ಈ ರಾಷ್ಟ್ರಗಳಲ್ಲಿ ಕೇಂದ್ರ ಸರಕಾರದ ಅಧಿಕಾರಗಳು ಸಂವಿಧಾನದಲ್ಲಿ ನಿರ್ದಿಷ್ಟವಾಗಿ ನಿರೂಪಿಸಲ್ಪಟ್ಟಿರುತ್ತವೆ. ಉಳಿದ ಅಧಿಕಾರವನ್ನು ರಾಜ್ಯ ಸರಕಾರಗಳಿಗೆ ಬಿಟ್ಟುಕೊಡಲಾಗಿದೆ.

೨. **ಕೆನಡಾ ಪದ್ಧತಿ :** ಕೆನಡಾದಲ್ಲಿ ರಾಜ್ಯ ಸರಕಾರದ ಅಧಿಕಾರಗಳನ್ನು ಸಂವಿಧಾನದಲ್ಲಿ ನಿರ್ದಿಷ್ಟಪಡಿಸಲಾಗಿದೆ. ಉಳಿದ ಅಧಿಕಾರವನ್ನು ಕೇಂದ್ರಸರಕಾರಕ್ಕೆ ಬಿಟ್ಟು ಕೊಡಲಾಗಿದೆ.

೩. **ಭಾರತ ಪದ್ಧತಿ :** ಭಾರತದಲ್ಲಿ ಮೂರು ಯಾದಿಗಳಿವೆ:

i) ಕೇಂದ್ರ ಯಾದಿ : ಕೇಂದ್ರ ಸರಕಾರಕ್ಕೆ ೯೭ ವಿಷಯಗಳ ಮೇಲೆ ಅಧಿಕಾರವಿದೆ.

ii) ರಾಜ್ಯ ಯಾದಿ : ರಾಜ್ಯ ಸರಕಾರಗಳಿಗೆ ೬೬ ವಿಷಯಗಳ ಮೇಲೆ ಅಧಿಕಾರವಿದೆ.

iii) ಸಂಯುಕ್ತ ಪಟ್ಟಿ : ಸಾಮೂಹಿಕ ಪಟ್ಟಿಯು ೪೭ ವಿಷಯಗಳನ್ನು ಒಳಗೊಂಡಿರುತ್ತದೆ. ಈ ವಿಷಯಗಳ ಮೇಲೆ ಕೇಂದ್ರ ಸರಕಾರಕ್ಕೂ ಮತ್ತು ರಾಜ್ಯ ಸರಕಾರಗಳಿಗೂ ಅಧಿಕಾರವಿದೆ. ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರದ ಕಾನೂನುಗಳಲ್ಲಿ ವ್ಯತ್ಯಯ ಕಂಡುಬಂದರೆ ಕೇಂದ್ರ ಕಾನೂನು ಚಲಾಯಿಸಲ್ಪಡುವದು ಹಾಗೂ ರಾಜ್ಯದ ಕಾನೂನು ರದ್ದಾಗುವದು. ಉದಾ : ಮದುವೆ, ಬೆಲೆ ನಿಯಂತ್ರಣ, ಸಾಮಾಜಿಕ ಭದ್ರತೆ ಇತ್ಯಾದಿ.

iv) ಇನ್ನುಳಿದ ಅಧಿಕಾರಗಳನ್ನು ಸಂಸತ್ತಿಗೆ ಬಿಟ್ಟು ಕೊಡಲಾಗಿದೆ. ಒಟ್ಟಾರೆ ಸಿ. ಎಫ್. ಸ್ಟ್ರಾಂಗ್ ಎಂಬ ಲೇಖಕರ ಪ್ರಕಾರ ಎಲ್ಲಿ ರಾಜ್ಯ ಸರಕಾರಗಳಿಗೆ ಹೆಚ್ಚಿನ ಅಧಿಕಾರ-ವಿರುತ್ತದೆಯೋ ಅಲ್ಲಿ ನಿಜವಾದ ಸಂಯುಕ್ತ ಸರಕಾರವಿರುತ್ತದೆ.

೨. ಸಂವಿಧಾನದ ಪ್ರಾಧಾನ್ಯತೆ : ಸಂಯುಕ್ತ ರಾಜ್ಯ ಪದ್ಧತಿಯು ಒಡಂಬಡಿಕೆಯ ಮುಖಾಂತರ ಅಸ್ತಿತ್ವದಲ್ಲಿ ಬರುತ್ತದೆ. ಆದ್ದರಿಂದ ಒಪ್ಪಂದದ ಸೂತ್ರಗಳನ್ನು ಖಚಿತಗೊಳಿಸಲು ಲಿಖಿತ ಸಂವಿಧಾನವು ಅವಶ್ಯ. ರಾಜ್ಯಗಳೊಳಗೆ ನಡೆಯುವ ಒಂದು

ಕರಾರಿನ ಮೇಲೆ ಘಟಕ ರಾಜ್ಯಗಳು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವದಿಲ್ಲ. ಆದರೆ ಕೆಲವು ಅಧಿಕಾರಗಳನ್ನು ಅವು ಸಂಯುಕ್ತ ಸರಕಾರಕ್ಕೆ ವಹಿಸಿ ಕೊಡುತ್ತವೆ. ಸಂವಿಧಾನವು ಕೇಂದ್ರ ಮತ್ತು ರಾಜ್ಯ ಸರಕಾರಗಳ ನಡುವೆ ಅಧಿಕಾರವನ್ನು ವಿಭಜಿಸುತ್ತದೆ. ಇವೆರಡು ಸರಕಾರಗಳು ಸಂವಿಧಾನದ ಚೌಕಟ್ಟಿನಲ್ಲಿಯೇ ಕಾನೂನುಗಳನ್ನು ರಚಿಸಬೇಕಾಗುತ್ತದೆ. ಎಲ್ಲ ನಾಗರಿಕರು ಸಂವಿಧಾನಕ್ಕೆ ನಿಷ್ಠೆ ತೋರಿಸಬೇಕಾಗುತ್ತದೆ. ಸಂವಿಧಾನವನ್ನು ಮೀರಿ ಯಾರೂ ವರ್ತಿಸುವಂತಿಲ್ಲ. ಸಂವಿಧಾನವು ಶ್ರೇಷ್ಠವಾದುದು ಮತ್ತು ಪವಿತ್ರವಾದುದು.

೩.ಸಮಸ್ಯೆಗಳ ಪರಿಹಾರಕ್ಕೆ ವಿಶೇಷ ವ್ಯವಸ್ಥೆ : ಒಂದಕ್ಕಿಂತ ಹೆಚ್ಚು ಅಧಿಕಾರ ಕೇಂದ್ರಕ್ಕಿವಿರುವಾಗ ಅಧಿಕಾರ ಮತ್ತು ಜವಾಬ್ದಾರಿಗಳನ್ನು ಎಷ್ಟೇ ಜಾಗರೂಕತೆಯಿಂದ ವಹಿಸಿದರೂ ಸಮಸ್ಯೆ, ವಿವಾದಗಳು ಇದ್ದೇ ಇರುತ್ತವೆ. ಈ ಸಮಸ್ಯೆಯನ್ನು ಪರಿಹರಿಸಲು ಸಂವಿಧಾನವನ್ನು ವಿಶ್ಲೇಷಿಸುವ ಅಧಿಕಾರವನ್ನು ನ್ಯಾಯಾಂಗಕ್ಕೆ ಕೊಡಲಾಗಿದೆ. ಇದು ಸಂವಿಧಾನದ ರಕ್ಷಕ. ಇದು ಕೇಂದ್ರ ಹಾಗೂ ರಾಜ್ಯಗಳ ನಡುವೆ ಅಥವಾ ರಾಜ್ಯ-ರಾಜ್ಯಗಳ ನಡುವಿನ ಜಗಳಗಳನ್ನು ಬಗೆಹರಿಸುತ್ತದೆ. ಇದು ಕಾನೂನುಗಳು ಸಂವಿಧಾನಕ್ಕೆ ತದ್ವಿರುದ್ಧವಾಗಿದ್ದರೆ ಅವು ಸರಿ ಇಲ್ಲವೆಂದು ಹೇಳುತ್ತದೆ. ಆದರೆ ಇದಕ್ಕೆ ಅಪವಾದ ಸ್ವಿಸ್ ಕೇಂದ್ರದ ನ್ಯಾಯಾಂಗ (Federal Tribunal). ಉದಾ:- ಭಾರತದಲ್ಲಿ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳ ನಡುವೆ ಯಾವುದೇ ಸಮಸ್ಯೆಯನ್ನು ಬಗೆಹರಿಸುವ ಜವಾಬ್ದಾರಿಯನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ವಹಿಸಿದೆ. ಅಮೇರಿಕೆಯಲ್ಲಿಯೂ ಸಹ ಇದೇ ವ್ಯವಸ್ಥೆ ಇದೆ.

೪. ಅನಮ್ಯ ಸಂವಿಧಾನ : ಸಂವಿಧಾನವು ಲಿಖಿತ ಮತ್ತು ಅನಮ್ಯವಾಗಿದ್ದರೆ ಮಾತ್ರ ಅದರ ಪಾವಿತ್ರ್ಯ ಉಳಿಯುತ್ತದೆ ಹಾಗೂ ಸಂಯುಕ್ತ ರಾಜ್ಯ ವ್ಯವಸ್ಥೆಯು ಸುಗಮವಾಗಿ ಸಾಗುತ್ತದೆ. ಸಂವಿಧಾನದ ತಿದ್ದುಪಡಿ ಕಠಿಣವಾಗಿದ್ದರೆ ಅದು ರಾಜಕಾರಣಿಗಳ ಕೈಗೊಂಬೆಯಾಗಲು ಸಾಧ್ಯವಿಲ್ಲ. ಘಟಕ ರಾಜ್ಯಗಳ ಹಿತರಕ್ಷಣೆ ಹಾಗೂ ಜನತೆಯ ಮೂಲಭೂತ ಹಕ್ಕುಗಳ ರಕ್ಷಣೆ ಅನಮ್ಯ ಸಂವಿಧಾನದಿಂದ ಮಾತ್ರ ಸಾಧ್ಯ.

## ಪ್ರಶ್ನೆಗಳು

ಅ. ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೆ ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

ಒಂದು ಅಂಕದ ಪ್ರಶ್ನೆಗಳು

೧. ಸಂವಿಧಾನ ಎಂದರೇನು ?

೨. ಭಾರತದ ಸಂವಿಧಾನವು ಎಂದು ಅಸ್ತಿತ್ವಕ್ಕೆ ಬಂದಿತು ?

೩. ಪ್ರಜಾಪ್ರಭುತ್ವ ಎಂದರೇನು ?

೪. ಸರ್ವಾಧಿಕಾರತ್ವ ಎಂದರೇನು ?

೫. ಏಕಾತ್ಮಕ ಸರಕಾರ ಎಂದರೇನು ?

೬. ಸಂಯುಕ್ತ ಸರಕಾರ ಎಂದರೇನು ?

೭. ಭಾರತದ ಸಂವಿಧಾನದ ರಚನಾಸಭೆಯ ಅಧ್ಯಕ್ಷರು ಯಾರು ?

೮. ಭಾರತದ ಸಂವಿಧಾನದ ಕರಡು ಸಮಿತಿಯ ಅಧ್ಯಕ್ಷರು ಯಾರು ?

೯. ನಮ್ಮ ಸಂವಿಧಾನ ಎಂದರೇನು ?

೧೦. ಸಂಸದೀಯ ಸರಕಾರ ಎಂದರೇನು ?

ಆ. ಕೆಳಗಿನ ಪ್ರಶ್ನೆಗಳಿಗೆ ಬೇಕಾದ ಹತ್ತು ಪ್ರಶ್ನೆಗಳಿಗೆ ೨ -೩ ವಾಕ್ಯದಲ್ಲಿ ಉತ್ತರ ಬರೆಯಿರಿ. ಒಂದು ಅಂಕಗಳ ಪ್ರಶ್ನೆಗಳು

೧೧. ಉತ್ತಮ ಸಂವಿಧಾನದ ಲಕ್ಷಣಗಳನ್ನು ತಿಳಿಸಿ.

೧೨. ಸಂವಿಧಾನಾತ್ಮಕ ಸರಕಾರದ ಅರ್ಥವನ್ನು ವಿವರಿಸಿ.

೧೩. ಕೇಂದ್ರೀಕೃತ ಸರಕಾರದ ಮುಖ್ಯ ಲಕ್ಷಣಗಳಾವವು ?

೧೪. ಸಂಯುಕ್ತ ಸರಕಾರದ ಲಕ್ಷಣಗಳಾವವು ?

೧೫. ಗಣರಾಜ್ಯದ ಅರ್ಥವನ್ನು ಹೇಳಿರಿ.

೧೬. ಅಧ್ಯಕ್ಷೀಯ ಸರಕಾರದ ಅರ್ಥವಿವರಣೆಯನ್ನು ಹೇಳಿರಿ.

೧೭. ಸಾಮುಹಿಕ ಹೊಣೆಗಾರಿಕೆ ಎಂದರೇನು ?

೧೮. ಪ್ರೌಢಮತದಾನ ಪದ್ಧತಿಯ ವ್ಯಾಖ್ಯೆ ಕೊಡಿರಿ.

೧೯. ಪ್ರತ್ಯಕ್ಷ ಪ್ರಜಾಪ್ರಭುತ್ವ ಅಂದರೇನು ?

೨೦. ಆಧುನಿಕ ನಿರಂಕುಶ ಆಡಳಿತಾತ್ಮಕ ಪ್ರಭುತ್ವದ ಲಕ್ಷಣಗಳು ಯಾವವು ?

೨೧. ಸಂಯುಕ್ತ ಸರಕಾರದ ಯಶಸ್ಸಿಗೆ ಬೇಕಾದ ಅಂಶಗಳು ಯಾವವು ?

೨೨. ಸಂವಿಧಾನ ಪೀಠಿಕೆಯ ಮಹತ್ವವನ್ನು ವಿವರಿಸಿರಿ.

ಇ. ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೆ ೫ -೧೦ ವಾಕ್ಯದಲ್ಲಿ ಉತ್ತರ ಬರೆಯಿರಿ. ಐದು ಅಂಕಗಳ ಪ್ರಶ್ನೆಗಳು

೨೩. ಕೇಂದ್ರೀಕೃತ ಹಾಗೂ ಸಂಯುಕ್ತ ಸರಕಾರಗಳ ನಡುವಿನ ವ್ಯತ್ಯಾಸವನ್ನು ತಿಳಿಸಿರಿ.

೨೪. ಪ್ರಜಾಪ್ರಭುತ್ವದ ಯಶಸ್ಸಿಗೆ ಬೇಕಾದ ಅಂಶಗಳು ಯಾವವು?

೨೫. ಸಂಸದೀಯ ಸರಕಾರ ಹಾಗೂ ಅಧ್ಯಕ್ಷೀಯ ಸರಕಾರಗಳ ನಡುವಿನ ಅಂತರ ವಿವರಿಸಿರಿ.

೨೬. ನಿರಂಕುಶ ಪ್ರಭುತ್ವದ ದೋಷಗಳಾವುವು ?

೨೭. ಸಂಸದೀಯ ಸರಕಾರ ಎಂದರೇನು ?

೨೮. ಸಂಯುಕ್ತ ಸರಕಾರದ ಅರ್ಥವಿವರಣೆಯನ್ನು ಹೇಳಿರಿ.

೨೯. ಸಂವಿಧಾನಾತ್ಮಕ ಕಾನೂನಿಗೂ ಹಾಗೂ ಸಾಮಾನ್ಯ ಕಾನೂನಿಗೂ ಇರುವ ವ್ಯತ್ಯಾಸ ತಿಳಿಸಿ.

೩೦. ಪ್ರಜಾಪ್ರಭುತ್ವದ ಪ್ರಕಾರಗಳನ್ನು ವಿವರಿಸಿ.

೩೧. ಲಿಖಿತ ಹಾಗೂ ಅಲಿಖಿತ ಸಂವಿಧಾನಗಳ ನಡುವಿನ ವ್ಯತ್ಯಾಸ ತಿಳಿಸಿ.

೩೨. ನಮ್ಯ ಹಾಗೂ ಅನಮ್ಯ ಸಂವಿಧಾನಗಳ ನಡುವಿನ ವ್ಯತ್ಯಾಸ ತಿಳಿಸಿ.

೩೩. ನ್ಯಾಯದ ಪ್ರಕಾರಗಳಾವವು.

೩೪. ಕಾಯಿದೆ ಮತ್ತು ಸ್ವಾತಂತ್ರ್ಯದ ನಡುವಿನ ಸಂಬಂಧವನ್ನು ವಿವರಿಸಿರಿ.

೩೫. ನೈಸರ್ಗಿಕ ಸ್ವಾತಂತ್ರ್ಯದ ಅರ್ಥ ಬರೆಯಿರಿ.

ಈ. ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೆ ೩೦-೪೦ ವಾಕ್ಯದಲ್ಲಿ ಉತ್ತರ ಬರೆಯಿರಿ. ಐದು ಅಂಕಗಳ ಪ್ರಶ್ನೆಗಳು

೩೬. ಪ್ರಜಾಪ್ರಭುತ್ವ ಹಾಗೂ ನಿರಂಕುಶ ಪ್ರಭುತ್ವದ ನಡುವಿನ ಅಂತರ ವಿವರಿಸಿರಿ.

೩೭. ಅಧ್ಯಕ್ಷೀಯ ಸರಕಾರದ ಲಕ್ಷಣಗಳನ್ನು ವಿವರಿಸಿರಿ.

೩೮. ಸಂಯುಕ್ತ ಸರಕಾರದ ದೋಷಗಳಾವವು ?

೩೯. ಕೇಂದ್ರೀಕೃತ ಸರಕಾರದ ಗುಣಾವಗುಣಗಳನ್ನು ವಿವರಿಸಿ.

❑ ❑

## ಅಧ್ಯಾಯ ೫

# ಭಾರತದ ಸಂವಿಧಾನ

## ✵ ಪ್ರಸ್ತಾವನೆ

ಸಂವಿಧಾನವು ಒಂದು ದೇಶದ ರಾಜಕೀಯ ವ್ಯವಸ್ಥೆಯನ್ನು ರೂಪಿಸಿ ನಿಯಂತ್ರಿಸುವ ಮೂಲಭೂತ ಕಾನೂನು. ಮಾನವನಿಗೆ ಮೆದುಳು ಹೇಗೋ ಹಾಗೆ ರಾಜ್ಯಕ್ಕೆ ಸಂವಿಧಾನವಿರುತ್ತದೆ. ಜನರಿಂದ, ಜನರಿಗಾಗಿ ಇರುವ ಜನತೆಯ ಆಡಳಿತವಾದ ಪ್ರಜಾಪ್ರಭುತ್ವಕ್ಕೆ ಅಂಕುಶದ ರೂಪದಲ್ಲಿ ಸಂವಿಧಾನವಿರುತ್ತದೆ. ಸಂವಿಧಾನ ರೂಪಿಸಿದ ಚೌಕಟ್ಟಿನಲ್ಲಿ ರಾಜ್ಯ ತನ್ನ ಚಟುವಟಿಕೆಗಳನ್ನು ನಿರ್ವಹಿಸುತ್ತದೆ. ರಾಜ್ಯದ ಪರವಾಗಿ ಕಾರ್ಯ ಮಾಡಬೇಕಾದ ಸರಕಾರದ ಮೂರೂ ಅಂಗಗಳ ನಿರ್ಮಾಣ, ಅಧಿಕಾರ ಹಂಚಿಕೆ, ಅಧಿಕಾರದ ಮೇಲಿನ ಮಿತಿ, ಜನರ ಹಕ್ಕು ಬಾಧ್ಯತೆಗಳು ಹಾಗೂ ಜನರು ಮತ್ತು ಸರಕಾರಗಳ ನಡುವಿನ ಸಂಬಂಧಗಳನ್ನು ಸಂವಿಧಾನ ನಿರ್ಧರಿಸುತ್ತದೆ.

ಭಾರತದಲ್ಲಿ ಬ್ರಿಟೀಶ್ ಆಳ್ವಿಕೆಯೊಂದಿಗೆ ಸಂವಿಧಾನ ರಚನೆಯ ಬೇಡಿಕೆ ಆರಂಭಗೊಂಡಿತು. ೨೦ನೇ ಶತಮಾನದ ಪ್ರಾರಂಭದೊಂದಿಗೆ ಈ ಬೇಡಿಕೆ ಮೂರ್ತಿ ಸ್ವರೂಪ ಪಡೆಯಿತು. ಬೇಡಿಕೆ ಬಲಗೊಂಡ ಪರಿಣಾಮವಾಗಿ ೧೯೧೯ರಲ್ಲಿ ಬ್ರಿಟೀಶ್ ಸಂಸತ್ತು ರಚಿಸಿದ ಭಾರತ ಸರಕಾರದ ಕಾನೂನು ಈ ದೇಶದ ಅಡಳಿತದಲ್ಲಿ ಸ್ವಲ್ಪ ಮಟ್ಟಿಗೆ ಬದಲಾವಣೆ ತಂದಿತು. ಪ್ರಾಂತೀಯ ಆಡಳಿತದಲ್ಲಿ ಇಬ್ಬಗೆಯ ಆಡಳಿತ ಜಾರಿಗೆ ತರಲಾಯಿತು. ವರ್ಗಾಯಿತ ಹಾಗೂ ಕಾಯ್ದಿಟ್ಟ ಅಧಿಕಾರಗಳೆಂದು ವಿಭಜನೆ ಮಾಡಿ ವರ್ಗಾಯಿತ ಅಧಿಕಾರಗಳನ್ನು ಶಾಸಕಾಂಗಕ್ಕೆ ಹೊಣೆಗಾರರಾದ ಮಂತ್ರಿಗಳಿಗೆ ಮತ್ತು ಕಾಯ್ದಿಟ್ಟ ಅಧಿಕಾರಗಳನ್ನು ಗವರ್ನರ್ ಮತ್ತು ಅವರ ಆಡಳಿತ ಮಂಡಳಿಗೆ ನೀಡಲಾಯಿತು. ೧೯೧೯ರ ಇಬ್ಬಗೆಯ ಆಡಳಿತ ವ್ಯವಸ್ಥೆಯಲ್ಲಿ ಜನ ಪ್ರತಿನಿಧಿಗಳಿಗೆ ನಿಜವಾದ ಅಧಿಕಾರಗಳಿರಲಿಲ್ಲ. ಕೆಲ ಬದಲಾವಣೆಗೆ ಕಾರಣವಾದ ಈ ಕಾನೂನು ಸಂವಿಧಾನ ಸಭೆ ರಚಿಸಬೇಕೆಂಬ ಬೇಡಿಕೆ ಈಡೇರಿಸಲಿಲ್ಲ.

ನಂತರ ನಡೆದ ಅನೇಕ ಚಳುವಳಿಗಳ ಮೂಲಕ ಸಂವಿಧಾನ ರಚನಾ ಸಭೆಯ ಬೇಡಿಕೆ ಗಟ್ಟಿಗೊಳ್ಳತೊಡಗಿತು. ನಿರಂತರ ಚಳುವಳಿಯ ಪರಿಣಾಮವಾಗಿ ಬ್ರಿಟೀಶ್ ಸರಕಾರ ಸೈಮನ್ ಕಮೀಶನ್ ರಚನೆ ಮಾಡಿತು. ಸೈಮನ್ ಕಮೀಶನ್ ನೀಡಿದ ವರದಿಯ ಆಧಾರದ ಮೇಲೆ ವಿಚಾರ ವಿನಿಮಯ ಮಾಡಲೋಸುಗ ೧೯೩೦,೧೯೩೧ ಹಾಗೂ ೧೯೩೨ರಲ್ಲಿ ಲಂಡನ್‌ನಲ್ಲಿ ದುಂಡು ಮೇಜಿನ ಪರಿಷತ್ತುಗಳನ್ನು ನಡೆಸಲಾಯಿತು.

ಭಾರತದ ವಿವಿಧ ರಾಜಕೀಯ ಪಕ್ಷಗಳ ಹಾಗೂ ಜನವರ್ಗಗಳ ಪ್ರತಿನಿಧಿಗಳನ್ನು ಆ ಸಭೆಗೆ ಆಮಂತ್ರಿಸಲಾಗಿತ್ತು. ಈ ಸಮಾವೇಶಗಳಲ್ಲಿ ನಡೆದ ಸಮಾಲೋಚನೆಯ ಆಧಾರದ ಮೇಲೆ ಬ್ರಿಟೀಶ್ ಸಂಸತ್ತು ''೧೯೩೫ ರ ಭಾರತ ಸರಕಾರದ ಕಾನೂನು'' ರಚನೆ ಮಾಡಿತು. ಕೇಂದ್ರದಲ್ಲಿ ಇಬ್ಬಗೆಯ ಆಡಳಿತ ಹಾಗೂ ಪ್ರಾಂತಗಳಲ್ಲಿ ಸ್ವಾಯತ್ತತೆಯ ಅವಕಾಶವನ್ನು ಈ ಕಾನೂನು ನೀಡಿತು.

''೧೯೩೫ ರ ಭಾರತ ಸರಕಾರದ ಕಾನೂನಿ'' ನಲ್ಲಿಯ ದೋಷಗಳ ಕಾರಣದಿಂದಾಗಿ ಭಾರತದ ಜನತೆಯಿಂದ ವ್ಯಾಪಕ ವಿರೋಧ ವ್ಯಕ್ತವಾಯಿತು. ೧೯೩೪ರಲ್ಲಿ ಪಂಡಿತ್ ಜವಾಹರಲಾಲ್ ನೆಹರು ಸಂವಿಧಾನ ರಚನಾ ಸಭೆಯ ಬೇಡಿಕೆಯನ್ನು ಪ್ರಬಲವಾಗಿ ಮಂಡಿಸಿದರು. ೧೯೩೯ರಲ್ಲಿ ಕಾಂಗ್ರೆಸ್ ಕಾರ್ಯಕಾರಿಣಿ ಸಭೆ ಈ ಬೇಡಿಕೆಗೆ ಅನುಮೋದನೆ ನೀಡಿ, ಕ್ರಮ ಕೈಗೊಳ್ಳುವಂತೆ ಸರಕಾರವನ್ನು ಒತ್ತಾಯಿಸುವ ನಿರ್ಣಯ ತೆಗೆದುಕೊಂಡಿತು. ೧೯೪೨ರಲ್ಲಿ ಮತ್ತೆ ಕೆಲ ಸುಧಾರಣೆಗಳನ್ನು ತರುವ ಸಲುವಾಗಿ ಸ್ಟಾಫರ್ಡ್ ಕ್ರಿಪ್ಸ್ ರವರ ನೇತೃತ್ವದ ನಿಯೋಗವನ್ನು ಕಳಿಸಲಾಯಿತು. ಸಂವಿಧಾನ ಸಭೆ ರಚನೆಯ ಸಲಹೆಯನ್ನುಹೊರತು ಪಡಿಸಿ ಬೇರೆ ಯಾವ ಸಲಹೆಗಳೂ ಸ್ವೀಕಾರಾರ್ಹವಾಗಿರದಿದ್ದರಿಂದ ಕ್ರಿಪ್ಸ್ ಸಲಹೆಗಳನ್ನು ಕಾಂಗ್ರೆಸ್ ತಿರಸ್ಕರಿಸಿತು. ೧೯೪೨ನೇ ಅಗಸ್ಟ್ ೮ರಂದು ಮಹಾತ್ಮಾ ಗಾಂಧಿ ನೇತೃತ್ವದಲ್ಲಿ ''ಭಾರತ ಬಿಟ್ಟು ತೊಲಗಿರಿ'' ಎಂಬ ಐತಿಹಾಸಿಕ ನಿರ್ಣಯವನ್ನು ಅದು ಅಂಗೀಕರಿಸಿತು. ಇಡೀ ದೇಶವೇ ಆ ನಿರ್ಣಯವನ್ನು ಬೆಂಬಲಿಸಿ ಕಾನೂನು ಭಂಗ ಚಳುವಳಿಯಲ್ಲಿ ಧುಮುಕಿತು. ರಾಷ್ಟ್ರವ್ಯಾಪಿ ಚಳುವಳಿಯ ಬಿಸಿಯಿಂದ ಎಚ್ಚರಗೊಂಡ ಸರಕಾರ ಕ್ರಿಪ್ಸ್ ಸಲಹೆಗಳಲ್ಲಿ ಕೆಲ ಮಾರ್ಪಾಡು ಮಾಡಿ ವಾವೆಲ್ ಯೋಜನೆ ಪ್ರಕಟಿಸಿತು. ಭಾರತದ ರಾಷ್ಟ್ರೀಯ ಕಾಂಗ್ರೆಸ್ ವಾವೆಲ್ ಯೋಜನೆಯನ್ನೂ ಧಿಕ್ಕರಿಸಿ 'ಭಾರತ ಬಿಟ್ಟುತೊಲಗಿರಿ' ಆಂದೋಲನವನ್ನು ತೀವ್ರಗೊಳಿಸಿತು.

ಎರಡನೇ ಜಾಗತಿಕ ಯುದ್ಧ ಮುಕ್ತಾಯವಾದ ನಂತರ ಬ್ರಿಟನ್‌ನಲ್ಲಿ ಸಾರ್ವತ್ರಿಕ ಚುನಾವಣೆಗಳು ಜರುಗಿದವು. ಪ್ರತಿಯೊಂದು ರಾಷ್ಟ್ರವೂ ಸ್ವಯಮಾಡಳಿತ ಹೊಂದಬೇಕೆಂಬ ನೀತಿಯನ್ನು ಸಾರಿದ್ದ ಲೇಬರ್ ಪಕ್ಷ ಈ ಚುನಾವಣೆಗಳಲ್ಲಿ ಬಹುಮತದಿಂದ ಆರಿಸಿ ಬಂತು. ಆ್ಯಟ್ಲಿಯವರ ನಾಯಕತ್ವದ ಹೊಸ ಸರಕಾರ ಅಧಿಕಾರಕ್ಕೆ ಬಂತು. ನೂತನ ಪ್ರಧಾನಿ ಆ್ಯಟ್ಲಿಯವರು ಭಾರತದ ಜನತೆ ತಮಗೆ ಸೂಕ್ತವೆನಿಸುವ ರೀತಿಯಲ್ಲಿ ಸರಕಾರದ ವ್ಯವಸ್ಥೆ ರೂಪಿಸಿಕೊಳ್ಳಲು ಅವಕಾಶ ನೀಡುವದಾಗಿ ಘೋಷಿಸಿದರು. ೧೯೪೬ನೇ ಮಾರ್ಚ ೨೪ರಂದು ಪೆಥಿಕ್ ಲಾರೆನ್ಸ್, ಸ್ಟಾಫರ್ಡ್ ಕ್ರಿಪ್ಸ್ ಹಾಗೂ ಎ.ವಿ. ಅಲೆಕ್ಸಾಂಡರ್ ರವರನ್ನೊಳಗೊಂಡ ಕ್ಯಾಬಿನೆಟ್ ನಿಯೋಗವನ್ನು ಪರಿಶೀಲನೆ ಹಾಗೂ ಸಮಾಲೋಚನೆಗಾಗಿ ಕಳುಹಿಸಲಾಯಿತು. ಕಾಂಗ್ರೆಸ್, ಮುಸ್ಲಿಂ ಲೀಗ್‌ಗಳಲ್ಲದೇ ವಿವಿಧ ಜನ ವರ್ಗಗಳ ಪ್ರತಿನಿಧಿಗಳೊಂದಿಗೆ ಸಮಾಲೋಚನೆ ನಡೆಸಿದ

ನಿಯೋಗ ೧೯೪೬ ನೇ ಮೇ ೧೭ ರಂದು ''ಕ್ಯಾಬಿನೆಟ್ ಯೋಜನೆ'' ಎಂದು ಹೆಸರಾದ ವರದಿಯನ್ನು ಸಲ್ಲಿಸಿತು. ಈ ವರದಿಯ ಆಧಾರದ ಮೇಲೆ ೧೯೪೬ನೇ ಜುಲೈನಲ್ಲಿ ಬ್ರಿಟೀಶ್ ಇಂಡಿಯಾದ ೨೯೬ ಪ್ರತಿನಿಧಿಗಳು ಹಾಗೂ ಭಾರತೀಯ ಸಂಸ್ಥಾನಗಳ ೯೩ ಪ್ರತಿನಿಧಿಗಳನ್ನೊಳಗೊಂಡ '' ಸಂವಿಧಾನ ರಚನಾ ಸಭೆ ''ರಚಿತವಾಯಿತು. ಬ್ರಿಟೀಶ್ ಇಂಡಿಯಾದ ಪ್ರತಿನಿಧಿಗಳ ಪೈಕಿ ೨೧೧ಜನ ಕಾಂಗ್ರೆಸ್‌ನವರು, ೭೩ ಜನ ಮುಸ್ಲಿಂ ಲೀಗಿಗೆ ಸೇರಿದವರು ಹಾಗೂ ಉಳಿದವರು ಇತರ ಜನವರ್ಗಗಳಿಗೆ ಸೇರಿದವರಾಗಿದ್ದರು.

೧೯೪೬ನೇ ಡಿಸೆಂಬರ್ ೬ ರಂದು ''ಸಂವಿಧಾನ ರಚನಾ ಸಭೆ''ಯ ಮೊದಲ ಅಧಿವೇಶನ ನಡೆಯಿತು. ಮುಸ್ಲಿಂ ಲೀಗ್ ಸಭೆಯಲ್ಲಿ ಭಾಗವಹಿಸಲಿಲ್ಲ. ಸಭೆಯ ಅತ್ಯಂತ ಹಿರಿಯ ಸದಸ್ಯರಾಗಿದ್ದ ಸಚ್ಚಿದಾನಂದ ಸಿನ್ಹಾರವರು ಅಧ್ಯಕ್ಷತೆ ವಹಿಸಿದ್ದರು. ಹಿರಿಯ ಕಾಂಗ್ರೆಸ್ ಧುರೀಣ ಡಾ|| ರಾಜೇಂದ್ರ ಪ್ರಸಾದರವರನ್ನು ''ಸಂವಿಧಾನ ರಚನಾಸಭೆ''ಯ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆಯ್ಕೆಮಾಡಲಾಯಿತು. ಟಿ. ಟಿ. ಕೃಷ್ಣಮಾಚಾರಿಯವರು ಉಪಾಧ್ಯಕ್ಷರಾಗಿ ಆಯ್ಕೆಗೊಂಡರು. ಸಭೆಯಲ್ಲಿ ಅನೇಕ ಉಪಸಮೀತಿಗಳನ್ನು ರಚಿಸಲಾಯಿತು. ಆ ಪೈಕಿ ಪ್ರಮುಖ ಉಪಸಮೀತಿಗಳು ಕೆಳಗಿನಂತಿವೆ.

**೧. ಚಾಲನಾ ಸಮಿತಿ**

**೨. ನಿಯಮಾವಳಿಗಳ ಸಮಿತಿ**

**೩. ಕರಡು ರಚನಾ ಸಮಿತಿ**

**೪. ಸಲಹಾ ಸಮಿತಿ**

**೫. ಕೇಂದ್ರ ವಿಷಯಗಳ ಸಮಿತಿ**

**೬. ಕೇಂದ್ರ ಸಂವಿಧಾನ ಸಮಿತಿ**

**೭. ಪ್ರಾಂತೀಯ ಸಮಿತಿ**

**೮. ಸಂಸ್ಥಾನಗಳ ಸಮಿತಿ**

ಇವುಗಳ ಪೈಕಿ ಅತ್ಯಂತ ಮಹತ್ವದ ''ಕರಡು ರಚನಾ ಸಮಿತಿ ''ಗೆ ಡಾ. ಬಿ. ಆರ್. ಅಂಬೇಡ್ಕರ್‌ಅಧ್ಯಕ್ಷತೆಯಲ್ಲಿ ಏಳು ಸದಸ್ಯರನ್ನು ಆಯ್ಕೆ ಮಾಡಲಾಯಿತು.

ವಿವಿಧ ಉಪ ಸಮಿತಿಗಳು ತಮಗೆ ಸಂಬಂಧಿಸಿದ ವಿಷಯಗಳ ಬಗೆಗೆ ಸಲ್ಲಿಸುವ ವರದಿಗಳನ್ನು ಸಂವಿಧಾನ ರಚನಾ ಸಭೆಯಲ್ಲಿ ಚರ್ಚಿಸಿದ ನಂತರ ಅಂತಿಮ ರೂಪ ಕೊಡುವ ಸಲುವಾಗಿ ಕರಡು ರಚನಾ ಸಭೆಗೆ ಒಪ್ಪಿಸಲಾಗುತ್ತಿತ್ತು. ಕರಡು ರಚನಾ ಸಭೆಯಲ್ಲಿ ೭ ಜನ ಸದಸ್ಯರಿದ್ದರೂ ಡಾ.ಅಂಬೇಡ್ಕರ್ ಅವರನ್ನು ಹೊರತುಪಡಿಸಿ ಒಬ್ಬಿಬ್ಬರು ಸದಸ್ಯರು ಮಾತ್ರ ಕರಡು ರಚನಾ ಕಾರ್ಯದಲ್ಲಿ ಆಸಕ್ತಿಯಿಂದ ಭಾಗವಹಿಸುತ್ತಿದ್ದರು. ಸಂವಿಧಾನ ರಚನೆಯ ಭಾರವನ್ನು ಡಾ.ಅಂಬೇಡ್ಕರ್ ಯಶಸ್ವಿಯಾಗಿ

ನಿಭಾಯಿಸಿದರು. ಸಾವಿರಾರು ವರ್ಷಗಳಿಂದ ಶೋಷಣೆಗೆ ತುತ್ತಾಗಿದ್ದ ಸಮಾಜದಿಂದ ಬಂದ ಡಾ. ಅಂಬೇಡ್ಕರ್ ಈ ದೇಶದಲ್ಲಿರುವ ನಾನಾ ಧರ್ಮ, ಜಾತಿ, ಜನಾಂಗ, ಭಾಷೆ, ರೂಢಿ, ಸಂಪ್ರದಾಯ, ಸಂಸ್ಕೃತಿ ಹಾಗೂ ವಿವಿಧ ಸಾಮಾಜಿಕ ಆರ್ಥಿಕ ಹಿನ್ನೆಲೆಗಳನ್ನು ಅರಿತವರಾಗಿದ್ದರು. ಅದರೊಂದಿಗೆ ಪ್ರಮುಖ ಆಧುನಿಕ ರಾಷ್ಟ್ರಗಳ ಸಂವಿಧಾನ ಹಾಗೂ ರಾಜಕೀಯ ವ್ಯವಸ್ಥೆಗಳ ಆಳವಾದ ಅಧ್ಯಯನ ಮಾಡಿದ್ದರು. ೧೯೩೫ರ ಭಾರತ ಸರಕಾರದ ಕಾನೂನಿನ ಕಾರ್ಯಾಚರಣೆಯ ನಿಕಟ ಪರಿಚಯವನ್ನು ಅವರು ಹೊಂದಿದ್ದರು. ಯಾವ ವ್ಯಕ್ತಿಯನ್ನು ಕೇವಲ ಅಸ್ಪೃಶ್ಯನೆಂಬ ಒಂದೇ ಒಂದು ಕಾರಣಕ್ಕಾಗಿ ಶಾಲೆಯಿಂದ ಶಾಲೆಗೆ ಅಲೆದಾಡುವಂತೆ ಮಾಡಿದರೋ, ತರಗತಿಯ ಹೊರಗೆ ನಿಂತು ಪಾಠ ಕೇಳುವಂತೆ ಮಾಡಿದರೋ, ಅಪರಾತ್ರಿಯಲ್ಲಿ ವಸತಿ ಗೃಹದಿಂದ ಹೊರದಬ್ಬಿದರೋ, ಆ ಡಾ|| ಅಂಬೇಡ್ಕರ್ ತನ್ನೆಲ್ಲ ನೋವುಗಳನ್ನು ನುಂಗಿ ನಂಜುಂಡನಾಗಿ ಒಂದು ಶ್ರೇಷ್ಠ ಸಂವಿಧಾನ ರಚಿಸಿದ್ದು ಒಂದು ಪವಾಡವೇ ಸೈ.

೧೯೪೭ರ ಅಗಷ್ಟ್ ೨೯ರ ೧೯೪೮ರ ಫೆಬ್ರುವರಿ ೨೧ರವರೆಗೆ ಸತತವಾಗಿ ಕಾರ್ಯ ನಿರ್ವಹಿಸಿ ''ಕರಡು ರಚನಾ ಸಭೆ'' ಕರಡು ಸಂವಿಧಾನ ರಚಿಸಿತು.

ಸಂವಿಧಾನ ಸಭೆ ಸುಮಾರು ಮೂರು ವರ್ಷಗಳವರೆಗೆ ಕಾರ್ಯ ನಿರ್ವಹಿಸಿತು. ಒಟ್ಟು ೧೬೫ ದಿನಗಳ ಅವಧಿಯ ೧೭ ಅಧಿವೇಶನಗಳನ್ನು ನಡೆಸಲಾಯಿತು. ಕರಡು ಸಂವಿಧಾನದ ಚರ್ಚೆಗೆ ೧೧೪ ದಿನಗಳನ್ನು ತಗೆದುಕೊಳ್ಳಲಾಯಿತು. ಅಂತಿಮವಾಗಿ ೩೯೫ ಕಲಮುಗಳು (ವಿಧಿಗಳು) ಹಾಗೂ ೯ ಅನುಸೂಚಿ (ಪರಿಶಿಷ್ಟ)ಗಳನ್ನೊಳಗೊಂಡ ಬೃಹತ್ ಗಾತ್ರದ ಸಂವಿಧಾನವನ್ನು ೧೯೪೯ ನೇ ನವಂಬರ್ ೨೬ರಂದು ಈ ದೇಶದ ಜನತೆಯ ಹೆಸರಿನಲ್ಲಿ ಸ್ವೀಕರಿಸಲಾಯಿತು. ಜನವರಿ ೨೬, ೧೯೫೦ ರಂದು ಸಂವಿಧಾನ ಜಾರಿಗೆ ಬಂತು.

## * ವಿಶೇಷ ಲಕ್ಷಣಗಳು

ಪ್ರತಿಯೊಂದು ಸಂವಿಧಾನವೂ ಕೆಲವು ಮೂಲ ಸೂತ್ರಗಳನ್ನು ಆಧರಿಸಿ ಸರಕಾರದ ರಚನೆಯನ್ನು ರೂಪಿಸುತ್ತದೆ. ಈ ಪೈಕಿ ಕೆಲವು ಸೂತ್ರಗಳು ಎಲ್ಲ ದೇಶಗಳಿಗೆ ಸಮಾನವಾಗಿ ಅನ್ವಯಿಸಬಲ್ಲವುಗಳಾದರೆ ಇನ್ನು ಕೆಲ ಸೂತ್ರಗಳು ಆಯಾ ದೇಶಗಳ ವಿಶಿಷ್ಠ ಆರ್ಥಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಇನ್ನಿತರ ಪರಿಸ್ಥಿತಿ ಹಾಗೂ ಸನ್ನಿವೇಶಗಳಿಗೆ ಅನುಗುಣವಾಗಿ ರಚಿಸಿದವುಗಳಾಗಿರುತ್ತವೆ. ಭಾರತ ದೇಶದ ವಿಶೇಷ ಹಾಗೂ ವಿಶಿಷ್ಠ ಪರಿಸ್ಥಿತಿ ಮತ್ತು ಸನ್ನಿವೇಶಗಳಿಗನುಗುಣವಾಗಿ ನಮ್ಮ ಸಂವಿಧಾನ ಅನೇಕ ವಿಶಿಷ್ಠ ಲಕ್ಷಣಗಳನ್ನು ಹೊಂದಿದೆ. ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಗೆ ತಳಹದಿಯಾಗಿ ನಮ್ಮ ಸಂವಿಧಾನ ರೂಪಿಸಿದ ಪ್ರಮುಖ ಲಕ್ಷಣಗಳು ಕೆಳಗಿನಂತಿವೆ.

## ಸುದೀರ್ಘ ಲಿಖಿತ ಸಂವಿಧಾನ

ಸಾಮಾನ್ಯವಾಗಿ ಸಂವಿಧಾನ ಸಂಕ್ಷಿಪ್ತವಾಗಿರುತ್ತದೆ. ನಾಗರಿಕರು ಸುಲಭವಾಗಿ ಓದಿ ಅರಿತುಕೊಳ್ಳಲು ಸಾಧ್ಯಪಾಗುವಂತಿರುತ್ತದೆ. ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಸಂವಿಧಾನ ಸಂಕ್ಷಿಪ್ತ ಸಂವಿಧಾನಕ್ಕೆ ಉತ್ತಮ ಉದಾಹರಣೆಯಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ಭಾರತದ ಸಂವಿಧಾನವು ಲಿಖಿತ ಸಂವಿಧಾನಗಳ ಪೈಕಿ ಅತ್ಯಂತ ಸುದೀರ್ಘವಾದದ್ದಾಗಿದೆ. ವಕೀಲರ ಸ್ವರ್ಗವೆಂದು ಕೂಡ ಅದು ಕರೆಯಲ್ಪಟ್ಟಿದೆ.

ಭಾರತ ವೈವಿಧ್ಯತೆ ಹಾಗೂ ವೈರುಧ್ಯ (ವಿರೋಧಾಭಾಸ)ಗಳನ್ನೊಳಗೊಂಡ ವಿಶಾಲ ದೇಶವಾಗಿದೆ. ವೈವಿಧ್ಯತೆಯಲ್ಲಿ ಏಕತೆ ಮೂಡಿಸುವ ಸಲುವಾಗಿ ಅನವಶ್ಯಕವೆಂದು ಭಾವಿಸಲಾಗುವ ಕೆಲವು ಅಂಶಗಳನ್ನು ಸಂವಿಧಾನದಲ್ಲಿ ಅಳವಡಿಸುವದು ಅಗತ್ಯವಾಗಿತ್ತು. ಅಸ್ಪೃಶ್ಯರು, ಹಿಂದುಳಿದ ವರ್ಗದವರು, ಧಾರ್ಮಿಕ ಹಾಗೂ ಭಾಷಾ ಅಲ್ಪಸಂಖ್ಯಾತರು ಮುಂತಾದವರ ಹಿತರಕ್ಷಣೆಗಾಗಿ ಹಾಗೂ ಅವರಿಗೆಲ್ಲ ಈ ದೇಶದ ಬಗ್ಗೆ ವಿಶ್ವಾಸ, ಅಭಿಮಾನ ಹುಟ್ಟಿಸುವ ಸಲುವಾಗಿ ಅಗತ್ಯವಿರುವ ಅಂಶಗಳನ್ನೊಳಗೊಂಡ ಸಂವಿಧಾನ ರಚನೆ ಅಗತ್ಯವಾಗಿತ್ತು. ಒಕ್ಕೂಟ ವ್ಯವಸ್ಥೆಯನ್ನು ಸ್ವೀಕರಿಸಿರುವ ಈ ದೇಶದಲ್ಲಿ ಕೇಂದ್ರ ಹಾಗೂ ರಾಜ್ಯಗಳಿಗೆ ಸಂಬಂಧಿಸಿದಂತೆ ಒಂದೇ ಸಂವಿಧಾನವಿರುವದರಿಂದ ಮತ್ತು ಚುನಾವಣೆಗಳು, ಲೋಕಸೇವಾ ಆಯೋಗಗಳು, ಅಖಿಲ ಭಾರತ ಸೇವಾವರ್ಗಗಳು, ಸ್ಥಳೀಯ ಸರ್ಕಾರಗಳ ರಚನೆ, ವಿವಿಧ ವರ್ಗಗಳ ಜನರ ಹಿತಾಸಕ್ತಿರಕ್ಷಣೆಗಾಗಿ ನೀಡಬೇಕಾದ ಲಿಖಿತ ಆಶ್ವಾಸನೆ ಈ ಎಲ್ಲ ಕಾರಣಗಳಿಂದಾಗಿ ಸಂವಿಧಾನದ ಗಾತ್ರ ದೊಡ್ಡದಾಗಿದೆ.

## ಸಾರ್ವಭೌಮ, ಪ್ರಜಾಸತ್ತಾತ್ಮಕ ಗಣರಾಜ್ಯ

ನಮ್ಮ ಸಂವಿಧಾನದ ಪೂರ್ವಪೀಠಿಕೆಯಲ್ಲಿ ಭಾರತವನ್ನು ಸಾರ್ವಭೌಮ, ಸಮಾಜವಾದಿ, ಜಾತ್ಯಾತೀತ, ಪ್ರಜಾಸತ್ತಾತ್ಮಕ, ಗಣರಾಜ್ಯವೆಂದು ಘೋಷಿಸಲಾಗಿದೆ. ಭಾರತವು ಸರ್ವತಂತ್ರ ಸ್ವತಂತ್ರ ರಾಷ್ಟ್ರ. ಈ ದೇಶದ ಆಂತರಿಕ ಅಥವಾ ಬಾಹ್ಯ ವಿಷಯಗಳ ಬಗ್ಗೆ ಸ್ವತಂತ್ರವಾಗಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರವೇ ಪರಮಾಧಿಕಾರ ಅಥವಾ ಸಾರ್ವಭೌಮತ್ವ. ಯಾವದೇ ವ್ಯಕ್ತಿಗಳು ಅಥವಾ ದೇಶಗಳು ನಮ್ಮ ಆಂತರಿಕ ಆಡಳಿತ ಅಥವಾ ಹೊರಗಿನವರೊಂದಿಗಿನ ಸಂಬಂಧಗಳ ವಿಷಯದಲ್ಲಿ ಯಾವದೇ ರೀತಿಯ ಹಸ್ತಕ್ಷೇಪ ಮಾಡಲು ಅವಕಾಶವಿಲ್ಲ. ಕಾಮನ್‌ವೆಲ್ತ್ ರಾಷ್ಟ್ರಕೂಟದ ಸದಸ್ಯತ್ವ ನಮ್ಮ ಸಾರ್ವಭೌಮತೆಗೆ ವಿರುದ್ಧವಾಗಿದೆ ಎಂಬುದು ಕೆಲ ವಿಮರ್ಶಕರ ಟೀಕೆ. ಇದು ಸತ್ಯವಲ್ಲ. ಯಾಕೆಂದರೆ ಕಾಮನ್ ವೆಲ್ತ್‌ರಾಷ್ಟ್ರಕೂಟವೆಂಬುದು ಸ್ವತಂತ್ರ ರಾಷ್ಟ್ರಗಳ ಒಕ್ಕೂಟ. ಬ್ರಿಟನ್ನಿನ ರಾಣಿ ಅಥವಾ ರಾಜ ಅದರ ತೋರಿಕೆಯ ಮುಖ್ಯಸ್ಥರಾಗಿರುತ್ತಾರೆ. ಅವರು

ಈ ರಾಷ್ಟ್ರಗಳನ್ನು ಒಂದುಗೂಡಿಸುವ ಸಾಧನ ಮಾತ್ರ. ಅಲ್ಲದೆ ಸ್ವಇಚ್ಛೆಯಿಂದ ಕಾಮನ್‌ವೆಲ್ತ್ ಒಕ್ಕೂಟವನ್ನು ಸೇರಿದ ಭಾರತ ಯಾವದೇ ಸಮಯದಲ್ಲಿ ಅದರಿಂದ ಹೊರಬರುವ ಅಧಿಕಾರ ಹೊಂದಿದೆ.

ಒಂದು ದೇಶದ ನಾಗರಿಕರು ತಮ್ಮನ್ನು ತಾವೇ ಆಳಿಕೊಳ್ಳುವ ಪದ್ಧತಿ ಪ್ರಜಾಪ್ರಭುತ್ವ. ಆಧುನಿಕ ರಾಜ್ಯದ ಜನಸಂಖ್ಯೆ ಅಪಾರವಾಗಿರುವದರಿಂದ ಜನರು ನೇರವಾಗಿ ಸರಕಾರದ ಕಾರ್ಯಗಳಲ್ಲಿ ಭಾಗವಹಿಸಲು ಸಾಧ್ಯವಾಗುವದಿಲ್ಲ. ಆದ್ದರಿಂದ ತಮ್ಮಿಂದ ಆಯ್ಕೆಯಾದ ಪ್ರತಿನಿಧಿಗಳ ಮೂಲಕ ಆಧುನಿಕ ರಾಜ್ಯದ ಜನತೆ ರಾಜ್ಯದ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ. ಪ್ರತಿನಿಧಿಗಳ ಮೂಲಕ ಸರಕಾರದ ಆಡಳಿತ ನಡೆಸುವ ಪದ್ಧತಿಗೆ ಪ್ರತಿನಿಧಿ ಪ್ರಜಾಪ್ರಭುತ್ವ ಅಥವಾ ಅಪ್ರತ್ಯಕ್ಷ ಪ್ರಜಾಪ್ರಭುತ್ವವೆನ್ನುತ್ತಾರೆ. ಭಾರತದಲ್ಲಿರುವದು ಅಪ್ರತ್ಯಕ್ಷ ಪ್ರಜಾಪ್ರಭುತ್ವವಾಗಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳ ಅಧಿಕಾರವನ್ನು ಜನತೆಯಿಂದ ಆಯ್ಕೆಯಾದ ಪ್ರತಿನಿಧಿಗಳು ಚಲಾಯಿಸುತ್ತಾರೆ. ಜನತೆಯ ಅಭಿಪ್ರಾಯದ ಮೇರೆಗೆ ಪ್ರತಿನಿಧಿಗಳು ಆಡಳಿತ ನಡೆಸಬೇಕು. ಅದಕ್ಕೆ ವ್ಯತಿರಿಕ್ತವಾಗಿ ನಡೆದವರು ಮುಂಬರುವ ಚುನಾವಣೆಯಲ್ಲಿ ಜನರಿಂದ ತಿರಸ್ಕರಿಸಲ್ಪಡುತ್ತಾರೆ. ಉದಾ:- ಎಪ್ರಿಲ್/ ಮೇ ೨೦೦೪ ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಭಾರತೀಯ ಜನತಾ ಪಕ್ಷದ ನೇತೃತ್ವದ ಸರಕಾರವನ್ನು ಜನತೆ ಸೋಲಿಸಿದ್ದು ಆ ಪಕ್ಷದ ಸರಕಾರದ ಬಗ್ಗೆ ಜನರ ಅತೃಪ್ತಿಯನ್ನು ತೋರಿಸುತ್ತದೆ. ಇದಕ್ಕೆ ಪ್ರತಿಯಾಗಿ ಪಶ್ಚಿಮ ಬಂಗಾಳದ ಮಾರ್ಕ್ಸಿಸ್ಟ್ ನೇತೃತ್ವದ ಸರಕಾರ ಕಳೆದ 27 ವರ್ಷಗಳಿಂದ ಸತತವಾಗಿ ಜನಬೆಂಬಲಗಳಿಸುತ್ತ ಅಧಿಕಾರದಲ್ಲಿ ಮುಂದುವರಿದಿರುವದು ಆ ಸರಕಾರದ ಬಗ್ಗೆ ಇರುವ ಜನಬೆಂಬಲವನ್ನು ಸೂಚಿಸುತ್ತದೆ.

ಗಣರಾಜ್ಯವೆಂದರೆ ರಾಷ್ಟ್ರದ ಮುಖ್ಯಸ್ಥನು ಜನರಿಂದ ಆಯ್ಕೆಯಾಗುವ ವ್ಯವಸ್ಥೆಯಾಗಿದೆ. ಭಾರತ ದೇಶದ ಸರ್ವೋನ್ನತ ಹುದ್ದೆಯಾದ ರಾಷ್ಟ್ರಪತಿ ಪದವಿಯನ್ನು ಈ ದೇಶದ ಜನರು ಆಯ್ಕೆಮಾಡುವ ವ್ಯಕ್ತಿ ಅಲಂಕರಿಸುತ್ತಾನೆ. ಈ ಆಯ್ಕೆ ಅಪ್ರತ್ಯಕ್ಷ ಚುನಾವಣೆಯ ಮೂಲಕ ನಡೆಯುತ್ತದೆ. ಸಂಸತ್ತಿನ ಕೆಳಮನೆಯಾದ ಲೋಕಸಭೆಯ ಸದಸ್ಯರು ಹಾಗೂ ರಾಜ್ಯಗಳ ವಿಧಾನಸಭೆಗಳ ಸದಸ್ಯರು ಜನತೆಯಿಂದ ಚುನಾಯಿಸ-ಲ್ಪಡುತ್ತಾರೆ. ಸಂಸತ್ತಿನ ಮೇಲ್ಮನೆಯಾದ ರಾಜ್ಯಸಭೆಯ ಸದಸ್ಯರು ರಾಜ್ಯ ವಿಧಾನಸಭೆಯ ಚುನಾಯಿತ ಸದಸ್ಯರಿಂದ ಆಯ್ಕೆಯಾಗುತ್ತಾರೆ. ಲೋಕಸಭೆ, ರಾಜ್ಯಸಭೆ ಹಾಗೂ ರಾಜ್ಯ ವಿಧಾನಸಭೆಗಳ ಚುನಾಯಿತ ಸದಸ್ಯರು ಕೂಡಿಕೊಂಡು ಈ ದೇಶದ ರಾಷ್ಟ್ರಪತಿಯವರನ್ನು ಆಯ್ಕೆಮಾಡುತ್ತಾರೆ. ಜನರಿಂದ ಅಪ್ರತ್ಯಕ್ಷ ಚುನಾವಣೆಯ ಮೂಲಕ ಸರ್ವೋನ್ನತ ಅಧಿಕಾರ ಹೊಂದಿದ ದೇಶದ ರಾಷ್ಟ್ರಪತಿಯವರು ಆಯ್ಕೆಯಾಗುವದರಿಂದ ನಮ್ಮದು ಗಣರಾಜ್ಯವಾಗಿದೆ.

## ಸಮಾಜವಾದ ಹಾಗೂ ಜಾತ್ಯತೀತತೆ

ಮೂಲ ಸಂವಿಧಾನದ ಪೂರ್ವ ಪೀಠಿಕೆಯಲ್ಲಿ ಕೇವಲ ಸಾರ್ವಭೌಮ, ಪ್ರಜಾಸತ್ತಾತ್ಮಕ ಗಣರಾಜ್ಯ ಸ್ಥಾಪನೆಯ ಉದ್ದೇಶವನ್ನು ಸಾರವಾಗಿತ್ತು. ೧೯೭೬ರಲ್ಲಿ ಜಾರಿಗೊಳಿಸಲಾದ ಆಂತರಿಕ ತುರ್ತು ಪರಿಸ್ಥಿತಿಯ ಸಮಯದಲ್ಲಿ ಸಂವಿಧಾನದ ೪೨ನೇ ತಿದ್ದುಪಡಿಯ ಮೂಲಕ ಸಮಾಜವಾದ ಹಾಗೂ ಜಾತ್ಯಾತೀತತೆಯ ಗುರಿಯನ್ನು ಪೂರ್ವಪಿಠಿಕೆಗೆ ಸೇರ್ಪಡೆ ಮಾಡಲಾಯಿತು.

ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅಸಮಾನತೆ ತಾಂಡವವಾಡುತ್ತಿದೆ. ವ್ಯಕ್ತಿವ್ಯಕ್ತಿಗಳ ನಡುವೆ ಹುಟ್ಟು, ಲಿಂಗ, ಸಾಮಾಜಿಕ ಅಂತಸ್ತು ಮುಂತಾದವುಗಳ ಆಧಾರದ ಮೇಲೆ ಭಿನ್ನ ಭೇದ ಕಲ್ಪಿಸಲಾಗುತ್ತಿದೆ ಹಾಗೂ ಶೋಷಣೆ ನಡೆಸಲಾಗುತ್ತಿದೆ. ಶೋಷಣೆ, ದೌರ್ಜನ್ಯ ಮುಂತಾದವುಗಳನ್ನು ತಡೆಗಟ್ಟಿ ಆರ್ಥಿಕ, ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಸಂದರ್ಭಗಳಲ್ಲಿ ಸಮಾನತೆ ತರುವ ಮೂಲಕ ಪ್ರಜಾಪ್ರಭುತ್ವವನ್ನು ಯಶಸ್ವಿಗೊಳಿಸಬೇಕೆಂಬುದು ಸಮಾಜವಾದದ ಉದ್ದೇಶ. ಭಾರತದ ರಾಷ್ಟ್ರಿಯ ಕಾಂಗ್ರೆಸ್ ೧೯೫೭ರಲ್ಲಿ ತಮಿಳುನಾಡಿನ ಆವಡಿಯಲ್ಲಿ ನಡೆಸಿದ ಅಧಿವೇಶನದಲ್ಲಿ ಸಮಾಜವಾದವನ್ನು ತನ್ನ ಗುರಿಯಾಗಿ ಘೋಷಿಸಿತು. ಅಂದಿನಿಂದ ಸರಕಾರದ ಧೋರಣೆಯಲ್ಲಿ ಬದಲಾವಣೆಯಾಗಿ ನಾಗರಿಕರಿಗೆ ಆರ್ಥಿಕ ರಾಜಕೀಯ ಹಾಗೂ ಸಾಮಾಜಿಕ ಸಮಾನತೆ ದೊರಕಿಸಿಕೊಡುವ ದಿಸೆಯಲ್ಲಿ ಪ್ರಯತ್ನ ಸಾಗಿತು. ಆದರೆ ೧೯೯೧ ರಲ್ಲಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಪಿ.ವಿ. ನರಸಿಂಹರಾವ್ ಸರಕಾರದ ಆಗಿನ ಹಣಕಾಸಿನ ಮಂತ್ರಿ (ಈಗಿನ ಪ್ರಧಾನಿ) ಡಾ|| ಮನಮೋಹನಸಿಂಗ್ ನೇತೃತ್ವದಲ್ಲಿ ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣದ ದಿಸೆಯಲ್ಲಿ ಕಾರ್ಯ ಪ್ರವೃತ್ತರಾಗುವ ಮೂಲಕ ಸಮಾಜವಾದದ ಗುರಿಗೆ ಮಂಗಳ ಹಾಡಲಾಯಿತು.

ಯಾವದೇ ಧರ್ಮವನ್ನು ರಾಷ್ಟ್ರೀಯ ಧರ್ಮವನ್ನಾಗಿ ಸ್ವೀಕರಿಸದೇ ಎಲ್ಲ ಧರ್ಮಗಳು ಹಾಗೂ ಅವುಗಳ ಅನುಯಾಯಿಗಳಿಗೆ ಧಾರ್ಮಿಕ ಸ್ವಾತಂತ್ರ್ಯ ನೀಡುವದೇ ಜಾತ್ಯಾತೀತತೆ. ಇಲ್ಲಿ ವ್ಯಕ್ತಿ ತನಗೆ ಸರಿ ಕಂಡ ಧರ್ಮದ ಆಚರಣೆಗಳನ್ನು ನಡೆಸಬಹುದು. ರಾಜ್ಯವು ಧರ್ಮದ ವಿಷಯದಲ್ಲಿ ತಟಸ್ಥವಾಗಿರುತ್ತದೆ. ವ್ಯಕ್ತಿಯು ತಮಗೆ ಸರಿ ಕಂಡ ಧರ್ಮವನ್ನು ಅನುಸರಿಸಬಹುದು ಅಥವಾ ಯಾವುದೇ ಧರ್ಮಾಚರಣೆ ಅನುಸರಿಸದೆ ನಾಸ್ತಿಕನಾಗಿರಬಹುದು. ಧರ್ಮದ ಆಚರಣೆಯ ಆಧಾರದ ಮೇಲೆ ವ್ಯಕ್ತಿ ವ್ಯಕ್ತಿಗಳ ನಡುವೆ ಭೇದ ಭಾವ ಕಲ್ಪಿಸುವದನ್ನು ನಮ್ಮ ಸಂವಿಧಾನ ನಿಷೇಧಿಸಿದೆ.

## ನಮ್ಯ ಅನಮ್ಯತೆಯ ಸಮ್ಮಿಶ್ರಣ

ತಿದ್ದುಪಡಿಯ ಆಧಾರದ ಮೇಲೆ ಒಂದು ಸಂವಿಧಾನದ ನಮ್ಯತೆ ಅಥವಾ

ಅನಮ್ಯತೆ ನಿರ್ಧರಿಸಲ್ಪಡುತ್ತದೆ. ಸುಲಭವಾಗಿ ತಿದ್ದುಪಡಿ ಮಾಡಲು ಸಾಧ್ಯವಿರುವ ಸಂವಿಧಾನವು ನಮ್ಯಸಂವಿಧಾನವಾಗಿದೆ. ಬ್ರಿಟಿಶ್ ಸಂವಿಧಾನ ನಮ್ಯ ಸಂವಿಧಾನದ ಉತ್ತಮ ಉದಾರಣೆಯಾಗಿದೆ. ಸಂಸತ್ತಿನ ಎರಡೂ ಸದನಗಳಲ್ಲಿ ಸಾದಾ ಬಹುಮತದ ಮೂಲಕ ಸಂವಿಧಾನದ ತಿದ್ದುಪಡಿ ಮಾಡಲು ಆ ದೇಶದಲ್ಲಿ ಅವಕಾಶವಿದೆ. ಸಂವಿಧಾನಾತ್ಮಕ ಹಾಗೂ ಸಾದಾ ಕಾನೂನುಗಳ ನಡುವೆ ವ್ಯತ್ಯಾಸವಿದ್ದು ಅವೆರಡರ ತಿದ್ದುಪಡಿ ವಿಧಾನಗಳಲ್ಲಿ ವ್ಯತಾಸವಿದ್ದರೆ, ಆ ಸಂವಿಧಾನಕ್ಕೆ ಅನಮ್ಯ ಸಂವಿಧಾನ-ವೆನ್ನುತ್ತಾರೆ. ಅನಮ್ಯ ಸಂವಿಧಾನದ ತಿದ್ದುಪಡಿಯ ವಿಧಾನ ಕ್ಲಿಷ್ಟಕರವಾಗಿರುತ್ತದೆ. ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಸಂವಿಧಾನ ಅನಮ್ಯ ಸಂವಿಧಾನವಾಗಿದೆ.

ಭಾರತದ ಸಂವಿಧಾನ ಪೂರಾ ನಮ್ಯವೂ ಅಲ್ಲ ಪೂರಾ ಅನಮ್ಯವೂ ಅಲ್ಲ. ಭಾರತದಲ್ಲಿ ಸಂವಿಧಾನದ ತಿದ್ದುಪಡಿಗೆ ಮೂರು ವಿಧಾನಗಳಿವೆ. ಮೊದಲ ವಿಧಾನ ಅತ್ಯಂತ ಕ್ಲಿಷ್ಟಕರವಾಗಿದ್ದು ಸಂಸತ್ತಿನ ಎರಡು ಸದನಗಳಲ್ಲಿ ಹಾಜರಿದ್ದು ಮತ ನೀಡುವವರ ಪೈಕಿ ಮೂರರಲ್ಲಿ ಎರಡರಷ್ಟು ಹಾಗೂ ಸದನದ ಒಟ್ಟು ಸದಸ್ಯರ ಸಂಖ್ಯೆಯ ಬಹುಮತದಿಂದ ತಿದ್ದುಪಡಿ ಮಸೂದೆ ಪಾಸಾದ ನಂತರ ಅರ್ಧದಷ್ಟು ರಾಜ್ಯಗಳ ಶಾಸನಾ ಸಭೆಗಳು ಅದಕ್ಕೆ ಒಪ್ಪಿಗೆ ಕೊಡಬೇಕು. ಉದಾ : ಕೇಂದ್ರ, ರಾಜ್ಯಗಳ ಸಂಬಂಧ ಕುರಿತ ತಿದ್ದುಪಡಿಗೆ ಈ ವಿಧಾನ ಅನುಸರಿಸಬೇಕಾಗುತ್ತದೆ. ಎರಡನೇ ವಿಧಾನದ ಪ್ರಕಾರ ಸಂಸತ್ತಿನ ಎರಡೂ ಸದನಗಳಲ್ಲಿ ಹಾಜರಿದ್ದು ಮತ ನೀಡುವವರ ಪೈಕಿ ಮೂರರಲ್ಲಿ ಎರಡು ಭಾಗ ಹಾಗೂ ಸದನದ ಒಟ್ಟು ಸದಸ್ಯರ ಸಂಖ್ಯೆಯ ಬಹುಮತದ ಮೂಲಕ ತಿದ್ದುಪಡಿ ಮಾಡಲಾಗುತ್ತದೆ. ಉದಾ : ಮೂಲಭೂತ ಹಕ್ಕುಗಳು ಹಾಗೂ ನಿರ್ದೇಶಕ ತತ್ವಗಳು. ಮೂರನೆಯದು ಅತ್ಯಂತ ಸರಳ ವಿಧಾನವಾಗಿದೆ. ಅದರ ಪ್ರಕಾರ ಸಂಸತ್ತಿನ ಎರಡೂ ಸದನಗಳಲ್ಲಿ ಹಾಜರಿದ್ದು ಮತ ನೀಡುವವರಿಂದಲೇ ಸಾದಾ ಬಹುಮತದ ಮೂಲಕ ಸಂವಿಧಾನದ ತಿದ್ದುಪಡಿ ಮಾಡಬಹುದು. ಹೊಸರಾಜ್ಯ ನಿರ್ಮಾಣ, ರಾಜ್ಯಗಳ ಪುನರ್‌ನಿರ್ಮಾಣ ಮುಂತಾದ ವಿಷಯಗಳ ತಿದ್ದುಪಡಿಗೆ ಈ ವಿಧಾನ ಅನ್ವಯಿಸುತ್ತದೆ. ಸಂವಿಧಾನದ ತಿದ್ದುಪಡಿಯ ಮೊದಲನೇ ವಿಧಾನ ಕ್ಲಿಷ್ಟಕರ, ಎರಡನೇ ವಿಧಾನ ಕಡಿಮೆ ಕ್ಲಿಷ್ಟಕರ ಹಾಗೂ ಮೂರನೇ ವಿಧಾನ ಅತ್ಯಂತ ಸರಳವಾದದ್ದಾಗಿರುವದರಿಂದ ಭಾರತ ಸಂವಿಧಾನ ನಮ್ಯ ಅನಮ್ಯಗಳ ಮಿಶ್ರಣವಾಗಿದೆ ಎಂದು ಹೇಳಬಹುದು.

## ಸಂಸದೀಯ ಪದ್ಧತಿ (ಕ್ಯಾಬಿನೆಟ್ ಪದ್ಧತಿ)

ನಮ್ಮ ಸಂವಿಧಾನ ನಿರ್ಮಾಪಕರು ಈ ದೇಶದಲ್ಲಿ ಸ್ವಾತಂತ್ರ್ಯ ಪೂರ್ವದಿಂದಲೂ ಜಾರಿಯಲ್ಲಿದ್ದ ಸಂಸದೀಯ (ಕ್ಯಾಬಿನೆಟ್) ಪದ್ಧತಿಯನ್ನು ಮುಂದುವರಿಸಲು ಸರ್ವಾನುಮತದಿಂದ ನಿರ್ಧರಿಸಿದ್ದಾರೆ. ಅಧ್ಯಕ್ಷೀಯ ಪದ್ಧತಿ ನಮಗೆ

ಹೊಸದು. ಅಲ್ಲದೆ ಅದು ಅಷ್ಟೊಂದು ಸೂಕ್ತವಾದುದಲ್ಲವೆಂದು ನಿರ್ಣಯಿಸಲಾಗಿತ್ತು. ಸಂಸದೀಯ ಪದ್ಧತಿಯಲ್ಲಿ ಶಾಸನಾಂಗ, ಕಾರ್ಯಾಂಗಗಳ ನಡುವೆ ಹೊಂದಾಣಿಕೆ ಇರುತ್ತದೆ. ಕಾರ್ಯಾಂಗ, ಅಂದರೆ ಮಂತ್ರಿಮಂಡಲ ಶಾಸನಾಂಗದಿಂದ ನಿರ್ಮಿಸಲ್ಪಡುತ್ತದೆ. ಶಾಸನಾಂಗದ ಕೆಳಮನೆಯಲ್ಲಿ ಬಹುಮತ ಪಡೆದ ಪಕ್ಷದ ನಾಯಕ ಪ್ರಧಾನಿ- ಯಾಗುತ್ತಾನೆ. ಇತರ ನಾಯಕರು ಮಂತ್ರಿಗಳಾಗುತ್ತಾರೆ. ಶಾಸನಾಂಗದಲ್ಲಿ ಬಹುಮತದ ಬೆಂಬಲವಿರುವವರೆಗೆ ಮಂತ್ರಿಮಂಡಲ ಅಧಿಕಾರದಲ್ಲಿ ಮುಂದುವರಿಯುತ್ತದೆ.

ಸಂಸದೀಯ (ಕ್ಯಾಬಿನೆಟ್) ಪದ್ಧತಿಯ ಇನ್ನೊಂದು ವಿಶೇಷವೆಂದರೆ ಕಾರ್ಯಾಂಗವು ಇಬ್ಬರು ಮುಖ್ಯಸ್ಥರನ್ನು ಹೊಂದಿರುತ್ತದೆ. ಕೇಂದ್ರದಲ್ಲಿ ರಾಷ್ಟ್ರಪತಿ ಹಾಗೂ ರಾಜ್ಯಗಳಲ್ಲಿ ರಾಜ್ಯಪಾಲರು ನಾಮಮಾತ್ರ ಮುಖ್ಯಸ್ಥರಾಗಿರುತ್ತಾರೆ. ಪ್ರಧಾನಿಯನ್ನೊಳಗೊಂಡ ಮಂತ್ರಿಮಂಡಲ ಕೇಂದ್ರದಲ್ಲಿ ನೈಜಕಾರ್ಯಾಂಗವಾದರೆ ರಾಜ್ಯಗಳಲ್ಲಿ ಮುಖ್ಯಮಂತ್ರಿಯನ್ನೊಳಗೊಂಡ ಮಂತ್ರಿಮಂಡಲ ನೈಜ ಕಾರ್ಯಾಂಗ. ಕೇಂದ್ರದಲ್ಲಿ ರಾಷ್ಟ್ರಪತಿಯವರಿಗೆ ಸಂವಿಧಾನ ನೀಡಿದ ಅಧಿಕಾರಗಳನ್ನು ಪ್ರಧಾನಿಯ ನ್ನೊಳಗೊಂಡ ಮಂತ್ರಿಮಂಡಲ ಚಲಾಯಿಸುತ್ತದೆ. ಅದೇ ರೀತಿ ರಾಜ್ಯಗಳಲ್ಲಿ ರಾಜ್ಯಪಾಲರ ಹೆಸರಿನಲ್ಲಿರುವ ಅಧಿಕಾರಗಳನ್ನು ಉಪಯೋಗಿಸಿ ರಾಜ್ಯ ಮಂತ್ರಿ-ಮಂಡಲ ಕಾರ್ಯ ನಿರ್ವಹಿಸುತ್ತದೆ. ವಿವೇಚನಾಧಿಕಾರಗಳನ್ನು ಮಾತ್ರ ರಾಷ್ಟ್ರಪತಿ ಅಥವಾ ರಾಜ್ಯಪಾಲರು ಚಲಾಯಿಸುತ್ತಾರೆ.

## ಒಕ್ಕೂಟ ವ್ಯವಸ್ಥೆ (ಸಂಯುಕ್ತ ಪದ್ಧತಿ)

ಭಾರತ ಬೃಹತ್ ದೇಶವಾಗಿದ್ದು ಜನಾಂಗೀಯ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ಪ್ರಾದೇಶಿಕ ವೈವಿಧ್ಯತೆಯನ್ನು ಹೊಂದಿದೆ. ವೈವಿಧ್ಯತೆಯಲ್ಲಿ ಏಕತೆ ಸಾಧಿಸಬೇಕೆಂದು ನಮ್ಮ ಸಂವಿಧಾನ ಪಿತೃಗಳ ಇಚ್ಛೆಯಾಗಿತ್ತು. ಅಲ್ಲದೇ೧೯೩೫ರ ಭಾರತ ಸರಕಾರದ ಕಾನೂನಿನ ಮೂಲಕ ಒಕ್ಕೂಟದ ಕೆಲ ಅಂಶಗಳನ್ನು ಜಾರಿಗೆ ತರಲು ಪ್ರಯತ್ನಿಸಲಾಗಿತ್ತು. ಈ ಎಲ್ಲ ಕಾರಣಗಳಿಂದಾಗಿ ಭಾರತದಲ್ಲಿ ಒಕ್ಕೂಟ (ಸಂಯುಕ್ತ) ವ್ಯವಸ್ಥೆಯನ್ನು ಜಾರಿಗೆ ತರಲಾಯಿತು.

ಭಾರತ ಒಂದು ಕೇಂದ್ರ ಸರಕಾರ, ೨೮ ರಾಜ್ಯ ಸರಕಾರಗಳು ಹಾಗೂ ೭ ಕೇಂದ್ರಾಡಳಿತ ಪ್ರದೇಶಗಳನ್ನು ಒಳಗೊಂಡ ಒಕ್ಕೂಟ ರಾಜ್ಯವಾಗಿದೆ. ಒಕ್ಕೂಟದ ಲಕ್ಷಣಗಳಾದ ಲಿಖಿತ ಸಂವಿಧಾನ, ಅಧಿಕಾರದ ವಿಭಜನೆ, ದ್ವಿಸರಕಾರ ವ್ಯವಸ್ಥೆ, ಸ್ವತಂತ್ರ ನ್ಯಾಯಾಂಗ ಮುಂತಾದವುಗಳನ್ನು ಭಾರತ ಸಂವಿಧಾನ ನಿರ್ಮಿಸಿದೆ. ಕೇಂದ್ರಪಟ್ಟಿ, ಸಮವರ್ತಿಪಟ್ಟಿ ಹಾಗೂ ರಾಜ್ಯಪಟ್ಟಿ ಹೀಗೆ ಮೂರು ಪಟ್ಟಿಗಳ ಮೂಲಕ ಕೇಂದ್ರ ಹಾಗೂ ರಾಜ್ಯಗಳ ನಡುವೆ ಅಧಿಕಾರ ದ ವಿಭಜನೆ ಮಾಡಿದೆ. ಕೇಂದ್ರ ಪಟ್ಟಿಯಲ್ಲಿ ಬರುವ

೯೭ ವಿಷಯಗಳ ಬಗ್ಗೆ ಕೇಂದ್ರ ಸರಕಾರ ಸಂಪೂರ್ಣ ಅಧಿಕಾರ ಹೊಂದಿವೆ. ಸಮವರ್ತಿ ಪಟ್ಟಿಯಲ್ಲಿ ಬರುವ ೫೨ ವಿಷಯಗಳ ಬಗ್ಗೆ ಕೇಂದ್ರ ಹಾಗೂ ರಾಜ್ಯ ಸರಕಾರಗಳೆರಡೂ ಅಧಿಕಾರ ಹೊಂದಿದೆ. ಈ ಪಟ್ಟಿಲ್ಲಿರುವ ಒಂದೇ ವಿಷಯಕ್ಕೆ ಸಂಬಂಧಿಸಿದಂತೆ ಎರಡೂ ಸರಕಾರಗಳು ಕಾನೂನು ರಚಿಸಿದಾಗ ಕೇಂದ್ರದ ಕಾನೂನು ಮೇಲುಗೈ ಸಾಧಿಸುತ್ತದೆ. ಕೇಂದ್ರ ಕಾನೂನಿಗೆ ವಿರುದ್ಧವಾಗಿರುವ ರಾಜ್ಯದ ಕಾನೂನಿನ ಅಂಶಗಳು ರದ್ದುಗೊಳ್ಳುತ್ತವೆ. ರಾಜ್ಯಪಟ್ಟಿಯಲ್ಲಿರುವ ೬೬ ವಿಷಯಗಳ ಬಗ್ಗೆ ರಾಜ್ಯ ಸರಕಾರಗಳಿಗೆ ಅಧಿಕಾರವಿದೆ. ಆದರೆ ರಾಜ್ಯಗಳು ಬಯಸಿದರೆ ಆ ರಾಜ್ಯಗಳಿಗಾಗಿ ಕೇಂದ್ರ ಸರಕಾರ ರಾಜ್ಯಪಟ್ಟಿಯಲ್ಲಿರುವ ವಿಷಯ ಕುರಿತು ಕಾನೂನು ರಚಿಸಬಹುದು.

ಬ್ರಿಟೀಶ್ ಆಳ್ವಿಕೆಗೆ ಮೊದಲು ಈ ದೇಶ ಎಂದೂ ಒಂದೇ ಆಡಳಿತಕ್ಕೆ ಒಳಪಟ್ಟಿರಲಿಲ್ಲ. ಇಂಥ ಐತಿಹಾಸಿಕ ಹಿನ್ನೆಲೆ ಹಾಗೂ ಭಿನ್ನತೆಗಳನ್ನು ಹೊಂದಿದ ದೇಶದಲ್ಲಿ ಒಕ್ಕೂಟ ವ್ಯವಸ್ಥೆಯನ್ನು ಒಪ್ಪಿಕೊಂಡಿದ್ದರೂ ದೇಶದಲ್ಲಿ ಐಕ್ಯತೆ ಮೂಡಿಸಿ ಬಲಿಷ್ಠರಾಷ್ಟ್ರ ಕಟ್ಟುವ ಸಲುವಾಗಿ ಕೇಂದ್ರವನ್ನು ಬಲಶಾಲಿಯಾಗಿ ನಿರ್ಮಿಸಲಾಗಿದೆ. ಕೇಂದ್ರ ರಾಜ್ಯಗಳ ನಡುವೆ ಅಧಿಕಾರ ವಿಭಜನೆಯಾಗಿದ್ದರೂ ಶೇಷಾಧಿಕಾರಗಳನ್ನು ಕೇಂದ್ರಕ್ಕೆ ಬಿಟ್ಟುಕೊಡಲಾಗಿದೆ. ತುರ್ತು ಪರಿಸ್ಥಿತಿ ಸಾರಿದಾಗಲಂತೂ ರಾಜ್ಯ ಸರಕಾರಗಳನ್ನು ರದ್ದು ಪಡಿಸಿ ಅವುಗಳ ಅಧಿಕಾರವನ್ನು ಕೇಂದ್ರವೇ ಚಲಾಯಿಸಬಹುದು. ಈ ಎಲ್ಲ ಕಾರಣಗಳಿಂದಾಗಿ ಡಾ|| ಕೆ. ಸಿ. ವೇರ್ ಅವರು ನಮ್ಮ ವ್ಯವಸ್ಥೆಯನ್ನು ಅರೆ ಒಕ್ಕೂಟ ವ್ಯವಸ್ಥೆ ಎಂದು ಕರೆದಿದ್ದಾರೆ.

## ಮೂಲಭೂತ ಹಕ್ಕುಗಳು ಹಾಗೂ ಕರ್ತವ್ಯಗಳು

ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಗೆ ಅಗತ್ಯವಾದ ವಾತಾವರಣವನ್ನು ಮೂಲಭೂತ ಹಕ್ಕುಗಳು ನಿರ್ಮಿಸುತ್ತವೆ. ಜನತೆಗೆ ಅಗತ್ಯವಾದ ಹಕ್ಕುಗಳನ್ನು ದೊರಕಿಸಿಕೊಡುವ ಹಾಗೂ ರಕ್ಷಿಸುವ ಜವಾಬ್ದಾರಿ ರಾಜ್ಯದ್ದಾಗಿದೆ. ಪ್ರಜಾಪ್ರಭುತ್ವದ ಯಶಸ್ಸು ನಾಗರಿಕರು ಅನುಭವಿಸುವ ಹಕ್ಕುಗಳನ್ನು ಅವಲಂಬಸಿರುತ್ತದೆ. ಆ ಕಾರಣದಿಂದಾಗಿ ಸಂವಿಧಾನದಲ್ಲಿ ಮೂಲಭೂತಹಕ್ಕುಗಳನ್ನು ಅಳವಡಿಸುವ ಅಗತ್ಯತೆ ಇದೆ. ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಮೂಲ ಸಂವಿಧಾನದಲ್ಲಿ ನಾಗರಿಕ ಹಕ್ಕುಗಳನ್ನು ಅಳವಡಿಸಿರಲಿಲ್ಲ. ತಿದ್ದುಪಡಿಯ ಮೂಲಕ ಹಕ್ಕುಗಳನ್ನು ಸೇರಿಸಿದ ನಂತರವೇ ಆ ದೇಶದ ಜನರು ಸಂವಿಧಾನವನ್ನು ಒಪ್ಪಿಕೊಂಡರು.

ಮೂಲಭೂತ ಹಕ್ಕುಗಳ ವಿಷಯದಲ್ಲಿ ನಮ್ಮ ಸಂವಿಧಾನ ನಿರ್ಮಾಪಕರು ವಿವಿಧ ದೇಶಗಳ ಅನುಭವದಿಂದ ಪ್ರಭಾವಿತರಾಗಿದ್ದಾರೆ. ಅದರೊಂದಿಗೆ ಭಾರತೀಯರು ಅನುಭವಿಸುತ್ತಿದ್ದ ಮೂರು ವಿಶಿಷ್ಟ ಸಮಸ್ಯೆಗಳ ಪ್ರಭಾವ ಕೂಡ ಗಮನಾರ್ಹವಾಗಿದೆ. ಮೊದಲನೆಯದಾಗಿ ಬ್ರಿಟಿಷ್ ದಬ್ಬಾಳಿಕೆಯಿಂದ ಈ ದೇಶದ ಜನತೆ ಅನೇಕ ರೀತಿಯ

ಕಷ್ಟನಷ್ಟಗಳಿಗೆ ತುತ್ತಾಗಿದ್ದರು. ಎರಡನೆಯದಾಗಿ ಅಸ್ಪೃಶ್ಯತೆಯ ಆಚರಣೆಯ ಮೂಲಕ ಈ ದೇಶದ ಆರರಲ್ಲಿ ಒಂದು ಪಾಲು ಜನವರ್ಗವನ್ನು ಪ್ರಾಣಿಗಳಿಗಿಂತ ಕೀಳಾಗಿ ಕಾಣಲಾಗುತ್ತಿತ್ತು. ಮೂರನೇಯದಾಗಿ ಈ ದೇಶದ ಧಾರ್ಮಿಕ ಅಲ್ಪಸಂಖ್ಯಾತರು ವಿಶಿಷ್ಟ ಸಮಸ್ಯೆಗಳನ್ನು ಅನುಭವಿಸುತ್ತಿದ್ದರು. .

ಸಂವಿಧಾನದ ಮೂರನೆಯ ಅಧ್ಯಾಯದಲ್ಲಿ ಬರುವ 12 ರಿಂದ 35 ರವರಗಿನ ಕಲಮುಗಳು ಭಾರತೀಯ ನಾಗರಿಕರಿಗೆ ನೀಡಲಾಗಿರುವ ಮೂಲಭೂತ ಹಕ್ಕುಗಳ ವಿವರಣೆಗೆ ಮೀಸಲಾಗಿವೆ. ಅವು ಕೆಳಗಿನಂತಿವೆ.

೧. ಸಮಾನತೆಯ ಹಕ್ಕು (೧೪ರಿಂದ ೧೮ನೇ ಕಲಮು)
೨. ಸ್ವಾತಂತ್ರ್ಯದ ಹಕ್ಕು (೧೯ ರಿಂದ ೨೨ನೇ ಕಲಮು)
೩. ಶೋಷಣೆ ವಿರೋಧಿಸುವ ಹಕ್ಕು (೨೩, ೨೪ನೇ ಕಲಮು)
೪. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು (೨೫ರಿಂದ ೨೮ನೇ ಕಲಮು)
೫. ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಹಕ್ಕು (೨೯, ೩೦ ನೇ ಕಲಮು)
೬. ಆಸ್ತಿಯ ಹಕ್ಕು (೩೧ನೇ ಕಲಮು) (ಸಂವಿಧಾನದ ೪೨ ನೇ ತಿದ್ದುಪಡಿಯ ಮೂಲಕ ಈ ಹಕ್ಕನ್ನು ರದ್ದುಗೊಳಿಸಲಾಗಿದೆ.)
೭. ಸಂವಿಧಾನಾತ್ಮಕ ಪರಿಹಾರದ ಹಕ್ಕು (೩೨ನೇ ಕಲಮು)

ಮೂಲಭೂತ ಹಕ್ಕುಗಳನ್ನು ನೀಡುವದರೊಂದಿಗೆ ಅವುಗಳ ಉಲ್ಲಂಘನೆಗೆ ಪರಿಹಾರವನ್ನು ಹಕ್ಕಿನ ರೂಪದಲ್ಲಿ ಒದಗಿಸಿಕೊಟ್ಟಿರುವದು ಭಾರತ ಸಂವಿಧಾನದ ವೈಶಿಷ್ಟ್ಯವಾಗಿದೆ.

ಆಂತರಿಕ ತುರ್ತು ಪರಿಸ್ಥಿತಿ ಜಾರಿಯಲ್ಲಿದ್ದ ಸಂದರ್ಭದಲ್ಲಿ (೧೯೭೬)ರಲ್ಲಿ ಆಗಿನ ಪ್ರಧಾನಿ ಇಂದಿರಾ ಗಾಂಧಿಯವರ ಸರಕಾರ ಸಂವಿಧಾನಕ್ಕೆ ೪೨ನೇ ತಿದ್ದುಪಡಿ ಮಾಡಿತು. ಆ ತಿದ್ದುಪಡಿಯ ಮೂಲಕ ೫೧ (A) ಕಲಮನ್ನು ಸೇರಿಸಲಾಯಿತು. ಭಾರತದ ನಾಗರಿಕರ ಮೂಲಭೂತ ಕರ್ತವ್ಯಗಳನ್ನು ಈ ಕಲಮಿನಲ್ಲಿ ವಿವರಿಸಲಾಯಿದೆ. ದೇಶದ ಸಮಗ್ರತೆ, ಐಕ್ಯತೆ ಹಾಗೂ ಸಾರ್ವಭೌಮತೆ ಕಾಪಾಡುವದು; ದೇಶದ ಜನತೆಯಲ್ಲಿ ಸಹೋದರ ಭಾವನೆ ಬೆಳೆಸುವದು; ನಮ್ಮ ಸಮ್ಮಿಶ್ರ ಸಂಸ್ಕೃತಿಯನ್ನು ರಕ್ಷಿಸುವದು; ವೈಜ್ಞಾನಿಕ ಮನೋಭಾವನೆ ಬೆಳೆಸಿಕೊಳ್ಳುವದು; ಪರಿಸರ ರಕ್ಷಣೆ, ಅಹಿಂಸಾ ಪಾಲನೆ, ಸಾರ್ವಜನಿಕ ಆಸ್ತಿ ರಕ್ಷಣೆ ಮುಂತಾದವುಗಳು ಭಾರತೀಯರ ಮೂಲಭೂತ ಕರ್ತವ್ಯಗಳಾಗಿವೆ. ಈ ಕರ್ತವ್ಯಗಳು ನಿರ್ದಿಷ್ಟತೆ ಹೊಂದಿಲ್ಲ. ಅವುಗಳನ್ನು ಪಾಲಿಸದಿದ್ದರೆ ಪರಿಣಾಮವೇ- ನಾಗುತ್ತದೆ ಎಂಬುದನ್ನು ಇನ್ನೂ ತಿಳಿದುಕೊಳ್ಳಬೇಕಾಗಿದೆ.

## ರಾಜ್ಯ ನೀತಿ ನಿರ್ದೇಶಕ ತತ್ವಗಳು

ಸಂವಿಧಾನದ ನಾಲ್ಕನೇ ಭಾಗದಲ್ಲಿರುವ ೩೬ ರಿಂದ ೫೧ ರ ವರೆಗಿನ ಕಲಮುಗಳು ರಾಜ್ಯನೀತಿ ನಿರ್ದೇಶಕ ತತ್ವಗಳನ್ನೊಳಗೊಂಡಿವೆ. ಗಾಂಧಿವಾದ, ಉದಾರವಾದ ಹಾಗೂ ಸಮಾಜವಾದಗಳ ತತ್ವ ಹಾಗೂ ಸತ್ವಗಳನ್ನು ಇವು ಒಳಗೊಂಡಿವೆ. ಐರಿಷ್ ಸಂವಿಧಾನದ ''ಸಮಾಜ ನೀತಿ ನಿರ್ದೇಶಕ ತತ್ವಗಳು'' ಎಂಬ ಅಧ್ಯಾಯದ ಪ್ರಭಾವ ನಮ್ಮ ಸಂವಿಧಾನದ ರಾಜ್ಯನೀತಿ ನಿರ್ದೇಶಕ ತತ್ವಗಳ ಮೇಲೆ ಆಗಿದೆ. ಸುಖೀ ರಾಜ್ಯ ಅಥವಾ ಕಲ್ಯಾಣ ರಾಜ್ಯ ಸ್ಥಾಪನೆ ಈ ತತ್ವಗಳ ಉದ್ದೇಶವಾಗಿದೆ.

ಸಂವಿಧಾನದ ಇತರ ಅಧ್ಯಾಯಗಳು ಹಾಗೂ ರಾಜ್ಯನೀತಿ ನಿರ್ದೇಶಕ ತತ್ವಗಳ ಅಧ್ಯಾಯ ಇವುಗಳ ನಡುವೆ ವ್ಯತ್ಯಾಸವಿದೆ. ಇತರ ಅಧ್ಯಾಯಗಳಲ್ಲಿ ಬರುವ ಅಂಶಗಳು ಕಾನೂನಿನ ಹಾಗೂ ನ್ಯಾಯಾಂಗದ ರಕ್ಷಣೆ ಹೊಂದಿವೆ. ಅವುಗಳ ಉಲ್ಲಂಘನೆಗೆ ನ್ಯಾಯಾಲಯ ಶಿಕ್ಷೆ ವಿಧಿಸುತ್ತದೆ. ನೀತಿ ನಿರ್ದೇಶಕ ತತ್ವಗಳು ಮಾತ್ರ ಕಾನೂನಿನ ರಕ್ಷಣೆ ಹೊಂದಿಲ್ಲ. ಅವುಗಳ ಉಲ್ಲಂಘನೆಗೆ ನ್ಯಾಯಾಲಯಗಳಿಂದ ಶಿಕ್ಷೆ ಇಲ್ಲ. ಇಂಥ ಒಂದು ಅಧ್ಯಾಯವನ್ನು ಸಂವಿಧಾನದಲ್ಲಿ ಸೇರಿಸಿದ್ದೇ ತಪ್ಪು, ಸಂವಿಧಾನದ ಪಾವಿತ್ರ್ಯತೆಗೆ ಅದು ಧಕ್ಕೆ ತರುತ್ತದೆ ಎಂಬ ವಾದ ಕೆಲ ವಿಮರ್ಶಕರದಾಗಿದೆ.

ಕಾನೂನು ಹಾಗೂ ನ್ಯಾಯಾಂಗದ ರಕ್ಷಣೆ ನೀತಿ ನಿರ್ದೇಶಕ ತತ್ವಗಳಿಗೆ ದೊರೆಯದಿದ್ದರೂ ಸಾರ್ವಜನಿಕ ಅಭಿಪ್ರಾಯ ರೂಪುಗೊಳ್ಳುವ ಮೂಲಕ ಸರಕಾರಗಳು ಈ ನಿರ್ದೇಶನಗಳನ್ನು ಜಾರಿಗೆ ತರುವಂತೆ ನೋಡಿಕೊಳ್ಳಬೇಕಾಗಿದೆ. ನ್ಯಾಯಾಂಗ ಕ್ರಮಕ್ಕೆ ಇವುಗಳ ಉಲ್ಲಂಘನೆ ಅವಕಾಶ ಮಾಡಿಕೊಡದಿದ್ದರೂ ಜನತಾ ನ್ಯಾಯಾಲಯದಲ್ಲಿ ಚುನಾವಣೆಯ ಮೂಲಕ ಉಲ್ಲಂಘನೆಗೆ ಶಿಕ್ಷೆ ನೀಡುವ ಅವಕಾಶವಿದೆ. ಅಂದರೆ ನಿರ್ದೇಶಕ ತತ್ವಗಳನ್ನು ಜಾರಿಗೆ ಕೊಡದ ಸರಕಾರವನ್ನು ಸೋಲಿಸುವ ಮೂಲಕ ಜನತೆ ಶಿಕ್ಷೆ ನೀಡಬಹುದು.

ನಮ್ಮ ಸಂವಿಧಾನದಲ್ಲಿ ಅಳವಡಿಸಲಾದ ನೀತಿ ನಿರ್ದೇಶಕ ತತ್ವಗಳು ಕೆಳಗಿನಂತಿವೆ.

೧. ಜೀವನ ನಿರ್ವಹಣೆಗಾಗಿ ಯೋಗ್ಯ ಪರಿಕರ ನಿರ್ಮಾಣ

೨. ಕಲ್ಯಾಣ ರಾಜ್ಯ ಸ್ಥಾಪನೆ

೩. ಸಂಪತ್ತಿನ ಸಮಾನ ವಿತರಣೆ

೪. ೧೪ ವರ್ಷದೊಳಗಿನ ಮಕ್ಕಳಿಗೆ ಕಡ್ಡಾಯದ ಶಿಕ್ಷಣ

೫. ನಿರುದ್ಯೋಗ ನಿವಾರಣೆ

೬. ಸಮಾನ ಕೆಲಸಕ್ಕೆ ಸ್ತ್ರೀ ಪುರುಷರಿಗೆ ಸಮಾನ ವೇತನ

೭. ಬಾಲ್ಯ , ಯೌವನಾವಸ್ಥೆ ಶೋಷಣೆಗೆ ತಡೆ.
೮. ಪಂಚಾಯತರಾಜ್ಯ ವ್ಯವಸ್ಥೆ ನಿರ್ಮಾಣ.
೯. ಸಮಾನ ನಾಗರಿಕ ಸಂಹಿತೆ ಜಾರಿಗೊಳಿಸುವದು.

## ಸ್ವತಂತ್ರ ನ್ಯಾಯಾಂಗ ಹಾಗೂ ನ್ಯಾಯಿಕ ವಿಮರ್ಶೆ

ಯಶಸ್ವಿ ಪ್ರಜಾಪ್ರಭುತ್ವದ ಅಗತ್ಯ ಅಂಶಗಳ ಪೈಕಿ ನ್ಯಾಯಾಂಗ ಸ್ವಾತಂತ್ರ್ಯ ಪ್ರಮುಖ ಸ್ಥಾನ ಹೊಂದಿದೆ. ಸಂವಿಧಾನ ಹಾಗೂ ನಾಗರಿಕರ ಹಕ್ಕುಗಳ ರಕ್ಷಣೆಗಾಗಿ ಸ್ವತಂತ್ರ ನ್ಯಾಯಾಂಗದ ಅಗತ್ಯತೆ ಇದೆ. ನಿರಂಕುಶಾಧಿಕಾರ ತಡೆಗಟ್ಟುವಲ್ಲಿ ನ್ಯಾಯಾಂಗದ ಪಾತ್ರ ಮಹತ್ವದ್ದಾಗಿದೆ.

ನ್ಯಾಯಾಂಗದ ಸ್ವಾತಂತ್ರ್ಯ ರಕ್ಷಣೆಗಾಗಿ ನಮ್ಮ ಸಂವಿಧಾನ ವಿಶೇಷ ವ್ಯವಸ್ಥೆಯನ್ನು ರೂಪಿಸಿದೆ. ನ್ಯಾಯಾಧೀಶರ ನೇಮಕ, ಕಾರ್ಯ ನಿರ್ವಹಣೆ ಹಾಗೂ ತಪ್ಪು ಮಾಡಿದ ನ್ಯಾಯಾಧೀಶನಿಗೆ ಶಿಕ್ಷೆ ವಿಧಿಸುವದಕ್ಕಾಗಿ ವಿಶೇಷ ವಿಧಾನಗಳನ್ನು ಸೂಚಿಸಲಾಗಿದೆ. ಸರ್ವೋನ್ನತ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳ ನ್ಯಾಯಾಧೀಶರನ್ನು ಸರ್ವೋನ್ನತ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರ ಸಲಹೆ ಪಡೆದು ನೇಮಕ ಮಾಡಲಾಗುತ್ತದೆ. ಒಮ್ಮೆ ನೇಮಕ ಹೊಂದಿದ ನಂತರ ನ್ಯಾಯಾಧೀಶರಿಗೆ ಅನನುಕೂಲವಾಗುವಂತೆ ಸೇವಾ ನಿಯಮಗಳನ್ನು ಬದಲಾಯಿಸುವಂತಿಲ್ಲ, ವೇತನ ಕಡಿಮೆ ಗೊಳಿಸುವಂತಿಲ್ಲ. ಭಾರತದ ಸಂಚಿತ ನಿಧಿಯಿಂದ ನ್ಯಾಯಾಧೀಶರಿಗೆ ವೇತನ ನೀಡಲಾಗುತ್ತದೆ. ನ್ಯಾಯಾಧೀಶರ ಪದಚ್ಯುತಿಗೆ ಕೂಡ ವಿಶೇಷ ವಿಧಾನಗಳಿವೆ. ಸಂಸತ್ತಿನ ಎರಡೂ ಸದನಗಳು ಗೊತ್ತುವಳಿ ಪಾಸುಮಾಡಿದರೆ ಮಾತ್ರ ರಾಷ್ಟ್ರಪತಿಯವರು ಸರ್ವೋನ್ನತ ನ್ಯಾಯಾಲಯ ಅಥವಾ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರನ್ನು ವಜಾ ಮಾಡಬಹುದು.

ಸಂವಿಧಾನದ ಅರ್ಥವಿವರಣೆ ಮಾಡುವ ಅಧಿಕಾರ ನ್ಯಾಯಾಂಗಕ್ಕಿದೆ. ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳು ಈ ಅಧಿಕಾರವನ್ನು ಹೊಂದಿವೆ. ಸಂವಿಧಾನದ ರಕ್ಷಣೆಯ ಹೊಣೆಕೂಡ ನ್ಯಾಯಾಂಗದ್ದಾಗಿದೆ. ಅದರೊಂದಿಗೆ ನ್ಯಾಯಿಕ ವಿಮರ್ಶಾಧಿಕಾರ ಕೂಡ ನ್ಯಾಯಾಂಗಕ್ಕಿದೆ. ಶಾಸನಾಂಗ ಹಾಗೂ ಕಾರ್ಯಾಂಗಗಳು ಸಂವಿಧಾನ ನೀಡಿದ ಅಧಿಕಾರ ಚಲಾಯಿಸಿ ತಮ್ಮ ಅಧಿಕಾರದ ಮಿತಿಯಲ್ಲಿ ಕಾರ್ಯ ನಿರ್ವಹಿಸಬೇಕು. ಅದಕ್ಕೆ ತಪ್ಪಿದಲ್ಲಿ ನ್ಯಾಯಾಂಗವು ಶಾಸನಾಂಗ ಅಥವಾ ಕಾರ್ಯಾಂಗದ ಕಾರ್ಯಗಳನ್ನು ಪರಿಶೀಲಿಸಿ ಸಂವಿಧಾನ ನೀಡಿದ ಅಧಿಕಾರದ ಮಿತಿ ಮೀರಿ ನಿರ್ವಹಿಸಿದ ಕಾರ್ಯಗಳನ್ನು ರದ್ದುಗೊಳಿಸುತ್ತದೆ. ನ್ಯಾಯಾಂಗದ ಈ ಕಾರ್ಯವೇ ನ್ಯಾಯಿಕ ವಿಮರ್ಶೆಯಾಗಿದೆ.

## ಸಾರ್ವತ್ರಿಕ ಪ್ರೌಢ ಮತದಾನ

ಪ್ರಜಾಪ್ರಭುತ್ವದಲ್ಲಿ ಪ್ರತ್ಯಕ್ಷ(ನೇರ) ಮತ್ತು ಅಪ್ರತ್ಯಕ್ಷ (ಪ್ರತಿನಿಧಿ) ಪ್ರಜಾಪ್ರಭುತ್ವಗಳೆಂಬ ಎರಡು ಪ್ರಭೇದಗಳಿವೆ. ಪ್ರಾಚೀನ ಗ್ರೀಕ್ ನಗರ ರಾಜ್ಯಗಳಲ್ಲಿ ಪ್ರತ್ಯಕ್ಷ ಪ್ರಜಾಪ್ರಭುತ್ವ ಜಾರಿಯಲ್ಲಿತ್ತು. ಆಧುನಿಕ ರಾಜ್ಯ, ರಾಷ್ಟ್ರ ರಾಜ್ಯ ವಾಗಿದೆ. ರಾಷ್ಟ್ರ ರಾಜ್ಯದ ಜನಸಂಖ್ಯೆ ಅಪಾರವಾಗಿರುತ್ತದೆ. ನಾಗರಿಕರೆಲ್ಲ ನೇರವಾಗಿ ಸರಕಾರದ ಕಾರ್ಯಗಳಲ್ಲಿ ಭಾಗವಹಿಸಲು ಸಾಧ್ಯವಿಲ್ಲ. ಆದ್ದರಿಂದ ಆಧುನಿಕ ರಾಜ್ಯಗಳಲ್ಲಿ ಅಪ್ರತ್ಯಕ್ಷ ಪ್ರಜಾಪ್ರಭುತ್ವ ಜಾರಿಯಲ್ಲಿದೆ. ನಾಗರಿಕರು ಶಾಸನಾಂಗ, ಕಾರ್ಯಾಂಗಗಳಿಗೆ ತಮ್ಮ ಪ್ರತಿನಿಧಿಗಳನ್ನು ಆಯ್ಕೆ ಮಾಡುತ್ತಾರೆ. ಜನಪ್ರತಿನಿಧಿಗಳು ಜನತೆಯ ಪರವಾಗಿ ಕಾರ್ಯ ನಿರ್ವಹಿಸುತ್ತಾರೆ.

ಭಾರತದಲ್ಲಿ ಅಪ್ರತ್ಯಕ್ಷ ಪ್ರಜಾಪ್ರಭುತ್ವ ಜಾರಿಯಲ್ಲಿದೆ. ವಯಸ್ಕ ಮತದಾನ ಪದ್ಧತಿಯ ಮೂಲಕ ಜನ ಪ್ರತಿನಿಧಿಗಳನ್ನು ಆಯ್ಕೆಮಾಡಲಾಗುತ್ತದೆ. ೧೮ವರ್ಷ ವಯಸ್ಸಾದ ಪ್ರತಿಯೊಬ್ಬ ಸ್ತ್ರೀ ಪುರುಷರು ಮತಾಧಿಕಾರ ಹೊದಿರುತ್ತಾರೆ. ವಯಸ್ಕ ಮತದಾರರೆಲ್ಲ ಮತಾಧಿಕಾರ ಚಲಾಯಿಸಿ ಸಂಸತ್ತಿಗೆ ಹಾಗೂ ರಾಜ್ಯ ಶಾಸನಾಂಗಕ್ಕೆ ತಮ್ಮ ಪ್ರತಿನಿಧಿಗಳನ್ನು ಆಯ್ಕೆ ಮಾಡುತ್ತಾರೆ. ಸಾಮಾನ್ಯವಾಗಿ ಲೋಕಸಭೆಗೆ ಆಯ್ಕೆಯಾದ ಪ್ರತಿನಿಧಿಗಳ ಪೈಕಿ ಬಹುಮತ ಪಡೆದ ಪಕ್ಷದ ನಾಯಕನು ಪ್ರಧಾನಿಯಾಗುತ್ತಾನೆ. ಕೆಲವು ಸಲ ರಾಜ್ಯಸಭೆಯ ಸದಸ್ಯನಾದವನು ಪ್ರಧಾನಿಯಾಗಿ ಆಯ್ಕೆ ಹೊಂದಬಹುದು. ಆಡಳಿತ ಪಕ್ಷದ ಇತರ ನಾಯಕರು ಮಂತ್ರಿಗಳಾಗುತ್ತಾರೆ. ಶಾಸನಾಂಗದ ಸದಸ್ಯರು ಜನಾಭಿಪ್ರಾಯದ ಪ್ರಕಾರ ಶಾಸನ ರಚಿಸುತ್ತಾರೆ. ಮಂತ್ರಿಮಂಡಲ ಜನಾಭಿಪ್ರಾಯದ ಮೇರೆಗೆ ದೇಶದ ಆಡಳಿತ ನಡೆಸುತ್ತದೆ. ರಾಜ್ಯದಲ್ಲಿಯೂ ಇದೇ ವಿಧಾನ ಅನುಸರಿಸಲಾಗುತ್ತದೆ.

## ಏಕನಾಗರಿಕತ್ವ

ಒಕ್ಕೂಟ ಪದ್ಧತಿಯ ರಾಷ್ಟ್ರದಲ್ಲಿ ನಾಗರಿಕರು ಎರಡು ನಾಗರಿಕತ್ವ ಪಡೆಯುತ್ತಾರೆ. ಒಂದು ರಾಷ್ಟ್ರದ್ದು, ಇನ್ನೊಂದು ತಾವು ವಾಸಿಸುವ ರಾಜ್ಯದ್ದು. ಭಾರತ ಒಕ್ಕೂಟ ಪದ್ಧತಿಯನ್ನು ಹೊಂದಿದ್ದರೂ ಇಲ್ಲಿ ಒಂದೇ ಒಂದು ನಾಗರಿಕತ್ವ ಇದೆ. ಈ ದೇಶದಲ್ಲಿರುವವರೆಲ್ಲ ಭಾರತದ ನಾಗರಿಕರಾಗಿರುತ್ತಾರೆ. ಅವರು ವಾಸಿಸುವ ರಾಜ್ಯದ ನಾಗರಿಕರಾಗುವದಿಲ್ಲ.

## * ಪೀಠಿಕಾಭಾಗ

ಪ್ರತಿಯೊಂದು ಸಂವಿಧಾನವು ಪ್ರಸ್ತಾವನೆ (ಪೀಠಿಕೆ) ಯೊಂದಿಗೆ ಪ್ರಾರಂಭ ವಾಗುತ್ತದೆ. ಸಂವಿಧಾನವು ನಿರ್ಮಿಸಬಯಸಿರುವ ನೂತನ ವ್ಯವಸ್ಥೆಯ

ಧ್ಯೇಯೋದ್ದೇಶಗಳನ್ನು ಅದು ಒಳಗೊಂಡಿರುತ್ತದೆ. ಪ್ರಸ್ತಾವನೆಗೆ ತನ್ನದೇ ಆದ ಮಹತ್ವ ಇರುತ್ತದೆ. ಸಂವಿಧಾನದ ಅವಕಾಶಗಳು ಸ್ಪಷ್ಟವಾಗಿದ್ದರೆ ಪ್ರಸ್ತಾವನೆಯ ವಿಶ್ಲೇಷಣೆ ಮಾಡಬೇಕಿಲ್ಲ. ಆದರೆ ಸಂವಿಧಾನವು ಅಸ್ಪಷ್ಟವಾಗಿದ್ದಲ್ಲಿ ಅದರ ಸ್ಪಷ್ಟಿಕರಣಕ್ಕಾಗಿ ಅಥವಾ ಅದನ್ನು ಅರ್ಥೈಸುವದಕ್ಕಾಗಿ ಪೀಠಿಕೆ (ಪ್ರಸ್ತಾವನೆ) ಯನ್ನು ಪರಿಶೀಲಿಸಬೇಕಾಗುತ್ತದೆ.

ಗಾಂಧೀಜಿಯವರ ಸ್ವತಂತ್ರ ಭಾರತದ ಕಲ್ಪನೆಯನ್ನು ಸಂವಿಧಾನ ಪೀಠಿಕೆ ಸ್ಪಷ್ಟವಾಗಿ ವ್ಯಕ್ತಗೊಳಿಸುತ್ತದೆ. ಸಂವಿಧಾನದ ಪೀಠಿಕೆಯಲ್ಲಿ ಮಂಡಿತವಾದ ಆಶಯಗಳು ಜವಾಹರಲಾಲ್ ನೆಹರುರವರು ಸಂವಿಧಾನ ರಚನಾಸಭೆಯಲ್ಲಿ ಮಂಡಿಸಿದಂತಹವು ಗಳಾಗಿವೆ. ಫ್ರಾನ್ಸ್ ಹಾಗೂ ರಶಿಯಾದ ಕ್ರಾಂತಿಯ ಆಶಯಗಳು ಕೂಡ ಸಂವಿಧಾನದ ಪೀಠಿಕೆಯಲ್ಲಿ ಅಭಿವ್ಯಕ್ತಗೊಂಡಿವೆ.

ಭಾರತದ ಸಂವಿಧಾನದ ಪೀಠಿಕೆ ಕೆಳಗಿನಂತಿದೆ.

ಭಾರತದ ಪ್ರಜೆಗಳಾದ ನಾವು
ಭಾರತವನ್ನು ಒಂದು ಸಾರ್ವಭೌಮ, ಸಮಾಜವಾದಿ, ಜಾತ್ಯಾತೀತ ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ ರಚಿಸಬೇಕೆಂದೂ;
ಅದರ ಸಮಸ್ತ ನಾಗರಿಕರಿಗೆ
ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ ನ್ಯಾಯವನ್ನು,
ಚಿಂತನೆ, ಅಭಿವ್ಯಕ್ತಿ, ಶ್ರದ್ಧೆ, ನಂಬಿಕೆ ಮತ್ತು ಪೂಜಾ ಸ್ವಾತಂತ್ರ್ಯವನ್ನು,
ಸ್ಥಾನಮಾನ ಮತ್ತು ಅವಕಾಶಗಳ ಸಮಾನತೆಯನ್ನು ಒದಗಿಸಬೇಕೆಂದೂ
ಮತ್ತು ವ್ಯಕ್ತಿ ಘನತೆಯನ್ನು ರಾಷ್ಟ್ರದ ಏಕತೆಯನ್ನೂ ಆಶ್ವಾಸಿಸುವ ಸೋದರತ್ವವನ್ನು ಊರ್ಜಿತಗೊಳಿಸಬೇಕೆಂದೂ
ಪವಿತ್ರವಾದ ರೀತಿಯಲ್ಲಿ ನಿರ್ಣಯಿಸಿ ನಮ್ಮ ಸಂವಿಧಾನ ರಚನಾ ಸಭೆಯಲ್ಲಿ 1949ನೇ ನವಂಬರ್ 26ನೇ ದಿನವಾದ ಇಂದು ಸಂವಿಧಾನವನ್ನು ಅಂಗೀಕರಿಸಿ, ವಿಧಿಗೊಳಿಸಿ ನಮಗೆ ನಾವೇ ನೀಡಿಕೊಳ್ಳುತ್ತಿದ್ದೇವೆ.

ಪಂಡಿತ ನೆಹರು ಮಂಡಿಸಿದ ಈ ಪೀಠಿಕೆಯನ್ನು ಸಂವಿಧಾನ ರಚನಾ ಸಭೆ ಸರ್ವಾನುಮತದಿಂದ ಅಂಗಿಕರಿಸಿತು.

## ಜನರಿಂದ ಅಧಿಕಾರ

ಭಾರತದ ಜನತೆಯಾದ ನಾವು ಎಂಬ ಪದಗಳ ಮೂಲಕ ಪೀಠಿಕೆ(ಪ್ರಸ್ತಾವನೆ) ಪ್ರಾರಂಭಗೊಂಡಿದೆ. ಯಾರ ಇಚ್ಛೆಯ ಮೇರೆಗೆ ಸಂವಿಧಾನ ರೂಪಗೊಳ್ಳುತ್ತದೆಯೋ ಆ ಜನತೆಯ ಅಂತಿಮ ಅಧಿಕಾರ (ಪರಮಾಧಿಕಾರ)ವನ್ನು ಈ ಪದಗಳು ಸ್ಪಷ್ಟಗೊಳಿಸುತ್ತವೆ. ಈ ದೇಶದ ಜನತೆ ತಾವು ಹೊಂದಿರುವ ಅಧಿಕಾರ ಚಲಾಯಿಸಿ

ನೂತನ ಸಂವಿಧಾನವನ್ನು ಹಾಗೂ ಅದರ ಮೂಲಕ ಹೊಸ ರಾಜಕೀಯ ವ್ಯವಸ್ಥೆಯನ್ನು ರೂಪಿಸಿ ತಮಗೆ ತಾವೇ ಅರ್ಪಿಸಿಕೊಳ್ಳುತ್ತಿದ್ದಾರೆಂಬುದು ಸ್ಪಷ್ಟವಾಗುತ್ತದೆ.

ಸಂವಿಧಾನ ರಚನಾ ಸಭೆ ಜನತೆಯಿಂದ ಚುನಾಯಿಸಲ್ಪಟ್ಟಿಲ್ಲ ಹಾಗೂ ಕರಡು ಸಂವಿಧಾನವನ್ನು ಜನತೆಯ ಒಪ್ಪಿಗೆಗೆ ಮುಂಡಿಸಿಲ್ಲವೆಂಬುದು ಕೆಲ ವಿಮರ್ಶಕರ ಟೀಕೆಯಾಗಿದೆ. ಆದರೆ ಭಾರತದ ಸಂವಿಧಾನ ರಚನೆಯ ಸಂದರ್ಭದಲ್ಲಿದ್ದ ಪರಿಸ್ಥಿತಿಯಲ್ಲಿ ಸಂವಿಧಾನ ರಚನೆಗೆ ಜನ ಪ್ರತಿನಿಧಿಗಳ ಆಯ್ಕೆ ಮಾಡುವದು ಹಾಗೂ ಕರಡು ಸಂವಿಧಾನಕ್ಕೆ ಜನತೆಯ ಒಪ್ಪಿಗೆ ಪಡೆಯುವದು ಸಾಧ್ಯವಿರಲಿಲ್ಲ. ೧೯೫೨ರಲ್ಲಿ ನಡೆದ ಮೊದಲ ಸಾರ್ವತ್ರಿಕ ಚುನಾವಣೆಗಳಲ್ಲಿ ಸಂವಿಧಾನ ರಚನಾ ಸಭೆಯ ಸದಸ್ಯರೆಲ್ಲ ಆಯ್ಕೆಯಾಗಿದ್ದು ಹಾಗೂ ಅದನ್ನು ವಿರೋಧಿಸಿದವರೆಲ್ಲ ಸೋತಿದ್ದು ಸಂವಿಧಾನಕ್ಕೆ ಜನತೆ ಸೂಚಿಸಿದ ಒಪ್ಪಿಗೆಯಾಗಿದೆ ಎಂಬುದನ್ನು ಕಂಡುಕೊಳ್ಳಬಹುದಾಗಿದೆ.

**ಸಾರ್ವಭೌಮ ಪ್ರಜಾಸತ್ತಾತ್ಮಕ, ಸಮಾಜವಾದಿ, ಜಾತ್ಯಾತೀತ, ಗಣರಾಜ್ಯ**

ಮೂಲ ಸಂವಿಧಾನದ ಪೀಠಿಕೆ ಭಾರತವನ್ನು ಸಾರ್ವಭೌಮ, ಪ್ರಜಾಸತ್ತಾತ್ಮಕ ಗಣರಾಜ್ಯವೆಂದು ಘೋಷಿಸಿದೆ. ೧೯೫೦ ನೇ ಜನವರಿ ೨೬ರಂದು ಈ ದೇಶ ಸರ್ವತಂತ್ರ ಸ್ವತಂತ್ರ ಗಣರಾಜ್ಯವಾಯಿತು. ಕಾಮನ್‌ವೆಲ್ತ್ ರಾಷ್ಟ್ರ ಕೂಟಗಳ ಸದಸ್ಯತ್ವ ಗಣರಾಜ್ಯಕ್ಕೆ ವ್ಯತಿರಿಕ್ತವಾಗಿದೆ ಎಂಬ ಅಪಸ್ವರಗಳು ಆ ಸಮಯದಲ್ಲಿ ವ್ಯಕ್ತವಾದವು. ಕಾಮನ್‌ವೆಲ್ತ್ ರಾಷ್ಟ್ರಗಳ ಒಕ್ಕೂಟದ ಏಕತೆಯ ಪ್ರತೀಕವಾಗಿ ಬ್ರಿಟಿಶ್ ರಾಣಿ ಅಥವಾ ರಾಜ ಇರುತ್ತಾರೆಯೇ ಹೊರತು ಅವರು ಅದರ ಮುಖ್ಯಸ್ಥರಲ್ಲ. ಅಲ್ಲದೇ ಕಾಮನ್‌ವೆಲ್ತ್ ರಾಷ್ಟ್ರಕೂಟದ ಸದಸ್ಯತ್ವ ಕಡ್ಡಾಯದ್ದಲ್ಲ. ಭಾರತ ಯಾವುದೇ ಸಮಯದಲ್ಲಿ ಆ ಸದಸ್ಯತ್ವ ಬಿಟ್ಟುಕೊಡಬಹುದು.

ಸಾರ್ವಭೌಮ ಎಂಬ ಪದವು ಆಂತರಿಕ ಹಾಗೂ ಬಾಹ್ಯ ಪರಮಾಧಿಕಾರವನ್ನು ಸೂಚಿಸುತ್ತದೆ. ಈ ದೇಶದ ಸರ್ವೋನ್ನತ ಅಧಿಕಾರ ದೇಶದ ನಾಗರಿಕರದಾಗಿದೆ ಎಂಬುದು ಇದರರ್ಥ. ಪ್ರಜಾಸತ್ತಾತ್ಮಕ ಎಂದರೆ ಜನರು ತಮ್ಮನ್ನು ತಾವೇ ಆಳಿಕೊಳ್ಳುವ ವ್ಯವಸ್ಥೆ ಎಂದು ಅರ್ಥ. ರಾಜಕೀಯ ಪ್ರಜಾಪ್ರಭುತ್ವದೊಂದಿಗೆ ಆರ್ಥಿಕ ಹಾಗೂ ಸಾಮಾಜಿಕ ಪ್ರಜಾ ಪ್ರಭುತ್ವವನ್ನೂ ಈ ಪದ ಸೂಚಿಸುತ್ತದೆ. ರಾಷ್ಟ್ರದ ಮುಖ್ಯಸ್ಥನಾದ ರಾಷ್ಟ್ರಪತಿಯು ಜನರ ಪ್ರತಿ ನಿಧಿಯಾಗಿರುತ್ತಾನೆ ಎಂಬುದು ಗಣರಾಜ್ಯದ ಅರ್ಥ. ಈ ದೇಶದ ನಾಗರಿಕರು ಅಪ್ರತ್ಯಕ್ಷ ಚುನಾವಣೆಯ ಮೂಲಕ ರಾಷ್ಟ್ರಪತಿ-ಯವರನ್ನು ಐದು ವರ್ಷಗಳ ಅವಧಿಗೆ ಆಯ್ಕೆ ಮಾಡುತ್ತಾರೆ.

ಸಂವಿಧಾನ ೪೨ನೇ ತಿದ್ದುಪಡಿಯ ಮೂಲಕ ಪೀಠಿಕೆಯಲ್ಲಿ ''ಜಾತ್ಯಾತೀತ, ಸಮಾಜವಾದಿ '' ಪದಗಳನ್ನು ಸೇರಿಸಲಾಗಿದೆ. ಜಾತ್ಯಾತೀತ ಎಂದರೆ ರಾಜ್ಯ ಹಾಗೂ ಧರ್ಮಗಳು ಪ್ರತ್ಯೇಕವಾಗಿದ್ದು ರಾಜ್ಯವು ಯಾವುದೇ ಒಂದು ಧರ್ಮಕ್ಕೆ ಅಧಿಕೃತ ಮಾನ್ಯತೆ

ನೀಡುವದಿಲ್ಲ, ಎಲ್ಲ ಧರ್ಮಗಳಿಗೂ ಸಮಾನ ಪ್ರಾಶಸ್ತ್ಯವಿದೆ. ಈ ದೇಶದ ಜನತೆ ಯಾವುದೇ ಧರ್ಮವನ್ನು ಸೇರುವ ಹಾಗೂ ಧಾರ್ಮಿಕ ಆಚರಣೆ ನಡೆಸುವ ಅಥವಾ ಯಾವುದೇ ಧರ್ಮಕ್ಕೆ ಸೇರದಿರುವ ಮತ್ತು ಧಾರ್ಮಿಕ ಆಚರಣೆ ನಡೆಸದಿರುವ ಅವಕಾಶ ಹೊಂದಿದ್ದಾರೆ.

ಸಮಾಜದ ಎಲ್ಲ ಸದಸ್ಯರ ನಡುವೆ ಸಮಾನತೆ ತರುವದು ಸಮಾಜವಾದದ ಉದ್ದೇಶ. ವ್ಯಕ್ತಿ ವ್ಯಕ್ತಿಗಳ ನಡುವೆ ಧರ್ಮ, ಜಾತಿ, ಲಿಂಗ, ಪ್ರದೇಶ ಅಥವಾ ಇನ್ನಾವುದೇ ಆಧಾರದಿಂದ ರಾಜ್ಯ ವ್ಯತ್ಯಾಸ ಕಲ್ಪಿಸಲಾಗದು. ಪ್ರತಿಯೊಬ್ಬನಿಗೂ ತನ್ನ ಅಭಿವೃದ್ಧಿ ಸಾಧಿಸಿಕೊಳ್ಳಲು ಅಗತ್ಯ ವಾತಾವರಣ ನಿರ್ಮಿಸುವದು ರಾಜ್ಯದ ಕರ್ತವ್ಯ. ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣದ ಪರಿಣಾಮವಾಗಿ ಇಂದು ಸಮಾಜವಾದ ಪೀಠಿಕೆಯಲ್ಲಿ ಉಳಿದಿದೆಯೇ ಹೊರತು ಜಾರಿಯಲ್ಲಿರುವದಿಲ್ಲ.

## ಸಾಮಾಜಿಕ ಆರ್ಥಿಕ ಹಾಗೂ ರಾಜಕೀಯ ನ್ಯಾಯ

ಶತಮಾನಗಳಿಂದ ಕೃತ್ರಿಮ ಅಸಮಾನತೆ ನಿರ್ಮಿಸಿ ಅಸ್ಪೃಶ್ಯರು ಹಾಗೂ ದುರ್ಬಲ ವರ್ಗದವರನ್ನು ಸತತ ಶೋಷಣೆಗೆ ಗುರಿಪಡಿಸುತ್ತಿರುವ ಭಾರತೀಯ ಸಮಾಜದಲ್ಲಿ ಪರಿವರ್ತನೆ ಮಾಡುವ ಉದ್ದೇಶವನ್ನು ಸಂವಿಧಾನದ ಪೀಠಿಕೆ ಸ್ಪಷ್ಟ ಪಡಿಸುತ್ತದೆ. ಈ ದೇಶದ ಎಲ್ಲ ಜನರಿಗೂ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನ್ಯಾಯ ದೊರಕಿಸಿಕೊಡಬೇಕೆಂಬುದು ಇಲ್ಲಿನ ಉದ್ದೇಶವಾಗಿದೆ. ಬಲಿಷ್ಠ ಸಮಾಜ ಕಟ್ಟುವ ಸಲುವಾಗಿ ಇಂಥ ಒಂದು ಪರಿಸರ ನಿರ್ಮಿಸುವದು ಅಗತ್ಯವಾಗಿದೆ.

ಚಿಂತನೆ, ಅಭಿವ್ಯಕ್ತಿ, ಶ್ರದ್ಧೆ, ನಂಬಿಕೆ ಮತ್ತು ಪೂಜಾ ಸ್ವಾತಂತ್ರ್ಯ ಹಾಗೂ ಸಮಷ್ಟಿ (ಸಾಮೂಹಿಕ) ಹಿತದ ದೃಷ್ಟಿಯಿಂದ ವ್ಯಕ್ತಿಯ ಚಿಂತನೆ, ಚಟುವಟಿಕೆಗಳಿಗೆ ಅನುಕೂಲಕರವಾಗಿ ಸಾಮಾಜಿಕ ಪದ್ಧತಿಗಳು ಮತ್ತು ಸನ್ನಿವೇಶಗಳು ಇರಬೇಕಾಗುತ್ತದೆ. ರಾಷ್ಟ್ರೀಯ ಹಿತಕ್ಕೆ ಧಕ್ಕೆ ಆಗದಂತೆ ಜನರು ವೈಯಕ್ತಿಕವಾದ ನಂಬಿಕೆ, ಶ್ರದ್ಧೆ, ಚಿಂತನೆ, ಪೂಜೆ ಹಾಗೂ ಅಭಿಪ್ರಾಯ ಹಂಚಿಕೊಳ್ಳುವ (ಅಭಿವ್ಯಕ್ತಿ) ಸ್ವಾತಂತ್ರ್ಯಕ್ಕೆ ಅಗತ್ಯವಾದ ವಾತಾವರಣವನ್ನು ರಾಜ್ಯ ಕಲ್ಪಿಸಬೇಕು.

## ಸ್ಥಾನಮಾನ ಮತ್ತು ಅವಕಾಶಗಳ ಸಮಾನತೆ

ಸಮಾನತೆ ಎಂದರೆ ಮಾನವ ನಿರ್ಮಿತ ಕೃತ್ರಿಮ ಅಸಮಾನತೆ- ಯನ್ನು ಹೋಗಲಾಡಿಸುವದು ಎಂದರ್ಥ. ಅಕ್ಷರ ಸಂಸ್ಕೃತಿಯಿಂದ ಸಾವಿರಾರು ವರ್ಷಗಳಿಂದ ವಂಚಿತರಾದ ಜನತೆಗೆ ಇತರರೊಂದಿಗೆ ಸಮಾನತೆ ಸಾಧಿಸುವದಕ್ಕಾಗಿ ವಿಶೇಷ ಅವಕಾಶಗಳನ್ನು ದೊರಕಿಸಿಕೊಡಬೇಕಾಗುತ್ತದೆ. ವಿಶೇಷ ಅವಕಾಶಗಳ ಮೂಲಕ ಸಮಾನತೆ ಸಾಧಿಸಿದ ನಂತರವೇ ಸಮಾನ ಅವಕಾಶಗಳ ಮೂಲಕ ತಮ್ಮ ವ್ಯಕ್ತಿತ್ವವನ್ನು

ರೂಪಿಸಿಕೊಳ್ಳಲು ಸಾಧ್ಯವಾಗುತ್ತದೆ. ಅರ್ಹತೆಗೆ ಅನುಗುಣವಾಗಿ ಸ್ಥಾನಮಾನ ಹಾಗೂ ಸಾರ್ವಜನಿಕ ಹುದ್ದೆ ಪಡೆಯಲು ಅಸಮಾನತೆಯ ನಿವಾರಣೆ ತಳಹದಿಯಾಗುತ್ತದೆ.

### ವ್ಯಕ್ತಿಯ ಘನತೆ ಹಾಗೂ ಸೋದರತ್ವ

ವ್ಯಕ್ತಿಯ ಘನತೆ ಹಾಗೂ ರಾಷ್ಟ್ರದ ಐಕ್ಯತೆ ಸಾಧಿಸುವದಕ್ಕಾಗಿ ಸೋದರತ್ವವನ್ನು ಸಂವಿಧಾನದ ಪೀಠಿಕೆ ಪ್ರತಿಪಾದಿಸುತ್ತದೆ. ಫ್ರಾನ್ಸ್‌ನ ಮಹಾಕ್ರಾಂತಿ ಸೋದರತ್ವದ ಸಂದೇಶವನ್ನು ಮೊಟ್ಟ ಮೊದಲಿಗೆ ಸಾರಿತು. ಅದರ ಉದ್ದೇಶ ಸ್ವಾತಂತ್ರ್ಯ ಹಾಗೂ ಸಮಾನತೆಗಳೊಂದಿಗೆ ಸೋದರತ್ವವನ್ನು ಸಾಧಿಸುವದಾಗಿತ್ತು. ಪ್ರತಿಯೊಬ್ಬ ವ್ಯಕ್ತಿಗೆ ಘನತೆ ಗೌರವದ ಸ್ಥಾನ ದೊರೆಯಬೇಕು. ಆ ದಿಸೆಯಲ್ಲಿ ರಾಜ್ಯ ಕಾರ್ಯಪ್ರವೃತ್ತ ವಾಗಬೇಕೆಂಬುದು ಫ್ರೆಂಚ್ ಕ್ರಾಂತಿಯ ಆಶಯಗಳನ್ನೊಳಗೊಂಡ ನಮ್ಮ ಸಂವಿಧಾನದ ಪೀಠಿಕೆಯ ಆಶಯವಾಗಿದೆ.

ಭಾರತ ಸಂವಿಧಾನದ ಪೀಠಿಕೆಯು ಇದುವರೆಗಿನ ಎಲ್ಲ ಸಂವಿಧಾನಗಳ ಪೀಠಿಕೆಗಳಲ್ಲೇ ಉತ್ತಮವಾದದ್ದೆಂದು ಪರಿಗಣಿಸಲ್ಪಟ್ಟಿದೆ. ಆದರ್ಶಗಳಲ್ಲಿ ಹಾಗೂ ಅವುಗಳ ಅಭಿವ್ಯಕ್ತಿಯಲ್ಲಿ ನಮ್ಮದು ಉತ್ಕೃಷ್ಟವಾದದ್ದು. ಅದು ಸಂವಿಧಾನದ ಸತ್ವವನ್ನು ಪ್ರತಿಬಿಂಬಿಸುತ್ತದೆ. ನ್ಯಾಯ, ಸಮಾನತೆ, ಸ್ವಾತಂತ್ರ್ಯ ಮತ್ತು ಸೋದರತ್ವವನ್ನು ಪ್ರತಿಪಾದಿಸುತ್ತದೆ. ಸ್ವತಂತ್ರವಾದ ನೂತನ ರಾಷ್ಟ್ರ ಕಟ್ಟುವ ಸಲುವಾಗಿ ಒಂದುಗೂಡ ಬೇಕೆಂಬ ಭಾರತದ ಜನತೆಯ ನಿರ್ಧಾರವನ್ನು ಅದು ಪ್ರತಿಬಿಂಬಿಸುತ್ತದೆ. ಪೀಠಿಕೆಯು ಸಂವಿಧಾನದ ಮೂಲ ಸ್ವರೂಪವೆಂದು ಸರ್ವೋನ್ನತ ನ್ಯಾಯಾಲಯ ಪರಿಗಣಿಸಿದೆ. ಪಂಡಿತ ಠಾಕೂರದಾಸ್ ಭಾರ್ಗವ ಅವರು ''ಪೀಠಿಕೆಯು ಸಂವಿಧಾನದ ಅಮೂಲ್ಯ ಭಾಗ, ಅದು ಸಂವಿಧಾನದ ಆತ್ಮ'' ಎಂದು ಹೇಳಿದ್ದಾರೆ.

## * ಮೂಲಭೂತ ಹಕ್ಕುಗಳು ಹಾಗೂ ಕರ್ತವ್ಯಗಳು

ಪ್ರಜಾಪ್ರಭುತ್ವದ ಯಶಸ್ಸು ಒಂದು ದೇಶದ ನಾಗರಿಕರು ಪಡೆದುಕೊಂಡ ಸ್ವಾತಂತ್ರ್ಯ ಹಾಗೂ ಹಕ್ಕುಗಳನ್ನು ಅವಲಂಬಿಸಿರುತ್ತದೆ. ವ್ಯಕ್ತಿಯ ಜೀವನದ ಉನ್ನತಿ ಸಾಧನೆಗೆ ಅಗತ್ಯವಾದ ಅವಕಾಶ ನಿರ್ಮಿಸುವ ಅಂಶಗಳೇ ಹಕ್ಕುಗಳು. ಹಕ್ಕುಗಳನ್ನು ಒದಗಿಸಿಕೊಡುವ ಮೂಲಕ ರಾಜ್ಯ ತನ್ನ ನಾಗರಿಕರ ಸರ್ವತೋಮುಖ ಅಭಿವೃದ್ಧಿಗೆ ಅವಕಾಶ ಮಾಡಿ ಕೊಡುತ್ತದೆ. ರಾಜ್ಯದ ಭದ್ರತೆಗೆ ಧಕ್ಕೆಯಾಗದಂತೆ ನಾಗರಿಕರು ಈ ಹಕ್ಕುಗಳನ್ನು ಉಪಯೋಗಿಸಿಕೊಂಡು ತಮ್ಮ ಅಭಿವೃದ್ಧಿ ಸಾಧಿಸಬೇಕು. ಆ ಕಾರಣಕ್ಕಾಗಿ ನಾಗರಿಕ ಹಕ್ಕುಗಳನ್ನು ಸಂವಿಧಾನದಲ್ಲಿ ಅಳವಡಿಸುವ ಮೂಲಕ ಶಾಸನಾಂಗ ಅಥವಾ ಕಾರ್ಯಾಂಗದಿಂದ ಅವುಗಳ ಉಲ್ಲಂಘನೆಯಾಗದಂತೆ ನೋಡಿಕೊಳ್ಳಲಾಗುತ್ತದೆ.

ಭಾರತ ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳನ್ನೊಳಗೊಂಡ ಒಂದು ಅಧ್ಯಾಯವನ್ನು ಸೇರಿಸಬೇಕೆಂಬ ವಿಚಾರವನ್ನು ಸಂವಿಧಾನ ರಚಾನಾ ಸಭೆಯ ಸದಸ್ಯರೆಲ್ಲ ಹೊಂದಿದ್ದರು. ಅಮೇರಿಕ ಸಂಯುಕ್ತ ಸಂಸ್ಥಾನಗಳು, ಜಪಾನ್ ಹಾಗೂ ಬರ್ಮಾ (ಮ್ಯಾನ್‌ಮಾರ್) ಸಂವಿಧಾನಗಳಲ್ಲದೇ ವಿಶ್ವಸಂಸ್ಥೆ ಸ್ವೀಕರಿಸಲಿದ್ದ ಮಾನವ ಹಕ್ಕುಗಳ ಸನದಿನ ಪ್ರಭಾವ ಸಂವಿಧಾನ ನಿರ್ಮಾಪಕರ ಮೇಲಾಗಿತ್ತು. ಈ ಮುಂದೆ ವಿವರಿಸಲಾದ ಅಂಶಗಳು ಕೂಡ ಅವರ ಮೇಲೆ ಪ್ರಭಾವ ಬೀರಿದ್ದವು. ಮೊದಲನೆಯದಾಗಿ ಬ್ರಿಟೀಶ್‌ರ ನಿರಂಕುಶ ಆಡಳಿತದ ಪರಿಣಾಮವಾಗಿ ಆಗುತ್ತಿದ್ದ ಅನ್ಯಾಯಗಳು, ಎರಡನೆಯದಾಗಿ ಜಾತಿ ವ್ಯವಸ್ಥೆ ಹಾಗೂ ಅದರ ಪರಿಣಾಮವಾಗಿ ಈ ದೇಶದ ಒಂದು ಜನವರ್ಗ ಸಾವಿರಾರು ವರ್ಷಗಳಿಂದ ಅನುಭವಿಸುತ್ತದ್ದ ಅಸ್ಪೃಶ್ಯತೆ, ಅಮಾನವೀಯ ಹಿಂಸೆ ಹಾಗೂ ದೌರ್ಜನ್ಯ ಮತ್ತು ಮೂರನೆಯದಾಗಿ ಈ ದೇಶದಲ್ಲಿರುವ ಜನಾಂಗೀಯ ಹಾಗೂ ಭಾಷಾ ಅಲ್ಪ ಸಂಖ್ಯಾತರು ಅನುಭವಿಸುತ್ತಿದ್ದ ಅಥವಾ ಅನುಭವಿಸಬೇಕಾಗಿದ್ದ ಸಮಸ್ಯೆಗಳು.

ಹಕ್ಕುಗಳು ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಗೆ ಅಗತ್ಯವಾದ ವಾತಾವರಣ ನಿರ್ಮಿಸುತ್ತವೆ. ಅವುಗಳಿಲ್ಲದೇ ಪರಿಪೂರ್ಣತೆ ಸಾಧಿಸಲು ವ್ಯಕ್ತಿಗೆ ಸಾಧ್ಯವಾಗುವದಿಲ್ಲ. ಆಕಾರಣದಿಂದಾಗಿಯೇ ಅವುಗಳಿಗೆ ಮೂಲ ಭೂತ ಹಕ್ಕುಗಳೆಂದು ಹೆಸರಿಸಿ ನಮ್ಮ ಸಂವಿಧಾನದಲ್ಲಿ ಅಳವಡಿಸಲಾಗಿದೆ. ಮೂಲಭೂತ ಹಕ್ಕುಗಳಿಗೆ ನ್ಯಾಯಾಂಗದ ರಕ್ಷಣೆ ಇದೆ. ಅವುಗಳ ವಿರುದ್ಧ ರಚಿಸಲಾದ ಕಾನೂನು ಅಥವಾ ಕಾರ್ಯಾಂಗದ ಕಾರ್ಯಗಳನ್ನು ನ್ಯಾಯಾಂಗ ರದ್ದುಗೊಳಿಸುತ್ತದೆ.

## ಮೂಲಭೂತ ಹಕ್ಕುಗಳ ಲಕ್ಷಣಗಳು

ಮೂಲಭೂತ ಹಕ್ಕುಗಳು ೧೨ ರಿಂದ ೩೫ ರವರಗಿನ ಕಲಮುಗಳ ನ್ನೊಳಗೊಂಡ ಸಂವಿಧಾನದ ಮೂರನೇ ಅಧ್ಯಾಯದಲ್ಲಿವೆ. ಅವುಗಳನ್ನು ಎಂಟು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಮೊದಲನೆಯ ವಿಭಾಗ ಮೂಲಭೂತ ಹಕ್ಕುಗಳಿಗೆಲ್ಲ ಅನ್ವಯಿಸುವ ಕೆಲವು ಸಾಮಾನ್ಯ ಅವಕಾಶಗಳನ್ನು ಒಳಗೊಂಡಿದೆ. ಇತರ ಏಳು ವಿಭಾಗಗಳು ಬೇರೆ ಬೇರೆ ಹಕ್ಕುಗಳನ್ನು ವಿವರಿಸುತ್ತವೆ. ಅವುಗಳೆಂದರೆ ಸಮಾನತೆಯ ಹಕ್ಕು, ಸ್ವಾತಂತ್ರ್ಯದ ಹಕ್ಕು, ಶೋಷಣೆಯ ವಿರುದ್ಧದ ಹಕ್ಕು, ಧಾರ್ಮಿಕ ಸ್ವಾತಂತ್ರ್ಯದ ಹಕ್ಕು, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಹಕ್ಕುಗಳು, ಆಸ್ತಿಯ ಹಕ್ಕು (ಸಂವಿಧಾನದ ೪೪ ನೇ ತಿದ್ದುಪಡಿಯ ಮೂಲಕ ಈ ಹಕ್ಕನ್ನು ರದ್ದುಗೊಳಿಸಲಾಗಿದೆ) ಹಾಗೂ ಸಂವಿಧಾನಾತ್ಮಕ ಪರಿಹಾರದ ಹಕ್ಕು. ಸಂವಿಧಾನಾತ್ಮಕ ಪರಿಹಾರದ ಹಕ್ಕು ಮೂಲಭೂತ ಹಕ್ಕುಗಳ ರಕ್ಷಣೆಯ ವಿಧಾನಗಳನ್ನು ವಿವರಿಸುತ್ತದೆ.

ಅಮೇರಿಕಾ ಸಂಯುಕ್ತ ಸಂಸ್ಥಾನಗಳ ನಾಗರಿಕ ಹಕ್ಕುಗಳು ಅಲ್ಲಿಯ ಕೇಂದ್ರ ಸರಕಾರದ ಅಧಿಕಾರದ ಮೇಲೆ ಮಿತಿ ಹೇರುತ್ತವೆ. ಭಾರತದ ಮೂಲಭೂತ ಹಕ್ಕುಗಳು

ಕೇಂದ್ರ ಹಾಗೂ ರಾಜ್ಯ ಸರಕಾರಗಳಲ್ಲದೆ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಅಧಿಕಾರದ ಮೇಲೂ ಮಿತಿ ಹೇರುತ್ತವೆ. ಬ್ರಿಟನ್‌ನ ನಾಗರಿಕ ಹಕ್ಕುಗಳು ಸಂಸತ್ತಿನ ಪರಮಾಧಿಕಾರಕ್ಕೆ ಒಳಪಟ್ಟಿವೆ. ಆದರೆ ಭಾರತದಲ್ಲಿ ಮೂಲಭೂತ ಹಕ್ಕುಗಳನ್ನು ವಿಶೇಷ ವಿಧಾನಗಳ ಮೂಲಕ ಮಾತ್ರ ತಿದ್ದುಪಡಿಗೆ ಒಳಪಡಿಸಬಹುದು.

ಮೂಲಭೂತ ಹಕ್ಕುಗಳ ವಿಷಯದಲ್ಲಿ ನಾಗರಿಕರು ಮತ್ತು ವಿದೇಶಿಯರ ನಡುವೆ ವ್ಯತ್ಯಾಸ ಕಲ್ಪಿಸಲಾಗಿದೆ. ವಾಕ್ ಸ್ವಾತಂತ್ರ್ಯ, ಸಭಾ ಸ್ವಾತಂತ್ರ್ಯ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕುಗಳು ನಾಗರಿಕರಿಗೆ ಮಾತ್ರ ದೊರೆಯುತ್ತವೆ.ಸಮಾನತೆಯ ಹಕ್ಕು, ಧಾರ್ಮಿಕ ಸ್ವಾತಂತ್ರ್ಯದ ಹಕ್ಕು,ಮುಂತಾದವುಗಳು ನಾಗರಿಕರೊಂದಿಗೆ ವಿದೇಶಿಯರಿಗೂ ದೊರೆಯುತ್ತವೆ.

ಮೂಲಭೂತ ಹಕ್ಕುಗಳನ್ನು ಹೊರತುಪಡಿಸಿ ಇತರ ಹಕ್ಕುಗಳನ್ನು ರಾಜ್ಯಕ್ಕೆ ವಿರೋಧವಾಗಿ ಪಡೆಯುವಂತಿಲ್ಲ. ಸಂವಿಧಾನದಲ್ಲಿ ಸೇರ್ಪಡೆಯಾಗಿರದ ಹಕ್ಕುಗಳನ್ನು ಜನರಿಗೆ ದೊರಕಿಸಿ ಕೊಡುವ ಅಧಿಕಾರ ಭಾರತದ ನ್ಯಾಯಾಂಗಕ್ಕಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಅಮೇರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಸಂವಿಧಾನ ಒಳಗೊಂಡಿರದ ಹಕ್ಕುಗಳನ್ನು ಕೂಡಾ ರಕ್ಷಿಸುವ ಅಧಿಕಾರ ನ್ಯಾಯಾಂಗಕ್ಕಿದೆ.

ಮೂಲಭೂತ ಹಕ್ಕುಗಳು ಅನಿರ್ಬಂಧಿತವಲ್ಲ. ಸಮಾಜ, ರಾಷ್ಟ್ರ ಹಾಗೂ ವ್ಯಕ್ತಿ ಸ್ವಾತಂತ್ರ್ಯಗಳ ದೃಷ್ಟಿಯಿಂದ ಅವುಗಳ ಮೇಲೆ ಮಿತಿ ಹೇರಬಹುದು. ಬೇರೆಯವರಿಗೆ ಅಪಮಾನವಾಗುವ ರೀತಿಯಲ್ಲಿ ವಾಕ್ ಸ್ವಾತಂತ್ರ್ಯವನ್ನು ಉಪಯೋಗಿಸಲು ಬರುವದಿಲ್ಲ. ದೇಶದ ಭದ್ರತೆ ಅಥವಾ ಸಮಾಜದ ಶಾಂತಿ ಕಾಪಾಡುವ ದೃಷ್ಟಿಯಿಂದಲೂ ವಾಕ್ ಸ್ವಾತಂತ್ರ್ಯದ ಮೇಲೆ ಮಿತಿ ಹೇರಬಹುದು.

ಕೆಲವೊಂದು ವಿಶಿಷ್ಟ ಪರಿಸ್ಥಿಗಳಲ್ಲಿ ಮೂಲಭೂತ ಹಕ್ಕುಗಳನ್ನು ಸ್ಥಗಿತಗೊಳಿಸಬಹುದು.ದೇಶದಲ್ಲಿ ಆಂತರಿಕ ಅಥವಾ ಬಾಹ್ಯ ತುರ್ತು ಪರಿಸ್ಥಿತಿ ಸಾರಿದಾಗ ಸ್ವಾತಂತ್ರ್ಯದ ಹಕ್ಕು ಮತ್ತು ಇನ್ನಿತರ ಹಕ್ಕುಗಳನ್ನು ತಡೆ ಹಿಡಿಯಬಹುದು. ಇಂಥ ಸಂದರ್ಭದಲ್ಲಿ ನ್ಯಾಯಾಲಯಗಳು ಕೂಡ ಹಕ್ಕುಗಳನ್ನು ದೊರಕಿಸಿಕೊಡುವ ಅಧಿಕಾರ ಹೊಂದಿಲ್ಲ. ನಿಜವಾದ ಗಂಡಾಂತರ ಪರಿಸ್ಥಿಯನ್ನು ದೇಶ ಎದುರಿಸುತ್ತಿದ್ದರೆ ಈ ರೀತಿ ಹಕ್ಕುಗಳನ್ನು ತಡೆ ಹಿಡಿಯುವದು ತಪ್ಪಲ್ಲ. ಆದರೆ ಸ್ವಾರ್ಥ ಸಾಧನೆಗಾಗಿ ಅಧಿಕಾರದಾಹದಿಂದ ಈ ರೀತಿ ಮಾಡಿದರೆ ನಮ್ಮ ಸಂವಿಧಾನವನ್ನೇ ದುರುಪಯೋಗ ಪಡಿಸಿಕೊಂಡಂತೆ ಆಗುತ್ತದೆ. ೧೯೭೫ರಲ್ಲಿ ಇಂದಿರಾ ಗಾಂಧಿ ಅಧಿಕಾರ ಲಾಲಸೆಯಿಂದ ಆಂತರಿಕ ತುರ್ತು ಪರಿಸ್ಥಿತಿ ಸಾರಿದ್ದನ್ನು ಇಲ್ಲಿ ನೆನೆಯಬಹುದು.

ಮೂಲಭೂತ ಹಕ್ಕುಗಳಿಗೆ ನ್ಯಾಯಾಂಗದ ರಕ್ಷಣೆ ಇದೆ. ಭಾರತ ಸಂವಿಧಾನವು ಹಕ್ಕುಗಳ ಪಟ್ಟಿಯನ್ನು ಮಾತ್ರ ನೀಡದೇ ಅವುಗಳ ಉಲ್ಲಂಘನೆಗೆ ಪರಿಹಾರವನ್ನೂ

ಸೂಚಿಸಿದೆ. ವ್ಯಕ್ತಿಗಳಾಗಲಿ, ಸರಕಾರವಾಗಲಿ, ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸಿದಾಗ ನ್ಯಾಯಾಲಯಗಳ ಮೊರೆ ಹೋಗಬಹುದು. ಮೂಲ ಭೂತ ಹಕ್ಕುಗಳಿಗೆ ಚ್ಯುತಿಯುಂಟು ಮಾಡಿದವರ ಮೇಲೆ ಕ್ರಮ ತೆಗೆದುಕೊಳ್ಳುವ ಮೂಲಕ ನ್ಯಾಯಾಂಗ ಅವುಗಳನ್ನು ರಕ್ಷಿಸುತ್ತದೆ.

## ಹಕ್ಕುಗಳ ವಿವರಣೆ

### ಸಮಾನತೆಯ ಹಕ್ಕು (೧೪, ೧೫, ೧೬, ೧೭ ಹಾಗೂ ೧೮ನೇ ಕಲಮು)

ನಮ್ಮ ಸಂವಿಧಾನದ೧೪ ನೇ ಕಲಮಿನ ಪ್ರಕಾರ ಕಾನೂನಿನ ಎದಿರು ಎಲ್ಲರೂ ಸಮಾನರು. ರಾಜ್ಯವು ಎಲ್ಲರನ್ನು ಸಮಾನ ದೃಷ್ಟಿಯಿಂದ ಕಾಣಬೇಕು. ಎಲ್ಲರಿಗೂ ಸಮಾನವಾಗಿ ಕಾನೂನಿನ ರಕ್ಷಣೆ ನೀಡಬೇಕು. ಎಲ್ಲ ವರ್ಗಗಳ ಜನರೂ ಕಾನೂನಿಗೆ ಬದ್ಧರಾಗಿ ನಡೆದುಕೊಳ್ಳಬೇಕು. ಈ ಕಲಮು ಪಕ್ಷಪಾತ ಮಾಡುವ ಕಾನೂನಿನ ರಚನೆ ಅಥವಾ ಕಾರ್ಯಾಚರಣೆಯನ್ನು ನಿರ್ಬಂಧಿಸುತ್ತದೆ. ಶಾಸನಾಂಗ ಅಥವಾ ಕಾರ್ಯಾಂಗದ ಸ್ವೇಚ್ಛಾಚಾರ ಅಥವಾ ಪಕ್ಷಪಾತದ ಕಾರ್ಯಗಳ ವಿರುದ್ಧ ಈ ಕಲಮು ರಕ್ಷಣೆ ನೀಡುತ್ತದೆ.

೧೫ನೇ ಕಲಮಿನ ಪ್ರಕಾರ ಧರ್ಮ, ಜಾತಿ, ಜನಾಂಗ, ಲಿಂಗ, ಜನ್ಮ ಸ್ಥಳ, ಮುಂತಾದವುಗಳ ಆಧಾರದ ಮೇಲೆ ರಾಜ್ಯವು ಪಕ್ಷಪಾತ ಮಾಡುವದನ್ನು ನಿಷೇಧಿಸಲಾಗಿದೆ. ಸಾರ್ವಜನಿಕ ಉಪಹಾರ ಗೃಹಗಳು, ಸಾರ್ವಜನಿಕ ಬಾವಿ, ಅಂಗಡಿ, ಸಾರ್ವಜನಿಕ ವಿಶ್ರಾಂತಿ ಗೃಹ, ಕೆರೆ, ಸ್ನಾನ ಘಟ್ಟ, ರಸ್ತೆ ಮುಂತಾದವುಗಳಲ್ಲಿ ಮೇಲೆ ವಿವರಿಸಿದವುಗಳ ಆಧಾರಗಳ ಮೇಲೆ ಪ್ರವೇಶ ತಡೆಗಟ್ಟುವಂತಿಲ್ಲ. ಇದಕ್ಕೆ ಎರಡು ಅಪವಾದಗಳಿವೆ. ೧. ಸ್ತ್ರೀಯರು ಮತ್ತು ಮಕ್ಕಳಿಗಾಗಿ ಸರಕಾರ ವಿಶೇಷ ಅವಕಾಶ ಮಾಡಿಕೊಡಬಹುದು. ೨. ಅನುಸೂಚಿತ (ಪರಿಶಿಷ್ಟ) ಜಾತಿ/ಅನುಸೂಚಿತ(ಪರಿಶಿಷ್ಟ) ಬುಡಕಟ್ಟುಗಳಿಗಾಗಿ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿಗಾಗಿ ಕೂಡ ಸರಕಾರ ವಿಶೇಷ ಅವಕಾಶ ಮಾಡಿಕೊಡಬಹುದು.

೧೬ ನೇ ಕಲಮು ಸಾರ್ವಜನಿಕ ಉದ್ಯೋಗಿಗಳಿಗೆ ಸಂಬಂಧಿಸಿದಂತೆ ಸಮಾನ ಅವಕಾಶವನ್ನು ದೊರಕಿಸಿಕೊಡುತ್ತದೆ. ಧರ್ಮ, ಜಾತಿ, ಜನಾಂಗ,ಲಿಂಗ, ವಾಸಸ್ಥಾನ ಇವುಗಳ ಆಧಾರದ ಮೇಲೆ ಸರಕಾರಿ ಉದ್ಯೋಗವನ್ನು ನಿರಾಕರಿಸುವಂತಿಲ್ಲ. ಈಅವಕಾಶಕ್ಕಿರುವ ಅಪವಾದಗಳು ಮೂರು. ಮೊದಲನೆಯದಾಗಿ ವಾಸಸ್ಥಾನದ ಅರ್ಹತೆಯನ್ನು ನಿಗದಿ ಪಡಿಸಬಹುದು. ಆದರೆ ಇದಕ್ಕೆ ಅಗತ್ಯ ನಿಯಮಗಳು ಸಂಸತ್ತಿನಿಂದ ರಚಿಸಲ್ಪಡಬೇಕು.ಎರಡನೇಯದಾಗಿ ಹಿಂದುಳಿದ ವರ್ಗಗಳಿಗೆ ಸ್ಥಾನ ಮೀಸಲಿಡಬಹುದು. ಹಿಂದುಳಿದ ವರ್ಗಗಳು ಯಾವವು ಎಂಬುದನ್ನು ರಾಜ್ಯಗಳೇ ನಿರ್ಧರಿಸುತ್ತವೆ. ಮೂರನೆಯದಾಗಿ ಧಾರ್ಮಿಕ ಮತ್ತು ಸಾಂಪ್ರದಾಯಿಕ ಸಂಸ್ಥೆಗಳ ಆಡಳಿತವನ್ನು ಅದಕ್ಕೆ ಅವಕಾಶವಿರುವ ಯಾವುದೇ ಕಾನೂನಿನ ಪ್ರಕಾರ ನಿರ್ವಹಿಸುವ ಅವಕಾಶ ಕಲ್ಪಿಸಲಾಗಿದೆ.

೧೭ನೇ ಕಲಮು ಅಸ್ಪೃಶ್ಯತೆಯನ್ನು ರದ್ದುಗೊಳಿಸುತ್ತದೆ. ಯಾವದೇ ರೂಪದಲ್ಲಿ ಅಸ್ಪೃಶ್ಯತೆಯ ಆಚರಣೆ ಕಾನೂನಿನ ಪ್ರಕಾರ ಶಿಕ್ಷಾರ್ಹ ಅಪರಾಧವಾಗಿದೆ. ನಿರಂತರ ದಾಸ್ಯ ಮತ್ತು ಹತಾಶೆಯಿಂದ, ತೇಜೋವಧೆ ಮತ್ತು ಅಪಮಾನಗಳಿಂದ, ಗುಲಾಮಗಿರಿಗಿಂತ ಕೆಟ್ಟದಾದ ಶೋಷಣೆಯಿಂದ ಮುಕ್ತ ಗೊಳಿಸುವ ಸನ್ನದು ಇದಾಗಿದೆ. ಅಸ್ಪೃಶ್ಯತೆಯು ಲಕ್ಷಾಂತರ ಭಾರತೀಯರನ್ನು ಖಿನ್ನತೆ, ಹತಾಶೆ, ನಾಚಿಕೆ, ಮತ್ತು ಅಪಮಾನಗಳ ಬೇಗೆಯಲ್ಲಿ ನಿರಂತರ ಬೇಯುವಂತೆ ಮಾಡಿತ್ತು. ದಾಸ್ಯ ಮತ್ತು ಹತಾಶೆಯಿಂದ, ತೇಜೋವಧೆ ಮತ್ತು ಅಪಮಾನಗಳಿಂದ ಭಾರತದ ಆರನೇ ಒಂದು ಭಾಗವನ್ನು ಗಾಸಿಗೊಳಿಸಿತ್ತು. ಅಸ್ಪೃಶ್ಯತೆ ನಿಷೇಧ ಅವರಿಗೆಲ್ಲ ಜೀವ ಚೈತನ್ಯ ನೀಡಿದೆ. ಸಮಾಜದಲ್ಲಿ ನಾವು ಸಮಾನರಾಗಿ ತಲೆಯೆತ್ತಿ ನಡೆಯುವ, ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ, ಇತರರೊಂದಿಗೆ ಸಮಾನ ಸ್ಥಾನ ಪಡೆಯುವ ಅವಕಾಶ ನೀಡಿದೆ.

೧೮ನೇ ಕಲಮು ಬಿರುದುಗಳನ್ನು ರದ್ದುಗೊಳಿಸುತ್ತದ. ಸಮಾಜದಲ್ಲಿ ಕೃತ್ರಿಮ ಭೇದಭಾವ ಕಲ್ಪನೆಗೆ ಅವಕಾಶ ನಿಡುವ ಬಿರುದುಗಳ ನೀಡಿಕೆಯನ್ನು ಸಾರಾಸಗಟಾಗಿ ಈ ಕಲಮು ನಿರ್ಬಂಧಿಸುತ್ತದೆ. ಶೈಕ್ಷಣಿಕ ಮತ್ತು ಮಿಲಿಟರಿಗೆ ಸಂಬಂಧಿಸಿದ ವಿಶೇಷ ಸಾಧನೆಗಾಗಿ ನೀಡುವ ಪ್ರಶಸ್ತಿಗಳನ್ನು ಹೊರತು ಪಡಿಸಿ ಇತರ ಯಾವದೇ ಬಿರುದುಗಳಿಗೆ ಈ ಕಲಮಿನ ಪ್ರಕಾರ ಅವಕಾಶವಿಲ್ಲ. ವಿದೇಶಗಳ ಪ್ರಶಸ್ತಿ ಪಡೆಯುವಾಗಲೂ ರಾಷ್ಟ್ರಪತಿಯವರ ಅನುಮತಿ ಪಡೆಯುವದು ಕಡ್ಡಾಯವಾಗಿದೆ.

ಬಿರುದು ನೀಡಿಕೆ ಹಾಗೂ ಸ್ವೀಕಾರವನ್ನು ಸಂವಿಧಾನ ರದ್ದುಪಡಿಸಿದ್ದರೂ ಭಾರತ ಸರಕಾರ ಭಾರತ ರತ್ನ, ಪದ್ಮ ವಿಭೂಷಣ, ಪದ್ಮಭೂಷಣ, ಹಾಗೂ ಪದ್ಮಶ್ರೀ ಪ್ರಶಸ್ತಿಗಳನ್ನು ಕೊಡುತ್ತಲೇ ಇದೆ. ೧೯೭೭ ರಲ್ಲಿ ಅಧಿಕಾರಕ್ಕೆ ಬಂದ ಜನತಾ ಸರಕಾರದ ಅವಧಿಯಲ್ಲಿ ಮಾತ್ರ ಪದ್ಮಶ್ರೀ ಪ್ರಶಸ್ತಿ ಕೊಡುವದನ್ನು ನಿಲ್ಲಿಸಲಾಗಿತ್ತು. ೧೯೮೦ ರಿಂದ ಪ್ರಶಸ್ತಿ ನೀಡಿಕೆ ಮುಂದುವರೆದಿದೆ.

## ಸ್ವಾತಂತ್ರ್ಯದ ಹಕ್ಕು (೧೯,೨೦,೨೧ ಹಾಗೂ ೨೨ ನೇ ಕಲಮು)

ವೈಯಕ್ತಿಕ ಸ್ವಾತಂತ್ರ್ಯ ಮೂಲಭೂತ ಹಕ್ಕುಗಳಲ್ಲಿಯೇ ಅತ್ಯಂತ ಮಹತ್ವದ್ದು. ಸಂವಿಧಾನದ ಪೀಠಿಕೆಯಲ್ಲೇ ಸ್ವಾತಂತ್ರ್ಯದ ಉಲ್ಲೇಖವಿರುವದು ಅದರ ಮಹತ್ವವನ್ನು ಸಾಬೀತು ಪಡಿಸುತ್ತದೆ.

ಸಂವಿಧಾನದ ೧೯ ನೇ ಕಲಮು ಆಶ್ವಾಸನೆ ನೀಡಿದ ಏಳು ಸ್ವಾತಂತ್ರ್ಯಗಳು ಕೆಳಗಿನಂತಿವೆ.

೧. ವಾಕ್ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯ.

೨. ಶಾಂತಿಯುತವಾಗಿ, ನಿರಾಯುಧರಾಗಿ ಸಭೆ ಸೇರುವ ಸ್ವಾತಂತ್ರ್ಯ.

೩. ಸಂಘ ಸಂಸ್ಥೆಗಳನ್ನು ರಚಿಸಿಕೊಳ್ಳುವ ಸ್ವಾತಂತ್ರ್ಯ.

೪. ಭಾರತದಾದ್ಯಂತ ಸಂಚರಿಸುವ ಸ್ವಾತಂತ್ರ್ಯ.
೫. ಭಾರತದ ಯಾವದೇ ಪ್ರದೇಶದಲ್ಲಿ ನೆಲೆಸುವ ಸ್ವಾತಂತ್ರ್ಯ.
೬. ಆಸ್ತಿಗಳಿಸುವ, ಉಪಯೋಗಿಸುವ, ಮಾರಾಟ ಮಾಡುವ ಸ್ವಾತಂತ್ರ್ಯ.
೭. ವೃತ್ತಿ, ಉದ್ಯೋಗ, ವ್ಯಾಪಾರ ಅಥವಾ ವಾಣಿಜ್ಯ ನಡೆಸುವ ಸ್ವಾತಂತ್ರ್ಯ.

**ವಾಕ್ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯ :-** ಪ್ರಜಾ ಪ್ರಭುತ್ವದ ಯಶಸ್ಸು ವಾಕ್ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯವನ್ನವಲಂಬಿಸಿದೆ. ವ್ಯಕ್ತಿ ತನ್ನ ಅಭಿಪ್ರಾಯ ವ್ಯಕ್ತಗೊಳಿಸಲು, ವಿನಿಮಯ ಮಾಡಿಕೊಳ್ಳಲು ಅಭಿವ್ಯಕ್ತಿ ಸ್ವಾತಂತ್ರ್ಯ ಅಗತ್ಯವಾಗಿದೆ. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮಾಧ್ಯಮಗಳ ಮೂಲಕವೂ ಚಲಾಯಿಸಬಹುದು. ವಾಕ್ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಕೆಲ ಮಿತಿಗಳಿವೆ. ಅವುಗಳೆಂದರೆ ರಾಜ್ಯದ ಭದ್ರತೆ, ವಿದೇಶಗಳೊಂದಿಗಿನ ಮೈತ್ರಿ, ಸಾರ್ವಜನಿಕ ಶಿಸ್ತು, ನೈತಿಕತೆ, ನ್ಯಾಯಾಂಗ ಗೌರವ, ಮಾನಹಾನಿ ಹಾಗೂ ಹಿಂಸೆಗೆ ಪ್ರಚೋದನೆ.

**ಸಭೆ ಸೇರುವ ಸ್ವಾತಂತ್ರ್ಯ :-** ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಪೂರಕವಾಗಿ ಶಾಂತಿಯುತವಾಗಿ ಹಾಗೂ ಆಯುಧಗಳಿಲ್ಲದೆ ಸಭೆ ಸೇರುವ ಸ್ವಾತಂತ್ರ್ಯವಿದೆ. ಅಭಿಪ್ರಾಯವಿನಿಮಯಕ್ಕಾಗಿ ಹಾಗೂ ಒಂದುಗೂಡಿ ಕಾರ್ಯ ನಿರ್ವಹಿಸುವದಕ್ಕಾಗಿ ಆಯುಧ ರಹಿತವಾಗಿ ಹಾಗೂ ಶಾಂತಿಯುತವಾಗಿ ಸಭೆ ಸೇರುವುದಕ್ಕೆ ಈ ಸ್ವಾತಂತ್ರ್ಯ ಅವಕಾಶವನ್ನು ಮಾಡಿಕೊಡುತ್ತದೆ.

**ಸಂಘ ಸಂಸ್ಥೆಗಳನ್ನು ರಚಿಸಿಕೊಳ್ಳುವ ಸ್ವಾತಂತ್ರ್ಯ :-** ವ್ಯಕ್ತಿ ಸಮಾಜ ಜೀವಿಯಾಗಿರುವದರೊಂದಿಗೆ ರಾಜಕೀಯ ಜೀವಿ ಕೂಡ ಆಗಿದ್ದಾನೆ. ಸಾಮಾಜಿಕ, ರಾಜಕೀಯ, ಆರ್ಥಿಕ ಹಾಗೂ ಇತರ ಚಟುವಟಿಕೆಗಳನ್ನು ನಡೆಸುವದಕ್ಕಾಗಿ ಅವನು ಸಂಘ ಸಂಸ್ಥೆಗಳನ್ನು ಕಟ್ಟಿಕೊಳ್ಳುವದು ಅವಶ್ಯವಾಗಿದೆ. ಒಬ್ಬೊಂಟಿಗನಾಗಿ ಸಾಧಿಸಲಾಗದ್ದನ್ನು ಸಮಾನ ಮನಸ್ಕರೊಂದಿಗೆ ಸಂಘ ಸಂಸ್ಥೆಗಳನ್ನು ರಚಿಸಿಕೊಳ್ಳುವ ಮೂಲಕ ಸಾಧಿಸಲು ಸಾಧ್ಯವಾಗುತ್ತದೆ. ಉದಾ:- ಕಾರ್ಮಿಕ ಸಂಘ, ರೈತ ಕೂಲಿಕಾರ ಸಂಘ, ಸರಕಾರಿ ನೌಕರರ ಸಂಘ, ವಿದ್ಯಾರ್ಥಿ ಸಂಘ ಮುಂತಾದವುಗಳು. ದೇಶದ ಸಮಗ್ರತೆ, ಸಾರ್ವಭೌಮತ್ವಗಳ ರಕ್ಷಣೆಗಾಗಿ ಈ ಸ್ವಾತಂತ್ರ್ಯದ ಮೇಲೆ ಮಿತಿ ವಿಧಿಸಬಹುದು. ಉದಾ:- ಪೋಲಿಸ್ ಹಾಗೂ ರಕ್ಷಣಾ ಇಲಾಖೆಗಳ ನೌಕರರು ಸಂಘಟನೆ ಮಾಡಿಕೊಳ್ಳಲು ಅವಕಾಶವಿಲ್ಲ.

**ಸಂಚಾರ ಸ್ವಾತಂತ್ರ್ಯ:-** ಭಾರತದ ಯಾವದೇ ಭಾಗದಲ್ಲಿ ಸಂಚರಿಸುವ ಸ್ವಾತಂತ್ರ್ಯವನ್ನು ಸಂವಿಧಾನದ ೧೯ (d) ಕಲಮು ಭಾರತದ ನಾಗರಿಕರಿಗೆ ನೀಡಿದೆ. ಇತರ ಹಕ್ಕುಗಳನ್ನು ಅನುಭವಿಸುವದಕ್ಕಾಗಿ ಸಂಚಾರ ಸ್ವಾತಂತ್ರ್ಯದ ಅವಶ್ಯಕತೆ ಇದೆ. ಜನತೆಯ ಆರೋಗ್ಯ ರಕ್ಷಣೆಗಾಗಿ ಸೂಕ್ತ ನಿರ್ಬಂಧಗಳನ್ನು ಹೇರುವ ಅಧಿಕಾರ ಸರಕಾರಕ್ಕಿದೆ. ಉದಾ:- ಸಾಂಕ್ರಾಮಿಕ ರೋಗ ಹರಡದಿರುವ ಸಲುವಾಗಿ ರೋಗ ಪೀಡಿತನ ಸಂಚಾರದ ಮೇಲೆ ನಿರ್ಬಂಧ ವಿಧಿಸಬಹುದು. ಅನುಸೂಚಿತ (ಪರಿಶಿಷ್ಟ) ಜಾತಿ ಹಾಗೂ ಅನುಸೂಚಿತ

(ಪರಿಶಿಷ್ಟ) ಜನಾಂಗಗಳ ಹಿತ ರಕ್ಷಣೆಯ ದೃಷ್ಟಿಯಿಂದ ಸಂಚಾರ ಸ್ವಾತಂತ್ರ್ಯದ ಮೇಲೆ ನಿರ್ಬಂಧ ವಿಧಿಸಬಹುದು.

**ದೇಶದ ಯಾವದೇ ಭಾಗದಲ್ಲಿ ವಾಸಿಸುವ ಸ್ವಾತಂತ್ರ್ಯ** :- ಭಾರತದ ನಾಗರಿಕನು ಈ ದೇಶದ ಯಾವದೇ ಭಾಗದಲ್ಲಿ ನೆಲೆಸುವ ಅವಕಾಶ ಹೊಂದಿದ್ದಾನೆ. ಕಾಶ್ಮೀರದ ವಿಶೇಷ ಪರಿಸ್ಥಿತಿ ಹಾಗೂ ನಮ್ಮ ಸಂವಿಧಾನ ಕಾಶ್ಮೀರಕ್ಕೆ ನೀಡಿರುವ ವಿಶಿಷ್ಟ ಸ್ಥಾನಮಾನಗಳ ಕಾರಣದಿಣದಾಗಿ ಕಾಶ್ಮೀರಿಗಳಲ್ಲದವರಿಗೆ ಅಲ್ಲಿ ನೆಲೆ ನಿಲ್ಲಲು ಅವಕಾಶವಿಲ್ಲ. ಇದು ಈ ದೇಶದ ನಾಗರಿಕರ ವಾಸಿಸುವ ಸ್ವಾತಂತ್ರ್ಯಕ್ಕೆ ಅಪವಾದವಾಗಿದೆ.

**ವೃತ್ತಿ, ಉದ್ಯೋಗ, ವ್ಯಾಪಾರ ಅಥವಾ ವ್ಯವಹಾರ ಸ್ವಾತಂತ್ರ್ಯ** :- ಸಂವಿಧಾನದ೧೯ ೧. (g) ಕಲಮು ಈ ದೇಶದ ನಾಗರಿಕರಿಗೆ ಯಾವುದೇ ವೃತ್ತಿ, ಉದ್ಯೋಗ, ವ್ಯಾಪಾರ ಅಥವಾ ವ್ಯವಹಾರ ನಡೆಸುವ ಸ್ವಾತಂತ್ರ್ಯವನ್ನು ನೀಡಿದೆ. ಈ ದೇಶದ ಜಟಿಲ ಸಾಮಾಜಿಕ ವ್ಯವಸ್ಥೆಯಲ್ಲಿ ವೃತ್ತಿ ಜಾತಿಯನ್ನವಲಂಬಸಿದೆ. ಆದ್ದರಿಂದ ವೃತ್ತಿ ಬದಲಾವಣೆ ಮಾಡುವವರನ್ನು ಭಾರತೀಯ ಸಮಾಜ ಸಹಿಸುವದಿಲ್ಲ. ಆ ಕಾರಣದಿಂದಾಗಿ ಇಂಥ ಒಂದು ಸ್ವಾತಂತ್ರ್ಯ ನೀಡುವ ಅಗತ್ಯತೆ ಕಂಡು ಬಂತು.ಈ ಸ್ವಾತಂತ್ರ್ಯದ ಮೇಲೆ ಸರಕಾರ ವೃತ್ತಿ ಸಂಬಂಧದ ಅಥವಾ ತಾಂತ್ರಿಕ ಅರ್ಹತೆ ವಿಧಿಸಬಹುದು. ಹಾಗೂ ಯಾವದೇ ವ್ಯಾಪಾರ, ವ್ಯವಹಾರ, ಕೈಗಾರಿಕೆ ಅಥವಾ ಉದ್ದಿಮೆಯನ್ನು ಸರಕಾರ ನೇರವಾಗಿ ಅಥವಾ ಸರಕಾರಿ ನಿಗಮದ ಮೂಲಕ ನಿಯಂತ್ರಿಸಬಹುದು.

೨೦ ನೇ ಕಲಮು ಅಪರಾಧಿಗೆ ಶಿಕ್ಷೆ ವಿಧಿಸುವ ಕುರಿತು ಕೆಳಗಿನಂತೆ ವಿವರಣೆ ನೀಡುತ್ತದೆ.

i) ಅಪರಾಧ ನಡೆದ ಸಂದರ್ಭದಲ್ಲಿ ಜಾರಿಯಲ್ಲಿದ್ದ ಕಾನೂನಿನ ಉಲ್ಲಂಘನೆ ಆದರೆ ಮಾತ್ರ ಶಿಕ್ಷೆ ವಿಧಿಸಬಹುದು. ii) ಅಪರಾಧ ನಡೆದ ಸಂದರ್ಭದಲ್ಲಿ ಜಾರಿಯಲ್ಲಿದ್ದ ಕಾನೂನಿನ ಪ್ರಕಾರ ಶಿಕ್ಷೆ ವಿಧಿಸಬೇಕು. ಕಾನೂನು ವಿಧಿಸುವ ಶಿಕ್ಷೆಗಿಂತ ಹೆಚ್ಚಿನ ಶಿಕ್ಷೆ ನೀಡಬಾರದು. iii) ಒಂದೇ ಅಪರಾಧಕ್ಕೆ ಒಂದಕ್ಕಿಂತ ಹೆಚ್ಚು ಸಾರಿ ಶಿಕ್ಷೆ ವಿಧಸಬಾರದು. iv) ಆರೋಪಿತ ವ್ಯಕ್ತಿ ತನ್ನ ವಿರುದ್ಧ ತಾನೇ ಸಾಕ್ಷಿ ಹೇಳುವಂತೆ ಬಲಾತ್ಕರಿಸಕೂಡದು.

೨೧ ನೇ ಕಲಮಿನ ಪ್ರಕಾರ ಯಾವದೇ ವ್ಯಕ್ತಿಯ ಜೀವ ಅಥವಾ ಸ್ವಾತಂತ್ರ್ಯವನ್ನು ಕಾನೂನಿನ ವಿಧಾನಗಳನ್ನು ಹೊರತುಪಡಿಸಿ ಬೇರೆ ರೀತಿಯಿಂದ ನಿರಾಕರಿಸಕೂಡದು. ಕಾನೂನು ಪ್ರಕಾರ ಮಾತ್ರ ಜೀವ ಅಥವಾ ಸ್ವಾತಂತ್ರ್ಯ ಕಿತ್ತುಕೊಳ್ಳಬಹುದು. ಈ ಕಲಮು ಶಾಸನಾಂಗ ಹಾಗೂ ಕಾರ್ಯಾಂಗಳು ಕಾನೂನು ಬಾಹಿರವಾಗಿ ಜೀವ ಹಾಗೂ ಸ್ವಾತಂತ್ರ್ಯಕ್ಕೆ ಧಕ್ಕೆ ತರದಂತೆ ತಡೆಗಟ್ಟುತ್ತದೆ.

೨೨ನೇ ಕಲಮು ಬಂಧನ ಮತ್ತು ಸೆರೆವಾಸಗಳಿಗೆ ಸಂಬಂಧಿಸಿದಂತೆ ಮುಂದೆ ವಿವರಿಸಲಾದ ರೀತಿಯಲ್ಲಿ ರಕ್ಷಣೆ ನೀಡುತ್ತದೆ. i)ಬಂಧಿತನಿಗೆ ಬಂಧನದ ಕಾರಣಗಳನ್ನು

ತಿಳಿಸಬೇಕು. ii) ತನಗೆ ಬೇಕಾದ ವಕೀಲರ ಮೂಲಕ ವಾದಮಂಡಿಸಲು ಅವಕಾಶ ನೀಡಬೇಕು. iii) ಬಂಧನವಾದ ೨೪ ಗಂಟೆಗಳ ಅವಧಿಯೊಳಗಾಗಿ ಸಮೀಪದ ನ್ಯಾಯಾಧೀಶರ ಮುಂದೆ ಹಾಜರು ಪಡಿಸಬೇಕು. ನ್ಯಾಯಾಧೀಶರ ಅನುಮತಿಯೊಂದಿಗೆ ಬಂಧನದ ಅವಧಿಯನ್ನು ಮುಂದು ವರಿಸಬೇಕು. ೨೨ ನೇ ಕಲಮು ನೀಡುವ ರಕ್ಷಣೆಗೆ ಎರಡು ಮಿತಿ (ಅಪವಾದ)ಗಳಿವೆ. i) ಶತೃವಿನೊಂದಿಗೆ (ತಾತ್ಕಾಲಿಕವಾಗಿಯಾದರೂ) ಸಂಬಂಧ ಹೊಂದಿದ ವ್ಯಕ್ತಿ ಹಾಗೂ ii) ಮುನ್ನೆಚ್ಚರಿಕೆ ಸ್ಥಾನ ಬದ್ಧತೆ ಕಾನೂನಿನ ಮೇರೆಗೆ ಬಂಧಿತನಾದ ವ್ಯಕ್ತಿ. ಈ ಇಬ್ಬರ ವಿಷಯದಲ್ಲಿ ೨೨ನೇ ಕಲಮು ಅನ್ವಯವಾಗುವದಿಲ್ಲ.

ಶತೃವಿನೊಂದಿಗೆ ಸಂಬಂಧ ಹೊಂದಿದ ವ್ಯಕ್ತಿಯ ವಿಷಯದಲ್ಲಿ ರಕ್ಷಣೆ ನೀಡದಿರುವದು ಸರಿ. ಆದರೆ ಮುನ್ನೆಚ್ಚರಿಕೆ ಸ್ಥಾನ ಬದ್ಧತೆಯ ಕಾನೂನು ಬಹುತೇಕ್ಷ ಸಂದರ್ಭಗಳಲ್ಲಿ ದುರುಪಯೋವಾಗಿದೆ. ಉದಾ :- ೧೯೭೧ರಲ್ಲಿ ರಚಿತವಾದ ಆಂತರಿಕ ಭದ್ರತಾ ಕಾನೂನು (Maintenance of Internal Security Act) ೧೯೭೫ರಲ್ಲಿ ಜಾರಿಗೆ ಬಂದ ತುರ್ತು ಪರಿಸ್ಥಿತಿಯಲ್ಲಿ ವ್ಯಾಪಕವಾಗಿ ದುರುಪಯೋಗಕ್ಕೆ ಒಳಗಾಯಿತು. POTA ಕಾನೂನು ತಮಿಳುನಾಡಿನ ಮುಖ್ಯಮಂತ್ರಿ ಜಯಲಲಿತಾರಿಂದ ದುರುಪ ಯೋಗ ವಾಯಿತು.

## ಶೋಷಣೆಯ ವಿರುದ್ಧದ ಹಕ್ಕು (೨೩, ೨೪ ನೇ ಕಲಮುಗಳು)

ಸಂವಿಧಾನದ ೨೩ ಹಾಗೂ ೨೪ ನೇ ಕಲಮು ಶೋಷಣೆಯ ವಿರುದ್ಧ ರಕ್ಷಣೆ ನೀಡುತ್ತವೆ. ಬಲಾತ್ಕಾರದಿಂದ ದುಡಿಸಿಕೊಳ್ಳುವದನ್ನು ನಿಷೇಧಿಸುವ ೨೩ ನೇ ಕಲಮು ಅಮೇರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಗುಲಾಮಗಿರಿ ತೊಡೆದು ಹಾಕುವ ಸಂವಿಧಾನದ ೧೩ ನೇ ತಿದ್ದುಪಡಿಗೆ ಸಮಾನವಾಗಿದೆ. ಜೀತ ಪದ್ಧತಿ ಹಾಗೂ ದೇವದಾಸಿ ಪದ್ಧತಿ ಇವುಗಳಿಂದ ೨೩ ನೇ ಕಲಮು ಬಿಡುಗಡೆ ಗೊಳಿಸುತ್ತದೆ. ೨೪ನೇ ಕಲಮು ೧೪ ವರ್ಷದೊಳಗಿನ ಮಕ್ಕಳನ್ನು ಕಾರ್ಖಾನೆ ಅಥವಾ ಗಣಿಗಳಲ್ಲಿ ದುಡಿಸಿಕೊಳ್ಳುವದನ್ನು ನಿರ್ಬಂಧಿಸುತ್ತದೆ. ಈ ಕಲಮಿಗೆ ಪೂರಕವಾಗಿ ರಚಿಸಲಾದ ಬಾಲಕಾರ್ಮಿಕ ಕಾನೂನುಗಳು ಮಕ್ಕಳನ್ನು ಗಣಿ ಹಾಗೂ ಕಾರ್ಖಾನೆಗಳಿಂದ ಮುಕ್ತಗೊಳಿಸಿ ಶಾಲೆಗೆ ಕಳಿಸಲು ಅವಕಾಶ ಮಾಡಿಕೊಡುತ್ತವೆ.

ಶೋಷಣೆ ವಿರೋಧಿಸುವ ಹಕ್ಕಿನ ಮೇರೆಗೆ ಸಾಕಷ್ಟು ಕಾನೂನುಗಳು ರಚಿಸಲ್ಪಟ್ಟಿವೆ. ಆದರೆ ಜಾರಿಗೆ ತರಬೇಕಾದವರ ನಿರಾಸಕ್ತಿಯಿಂದಾಗಿ ಕಾನೂನುಗಳು ನಿಷ್ಪ್ರಯೋಜಕವಾಗಿವೆ. ಸರಕಾರಗಳು ಇನ್ನೂ ಹೆಚ್ಚು ಕ್ರಿಯಾಶೀಲವಾಗಿ ಕಾರ್ಯ ನಿರ್ವಹಿಸಿದರೆ ಈ ದುಷ್ಟ ಪದ್ಧತಿಗಳನ್ನು ತಡೆಗಟ್ಟಲು ಸಾಧ್ಯವಾಗುತ್ತದೆ.

## ಧಾರ್ಮಿಕ ಸ್ವಾತಂತ್ರ್ಯದ ಹಕ್ಕು (೨೫, ೨೬, ೨೭, ೨೮ ನೇ ಕಲಮುಗಳು)

ಸಂವಿಧಾನದ ೨೫,೨೬,೨೭ ಹಾಗೂ ೨೮ನೇ ಕಲಮುಗಳು ಧಾರ್ಮಿಕ ಅಲ್ಪಸಂಖ್ಯಾಕರಿಗೆ ತೃಪ್ತಿಯಾಗುವ ರೀತಿಯಲ್ಲಿ ರಚಿಸಲ್ಪಟ್ಟಿವೆ. ಸಂವಿಧಾನದ ಪೀಠಿಕೆಯಲ್ಲಿ ಘೋಷಿಸಿದ ಶ್ರದ್ಧೆ, ನಂಬಿಕೆ, ಮತ್ತು ಪೂಜಾ ಸ್ವಾತಂತ್ರ್ಯವನ್ನು ಈ ಕಲಮುಗಳು ಎಲ್ಲಾ ನಾಗರಿಕರಿಗೆ ನೀಡುತ್ತವೆ.

೨೫ (೧) ನೇ ಕಲಮಿನ ಪ್ರಕಾರ ಎಲ್ಲ ಜನರೂ ಸಮಾನವಾಗಿ ಆತ್ಮಸಾಕ್ಷಿ ಸ್ವಾತಂತ್ರ್ಯ ಹೊಂದಿದ್ದಾರೆ. ಧರ್ಮವನ್ನು ಬಹಿರಂಗವಾಗಿ ಹೇಳಿಕೊಳ್ಳುವ, ಆಚರಿಸುವ ಮತ್ತು ಪ್ರಸಾರ ಮಾಡುವ ಹಕ್ಕು ಪ್ರತಿಯೊಬ್ಬನಿಗೂ ಇದೆ. ಒಬ್ಬ ವ್ಯಕ್ತಿ ಸ್ವಂತ ಇಚ್ಛೆಯಿಂದ ಬೇರೊಂದು ಧರ್ಮಕ್ಕೆ ಸೇರಬಹುದು. ಆದರೆ ಒತ್ತಾಯದ ಮತಾಂತರಕ್ಕೆ ಅವಕಾಶವಿಲ್ಲ. ಕೆಲವು ಮಿತಿಗಳಿಗೊಳಪಟ್ಟು ಧಾರ್ಮಿಕ ಸ್ವಾತಂತ್ರ್ಯ ಪಡೆಯಲು ಈ ಕಲಮು ಅವಕಾಶ ನೀಡುತ್ತದೆ.

೨೬ನೇ ಕಲಮಿನ ಮೇರೆಗೆ (೧) ಧಾರ್ಮಿಕ ಉದ್ದೇಶಗಳಿಗಾಗಿ ಸಂಘ ಸಂಸ್ಥೆ ಸ್ಥಾಪನೆ (೨) ಧಾರ್ಮಿಕ ವ್ಯವಹಾರಗಳ ಸ್ವಯಂ ನಿರ್ವಹಣೆ (೩) ಸ್ಥಿರ ಹಾಗೂ ಚರ ಆಸ್ತಿ ಸಂಪಾದನೆ ಹಾಗೂ (೪) ಕಾನೂನುಗಳ ಪ್ರಕಾರ ಅಂಥ ಆಸ್ತಿಯ ನಿರ್ವಹಣೆ ಮಾಡುವ ಅಧಿಕಾರ ಪ್ರತಿಯೊಬ್ಬ ನಾಗರಿಕನಿಗೆ ಇದೆ. ೨೭ ನೇ ಕಲಮು ಧಾರ್ಮಿಕ ಕಾರ್ಯಗಳಿಗಾಗಿ ಸಂಗ್ರಹಿಸಿದ ಹಣಕ್ಕೆ ತೆರಿಗೆ ವಿನಾಯಿತಿ ನೀಡುತ್ತದೆ. ೨೮ನೇ ಕಲಮಿನ ಪ್ರಕಾರ ಸಂಪೂರ್ಣವಾಗಿ ಸರಕಾರಿ ಹಣದಿಂದ ನಡೆಸಲಾಗುವ ಶೈಕ್ಷಣಿಕ ಸಂಸ್ಥೆಗಳಲ್ಲಿ ಯಾವದೇ ವ್ಯಕ್ತಿಯ ಮೇಲೆ ಒತ್ತಾಯದಿಂದ ಧಾರ್ಮಿಕ ಬೋಧನೆಯನ್ನು ಹೇರುವಂತಿಲ್ಲ. ಸಂಬಂಧಿಸಿದ ವ್ಯಕ್ತಿಯ ಅಥವಾ ಆ ವ್ಯಕ್ತಿ ಅಲ್ಪವಯಿಯಾಗಿದ್ದರೆ ಅವನ/ಳ ಪಾಲಕರ ಅನುಮತಿಯೊಂದಿಗೆ ಮಾತ್ರ ಧಾರ್ಮಿಕ ಬೋಧನೆ ನೀಡಬಹುದು.

## ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕುಗಳು
## (೨೯ ಮತ್ತು ೩೦ನೇ ಕಲಮುಗಳು)

೨೯(೧) ನೇ ಕಲಮಿನ ಮೇರೆಗೆ ಈ ದೇಶದ ಯಾವದೇ ಭಾಗದಲ್ಲಿ ವಾಸಿಸುವ ಜನತೆ ತಮ್ಮದೇ ಆದ ವಿಶಿಷ್ಟ ಭಾಷೆ, ಲಿಪಿ ಅಥವಾ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳಬಹುದು. ೨೯(೨)ನೇ ಕಲಮು ಧರ್ಮ, ಜನಾಂಗ, ಜಾತಿ, ಭಾಷೆ, ಇವುಗಳ ಆಧಾರದ ಮೇಲೆ ಸರಕಾರಿ ನೆರವು ಪಡೆಯುವ ಸಂಸ್ಥೆಗಳು ಪ್ರವೇಶ ನಿರಾಕರಿಸಕೂಡದೆಂದು ವಿಧಿಸುತ್ತದೆ. 30 ನೇ ಕಲಮಿನ ಒಂದನೇ ಭಾಗವು ಧರ್ಮ ಅಥವಾ ಭಾಷೆ ಆಧಾರಿತ ಅಲ್ಪ ಸಂಖ್ಯಾತರಿಗೆ ತಮ್ಮವೇ ಆದ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಿ ನಡೆಸಿಕೊಂಡು ಹೋಗುವ ಅವಕಾಶ ನೀಡುತ್ತದೆ. ಅದೇ ಕಲಮಿನ ಎರಡನೇ ಭಾಗದ ಪ್ರಕಾರ ಭಾಷಾ ಅಥವಾ ಧಾರ್ಮಿಕ

ಅಲ್ಪ ಸಂಖ್ಯಾಕರ ಶಿಕ್ಷಣ ಸಂಸ್ಥೆಗಳಿಗೆ ಅಲ್ಪ ಸಂಖ್ಯಾತರ ಸಂಸ್ಥೆ ಎಂಬ ಕಾರಣಕ್ಕೆ ಸರಕಾರ ಸಹಾಯಧನ ನಿಲ್ಲಿಸಕೂಡದು.

## ಆಸ್ತಿಯ ಹಕ್ಕು (೩೧ ನೇ ಕಲಮು)

ಸಂವಿಧಾನದ ೩೧ ನೇ ಕಲಮು ಈ ದೇಶದ ನಾಗರಿಕರಿಗೆ ಆಸ್ತಿಯ ಹಕ್ಕನ್ನು ನೀಡಿತ್ತು. ಆದರೆ ಸಂವಿಧಾನದ ೪೪ ನೇ ತಿದ್ದುಪಡಿಯ ಮೇರೆಗೆ ಆಸ್ತಿಯ ಹಕ್ಕನ್ನು ರದ್ದುಗೊಳಿಸಲಾಗಿದೆ. ೩೧ನೇ (ಎ), ೩೧ (ಬಿ), ಹಾಗೂ ೩೧(ಸಿ) ಕಲಮುಗಳು ಜಾರಿಯಲ್ಲಿವೆ. ಆಸ್ತಿಯ ಹಕ್ಕು ಈಗ ಮೂಲಭೂತ ಹಕ್ಕಿಗೆ ಬದಲಾಗಿ ಸಾಮಾನ್ಯ ಹಕ್ಕಿನ ಸ್ಥಾನ ಪಡೆದಿದೆ.

## ಸಂವಿಧಾನಾತ್ಮಕ ಪರಿಹಾರದ ಹಕ್ಕು (೩೨ನೇ ಕಲಮು)

ಭಾರತದಂಥ ದೇಶಗಳಲ್ಲಿ ಮೂಲಭೂತ ಹಕ್ಕುಗಳ ಜಾರಿಗಾಗಿ ಪರಿಣಾಮಕಾರಿ ವ್ಯವಸ್ಥೆಯ ಅವಶ್ಯಕತೆ ಇದೆ. ಅಂಥದೊಂದು ವ್ಯವಸ್ಥೆ ಇಲ್ಲದಿದ್ದಲ್ಲಿ ಮೂಲಭೂತ ಹಕ್ಕುಗಳು ಕೇವಲ ಘೋಷಣೆಗಳಾಗಿ ಉಳಿಯುತ್ತವೆ. ಆದ್ದರಿಂದ ನಮ್ಮ ಸಂವಿಧಾನದ ನಿರ್ಮಾಪಕರು ಸಂವಿಧಾನಾತ್ಮಕ ಪರಿಹಾರವನ್ನು ಒಂದು ಮೂಲಭೂತ ಹಕ್ಕನ್ನಾಗಿಸಿದ್ದಾರೆ. ಸಂವಿಧಾನಾತ್ಮಕ ಪರಿಹಾರ ಸೂಚಿಸುವ ೩೨ ನೇ ಕಲಮು ಹಕ್ಕುಗಳಿಗೆ ಚ್ಯುತಿಯುಂಟಾದಾಗ ಸರ್ವೋನ್ನತ ನ್ಯಾಯಾಲಯಕ್ಕೆ ಅಥವಾ ಉಚ್ಚ ನ್ಯಾಯಾಲಯಕ್ಕೆ ರಿಟ್ ಅರ್ಜಿ ಸಲ್ಲಿಸಿ ನ್ಯಾಯ ದೊರಕಿಸಿಕೊಳ್ಳುವ ಅವಕಾಶ ನೀಡುತ್ತದೆ.

ಮೂಲಭೂತ ಹಕ್ಕುಗಳ ಜಾರಿಗಾಗಿ ನ್ಯಾಯಾಂಗವು ಕೆಳಕಂಡ ರಿಟ್ ಅರ್ಜಿಗಳನ್ನು ಸ್ವೀಕರಿಸುತ್ತದೆ.

### ೧. ಆಸಾಮಿ ಹಾಜರು ಆಜ್ಞೆ

ಅಕ್ರಮ ಬಂಧನದಲ್ಲಿರುವ ವ್ಯಕ್ತಿಯನ್ನು ಬಿಡುಗಡೆಗೊಳಿಸುವ ಸಲುವಾಗಿ ಈ ಆಜ್ಞೆ ಹೊರಡಿಸಲಾಗುತ್ತದೆ. ಕಾನೂನಿಗೆ ವಿರುದ್ಧವಾಗಿ ಬಂಧಿಸಲ್ಪಟ್ಟ ವ್ಯಕ್ತಿಯನ್ನು ನಿರ್ದಿಷ್ಟ ಉದ್ದೇಶಕ್ಕಾಗಿ ನಿರ್ದಿಷ್ಟ ಸ್ಥಳಕ್ಕೆ ತಂದು ಒಪ್ಪಿಸಬೇಕೆಂಬುದು ಈ ರಿಟ್-ನ ಅರ್ಥ. ಬಂಧಿತ ವ್ಯಕ್ತಿ ಅಥವಾ ಅವನ ಪರವಾಗಿ ಸಮಿಪದ ಸಂಬಂಧಿಯೊಬ್ಬರು ಈ ರಿಟ್ ಸಲ್ಲಿಸಬಹುದು.

### ೨. ಪರಮಾದೇಶ

ಪರಮಾದೇಶವೆಂದರೆ ನಾವು ಆಜ್ಞೆ ಮಾಡುತ್ತೇವೆ ಎಂದರ್ಥ. ಒಬ್ಬ ವ್ಯಕ್ತಿ ಅಥವಾ ಸಂಸ್ಥೆಗೆ ತಮ್ಮ ಕರ್ತವ್ಯ ನಿರ್ವಹಿಸತಕ್ಕದ್ದೆಂದು ನ್ಯಾಯಾಲಯ ಮಾಡುವ ಆದೇಶವೇ ಪರಮಾದೇಶ. ಒಬ್ಬ ವ್ಯಕ್ತಿ ಅಥವಾ ಒಂದು ಸಂಸ್ಥೆ ನಿರ್ದಿಷ್ಟ ಸನ್ನಿವೇಶದಲ್ಲಿ

ಕಾನೂನಿನ ಪ್ರಕಾರ ಮಾಡಬೇಕಾದ ಕೆಲಸ ನಿರ್ವಹಿಸುವಂತೆ ಈ ಆದೇಶದ ಮೂಲಕ ಆಜ್ಞಾಪಿಸಲಾಗುತ್ತದೆ. ಉದಾ :-ಅಗತ್ಯ ನಿಯಮಗಳ ಪಾಲನೆಯಾದಾಗಲೂ ಸಂಬಂಧಪಟ್ಟ ಅಧಿಕಾರಿ ಲೈಸನ್ಸ್ ನೀಡದಿದ್ದಾಗ ಪರಮಾದೇಶದ ಮೂಲಕ ಪರಿಹಾರ ಪಡೆಯಬಹುದು.

**೩. ಪ್ರತಿಷೇಧ ಲೇಖ**

ಕೆಳಗಿನ ನ್ಯಾಯಲಯ ತನ್ನ ಅಧಿಕಾರದ ಮಿತಿಮೀರಿ ವರ್ತಿಸುವದನ್ನು ಅಥವಾ ಸಹಜ ನ್ಯಾಯದ ನಿಯಮಗಳಿಗೆ ವಿರುದ್ಧವಾಗಿ ವರ್ತಿಸುವದನ್ನು ಈ ಆದೇಶದ ಮೂಲಕ ತಡೆಗಟ್ಟಲಾಗುತ್ತದೆ. ಉದಾ :-ಆಧೀನ ನ್ಯಾಯಾಲಯದ ಒಬ್ಬನ್ಯಾಯಾಧೀಶನು ತಾನು ವೈಯಕ್ತಿಕವಾಗಿ ಆಸಕ್ತಿ ಹೊಂದಿದ ಮೊಕದ್ದಮೆಯ ವಿಚಾರಣೆ ನಡೆಸದಂತೆ ಪ್ರತಿಷೇಧ ಲೇಖದ ಮೂಲಕ ತಡೆಗಟ್ಟಬಹುದು.

**೪. ಉತ್ಪ್ರೇಷಣ ಲೇಖ**

ಕೆಳನ್ಯಾಯಾಲಯದಿಂದ ಮೇಲಿನ ನ್ಯಾಯಾಲಯಕ್ಕೆ ಮೊಕದ್ದಮೆಯನ್ನು ವರ್ಗಾಯಿಸುವಂತೆ ನೀಡುವ ಆ ದೇಶ ಉತ್ಪ್ರೇಷಣ ಲೇಖ. ಅಧಿಕಾರದ ದುರುಪಯೋಗ ತಡೆಯಲು ಈ ಆಜ್ಞೆ ಮಾಡಬಹುದು. ಸಹಜ ನ್ಯಾಯಕ್ಕೆ ವಿರುದ್ಧವಾಗಿ ಅಥವಾ ಕಾನೂನಿನ ಬೆಂಬಲವಿಲ್ಲದೇ ಕೆಳನ್ಯಾಯಾಲಯ ಮಾಡಿದ ಆಜ್ಞೆಯನ್ನು ರದ್ದುಗೊಳಿಸಲು ಇದನ್ನು ಉಪಯೋಗಿಸಬಹುದು.

**೫. ಅಧಿಕಾರದ ಪ್ರಶ್ನೆ**

ನಿರ್ದಿಷ್ಟಹುದ್ದೆಗೆ ಅಗತ್ಯವಾದ ಅರ್ಹತೆಗಳನ್ನು ಹೊಂದಿರದ ವ್ಯಕ್ತಿ ಆ ಹುದ್ದೆಯಲ್ಲಿರುವದನ್ನು ರದ್ದುಗೊಳಿಸಿ ಆ ಸ್ಥಾನ ತೆರವಾಗಿದೆ ಎಂದು ಘೋಷಿಸುವ ಆಜ್ಞೆ ಇದಾಗಿದೆ. ಸರಕಾರಿ ಅಥವಾ ಸಾರ್ವಜನಿಕ ಹುದ್ದೆ ದುರುಪಯೋಗವಾಗಿದೆಯೇ ಅಥವಾ ಅದರ ದುರಾಕ್ರಮಣವಾಗಿದೆಯೇ ಎಂಬುದನ್ನು ನ್ಯಾಯಾಲಯ ತೀರ್ಮಾನಿಸಲು ಈ ರಿಟ್ ಅವಕಾಶ ಮಾಡಿಕೊಡುತ್ತದೆ.

## ಮೌಲ್ಯಮಾಪನ

ಸಂವಿಧಾನದಲ್ಲಿ ಅಳವಡಿಸಲಾದ ಮೂಲಭೂತ ಹಕ್ಕುಗಳ ಅಧ್ಯಾಯವು ನಿರಂತರ ಟೀಕೆಗೆ ಗುರಿಯಾಗಿದೆ. ಮುಖ್ಯವಾಗಿ ಮೂರು ಬಗೆಯ ಟೀಕೆಗಳು ಈ ಬಗ್ಗೆ ವ್ಯಕ್ತವಾಗಿವೆ. ಮೊದಲನೆಯದಾಗಿ ಸಂವಿಧಾನ ಮೂಲಭೂತ ಹಕ್ಕುಗಳನ್ನು ನೀಡುವದಿಲ್ಲ, ಹೆಸರಿಗೆ ಮಾತ್ರ ಅವುಗಳ ಉಲ್ಲೇಖವಿದೆ, ನಿಜವಾದ ಮೂಲಭೂತ ಹಕ್ಕುಗಳಾದ ಶಿಕ್ಷಣ ಮತ್ತು ಉದ್ಯೋಗಗಳನ್ನು ಅಲಕ್ಷಿಸಲಾಗಿದೆ ಎನ್ನಲಾಗುತ್ತಿದೆ. ಎರಡನೆಯದಾಗಿ ಇಡೀ ಅಧ್ಯಾಯದ ಸತ್ವ ಹಾಗೂ ಸಾರವನ್ನು ಮುನ್ನೆಚ್ಚರಿಕೆ

ಸ್ಥಾನ ಬದ್ಧತೆ ಹಾಗೂ ತುರ್ತು ಪರಿಸ್ಥಿತಿಯ ಅವಕಾಶಗಳು ನುಂಗಿಹಾಕಿವೆ. ಮೂರನೆಯದಾಗಿ ಮೂಲಭೂತ ಹಕ್ಕುಗಳನ್ನು ಅಪವಾದಗಳು, ವಿವರಣೆಗಳು, ಮತ್ತು ವಿಶೇಷಣಗಳು ನಿಷ್ಕ್ರಿಯಗೊಳಿಸಿವೆ. ಒಂದು ಕೈಯಿಂದ ಕೊಟ್ಟ ಹಕ್ಕುಗಳನ್ನು ಇನ್ನೊಂದು ಕೈಯಿಂದ ಕಸಿದುಕೊಂಡಂತಾಗಿದೆ. ತುರ್ತು ಪರಿಸ್ಥಿತಿಯ ಸೋಗಿನಲ್ಲಿ ಅಧಿಕಾರ ದಾಹವುಳ್ಳ ಪಕ್ಷ ಅಥವಾ ನಾಯಕರು ವಿವೇಚನಾರಹಿತವಾಗಿ ಅಧಿಕಾರ ದುರುಪಯೋಗ ಪಡಿಸಿಕೊಂಡು ನಮ್ಮ ಸಂವಿಧಾನ ಘೋಷಿಸಿಕೊಂಡು ಬಂದ ಆದರ್ಶಗಳನ್ನು ನಾಶಪಡಿಸಿದ ಅನೇಕ ಉದಾಹರಣೆಗಳು ನಮ್ಮ ಮುಂದಿವೆ.

ಶಿಕ್ಷಣ ಹಾಗೂ ಉದ್ಯೋಗದ ಹಕ್ಕುಗಳನ್ನು ಸಂವಿಧಾನದಲ್ಲಿ ಸೇರಿಸದಿರು-ವದಕ್ಕೆ ಕಾರಣವೆಂದರೆ ಸಂವಿಧಾನ ರಚನೆಯಾದ ಸಮಯದಲ್ಲಿ ಅವುಗಳನ್ನು ಕಾರ್ಯಗತಗೊಳಿಸುವದು ಅಸಾಧ್ಯವಾಗಿತ್ತು. ದೇಶದ ಹಣಕಾಸಿನ ಪರಿಸ್ಥಿತಿ ಕ್ಲಿಷ್ಟಕರವಾಗಿದ್ದುದು ಇದಕ್ಕೆ ಕಾರಣವಾಗಿದೆ.

ಮುನ್ನೆಚ್ಚರಿಕೆ ಸ್ಥಾನಬದ್ಧತೆ ನೆವದಲ್ಲಿ ಸಂವಿಧಾನಾತ್ಮಕ ಪರಿಹಾರದ ಹಕ್ಕಿನ ನಿರಾಕರಣೆಯನ್ನು ಸಮರ್ಥಿಸಿಕೊಳ್ಳುವದು ಸಾಧ್ಯವಿಲ್ಲ. ೧೯೭೫ರಲ್ಲಿ ಆಂತರಿಕ ತುರ್ತು ಪರಿಸ್ಥಿತಿ ಸಾರಿದ ಇಂದಿರಾಗಾಂಧಿ ೧೯೭೫ ಜೂನ್ ೨೫ರ ರಾತ್ರಿ ವಿರೋಧಿಪಕ್ಷಗಳ ನಾಯಕರನ್ನೆಲ್ಲ ಮುನ್ನೆಚ್ಚರಿಕೆ ಸ್ಥಾನ ಬದ್ಧತೆಯಲ್ಲಿಡುವ ಮೂಲಕ ಅವರ ಸಂವಿಧಾನಾತ್ಮಕ ಹಕ್ಕನ್ನು ನಿರಾಕರಿಸಿ ಪ್ರಜಾಪ್ರಭುತ್ವವನ್ನೆ ನಾಶಗೊಳಿಸಿದರು. ಕೇಂದ್ರದ ಹಿಂದಿನ ಎನ್. ಡಿ. ಎ. ಸರಕಾರ ರಚಿಸಿದ ಪೋಟಾ ಕಾನೂನನ್ನು ಕೆಲ ಮುಖ್ಯಮಂತ್ರಿಗಳು ವೈಯಕ್ತಿಕ ದ್ವೇಷ ಸಾಧನೆಗೆ ಬಳಸಿಕೊಂಡಿದ್ದನ್ನು ನೋಡಬಹುದು.

ಮೂಲಭೂತ ಹಕ್ಕುಗಳನ್ನು ಕ್ಲಿಷ್ಟಕರ ಭಾಷೆಯಲ್ಲಿ ನಿರೂಪಿಸಲಾಗಿದೆ ಎಂಬುದು ಇನ್ನೊಂದು ಟೀಕೆ. ಸಾಮಾನ್ಯ ನಾಗರಿಕರು ಅವುಗಳನ್ನು ಓದಿ ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ. ಅಲ್ಲದೇ ಹಕ್ಕುಗಳಿಗೆ ಅನೇಕ ವಿನಾಯತಿಗಳು, ವಿಶೇಷಣಗಳ ಮೂಲಕ ತಡೆಗೋಡೆ ನಿರ್ಮಿಸಲಾಗಿದೆ ಎಂದು ಹೇಳಲಾಗಿದೆ. ಆ ಕಾರಣದಿಂದಾಗಿ ವಿಮರ್ಶಕರೊಬ್ಬರು ನಮ್ಮ ದೇಶದ ಸಂವಿಧಾನ ಒಂದು ಸಂವಿಧಾನಾತ್ಮಕ ನಿಬಂಧವೆಂದು ಟೀಕಿಸಿದ್ದಾರೆ. ಅಮೇರಿಕ ಸಂಯುಕ್ತ ಸಂಸ್ಥಾನಗಳ ಸಂವಿಧಾನ ನಿರ್ಮಾಪಕರು ಮೂಲಭೂತ ಹಕ್ಕುಗಳನ್ನು ಕೆಲವೇ ಕಲಮುಗಳಲ್ಲಿ ಅಳವಡಿಸಿ ಉಳಿದ ಕೆಲಸವನ್ನು ನ್ಯಾಯಾಂಗಕ್ಕೆ ಬಿಟ್ಟುಕೊಟ್ಟಿದ್ದಾರೆ. ನಮ್ಮ ಸಂವಿಧಾನ ನಿರ್ಮಾಪಕರು ಎಲ್ಲ ವಿವರಗಳನ್ನು ಸಂವಿಧಾನದಲ್ಲಿ ಅಳವಡಿಸಿದ್ದಾರೆ.

ನಮ್ಮ ಸಂವಿಧಾನದಲ್ಲಿ ಅಳವಡಿಸಲಾದ ಮೂಲಭೂತ ಹಕ್ಕುಗಳು ಸುಸಂಗತ ಸೈದ್ಧಾಂತಿಕ ನೆಲೆಯಲ್ಲಿ ರಚಿತವಾದವುಗಳಲ್ಲ. ಕಾಲ ಮತ್ತು ಸನ್ನಿವೇಶಗಳು ರೂಪಿಸಿರುವ ಕೆಲವು ಸಾಮಾಜಿಕ ಜಾಡ್ಯಗಳನ್ನು ತೊಡೆದು ಹಾಕಬೇಕೆಂಬ ಸದಾಶಯದಿಂದ ರಚಿಸಲ್ಪಟ್ಟವುಗಳಾಗಿವೆ.

ಕೊನೆಯದಾಗಿ ಹೇಳಬೇಕೆಂದರೆ ಮೂಲಭೂತ ಹಕ್ಕುಗಳ ರಕ್ಷಣೆ ಮಾಡಬೇಕಾದದ್ದು ಸಾರ್ವಜನಿಕ ಅಭಿಪ್ರಾಯವೇ ಹೊರತು ನ್ಯಾಯಂಗವಲ್ಲ. ಸುವ್ಯವಸ್ಥಿತ, ಪರಿಣಾಮಕಾರಿ ಸಾರ್ವಜನಿಕ ಅಭಿಪ್ರಾಯದ ಮೂಲಕ ಮಾತ್ರ ಮೂಲಭೂತ ಹಕ್ಕಗಳ ರಕ್ಷಣೆ ಸಾಧ್ಯ. ಆದರೆ ಭಾರತದಂಥ ವಿಭಿನ್ನ ಜನಾಂಗ, ಧರ್ಮ, ಭಾಷೆ, ಜಾತಿಗಳನ್ನೊಳಗೊಂಡ ಬೃಹತ್ ದೇಶದಲ್ಲಿ ಇದನ್ನು ಸರಳವಾಗಿ ಸಾಧಿಸಲು ಸಾಧ್ಯವಿಲ್ಲ. ಸಾರ್ವತ್ರಿಕಶಿಕ್ಷಣದೊಂದಿಗೆ ನಾಗರಿಕಪ್ರಜ್ಞೆ ಈ ದೇಶದಲ್ಲಿ ಗಣನೀಯವಾಗಿ ಬೆಳೆಯಬೇಕಾಗಿದೆ. ನಿರಂತರ ಜಾಗರೂಕತೆ ಸ್ವಾತಂತ್ರ್ಯಕ್ಕೆ ತೆರಬೇಕಾದ ಬೆಲೆಯಾಗಿದೆ. ಅಂಥ ಜಾಗರೂಕತೆ ಬೆಳೆದಾಗ ಮಾತ್ರ ಶಾಸನಾಂಗ ಅಥವಾ ಕಾರ್ಯಾಂಗದ ಹಸ್ತಕ್ಷೇಪದಿಂದ ಮೂಲಭೂತ ಹಕ್ಕುಗಳನ್ನು ರಕ್ಷಿಸಲು ಸಾಧ್ಯ.

## ಮೂಲಭೂತ ಕರ್ತವ್ಯಗಳು

ನಮ್ಮ ದೇಶದ ಮೂಲ ಸಂವಿಧಾನದಲ್ಲಿ ಮೂಲಭೂತ ಕರ್ತವ್ಯಗಳನ್ನು ಅಳವಡಿಸಿರಲಿಲ್ಲ. ೧೯೭೬ ರಲ್ಲಿ ಆಗಿನ ಪ್ರಧಾನಿ ಇಂದಿರಾಗಾಂಧಿಯವರು ಸಂವಿಧಾನದ ೪೨ನೇ ತಿದ್ದು ಪಡಿಯ ಮೂಲಕ ಅವುಗಳನ್ನು ಸೇರ್ಪಡೆಗೊಳಿಸಿದರು. ಸಂವಿಧಾನದ ೫೧ (A) ಕಲಮಿನ ಮೇರೆಗೆ ಈ ದೇಶದ ನಾಗರಿಕರು ನಿರ್ವಹಿಸಬೇಕಾದ ಕರ್ತವ್ಯಗಳು ಕೆಳಗಿನಂತಿವೆ

೧. ರಾಷ್ಟ್ರಗೀತೆ, ರಾಷ್ಟ್ರಧ್ವಜ ಹಾಗೂ ಸಂವಿಧಾನದ ಆದರ್ಶಗಳನ್ನು ಗೌರವಿಸುವದು.

೨. ಸ್ವಾತಂತ್ರ್ಯ ಯುದ್ಧಕ್ಕೆ ಸ್ಫೂರ್ತಿ ನೀಡಿದ ಉದಾತ್ತ ಆದರ್ಶಗಳನ್ನು ಗೌರವಿಸುವದು. ಹಾಗೂ ಆಚರಣೆಯಲ್ಲಿ ತರುವದು.

೩. ಭಾರತದ ಸಮಗ್ರತೆ, ಐಕ್ಯತೆ ಹಾಗೂ ಸಾರ್ವಭೌಮತ್ವವನ್ನು ಎತ್ತಿ ಹಿಡಿಯುವದು.

೪. ಕರೆಬಂದಾಗ ದೇಶದ ರಕ್ಷಣೆಗೆ ಧಾವಿಸುವದು.

೫. ಧರ್ಮ, ಭಾಷೆ, ಪ್ರದೇಶ, ಅಥವಾ ಜನಾಂಗಗಳ ಮಿತಿ ದಾಟಿ ಸಮಸ್ತ ಭಾರತಿಯರಲ್ಲಿ ಸೋದರ ಭಾವನೆ ಬೆಳೆಸುವದು ಹಾಗೂ ಸ್ತ್ರೀಯರ ಗೌರವಕ್ಕೆ ಚ್ಯುತಿತರುವ ಆಚರಣೆಗಳನ್ನು ತ್ಯಜಿಸುವದು.

೬. ನಮ್ಮ ಬಹುಮುಖ ಸಂಸ್ಕೃತಿಯ ಭವ್ಯ ಪರಂಪರೆಯನ್ನು ಗೌರವಿಸುವದು ಹಾಗೂ ಕಾಪಾಡುವದು.

೭. ಅರಣ್ಯಗಳು, ನದಿಗಳು, ಸರೋವರಗಳು ಹಾಗೂ ವನ್ಯಜಿವಿಗಳನ್ನೊಳಗೊಂಡಂತೆ ಸಮಗ್ರ ನೈಸರ್ಗಿಕ ಪರಿಸರವನ್ನು ಕಾಪಾಡುವದರೊಂದಿಗೆ ಪ್ರಾಣಿಗಳ ಬಗ್ಗೆ ಅನುಕಂಪ ತೋರುವದು.

೮. ವೈಜ್ಞಾನಿಕ ಮನೋಭಾವನೆ, ಮಾನವೀಯತೆ ಹಾಗೂ ಪ್ರಗತಿಪರತೆ ಹೊಂದುವದು.

೯. ಸಾರ್ವಜನಿಕ ಆಸ್ತಿ ರಕ್ಷಣೆ ಮಾಡುವದು ಹಾಗೂ ಹಿಂಸೆ ತೊರೆಯುವದು.

೧೦. ವೈಯಕ್ತಿಕ ಹಾಗೂ ಸಾಮೂಹಿಕ ಕಾರ್ಯಗಳಲ್ಲಿ ಕಾರ್ಯಗಳಲ್ಲಿ ಶ್ರೇಷ್ಠತೆ ತೋರುವುದರೊಂದಿಗೆ ರಾಷ್ಟ್ರದ ಎಲ್ಲಾ ಕ್ಷೇತ್ರಗಳ್ಲಿ ಸಾಧನೆ ತೋರ್ಪಡಿಸುವದು.

## ✸ರಾಜ್ಯ ನಿರ್ದೇಶಕ ತತ್ವಗಳು

೩೬ ರಿಂದ ೫೧ ರವರೆಗಿನ ಕಲಮುಗಳನ್ನೊಳಗೊಂಡ ಭಾರತ ಸಂವಿಧಾನದ ನಾಲ್ಕನೇ ಅಧ್ಯಾಯವು ರಾಜ್ಯದ ನೀತಿ ನಿರ್ದೇಶಕ ತತ್ವಗಳನ್ನು ಕುರಿತದ್ದಾಗಿದೆ. ನೀತಿ ನಿರ್ದೇಶಕ ತತ್ವಗಳು ಆಧುನಿಕ ಸಂವಿಧಾನಾತ್ಮಕ ಸರಕಾರಗಳ ಅವಿಭಾಜ್ಯ ಅಂಗಗಳಾಗಿವೆ. ದೇಶದ ವಿವಿಧ ಹಂತದ ಸರಕಾರಿ ಸಂಸ್ಥೆಗಳಿಗೆ ಅವು ಮಾರ್ಗದರ್ಶಿ ಸೂತ್ರಗಳಾಗಿವೆ. ಸ್ಪೇನ್‌ಗಣರಾಜ್ಯದ ಸಂವಿಧಾನವು ನಿರ್ದೇಶಕ ತತ್ವಗಳನ್ನು ಅಳವಡಿಸಿಕೊಂಡ ಮೊದಲನೇ ಸಂವಿಧಾನವಾಗಿದೆ. ಫ್ರೆಂಚ್ ಕ್ರಾಂತಿಕಾರಿಗಳ ಮಾನವ ಹಕ್ಕುಗಳ ಬಗೆಗಿನ ಘೋಷಣೆ, ಅಮೇರಿಕಾದ ವಸಾಹತುಗಳ ಸ್ವಾತಂತ್ರ್ಯ ಘೋಷಣೆ ಇವುಗಳು ಸ್ಪೇನ್ ಗಣರಾಜ್ಯಕ್ಕೆ ಪ್ರೇರಕ ಶಕ್ತಿಗಳಾಗಿವೆ. ಸ್ಪೇನ್ ಗಣರಾಜ್ಯದ ನಿರ್ದೇಶಕ ತತ್ವಗಳ ಪ್ರಭಾವ ದಿಂದಾಗಿ ಐರಿಷ್ ಗಣರಾಜ್ಯದ ಸಂವಿಧಾನದಲ್ಲಿ '' ಸಮಾಜದ ನೀತಿ ನಿರ್ದೇಶಕ ತತ್ವಗಳು ''ಎಂಬ ಅಧ್ಯಾಯವನ್ನು ಅಳವಡಿಸಲಾಯಿತು. ನಮ್ಮ ಸಂವಿಧಾನದಲ್ಲಿ ಅಡಕವಾಗಿರುವ ರಾಜ್ಯದ ನೀತಿ ನಿರ್ದೇಶಕ ತತ್ವಗಳು ಐರಿಷ್ ಗಣರಾಜ್ಯದ ಸಂವಿಧಾನದ ಪ್ರೇರಣೆಯಿಂದ ರಚಿಸಲ್ಪಟ್ಟಿವೆ. ವಿಶ್ವಸಂಸ್ಥೆಯ ಸನದು ಮತ್ತು ಜಾಗತಿಕ ಮಾನವ ಹಕ್ಕುಗಳ ಸನದು ಇವು ಕೂಡ ನಿರ್ದೇಶಕ ತತ್ವಗಳ ರಚನೆಯ ಮೇಲೆ ಪ್ರಭಾವ ಬೀರಿವೆ.

ನಮ್ಮ ಸಂವಿಧಾನದ ನಾಲ್ಕನೇ ಅಧ್ಯಾಯದಲ್ಲಿ ವಿವರಿಸಲಾದ ನೀತಿ ನಿರ್ದೇಶಕ ತತ್ವಗಳು ಕೇವಲ ವಿದೇಶಗಳ ಕಾರ್ಬನ್ ಕಾಪಿಯಲ್ಲ. ಇವುಗಳ ಪೈಕಿ ಕೆಲವು ಭಾರತದ ವ್ಯವಸ್ಥೆಯ ಆಧಾರದ ಮೇಲೆ ರೂಪಗೊಂಡಿವೆ. ೧೯೩೫ರ ಭಾರತ ಸರಕಾರದ ಕಾನೂನು ಹಾಗೂ ಗಾಂಧೀಜಿಯವರ ಸೈದ್ಧಾಂತಿಕ ನಿಲುವುಗಳು ಇವುಗಳಿಗೆ ಪ್ರೇರಣೆ ನೀಡಿವೆ. ಪಂಚಾಯತ್‌ರಾಜ್ ವ್ಯವಸ್ಥೆ, ಗೃಹಕೈಗಾರಿಕೆಗಳು, ಪಾನನಿರೋಧ, ಗೋವಧೆ ನಿಷೇಧ, ಅನುಸೂಚಿತ ಜನಾಂಗ ಹಾಗೂ ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದ ಅಂಶಗಳೆಲ್ಲ ಭಾರತೀಯ ಮೂಲದವುಗಳಾಗಿವೆ.

ಈ ಅಧ್ಯಾಯದಲ್ಲಿ ಬರುವ ತತ್ವಗಳು ಕೇಂದ್ರ, ರಾಜ್ಯ ಹಾಗೂ ಸ್ಥಳೀಯ ಸಂಸ್ಥೆಗಳು ತಮ್ಮ ಆಡಳಿತ ನಿರ್ವಹಣೆಯಲ್ಲಿ ಮೂಲಭೂತವೆಂದು ಪರಿಗಣಿಸಿ ಜಾರಿಗೊಳಿಸಬೇಕಾದ ನಿರ್ದೇಶನಗಳು. ಕಾನೂನು ರಚನೆಯ ಸಂದರ್ಭದಲ್ಲಿ ಈ ತತ್ವಗಳನ್ನು ಸರಕಾರ ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ನ್ಯಾಯಾಲಯದ

ಕಕ್ಷೆಯಲ್ಲಿ ಇವು ಬರದೇ ಹೋದರೂ ಆಡಳಿತ ವಿಚಾರದಲ್ಲಿ ಇವುಗಳನ್ನು ಮೂಲಭೂತ ಅಂಶಗಳೆಂದು ಪರಿಗಣಿಸಬೇಕಾಗುತ್ತದೆ.

ರಾಜ್ಯದ ನೀತಿ ನಿರ್ದೇಶಕ ತತ್ವಗಳು ದೇಶದ ಶಿಕ್ಷಣ, ಆಡಳಿತ ಹಾಗೂ ನ್ಯಾಯಾಂಗಕ್ಕೆ ಸಂಬಂಧಿಸಿದ ವಿಷಯಗಳಲ್ಲದೇ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಅಂತರ ರಾಷ್ಟ್ರೀಯ ಸಮಸ್ಯೆಗಳಿಗೆ ಸಂಬಂಧಿಸಿದ ಸರಕಾರಿ ಚಟುವಟಿಕೆಗಳನ್ನು ಒಳಗೊಂಡಿವೆ. ಕೆಳಕಂಡ ನಿರ್ದೇಶಕ ತತ್ವಗಳನ್ನು ನಮ್ಮ ಸಂವಿಧಾನ ಒಳಗೊಂಡಿದೆ.

೧. ಸ್ತ್ರೀ ಪುರುಷರಿಗೆ ಸಮಾನತೆಯ ಜೀವನಕ್ಕೆ ಅಗತ್ಯವಾದ ಪರಿಸರ ನಿರ್ಮಿಸುವದು. (ಕಲಮು ೩೯)

೨. ಪಂಚಾಯತ ರಾಜ್ಯ ವ್ಯವಸ್ಥೆ ರೂಪಿಸುವದು. (ಕಲಮು ೪೦)

೩. ಎಲ್ಲರಿಗೂ ವಿದ್ಯಾಭ್ಯಾಸ ಹಾಗೂ ಉದ್ಯೋಗದ ಅವಕಾಶ ದೊರಕಿಸಿಕೊಡುವದು. ಅಂಗವಿಕಲರಿಗೆ, ವೃದ್ಧರಿಗೆ ಹಾಗೂ ಅಸಮರ್ಥರಿಗೆ ಸಹಾಯ ನೀಡುವದು. (ಕಲಮು ೪೧)

೪. ಕಾರ್ಮಿಕರಿಗೆ ಅಗತ್ಯ ಸೌಲಭ್ಯ ಒದಗಿಸುವದು. ಬಾಣಂತಿಯರಿಗೆ ಪ್ರಸೂತಿ ಪರಿಹಾರ ದೊರಕಿಸಿಕೊಡುವದು.(ಕಲಮು ೪೨)

೫. ಕೃಷಿಕರ ಹಾಗೂ ಕೂಲಿಕಾರರ ಜೀವನ ಮಟ್ಟ ಹೆಚ್ಚಿಸುವದು. ಸಹಕಾರಿ ತತ್ವದ ಮೇಲೆ ಗ್ರಾಮೀಣ ಗೃಹ ಕೈಗಾರಿಕೆ ಸ್ಥಾಪನೆಗೆ ಪ್ರೋತ್ಸಾಹ ನೀಡುವದು. (ಕಲಮು ೪೩)

೬. ಇಡೀ ದೇಶಕ್ಕೆ ಅನ್ವಯಿಸುವ ಏಕರೂಪದ ನಾಗರಿಕ ಸಂಹಿತೆ ರೂಪಿಸುವದು. (ಕಲಮು ೪೪)

೭. ಏಳರಿಂದ ಹದಿನಾಲ್ಕು ವರ್ಷದ ವರೆಗಿನ ಮಕ್ಕಳಿಗೆ ಪುಕ್ಕಟೆ ಹಾಗೂ ಕಡ್ಡಾಯದ ಶಿಕ್ಷಣ ನೀಡುವದಕ್ಕೆ ಏರ್ಪಾಡು ಮಾಡುವದು.(ಕಲಮು ೪೫)

೮. ಅನುಸೂಚಿತ ಜಾತಿ, ಅನುಸೂಚಿತ ಜನಾಂಗದವರ ಶೋಷಣೆ ತಡೆಗಟ್ಟಿ ಅವರ ಆರ್ಥಿಕ ಹಾಗೂ ಸಾಮಾಜಿಕ ಪರಿಸ್ಥಿತಿ ಉತ್ತಮ ಪಡಿಸುವದು.(ಕಲಮು ೪೬)

೯. ಸಾರ್ವಜನಿಕ ಆರೋಗ್ಯದ ಮಟ್ಟವನ್ನು ಉತ್ತಮ ಪಡೆಸುವದು ಹಾಗೂ ಮಾದಕ ವಸ್ತುಗಳ ಸೇವನೆ ನಿಷೇಧಿಸುವದು. (ಕಲಮು ೪೭)

೧೦. ವೈಜ್ಞಾನಿಕ ಕೃಷಿ ಹಾಗೂ ಪಶುಪಾಲನೆ ಜಾರಿಗೊಳಿಸುವದು ಹಾಗೂ ಗೋಹತ್ಯೆ ನಿಷೇಧಿಸುವದು.(ಕಲಮು ೪೮)

೧೧. ರಾಷ್ಟ್ರೀಯ ಮಹತ್ವದ ಸ್ಥಳಗಳ, ಸ್ಮಾರಕಗಳ ಹಾಗೂ ವಸ್ತುಗಳ ರಕ್ಷಣೆ ಮಾಡುವದು. (ಕಲಮು ೪೯)

೧೨. ನ್ಯಾಯಾಂಗವನ್ನು ಕಾರ್ಯಾಂಗದಿಂದ ಪ್ರತ್ಯೇಕಿಸಲು ಕ್ರಮಕೈಗೊಳ್ಳುವದು (ಕಲಮು ೫೦)

೧೩. ಅಂತರ್ ರಾಷ್ಟ್ರೀಯ ಶಾಂತಿ ಹಾಗೂ ಭದ್ರತೆ ಕಾಪಾಡುವ ದಿಸೆಯಲ್ಲಿ ಕಾರ್ಯ ನಿರ್ವಹಿಸುವದು.

## *ಸಂಯುಕ್ತ ವ್ಯವಸ್ಥೆ - ಅದರ ಲಕ್ಷಣಗಳು

೧೯೩೫ರ ಭಾರತ ಸರಕಾರದ ಕಾನೂನಿನ ಮೂಲಕ ಈ ದೇಶದಲ್ಲಿ ಮೊಟ್ಟ ಮೊದಲಿಗೆ ಸಂಯುಕ್ತ ( ಒಕ್ಕೂಟ) ಪದ್ಧತಿಯನ್ನು ಜಾರಿಗೆ ತರಲಾಯಿತು. ಅದರ ಆಧಾರದ ಮೇಲೆ ರೂಪಗೊಂಡ ನಮ್ಮ ಸಂವಿಧಾನವು ಸಂಯುಕ್ತ ಪದ್ಧತಿಯ ಸರಕಾರವನ್ನು ನಿರ್ಮಿಸಿದೆ. ನಮ್ಮ ಸಂವಿಧಾನದ ಮೊದಲನೇ ಕಲಮು ''ಭಾರತವು ರಾಜ್ಯಗಳ ಒಕ್ಕೂಟ'' ಎಂದು ತಿಳಿಸುತ್ತದೆ. ಭಾರತದ ಒಕ್ಕೂಟ ವ್ಯವಸ್ಥೆಯು ಅಮೇರಿಕಾ ಸಂಯುಕ್ತ ಸಂಸ್ಥಾನ ಅಥವಾ ಸ್ವಿಸ್ ಒಕ್ಕೂಟಕ್ಕಿಂತ ಭಿನ್ನವಾಗಿದೆ. ಅಮೇರಿಕ, ಸ್ವಿಟ್ಸರ್ಲ್ಯಾಂಡ್‌ಗಳಲ್ಲಿ ಸ್ವತಂತ್ರ ರಾಜ್ಯಗಳ ನಡುವಿನ ಒಪ್ಪಂದದ ಮೂಲಕ ಒಕ್ಕೂಟ ಅಸ್ತಿತ್ವಕ್ಕೆ ಬಂದಿದೆ. ಭಾರತದಲ್ಲಿ ಆಡಳಿತದ ಅನುಕೂಲತೆಗಾಗಿ ಅನೇಕ ರಾಜ್ಯಗಳನ್ನು ರಚಿಸಲಾಗಿದೆ.

ಬ್ರಿಟಿಶ್ ಆಡಳಿತ ಪ್ರಾರಂಭವಾಗುವ ಮೊದಲು ಭಾರತ ಎಂದೂ ಒಂದು ರಾಷ್ಟ್ರವಾಗಿರಲಿಲ್ಲ (ಒಂದೇ ಆಡಳಿತದ ಅಡಿಯಲ್ಲಿ ಬಂದಿರಲಿಲ್ಲ). ಅಲ್ಲದೇ ಈ ದೇಶದ ವಿವಿಧ ಜನಾಂಗ, ಧರ್ಮ, ಜಾತಿ, ಭಾಷೆ, ಸಂಸ್ಕೃತಿ ಮತ್ತು ಪ್ರದೇಶಗಳ ಆಧಾರದ ಭಿನ್ನತೆಯಲ್ಲಿ ಏಕತೆ ತರುವ ಸಲುವಾಗಿ ಒಕ್ಕೂಟ ವ್ಯವಸ್ಥೆಯನ್ನು ರೂಪಿಸಲಾಯಿತು. ಪರಸ್ಪರ ವಿರೋಧಿ ಹಿತಾಸಕ್ತಿಗಳನ್ನು ಹೊಂದಿದ ಜನತೆಯ ಹಿತಾಸಕ್ತಿಯನ್ನು ರಕ್ಷಿಸುವದರೊಂದಿಗೆ ಅವರನ್ನೆಲ್ಲ ಒಂದು ಗೂಡಿಸಿಕೊಂಡು ಮುಂದುವರಿಯ ಬೇಕಾಗಿತ್ತು. ಆ ಕಾರಣದಿಂದಾಗಿ ಬಲಿಷ್ಠ ಕೇಂದ್ರ ಸರಕಾರವಿರುವ ಒಕ್ಕೂಟ ವ್ಯವಸ್ಥೆಯನ್ನು ನಿರ್ಮಿಸಲಾಗಿದೆ. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ನಮ್ಮದು ಏಕಾತ್ಮಕ ಪದ್ಧತಿಯಾಗುತ್ತದೆ. ಸಾಮಾನ್ಯ ಪರಿಸ್ಥಿತಿಯಲ್ಲಿ ಸಂವಿಧಾನ ನೀಡಿದ ಅಧಿಕಾರಗಳನ್ನು ಚಲಾಯಿಸಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತವೆ.

ಭಾರತದ ಪದ್ಧತಿಯನ್ನು ಸಂಯುಕ್ತ ಪದ್ಧತಿಯೆಂದು ಕರೆಯಬಹುದೇ ? ಎಂಬ ಬಗ್ಗೆ ಸಂವಿಧಾನ ರಚನಾ ಸಭೆಯಲ್ಲಿ ಭಿನ್ನಾಭಿಪ್ರಾಯಗಳು ವ್ಯಕ್ತವಾದವು. ಇದೊಂದು ಕೇಂದ್ರೀಕೃತ ವ್ಯವಸ್ಥೆ ಎಂದು ಕೆಲವರು ಅಭಿಪ್ರಾಯ ಪಟ್ಟರೆ ಇನ್ನು ಕೆಲವರು ನೋಡಲು ಸಂಯುಕ್ತ ವ್ಯವಸ್ಥೆಯಂತಿದ್ದರೂ ವಾಸ್ತವವಾಗಿ ಏಕಾತ್ಮಕ ವ್ಯವಸ್ಥೆಯಾಗಿದೆ

ಎಂದರು. ಸಂಯುಕ್ತ ವ್ಯವಸ್ಥೆಯ ಲಕ್ಷಣಗಳೊಡನೆ ನಮ್ಮ ಸರಕಾರದ ಪದ್ಧತಿಯನ್ನು ಹೋಲಿಸಿ ನೋಡಿದಾಗ ನಿಜಸ್ಥಿತಿ ತಿಳಿಯುತ್ತದೆ.

ಸಂಯುಕ್ತ ಪದ್ಧತಿಯಲ್ಲಿ ಸಮಾನ ಸ್ಥಾನಮಾನಗಳನ್ನು ಹೊಂದಿದ ಎರಡು ಹಂತದ ಸರಕಾರಗಳಿರುತ್ತವೆ. ಎರಡೂ ಸರಕಾರಗಳು ಅಂದರೆ ಕೇಂದ್ರ ಹಾಗೂ ರಾಜ್ಯಗಳು ಸಂವಿಧಾನದಿಂದ ನಿರ್ಮಿಸಲ್ಪಟ್ಟಿರುತ್ತವೆ. ಸಂವಿಧಾನ ನೀಡಿದ ಅಧಿಕಾರಗಳನ್ನು ಚಲಾಯಿಸಿ ಎರಡೂ ಸರಕಾರಗಳು ಕಾರ್ಯ ನಿರ್ವಹಿಸುತ್ತವೆ. ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಮಹತ್ವದ ವಿಷಯಗಳು ಕೇಂದ್ರದ ಅಧಿಕಾರಕ್ಕೆ ಸೇರಿರುತ್ತವೆ. ಸ್ಥಾನಿಕ (ಪ್ರಾದೇಶಕ) ಮಹತ್ವದ ವಿಷಯಗಳ ಬಗ್ಗೆ ರಾಜ್ಯಗಳಿಗೆ ಅಧಿಕಾರವಿರುತ್ತದೆ. ತಮ್ಮ ತಮ್ಮ ಅಧಿಕಾರದ ಕಕ್ಷೆಯಲ್ಲಿ ಎರಡೂ ಸರಕಾರಗಳು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತವೆ. ಒಂದು ಇನ್ನೊಂದನ್ನು ನಿಯಂತ್ರಿಸುವಂತಿಲ್ಲ .ಈ ಲಕ್ಷಣಗಳ ಮೇಲಿಂದ ಹೇಳುವದಾದರೆ ನಮ್ಮದು ಸಂಯುಕ್ತ ಪದ್ಧತಿಯಾಗಿದೆ.

ನಮ್ಮ ಸಂವಿಧಾನ ನಿರ್ಮಿಸಿದ ಒಕ್ಕೂಟ ವ್ಯವಸ್ಥೆ ಕೆಳಗಿನ ವಿಶೇಷ ಲಕ್ಷಣಗಳನ್ನು ಹೊಂದಿದೆ.

## ಲಿಖಿತ ಸಂವಿಧಾನ

ಒಕ್ಕೂಟ ಪದ್ಧತಿಯಲ್ಲಿ ಕೇಂದ್ರ ಹಾಗೂ ರಾಜ್ಯಗಳ ನಡುವೆ ಅಧಿಕಾರ ವಿಭಜನೆಯಾಗಿರುವದರಿಂದ ಅಧಿಕಾರದ ಹಂಚಿಕೆಯನ್ನು ಅರಿತುಕೊಳ್ಳಲು ಲಿಖಿತ ಸಂವಿಧಾನದ ಅವಶ್ಯಕತೆ ಇದೆ. ಸಂವಿಧಾನವು ಅಲಿಖಿತವಾಗಿದ್ದರೆ ಕೇಂದ್ರ ಹಾಗೂ ರಾಜ್ಯಗಳ ನಡುವೆ ಅಧಿಕಾರ ವಿಭಜನೆಯ ಬಗ್ಗೆ ವಿವಾದಗಳುಂಟಾಗುವ ಸಾಧ್ಯತೆ ಇದೆ. ಆದ್ದರಿಂದ ಒಕ್ಕೂಟ (ಸಂಯುಕ್ತ) ವ್ಯವಸ್ಥೆಯನ್ನು ನಿರ್ಮಿಸಿದ ನಮ್ಮ ದೇಶದ ಸಂವಿಧಾನ ಲಿಖಿತವಾಗಿದೆ.

## ನಮ್ಯ ಹಾಗೂ ಅನಮ್ಯ ಸಂವಿಧಾನಗಳ ಮಿಶ್ರಣ

ಒಕ್ಕೂಟ ಪದ್ಧತಿಯು ದ್ವಿಸರಕಾರದ ವ್ಯವಸ್ಥೆಯಾಗಿರುವದರಿಂದ ಸಂವಿಧಾನವು ಕ್ಲಿಷ್ಟಕರ ತಿದ್ದುಪಡಿ ವಿಧಾನ ಹೊಂದಿರಬೇಕಾಗುತ್ತದೆ. ತಿದ್ದುಪಡಿಯ ವಿಧಾನ ಸರಳವಾಗಿದ್ದರೆ ಕೇಂದ್ರ ಸರಕಾರ ಸಂವಿಧಾನಕ್ಕೆ ತಿದ್ದುಪಡಿ ಮಾಡುವ ಮೂಲಕ ರಾಜ್ಯಗಳ ಅಧಿಕಾರ ಮೊಟಕು ಮಾಡುವ ಸಾಧ್ಯತೆ ಇದೆ. ಇದು ಸಂಯುಕ್ತ (ಒಕ್ಕೂಟ) ವ್ಯವಸ್ಥೆಗೆ ಮಾರಕವಾಗಿದೆ. ಈ ದೃಷ್ಟಿಯಿಂದ ತಿದ್ದುಪಡಿಯ ವಿಧಾನ ಕ್ಲಿಷ್ಟಕರವಾಗಿರಬೇಕು, ಹಾಗೂ ಕೇಂದ್ರ ಹಾಗೂ ರಾಜ್ಯಗಳೆರಡೂ ಕೂಡಿ ತಿದ್ದುಪಡಿ ಮಾಡುವಂತಿರಬೇಕು. ನಮ್ಮ ಸಂವಿಧಾನದ ತಿದ್ದುಪಡಿಗೆ ಮೂರು ವಿಧಾನಗಳಿವೆ. ಕೇಂದ್ರ ರಾಜ್ಯಗಳ ಅಧಿಕಾರ ಹಂಚಿಕೆಯ ವಿಷಯದ ತಿದ್ದುಪಡಿಗಾಗಿ ಕ್ಲಿಷ್ಟಕರವಾದ ಮೊದಲ ವಿಧಾನ

ಅನುಸರಿಸಬೇಕಾಗುತ್ತದೆ. ಅಂದರೆ ಸಂಸತ್ತಿನ ಎರಡೂ ಸದನಗಳಲ್ಲಿ ಎರಡು ಮೂರಾಂಶ ಬಹುಮತ ಹಾಗೂ ಅರ್ಧದಷ್ಟು ರಾಜ್ಯಗಳ ಒಪ್ಪಿಗೆಯ ಮೇರೆಗೆ ತಿದ್ದುಪಡಿ ಮಾಡಬಹುದು. ಎರಡನೇ ವಿಧಾನದ ಪ್ರಕಾರ ಸಂಸತ್ತಿನ ಎರಡೂ ಸದನಗಳಲ್ಲಿ ತಿದ್ದುಪಡಿ ಮಸೂದೆ ಎರಡೂ ಸದನಗಳಲ್ಲಿ ಎರಡು ಮೂರಾಂಶ ಬಹುಮತ ಪಡೆದರೆ ಸಾಕು. ಮೂರನೆಯ ವಿಧಾನ ಅತ್ಯಂತ ಸರಳವಾಗಿದೆ. ಸಂಸತ್ತಿನ ಎರಡೂ ಸದನಗಳಲ್ಲಿ ಸಾದಾ ಬಹುಮತದ ಮೂಲಕ ತಿದ್ದುಪಡಿ ಮಾಡಬಹುದು. ಹೀಗೆ ನಮ್ಮ ಸಂವಿಧಾನ ನಮ್ಯ ಅನಮ್ಯತೆಗಳ ಮಿಶ್ರಣವಾಗಿದೆ.

## ಅಧಿಕಾರದ ವಿಭಜನೆ

ಅಧಿಕಾರದ ವಿಭಜನೆ ಸಂಯುಕ್ತ ಪದ್ಧತಿಯ ತಳಹದಿಯಾಗಿದೆ. ಸಂವಿಧಾನವೇ ಕೇಂದ್ರ ಹಾಗೂ ರಾಜ್ಯಗಳ ನಡುವೆ ಅಧಿಕಾರ ಹಂಚುತ್ತದೆ. ಅಮೇರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಸಂವಿಧಾನವು ಕೇಂದ್ರ ವಿಷಯಗಳ ಪಟ್ಟಿಯನ್ನೊಳಗೊಂಡಿದೆ. ಪಟ್ಟಿಯಲ್ಲಿನ ವಿಷಯಗಳನ್ನು ಹೊರತುಪಡಿಸಿ ಇತರ ಎಲ್ಲ ವಿಷಯಗಳೂ ರಾಜ್ಯಗಳಿಗೆ ಸೇರಿವೆ. ಕೆನಡಾ ಸಂವಿಧಾನವು ರಾಜ್ಯ ವಿಷಯಗಳ ಪಟ್ಟಿಯನ್ನು ಒಳಗೊಂಡಿದೆ. ಇತರ ವಿಷಯಗಳು ಕೇಂದ್ರಕ್ಕೆ ಸೇರಿವೆ. ಭಾರತದಲ್ಲಿ ಮೇಲಿನ ಎರಡೂ ದೇಶಗಳಿಗೆ ಹೊರತಾದ ಅಧಿಕಾರ ವಿಭಜನೆಯ ವ್ಯವಸ್ಥೆ ಇದೆ. ನಮ್ಮ ಸಂವಿಧಾನ ೧) ಕೇಂದ್ರ ಪಟ್ಟಿ ೨) ರಾಜ್ಯ ಪಟ್ಟಿ ಹಾಗೂ ೩) ಸಮವರ್ತಿ ಪಟ್ಟಿ ಹೀಗೆ ಮೂರು ಪಟ್ಟಿಗಳ ಮೂಲಕ ಅಧಿಕಾರ ವಿಭಜನೆ ಮಾಡಿದೆ. ಈ ಮೂರೂ ಪಟ್ಟಿಗಳಲ್ಲಿರದ ಶೇಷಾಧಿಕಾರಗಳು ಕೇಂದ್ರಕ್ಕೆ ಸೇರಿವೆ.

**೧. ಕೇಂದ್ರ ಪಟ್ಟಿ** :- ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಮಹತ್ವದ 97 ವಿಷಯ-ಗಳನ್ನು ಕೇಂದ್ರಪಟ್ಟಿ ಒಳಗೊಂಡಿದೆ.ಇದರಲ್ಲಿ ಬರುವ ವಿಷಯಗಳ ಬಗ್ಗೆ ಕಾನೂನು ರಚಿಸುವ ಹಾಗೂ ಜಾರಿಗೊಳಿಸುವ ಅಧಿಕಾರ ಕೇಂದ್ರ ಸರಕಾರಕ್ಕಿದೆ.ರಕ್ಷಣೆ, ವಿದೇಶಾಂಗ ವ್ಯವಹಾರ,ಆದಾಯ ತೆರಿಗೆ, ವಿಜ್ಞಾನ ಮತ್ತು ತಂತ್ರ ಜ್ಞಾನ, ನಾಗರಿಕತ್ವ, ಚುನಾವಣೆಗಳು, ಜೀವ ವಿಮೆ, ಬ್ಯಾಂಕಿಂಗ್ ವ್ಯವಹಾರ, ಮುಂತಾದವುಗಳು ಕೇಂದ್ರ ಪಟ್ಟಿಯಲ್ಲಿರುವ ಮಹತ್ವದ ವಿಷಯಗಳು.

**೨. ರಾಜ್ಯ ಪಟ್ಟಿ** :- ಪ್ರಾದೇಶಿಕ ಮಹತ್ವದ 66 ವಿಷಯಗಳು ರಾಜ್ಯ ಪಟ್ಟಿಯಲ್ಲಿವೆ. ಇದರಲ್ಲಿ ಬರುವ ವಿಷಯಗಳ ಬಗ್ಗೆ ಕಾನೂನು ರಚಿಸುವ ಹಾಗೂ ಆಡಳಿತ ನಡೆಸುವ ಅಧಿಕಾರ ರಾಜ್ಯ ಸರಕಾರಗಳಿಗಿದೆ. ವ್ಯವಸಾಯ, ನೀರಾವರಿ, ಅರಣ್ಯ, ಕಂದಾಯ, ಪಶು ಸಂಗೋಪನೆ, ಆರೋಗ್ಯ, ಕಾನೂನು ಹಾಗೂ ಸುವ್ಯವಸ್ಥೆ, ಪೋಲೀಸು, ಸ್ಥಾನಿಕ ಸ್ವಯಂ ಆಡಳಿತ ಸಂಸ್ಥೆಗಳು, ಗ್ರಂಥಾಲಯ, ಮೀನುಗಾರಿಕೆ ಮುಂತಾದವುಗಳು ರಾಜ್ಯ ಪಟ್ಟಿಯಲ್ಲಿರುವ ಮಹತ್ವದ ವಿಷಯಗಳು. ಎರಡು ಅಥವಾ ಹೆಚ್ಚು ರಾಜ್ಯಗಳು ಮನವಿ

ಮಾಡಿಕೊಂಡಲ್ಲಿ ಸಂಸತ್ತು ನಿರ್ದಿಷ್ಟ ವಿಷಯ ಕುರಿತು ಒಂದು ವರ್ಷದ ಮಟ್ಟಿಗೆ ಕಾನೂನು ರಚಿಸುತ್ತದೆ.ಮನವಿ ಮಾಡಿಕೊಂಡ ರಾಜ್ಯಗಳಲ್ಲಿ ಮಾತ್ರ ಕಾನೂನು ಜಾರಿಯಾಗುತ್ತದೆ. ರಾಜ್ಯ ಸಭೆ ಎರಡು ಮೂರಾಂಶ ಬಹು ಮತದ ಮೂಲಕ ರಾಜ್ಯ ಪಟ್ಟಿಯಲ್ಲಿನ ವಿಷಯದ ಬಗ್ಗೆ ಸಂಸತ್ತು ಕಾನೂನು ರಚಿಸುವ ಅಗತ್ಯವಿದೆ ಎಂಬ ಗೊತ್ತುವಳಿ ಸ್ವೀಕರಿಸಿದರೆ ಆ ವಿಷಯದ ಬಗ್ಗೆ ಸಂಸತ್ತು ಇಡೀ ದೇಶಕ್ಕಾಗಿ ಅಥವಾ ದೇಶದ ಯಾವದೇ ಒಂದು ಭಾಗಕ್ಕಾಗಿ ಶಾಸನ ರಚಿಸುವ ಅಧಿಕಾರ ಹೊಂದಿದೆ. ಇಂಥ ಕಾನೂನು ಒಂದು ವರ್ಷದವರೆಗೆ ಜಾರಿಯಲ್ಲಿರುತ್ತದೆ.

**೩. ಸಮವರ್ತಿ ಪಟ್ಟಿ :-** ೫೨ ವಿಷಯಗಳನ್ನೊಳಗೊಂಡ ಸಮವರ್ತಿ ಪಟ್ಟಿ ಕೇಂದ್ರ ಹಾಗೂ ರಾಜ್ಯಗಳೆರಡಕ್ಕೂ ಕಾನೂನು ರಚಿಸುವ ಅಧಿಕಾರ ನೀಡುತ್ತದೆ. ಒಂದೇ ವಿಷಯದ ಬಗ್ಗೆ ಕೇಂದ್ರ ಹಾಗೂ ರಾಜ್ಯಗಳು ಕಾನೂನು ರಚಿಸಿದಾಗ ಎರಡರ ನಡುವೆ ಘರ್ಷಣೆಯಾಗುವಂತಿದ್ದರೆ ರಾಜ್ಯದ ಕಾನೂನಿನ ಆ ಭಾಗ ಮಾತ್ರ ರದ್ದಾಗುತ್ತದೆ. ವಿವಾಹ, ವಿವಾಹ ವಿಚ್ಛೇದನೆ, ವಾರ್ತಾ ಪತ್ರಿಕೆಗಳು, ಶಿಕ್ಷಣ, ವಿದ್ಯುತ್, ಬೆಲೆ ನಿಯಂತ್ರಣ, ಔಷಧಿಗಳು, ಸಾಮಾಜಿಕ ಭದ್ರತೆ ಮುಂತಾದ ವಿಷಯಗಳನ್ನು ಸಮವರ್ತಿಪಟ್ಟಿ ಒಳಗೊಂಡಿದೆ.

## ಸ್ವತಂತ್ರ ನ್ಯಾಯಾಂಗ

ಸಂಯುಕ್ತ ಪದ್ಧತಿಯಲ್ಲಿ ಸಂವಿಧಾನದ ರಕ್ಷಣೆ ಹಾಗೂ ಕೇಂದ್ರ ಮತ್ತು ರಾಜ್ಯಗಳ ನಡುವಿನ ವಿವಾದ ತೀರ್ಮಾನಕ್ಕೆ ಸ್ವತಂತ್ರ ನ್ಯಾಯಾಂಗದ ಅವಶ್ಯಕತೆ ಇದೆ. ಕೇಂದ್ರ ಅಥವಾ ರಾಜ್ಯಗಳ ನಿಯಂತ್ರಣಕ್ಕೆ ಒಳಪಟ್ಟ ನ್ಯಾಯಾಂಗ ನಿಷ್ಪಕ್ಷಪಾತ ನ್ಯಾಯ ನಿರ್ಣಯ ಕೊಡಲಾರದು. ಆದ್ದರಿಂದ ನಮ್ಮ ಸಂವಿಧಾನವು ಸ್ವತಂತ್ರ ನ್ಯಾಯಾಂಗವನ್ನು ನಿರ್ಮಿಸಲು ಅವಕಾಶ ಮಾಡಿಕೊಟ್ಟಿದೆ. ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳ ನ್ಯಾಯಾಧೀಶರ ನೇಮಕಕ್ಕಾಗಿ ವಿಧಾನಗಳನ್ನು ರೂಪಿಸಿದೆ. ಅಲ್ಲದೇ ಸರ್ವೋನ್ನತನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರ ಅಭಿಪ್ರಾಯ ಪಡೆದುಕೊಂಡು ರಾಷ್ಟ್ರಪತಿಯವರು ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರ ನೇಮಕ ಮಾಡುತ್ತಾರೆ. ನ್ಯಾಯಾಧೀಶರ ಪದಚ್ಯುತಿ ವಿಧಾನ ಕೂಡ ಕ್ಲಿಷ್ಟವಾಗಿದೆ. ಸಂಸತ್ತಿನ ಎರಡೂ ಸದನಗಳು ಎರಡು ಮೂರಾಂಶ ಬಹು ಮತದಿಂದ ಆ ಬಗ್ಗೆ ಗೊತ್ತುವಳಿ ಪಾಸು ಮಾಡಿದ ನಂತರ ರಾಷ್ಟ್ರಪತಿಯವರು ಕಳಂಕಿತ ನ್ಯಾಯಾಧೀಶರನ್ನು ವಜಾ ಮಾಡುತ್ತಾರೆ. ನ್ಯಾಯಾಧೀಶರ ವೇತನ ಹಾಗೂ ಸೇವಾ ನಿಯಮಗಳನ್ನು ಅವರಿಗೆ ಅನಾನುಕೂಲವಾಗುವಂತೆ ಬದಲಿಸಲು ಬರುವದಿಲ್ಲ. ಭಾರತದ ಸಂಚಿತ ನಿಧಿಯಿಂದ ನ್ಯಾಯಾಧೀಶರ ವೇತನ ಪಡೆದುಕೊಳ್ಳಲಾಗುತ್ತದೆ.

## ದ್ವಿಸದನ ಶಾಸನಾಂಗ

ಸಂಯುಕ್ತ ಪದ್ಧತಿಯಲ್ಲಿ ಕೇಂದ್ರ ಶಾಸನಾಂಗ ದ್ವಿಸದನ ಶಾಸನಾಂಗವಾಗಿರುತ್ತದೆ. ಕೆಳಮನೆ ಜನತೆಯನ್ನು ಅಥವಾ ರಾಷ್ಟ್ರವನ್ನು ಪ್ರತಿ ನಿಧಿಸಿದರೆ ಮೇಲ್ಮನೆ ರಾಜ್ಯಗಳನ್ನು ಪ್ರತಿನಿಧಿಸುತ್ತದೆ. ಕೆಂದ್ರದಲ್ಲಿ ರಾಜ್ಯಗಳ ಹಿತಾಸಕ್ತಿ ರಕ್ಷಿಸುವ ಜವಾಬ್ದಾರಿ ಮೇಲ್ಮನೆಯದ್ದಾಗಿದೆ. ರಾಜ್ಯಗಳ ಹಿತಾಸಕ್ತಿಗೆ ವಿರೋಧವಾದ ಕಾನೂನು ರಚನೆಯನ್ನು ತಡೆಗಟ್ಟುವ ಅಧಿಕಾರ ಅದಕ್ಕಿದೆ. ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಕಾಂಗ್ರೆಸ್‌ನ ಮೇಲ್ಮನೆಯಾದ ಸೆನೆಟ್‌ಸಭೆ ರಾಜ್ಯಗಳ ಪ್ರತಿ ನಿಧಿಯಾಗಿದೆ. ಎಲ್ಲ ರಾಜ್ಯಗಳಿಗೂ ಅದರಲ್ಲಿ ಸಮಾನ ಪ್ರಾತಿನಿಧ್ಯವಿದೆ. ೫೦ ರಾಜ್ಯಗಳಿಂದ ನೂರು ಜವ ಸೆನೆಟ್ ಸದಸ್ಯರು ಆಯ್ಕೆಯಾಗುತ್ತಾರೆ. ಭಾರತದಲ್ಲೂ ಸಂಸತ್ತಿನ ಮೇಲ್ಮನೆಯಾದ ರಾಜ್ಯಸಭೆ ರಾಜ್ಯಗಳ ಪ್ರತಿನಿಧಿಯಾಗಿದೆ. ಆದರೆ ಇದರಲ್ಲಿ ಸಮಾನ ಪ್ರಾತಿಧ್ಯವಿಲ್ಲ. ಪ್ರತಿ ರಾಜ್ಯದಿಂದ ಜನಸಂಖ್ಯೆಗೆ ಅನುಗುಣವಾಗಿ ಸದಸ್ಯರನ್ನು ರಾಜ್ಯಸಭೆಗೆ ಅಯ್ಕೆಮಾಡಲಾಗುತ್ತದೆ. ಈ ಹಿಂದೆ ರಾಜ್ಯಸಭೆಗೆ ಸಂಬಂಧಿಸಿದ ರಾಜ್ಯದವರೇ ಅಭ್ಯರ್ಥಿಗಳಾಗಬೇಕೆಂಬ ನಿಯಮವಿತ್ತು. ಕಳೆದ ವರ್ಷದ ಸಂವಿಧಾನದ ತಿದ್ದುಪಡಿಯ ಮೂಲಕ ಈ ನಿಯಮವನ್ನು ತೆಗೆದು ಹಾಕಲಾಗಿದೆ. ಈ ತಿದ್ದುಪಡಿ ಸಂಯುಕ್ತ ಪದ್ಧತಿಗೆ ವಿರುದ್ಧವಾಗಿದೆ. ಯಾಕೆಂದರೆ ಆಯಾ ರಾಜ್ಯದವರು ರಾಜ್ಯ ಸಭೆಗೆ ಆಯ್ಕೆಯಾದರೆ ಮಾತ್ರ ರಾಜ್ಯದ ಹಿತರಕ್ಷಣೆ ಸಾಧ್ಯ. ಉದಾ :- ೧೯೯೮ನೇ ಇಸ್ವಿಯಿಂದ ಕರ್ನಾಟಕದ ಪ್ರತಿನಿಧಿಯಾಗಿ ರಾಜ್ಯಸಭೆಯ ಸದಸ್ಯರಾಗಿರುವ ವೆಂಕಯ್ಯ ನಾಯ್ಡು ಎಂದೂ ಕರ್ನಾಟಕದ ಹಿತ ರಕ್ಷಣೆಗಾಗಿ ಹೋರಾಡಿಲ್ಲ. ಕರ್ನಾಟಕದ ಪರವಾಗಿ ಒಂದೇ ಒಂದು ಸಲ ಕೂಡ ದನಿ ಎತ್ತಿಲ್ಲ. ಕರ್ನಾಟಕ ತೆಲುಗನ್ನು ಎರಡನೇ ಅಧಿಕೃತ ಭಾಷೆಯಾಗಿ ಮಾಡಬೇಕೆಂಬ ಹೇಳಿಕೆಯ ಮೂಲಕ ತಮ್ಮನ್ನು ಆಯ್ಕೆ ಮಾಡಿದ ಕನ್ನಡಿಗರ ಋಣ ? ತೀರಿಸಿದ್ದಾರೆ.

## ಸಂವಿಧಾನದ ಶ್ರೇಷ್ಠತೆ

ಸಂಯುಕ್ತ ಪದ್ಧತಿಯಲ್ಲಿ ಸಂವಿಧಾನ ಸರ್ವೋನ್ನತ ಸ್ಥಾನ ಹೊಂದಿರುತ್ತದೆ. ಅದು ಕೇಂದ್ರ ಹಾಗೂ ರಾಜ್ಯ ಸರಕಾರಗಳನ್ನು ನಿರ್ಮಿಸಿ ಅವುಗಳಿಗೆ ಅಧಿಕಾರ ನೀಡುತ್ತದೆ. ಸಂವಿಧಾನ ವಿಧಿಸಿದ ಮಿತಿಗೊಳಪಟ್ಟು ಎರಡೂ ಸರಕಾರಗಳು ಕಾರ್ಯ ನಿರ್ವಹಿಸ ಬೇಕಾಗುತ್ತದೆ. ತಮ್ಮ ಅಧಿಕಾರದ ಕಕ್ಷೆಯನ್ನು (ಮಿತಿಯನ್ನು) ಮೀರಿದರೆ ಸಂವಿಧಾನದ ರಕ್ಷಣೆಯ ಜವಾಬ್ದಾರಿ ಹೊತ್ತ ನ್ಯಾಯಾಂಗವು ಅಂಥ ಕಾರ್ಯಗಳನ್ನು ರದ್ದು ಪಡಿಸುತ್ತದೆ. ಭಾರತದಲ್ಲಿ ಸಂವಿಧಾನವು ಶ್ರೇಷ್ಠತೆ ಹೊಂದಿದ್ದು ಅದು ವಿಧಿಸಿದ ನಿರ್ಬಂಧಗಳಿಗೊಳಪಟ್ಟು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಕಾರ್ಯ ನಿರ್ವಹಿಸುತ್ತವೆ. ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳು ಸಂವಿಧಾನದ ರಕ್ಷಣೆ ಮಾಡುತ್ತವೆ.

## ಅಖಿಲ ಭಾರತದ ಸೇವಾವರ್ಗಗಳು

ಸಂಯುಕ್ತ ಪದ್ಧತಿಯಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಪ್ರತ್ಯೇಕ ಸೇವಾ ವರ್ಗಗಳನ್ನು ಹೊಂದಿರುತ್ತವೆ. ಕೇಂದ್ರ ಸರಕಾರದ ನೌಕರರು ಕೇಂದ್ರದಲ್ಲಿ ಮಾತ್ರ ಸೇವೆ ಸಲ್ಲಿಸಿದರೆ ರಾಜ್ಯ ಸರಕಾರದ ನೌಕರರು ಸಂಬಂಧಿಸಿದ ರಾಜ್ಯಗಳಲ್ಲಿ ಸೇವೆ ಸಲ್ಲಿಸುತ್ತಾರೆ. ಭಾರತದಲ್ಲಿ ಸಂಯುಕ್ತ ಪದ್ಧತಿಗೆ ವ್ಯತಿರಿಕ್ತವಾಗಿ ಕೇಂದ್ರ ಹಾಗೂ ರಾಜ್ಯಗಳೆರಡರಡಲ್ಲೂ ಸೇವೆ ಸಲ್ಲಿಸುವ ಅಖಿಲ ಭಾರತದ ಸೇವಾ ವರ್ಗಗಳಿವೆ.
ಉದಾ :- ಭಾರತೀಯ ಆಡಳಿತ ಸೇವೆ (ಐ.ಎ. ಎಸ್. ), ಭಾರತೀಯ ಪೋಲೀಸು ಸೇವೆ (ಐ. ಪಿ. ಎಸ್.), ಭಾರತೀಯ ಅರಣ್ಯ ಸೇವೆ (ಐ. ಎಫ್. ಎಸ್.), ಭಾರತೀಯ ವಿದೇಶ ಸೇವೆ (ಐ. ಎಫ್. ಎಸ್.)ಮುಂತಾದವುಗಳು.ಅಖಿಲ ಭಾರತ ಸೇವಾ ವರ್ಗಗಳ ಸದಸ್ಯರು ಕೇಂದ್ರ ಹಾಗೂ ರಾಜ್ಯಗಳೆರಡರಲ್ಲೂ ಸೇವೆ ಸಲ್ಲಿಸಿದರೂ ಕೇಂದ್ರ ಸರಕಾರದ ನಿಯಂತ್ರಕ್ಕೆ ಒಳಪಡುತ್ತಾರೆ. ಅವರ ಮೇಲೆ ಕ್ರಮ ತಗೆದುಕೊಳ್ಳುವ ಅಧಿಕಾರ ಕೇಂದ್ರ ಸರಕಾರಕ್ಕೆ ಇದೆಯೇ ಹೊರತು ರಾಜ್ಯ ಸರಕಾರಗಳಿಗಿಲ್ಲ.

## ತುರ್ತುಪರಿಸ್ಥಿತಿಯ ಅವಕಾಶಗಳು

ದೇಶದ ಯಾವುದೇ ಒಂದು ಭಾಗದಲ್ಲಿ ಅಥವಾ ಇಡೀ ದೇಶದಲ್ಲಿ ತುರ್ತು ಪರಿಸ್ಥಿತಿ ಸಾರುವ ಅಧಿಕಾರ ಭಾರತದ ರಾಷ್ಟ್ರಪತಿಯವರಿಗಿದೆ. ಸಂವಿಧಾನದ ೩೫೨ನೇ ಕಲಮಿನ ಪ್ರಕಾರ ಯುದ್ಧ, ಆಕ್ರಮಣ ಅಥವಾ ಆಂತರಿಕ ಗಲಭೆಗಳ ಸಂದರ್ಭದಲ್ಲಿ ೩೫೬ನೇ ಕಲಮಿನ ಪ್ರಕಾರ ರಾಜ್ಯವೊಂದರಲ್ಲಿ ಸಂವಿಧಾನಕ್ಕೆ ಅನುಗುಣವಾಗಿ ಸರಕಾರ ನಡೆಸಲು ಸಾಧ್ಯವಿಲ್ಲದಾಗ ಹಾಗೂ ೩೬೦ ನೇ ಕಲಮಿನ ಪ್ರಕಾರ ದೇಶದ ಹಣಕಾಸಿನ ಸ್ಥಿತಿ ಕಳವಳಕಾರಿಯಾದಾಗ ರಾಷ್ಟ್ರಪತಿಯವರು ತುರ್ತು ಪರಿಸ್ಥಿತಿ ಸಾರಬಹುದು.ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ದೇಶದಲ್ಲಿ ಏಕಾತ್ಮಕ ಸರಕಾರ ಜಾರಿಯಲ್ಲಿರುತ್ತದೆ. ರಾಜ್ಯಗಳು ಕೇಂದ್ರದ ಪ್ರತಿನಿಧಿಗಳಾಗುತ್ತವೆ.ದೇಶದ ಸಂಯುಕ್ತ ವ್ಯವಸ್ಥೆಗೆ ಇದು ಮಾರಕವಾಗಿದೆ.

## ಪ್ರಶ್ನೆ ಪತ್ರಿಕೆ

ಅ. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ. ಒಂದು ಅಂಕದ ಪ್ರಶ್ನೆಗಳು

೧. ಸಂವಿಧಾನ ಎಂದರೇನು ?

೨. ಭಾರತದ ಸಂವಿಧಾನದ ಶಿಲ್ಪಿ ಯಾರು ?

೩. ಭಾರತದ ಸಂವಿಧಾನ ಎಂದು ಜಾರಿಗೆ ಬಂದಿತು ?

೪. ಮೂಲಭೂತ ಹಕ್ಕುಗಳು ಎಷ್ಟಿವೆ ?

೪. ಸಂವಿಧಾನದ ಎಷ್ಟನೇ ತಿದ್ದುಪಡಿಯ ಮೂಲಕ ಮೂಲಭೂತ ಕರ್ತವ್ಯಗಳನ್ನು ಅಳವಡಿಸಲಾಗಿದೆ ?

೫. ಅಧಿಕಾರ ವಿಭಜನೆಗೆ ಆಧಾರವಾಗಿರುವ ಮೂರು ಪಟ್ಟಿಗಳ ಹೆಸರು ಹೇಳಿರಿ ?

ಆ. ಕೆಳಗಿನ ಪ್ರಶ್ನೆಗಳಿಗೆ ೨ -೩ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಎರಡು ಅಂಕದ ಪ್ರಶ್ನೆಗಳು

೬. ಭಾರತದ ಸಂವಿಧಾನ ನೀಡಿರುವ ಮೂಲಭೂತ ಹಕ್ಕುಗಳಹಕ್ಕುಗಳ ಪೈಕಿ ಒಂದರ ಬಗ್ಗೆ ವಿವರಿಸಿರಿ.

೭. ಸಂವಿಧಾನಾತ್ಮಕ ಪರಿಹಾರದ ಹಕ್ಕಿನ ಮಹತ್ವ ತಿಳಿಸಿರಿ.

೮. ನಮ್ಮ ಸಂವಿಧಾನದಲ್ಲಿ ನೀತಿ ನಿರ್ದೇಶಕ ತತ್ವಗಳನ್ನು ಯಾವ ಕಾರಣಕ್ಕಾಗಿ ಸೇರ್ಪಡೆ ಮಾಡಲಾಯಿತು?

೯. ಭಾರತದಲ್ಲಿರುವದು ಒಕ್ಕೂಟ (ಸಂಯುಕ್ತ) ಪದ್ಧತಿಯೇ ?

೧೦. ನೀತಿನಿರ್ದೇಶಕ ತತ್ವಗಳೆಂದರೇನು ?

ಇ. ಕೆಳಗಿನ ಪ್ರಶ್ನೆಗಳಿಗೆ ೮-೧೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಐದು ಅಂಕದ ಪ್ರಶ್ನೆಗಳು

೧೧. ಕೇಂದ್ರ ರಾಜ್ಯಗಳ ನಡುವಿನ ಅಧಿಕಾರ ಹಂಚಿಕೆ ಕುರಿತು ಚರ್ಚಿಸಿರಿ ?

೧೨. ಸಂವಿಧಾನಾತ್ಮಕ ಪರಿಹಾರದಹಕ್ಕು ಕುರಿತು ವಿವರಣೆ ನೀಡಿರಿ ?

೧೩. ನಮ್ಮ ಸಂವಿಧಾನದ ತಿದ್ದುಪಡಿಯ ವಿಧಾನಗಳನ್ನು ವಿವರಿಸಿರಿ ?

೧೪. ಮೂಲಭೂತ ಕರ್ತವ್ಯಗಳನ್ನು ಕುರಿತು ಚರ್ಚಿಸಿರಿ.

೧೫. ನೀತಿನಿರ್ದೇಶಕ ತತ್ವಗಳು ಎಷ್ಟರ ಮಟ್ಟಿಗೆ ಜಾರಿಯಾಗಿವೆ ?

ಈ. ಕೆಳಗಿನ ಪ್ರಶ್ನೆಗಳಿಗೆ ೩೦ - ೪೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಹತ್ತು ಅಂಕದ ಪ್ರಶ್ನೆಗಳು

೧೬. ಭಾರತದ ಸಂವಿಧಾನದ ಪ್ರಮುಖ ಲಕ್ಷಣಗಳನ್ನು ವಿವರಿಸಿರಿ.

೧೭. ಭಾರತದ ಒಕ್ಕೂಟ (ಸಂಯುಕ್ತ) ವ್ಯವಸ್ಥೆಯ ಲಕ್ಷಣಗಳನ್ನು ವಿವರಿಸಿರಿ .

೧೮. ಮೂಲಭೂತ ಹಕ್ಕುಗಳನ್ನು ವಿವರಿಸಿರಿ .

೧೯. ನೀತಿನಿರ್ದೇಶಕ ತತ್ವಗಳನ್ನು ಕುರಿತು ಪ್ರಬಂಧ ಬರೆಯಿರಿ .

೨೦. ನಮ್ಮ ಸಂವಿಧಾನದ ಪೀಠಿಕೆಯನ್ನು ಪರಿಶೀಲಿಸಿರಿ.

❑❑

## ಅಧ್ಯಾಯ ೬

# ಶಾಸಕಾಂಗ

### * ಅರ್ಥ ಮತ್ತು ಮಹತ್ವ

ಆಧುನಿಕ ಪ್ರಜಾಪ್ರಭುತ್ವ ಅಪ್ರತ್ಯಕ್ಷ ಅಥವಾ ಪ್ರತಿನಿಧಿ ಪ್ರಜಾ ಪ್ರಭುತ್ವವಾಗಿದೆ. ಸರಕಾರದ ಕೆಲಸ ಕಾರ್ಯಗಳಲ್ಲಿ ಜನರು ನೇರವಾಗಿ ಭಾಗವಹಿಸಲು ಸಾಧ್ಯವಿಲ್ಲದ್ದರಿಂದ ತಮ್ಮ ಪ್ರತಿನಿಧಿಗಳ ಮೂಲಕ ಆ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಸರಕಾರದ ಮೂರು ಅಂಗಗಳ ಪೈಕಿ ಶಾಸನಾಂಗ ಮೊದಲ ಅಂಗವಾಗಿದೆ. ಅದು ಚರ್ಚೆಯ ಮೂಲಕ ತೀರ್ಮಾನ ತೆಗೆದುಕೊಳ್ಳತ್ತದೆ. ಜನರ ಅಭಿಪ್ರಾಯಗಳನ್ನು ಕಾನೂನುಗಳಾಗಿ ಪರಿವರ್ತಿಸುವ ಕಾರ್ಯ ಶಾಸನಾಂಗದ್ದಾಗಿದೆ. ಜನಪ್ರತಿನಿಧಿಗಳ ಮೂಲಕ ಶಾಸನ ರಚಿಸುವ ವ್ಯವಸ್ಥೆ ಮೊಟ್ಟ ಮೊದಲಿಗೆ ಬ್ರಿಟನ್‌ನಲ್ಲಿ ಜಾರಿಗೆ ಬಂದಿದೆ.

೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಬಸವಣ್ಣನವರು ನಿರ್ಮಿಸಿದ್ದ 'ಅನುಭವ ಮಂಟಪ' ಸಂಸತ್ತು ಅಥವಾ ಶಾಸನಾಂಗದ ಸಮೀಪವರ್ತಿ ಆಗಿತ್ತೆಂದು ಹೇಳಬಹುದು. ವಿಶ್ವ ಸಂಸತ್ ವ್ಯವಸ್ಥೆಯ ಮಾತೃ ಸಂಸ್ಥೆ ಬ್ರಿಟಿಶ್ ಸಂಸತ್ತಲ್ಲ. ಎಂಟನೂರು ವರ್ಷಗಳ ಹಿಂದಿನ ಬಸವಣ್ಣನ 'ಅನುಭವ ಮಂಟಪ'ಎಂದು ಕೇಂದ್ರ ಗೃಹ ಸಚಿವ ಶಿವರಾಜ ಪಾಟೀಲರು ಪ್ರತಿಪಾದಿಸಿದ್ದು ಸತ್ಯವಾಗಿದೆ.'ಅನುಭವ ಮಂಟಪ'ದಲ್ಲಿ ಶರಣರು ಪ್ರತಿದಿನ ಸಾಯಂಕಾಲ ಸಭೆ ಸೇರುತ್ತಿದ್ದರು. ಅಲ್ಲಮ ಪ್ರಭುವಿನ ಅಧ್ಯಕ್ಷತೆಯಲ್ಲಿ ಶರಣರು ತಾವು ಬರೆದು ತಂದಿದ್ದ ವಚನಗಳನ್ನು ಪಠಣ ಮಾಡುತ್ತಿದ್ದರು. ನಂತರ ಆ ಬಗ್ಗೆ ವ್ಯಾಪಕ ಚರ್ಚೆಗಳು ನಡೆಯುತ್ತಿದ್ದವು. ಆಧುನಿಕ ಶಾಸನಾಂಗವು ಕೂಡಾ ಇದೇ ಮಾದರಿಯನ್ನು ಅನುಸರಿಸುತ್ತದೆ. ವ್ಯತ್ಯಾಸವೇನೆಂದರೆ 'ಅನುಭವ ಮಂಟಪ'ದಲ್ಲಿ ಅಂದಿನ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಹಾಗೂ ಆರ್ಥಿಕ ವ್ಯವಸ್ಥೆಯ ಬಗೆಗೆ ಶರಣರು ರಚಿಸಿದ ವಚನಗಳ ಚರ್ಚೆಯಾಗುತ್ತಿತ್ತು. ಇಂದು ಶಾಸನಾಂಗ ಕಾನೂನು ರಚನೆಗಾಗಿ ಅದೇ ವಿಧಾನವನ್ನು ಅನುಸರಿಸುತ್ತದೆ.

ನಮ್ಮ ದೇಶ ಸಂಸದೀಯ ಪ್ರಜಾಪ್ರಭುತ್ವವನ್ನು ಅಳವಡಿಸಿಕೊಂಡಿದೆ. ಸಂವಿಧಾನ ರಚನಾ ಸಭೆಯಲ್ಲಿ ಈ ಬಗ್ಗೆ ವ್ಯಾಪಕ ಚರ್ಚೆ ನಡೆಯಿತು. ಅಮೇರಿಕಾ ಸಂಯುಕ್ತ ಸಂಸ್ಥಾನಗಳಲ್ಲಿರುವ ಅಧ್ಯಕ್ಷೀಯ ವ್ಯವಸ್ಥೆ ಹಾಗೂ ಸ್ವಿಸ್ ಒಕ್ಕೂಟದ ಬಹುಮುಖ ಕಾರ್ಯಾಂಗಗಳು ನಮ್ಮ ದೇಶಕ್ಕೆ ಅಷ್ಟೊಂದು ಸೂಕ್ತವಲ್ಲವೆಂದು ನಿರ್ಣಯಿಸಲಾಯಿತು. ೧೯೧೯, ೧೯೧೯ ಹಾಗೂ ೧೯೩೫ರ ಭಾರತ ಸರಕಾರದ

ಕಾನೂನುಗಳ ಮೂಲಕ ಭಾರತದಲ್ಲಿ ಹಂತ ಹಂತವಾಗಿ ಸಂಸದೀಯ ಪದ್ಧತಿಯನ್ನು ಜಾರಿಗೆ ತರಲಾಗಿತ್ತು. ಈಗಾಗಲೇ ಜಾರಿಯಲ್ಲಿರುವ ಪದ್ಧತಿಯನ್ನೇ ಸೂಕ್ತ ಮಾರ್ಪಾಡುಗಳೊಂದಿಗೆ ಮುಂದುವರಿಸಬೇಕೆಂಬ ನಿರ್ಣಯವನ್ನು ಸಂವಿಧಾನ ರಚನಾ ಸಭೆ ಸ್ವೀಕರಿಸಿತು. ಆ ನಿರ್ಣಯಕ್ಕನುಗುಣವಾಗಿ ಕೇಂದ್ರದಲ್ಲಿ ದ್ವಿಸದನಗಳನ್ನುಳ್ಳ ಸಂಸತ್ತನ್ನು ಸ್ಥಾಪಿಸಲಾಯಿತು. ಕೆಳಮನೆಗೆ ಲೋಕಸಭೆ ಹಾಗೂ ಮೇಲ್ಮನೆಗೆ ರಾಜ್ಯಸಭೆ ಎಂದು ಹೆಸರಿಸಲಾಯಿತು. ಕೆಲವು ರಾಜ್ಯಗಳಲ್ಲಿ ದ್ವಿಸದನ ಶಾಸನಾಂಗ ಹಾಗೂ ಇನ್ನು ಕೆಲವು ರಾಜ್ಯಗಳಲ್ಲಿ ಏಕ ಸದನ ಶಾಸನಾಂಗ ಸ್ಥಾಪಿಸಲಾಯಿತು. ಏಕಸದನ ಶಾಸನಾಂಗವಿರುವ ರಾಜ್ಯಗಳಲ್ಲಿ ಕೆಳಮನೆ ಅಂದರೆ ವಿಧಾನ ಸಭೆಯನ್ನು ಮಾತ್ರ ನಿರ್ಮಿಸಲಾಯಿತು. ದ್ವಿಸದನ ಶಾಸನಾಂಗ ಹೊಂದಿದ ರಾಜ್ಯಗಳಲ್ಲಿ ಕೆಳಮನೆಯಾಗಿ ವಿಧಾನ ಸಭೆ ಹಾಗೂ ಮೇಲ್ಮನೆಯಾಗಿ ವಿಧಾನಪರಿಷತ್ತುಗಳನ್ನು ಅಸ್ತಿತ್ವದಲ್ಲಿ ತರಲಾಯಿತು. ಬಿಹಾರ, ಜಮ್ಮು ಮತ್ತು ಕಾಶ್ಮೀರ, ಕರ್ನಾಟಕ, ಮಧ್ಯಪ್ರದೇಶ, ಮಹಾರಾಷ್ಟ್ರ ಹಾಗೂ ಉತ್ತರ ಪ್ರದೇಶಗಳಲ್ಲಿ ದ್ವಿಸದನ ಶಾಸನಾಂಗ ಅಸ್ತಿತ್ವದಲ್ಲಿದೆ.

ಸರಕಾರದ ಮೂರು ಅಂಗಗಳ ಪೈಕಿ ಶಾಸನಾಂಗ ಮೊದಲನೆಯದಾಗಿದೆ. ಯಾಕೆಂದರೆ ಶಾಸನಾಂಗ ಕಾರ್ಯನಿರ್ವಹಿಸಿದ ನಂತರವೇ ಇತರ ಎರಡೂ ಅಂಗಗಳು ತಮ್ಮ ಕೆಲಸ ಪ್ರಾರಂಭಿಸಲು ಸಾಧ್ಯವಾಗುತ್ತದೆ. ಶಾಸನಾಂಗ ಕಾನೂನು ರಚಿಸಿದ ನಂತರ ಕಾರ್ಯಾಂಗ ಆ ಕಾನೂನುಗಳನ್ನು ಜಾರಿಗೆ ತರುವ ಹಾಗೂ ಅವುಗಳ ಮೇರೆಗೆ ಆಡಳಿತ ನಡೆಸುವ ಕಾರ್ಯ ಮಾಡುತ್ತದೆ. ಶಾಸನಾಂಗ ರಚಿಸಿದ ಕಾನೂನುಗಳ ಆಧಾರದ ಮೇಲೆ ನ್ಯಾಯಾಂಗ ನ್ಯಾಯನಿರ್ಣಯ ಕಾರ್ಯ ನಿರ್ವಹಿಸುತ್ತದೆ. ಆದ್ದರಿಂದ ಶಾಸನಾಂಗವು ಸರಕಾರದ ಇತರ ಎರಡು ಅಂಗಗಳಾದ ಕಾರ್ಯಾಂಗ ಹಾಗೂ ನ್ಯಾಯಾಂಗಗಳಿಗಿಂತ ಮಹತ್ವದ ಸ್ಥಾನ ಪಡೆದಿದೆ.

ಸಂಸದೀಯ ಪದ್ಧತಿಯನ್ನು ಅಳವಡಿಸಿಕೊಂಡಿರುವ ನಮ್ಮ ದೇಶದಲ್ಲಿ ಶಾಸನಾಂಗವು ಕಾರ್ಯಾಂಗವನ್ನು ನಿರ್ಮಿಸಿ ನಿಯಂತ್ರಿಸುತ್ತದೆ. ರಾಜಕೀಯ ಕಾರ್ಯಾಂಗ (ಮಂತ್ರಿ ಮಂಡಳ)ವು ಸಂಸತ್ತಿನ ಬಹುಮತ ಪಕ್ಷ ಅಥವಾ ಪಕ್ಷಗಳ ಗುಂಪಿನಿಂದ ನಿರ್ಮಿಸಲ್ಪಡುತ್ತದೆ. ಸಂಸತ್ತಿನಲ್ಲಿ ಬಹುಮತದ ಬೆಂಬಲವಿರುವವರೆಗೆ ಮಂತ್ರಿಮಂಡಲ ಅಧಿಕಾರದಲ್ಲಿ ಮುಂದುವರೆಯುತ್ತದೆ.

ಸಂಸತ್ತು ರಾಷ್ಟ್ರದ ಮೂಲೆ ಮೂಲೆಗಳಿಂದ ಬಂದ ವಿವಿಧ ಭಾಷೆ, ಧರ್ಮ, ಜನಾಂಗ, ಸಂಸ್ಕೃತಿಗಳ ಪ್ರತಿನಿಧಿಗಳನ್ನೊಳಗೊಂಡಿರುತ್ತದೆ. ವಿಭಿನ್ನ ಹಿನ್ನೆಲೆಗಳಿಂದ ಬಂದ ಜನರು ಒಂದೇ ವೇದಿಕೆಯ ಮೇಲೆ ಸಮಾವೇಶಗೊಂಡು ಜನರ ಸಮಸ್ಯೆಗಳನ್ನು ಚರ್ಚಿಸಿ ಪರಿಹಾರ ಕಂಡುಕೊಳ್ಳಲು ಅದು ನೆರವಾಗುತ್ತದೆ. ಸಂಸತ್ತು ರಾಷ್ಟ್ರ ಸಂಕಲ್ಪದ ಕೈಗನ್ನಡಿಯಾಗಿದೆ.

## ಅ. ಸಂಸತ್ತು

ನಮ್ಮ ಸಂವಿಧಾನದ ೭೯ ನೇ ಕಲಮಿನ ಪ್ರಕಾರ ಭಾರತದ ಸಂಸತ್ತು ರಾಷ್ಟ್ರಪತಿ, ಲೋಕಸಭೆ ಹಾಗೂ ರಾಜ್ಯಸಭೆಗಳನ್ನು ಒಳಗೊಂಡಿದೆ. ಬ್ರಿಟೀಶ್ ಸಂಸತ್ತಿನಲ್ಲಿ ರಾಜ ಅಥವಾ ರಾಣಿ ಹೊಂದಿರುವ ನಾಮು ಮಾತ್ರ ಕಾರ್ಯಾಂಗದ ಪಾತ್ರವನ್ನು ರಾಷ್ಟ್ರಪತಿಯವರು ನಿರ್ವಹಿಸುತ್ತಾರೆ. ಶಾಸನ ರಚನೆಗಾಗಿ ಲೋಕಸಭೆ ಹಾಗೂ ರಾಜ್ಯ ಸಭೆಗಳಿವೆ. ಲೋಕ ಸಭೆ ಜನತೆಯನ್ನು ಅಥವಾ ರಾಷ್ಟ್ರವನ್ನು ಪ್ರತಿನಿಧಿಸಿದರೆ ರಾಜ್ಯ ಸಭೆ ರಾಜ್ಯಗಳ ಪ್ರತಿನಿಧಿಯಾಗಿದೆ.

### ✷ ಲೋಕಸಭೆ

ಲೋಕಸಭೆಯನ್ನು ಕೆಳಮನೆ, ಪ್ರತಿನಿಧಿ ಸಭೆ, ಜನತಾ ಸದನ, ಎಂಬ ಹೆಸರುಗಳಿಂದಲೂ ಕರೆಯಲಾಗುತ್ತದೆ. ಲೋಕಸಭೆಯು ಈಗಿನ ಒಟ್ಟು ಸದಸ್ಯ ಸಂಖ್ಯೆ ೫೪೫ ಇದೆ. ಆ ಪೈಕಿ ರಾಷ್ಟ್ರಪತಿಯವರಿಂದ ನಾಮಕರಣ ಹೊಂದಿದ ಇಬ್ಬರು ಆಂಗ್ಲೊ ಇಂಡಿಯನ್ನರಿರುತ್ತಾರೆ. ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡಗಳಿಗೆ ಸಂವಿಧಾನವೇ ಸೂಕ್ತ ಪ್ರಾತಿನಿಧ್ಯ ಕಲ್ಪಿಸಿದೆ. ಅವರ ಜನಸಂಖ್ಯೆಗನುಗುಣವಾಗಿ ಲೋಕಸಭಾ ಸ್ಥಾನಗಳನ್ನು ಮೀಸಲಾಗಿರಿಸಲಾಗಿದೆ. ರಾಜ್ಯಗಳಿಂದ ೫೨೫ ಹಾಗೂ ಕೇಂದ್ರಾಡಳಿತ ಪ್ರದೇಶಗಳಿಂದ ೨೦ ಪ್ರತಿನಿಧಿಗಳು ಆಯ್ಕೆಯಾಗುತ್ತಾರೆ. ಮೂಲ ಸಂವಿಧಾನದ ಪ್ರಕಾರ ಲೋಕಸಭಾ ಸದಸ್ಯರ ಸಂಖ್ಯೆ ೫೦೦ ಇತ್ತು. ರಾಜ್ಯ ಪುನರ್ ವಿಂಗಡಣೆಯ ನಂತರ ಸಂವಿಧಾನದ ಏಳನೇ ತಿದ್ದುಪಡಿಯ ಮೂಲಕ ಸದಸ್ಯ ಸಂಖ್ಯೆಯನ್ನು ೫೨೦ ಕ್ಕೆ ಏರಿಸಲಾಯಿತು. ಸಂವಿಧಾನದ ೪೨ನೇ ತಿದ್ದುಪಡಿಯ ಮೂಲಕ ಇಂದಿನ ೫೪೫ ಕ್ಕೆ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಲಾಯಿತು. ೨೦೨೫ನೇ ಇಸ್ವಿಯವರೆಗೆ ಈಗಿನ ಸಂಖ್ಯೆಯೇ ಮುಂದುವರಿಯುತ್ತದೆ.

### ರಚನೆ

ಆಯಾ ರಾಜ್ಯಗಳ ಜನಸಂಖ್ಯೆಯ ಆಧಾರದ ಮೇಲೆ ಪ್ರತಿಯೊಂದು ರಾಜ್ಯದಿಂದ ಆಯ್ಕೆಯಾಗಬೇಕಾದ ಲೋಕಸಭಾ ಸದಸ್ಯರ ಸಂಖ್ಯೆಯನ್ನು ನಿರ್ಧರಿಸಲಾಗುತ್ತದೆ. ಉದಾ:-ಕರ್ನಾಟಕದಿಂದ ಆಯ್ಕೆಯಾಗುವ ಸದಸ್ಯರ ಸಂಖ್ಯೆ ೨೮. ಆಯ್ಕೆಯಾಗಬೇಕಾದ ಲೋಕಸಭಾ ಸದಸ್ಯರ ಸಂಖ್ಯೆಯಷ್ಟು ಚುನಾವಣಾ ಕ್ಷೇತ್ರಗಳನ್ನು ರಚಿಸಲಾಗುತ್ತದೆ. ಒಂದು ಕ್ಷೇತ್ರದಿಂದ ಒಬ್ಬ ಅಭ್ಯರ್ಥಿಯ ಆಯ್ಕೆ ನಡೆಯುತ್ತದೆ. ಸಂಸದೀಯ ಮತ ಕ್ಷೇತ್ರದ ಸರಾಸರಿ ಮತದಾರರ ಸಂಖ್ಯೆ ೨೦ ಲಕ್ಷ. ಲೋಕಸಭೆಯ ಸದಸ್ಯರು ಪ್ರೌಢ ಮತದಾನದ ಮೂಲಕ ಆಯ್ಕೆಯಾಗುತ್ತಾರೆ. ಕನಿಷ್ಠ ೧೮ ವರ್ಷ ವಯಸ್ಸಾದ ಭಾರತದ ನಾಗರಿಕರು ಮತಾಧಿಕಾರ ಹೊಂದಿರುತ್ತಾರೆ. ಮೂಲ ಸಂವಿಧಾನದ ಪ್ರಕಾರ

ಮತಾಧಿಕಾರದ ವಯಸ್ಸು ೨೧ ಆಗಿತ್ತು. ೧೯೮೯ ರಲ್ಲಿ ಸಂವಿಧಾನದ ತಿದ್ದುಪಡಿಯ ಮೂಲಕ ಮತದಾನದ ಕನಿಷ್ಠ ವಯೋಮಿತಿಯನ್ನು ೧೮ ಕ್ಕೆ ಇಳಿಸಲಾಗಿದೆ.

## ಲೋಕಸಭೆ

### ವಿವಿಧ ರಾಜ್ಯಗಳನ್ನು ಪ್ರತಿನಿಧಿಸುವ ಸದಸ್ಯರ ಸಂಖ್ಯೆ.

| ಕ್ರ.ಸಂಖ್ಯೆ | ರಾಜ್ಯಗಳು | ಸದಸ್ಯರ ಸಂಖ್ಯೆ |
|---|---|---|
| ೧ | ಆಂಧ್ರಪ್ರದೇಶ | ೪೨ |
| ೨ | ಅರುಣಾಚಲ ಪ್ರದೇಶ | ೦೧ |
| ೩ | ಅಸ್ಸಾಂ | ೧೪ |
| ೪ | ಬಿಹಾರ | ೪೦ |
| ೫ | ಛತ್ತೀಸಗಡ | ೧೧ |
| ೬ | ಗೋವಾ | ೦೨ |
| ೭ | ಗುಜರಾತ | ೨೮ |
| ೮ | ಹರಿಯಾನ | ೧೦ |
| ೯ | ಹಿಮಾಚಲ ಪ್ರದೇಶ | ೦೪ |
| ೧೦ | ಜಮ್ಮು ಮತ್ತು ಕಾಶ್ಮೀರ | ೦೬ |
| ೧೧ | ಝಾರಖಂಡ | ೧೪ |
| ೧೨ | ಕರ್ನಾಟಕ | ೨೮ |
| ೧೩ | ಕೇರಳ | ೨೦ |
| ೧೪ | ಮಧ್ಯ ಪ್ರದೇಶ | ೨೯ |
| ೧೫ | ಮಹಾರಾಷ್ಟ್ರ | ೪೮ |
| ೧೬ | ಮಣಿಪುರ | ೦೨ |
| ೧೭ | ಮೇಘಾಲಯ | ೦೨ |
| ೧೮ | ಮಿಜೋರಾಮ್ | ೦೧ |
| ೧೯ | ನಾಗಾಲ್ಯಾಂಡ್ | ೦೧ |
| ೨೦ | ಓಡಿಸ್ಸಾ | ೨೧ |
| ೨೧ | ಪಂಜಾಬ | ೧೩ |
| ೨೨ | ರಾಜಸ್ಥಾನ | ೨೫ |
| ೨೩ | ಸಿಕ್ಕಿಂ | ೦೧ |
| ೨೪ | ತಮಿಳುನಾಡು | ೩೯ |
| ೨೫ | ತ್ರಿಪುರಾ | ೦೨ |
| ೨೬ | ಉತ್ತರಾಂಚಲ | ೦೫ |
| ೨೭ | ಉತ್ತರ ಪ್ರದೇಶ | ೮೦ |
| ೨೮ | ಪಶ್ಚಿಮ ಬಂಗಾಲ | ೪೨ |

## ಕೇಂದ್ರಾಡಳಿತ ಪ್ರದೇಶಗಳನ್ನು - ಪ್ರತಿನಿಧಿಸುವ ಸದಸ್ಯರ ಸಂಖ್ಯೆ.

| ಕ್ರ.ಸಂಖ್ಯೆ | ಕೇಂದ್ರಾಡಳಿತ ಪ್ರದೇಶ | ಸದಸ್ಯರ ಸಂಖ್ಯೆ |
|---|---|---|
| ೧ | ಅಂಡಮಾನ್ ಹಾಗೂ ನಿಕೋಬಾರ್ | ೧ |
| ೨ | ಚಂಡಿಗಡ | ೧ |
| ೩ | ದಾದ್ರಾ ಹಾಗೂ ಹವೇಲಿ | ೧ |
| ೪ | ದೆಹಲಿ | ೭ |
| ೫ | ದಮನ್, ದೀವ್ | ೧ |
| ೬ | ಲಕ್ಷದ್ವೀಪ | ೧ |
| ೭ | ಪಾಂಡಿಚೇರಿ | ೧ |
| | **ವಿಶೇಷ ಪ್ರಾತಿನಿಧ್ಯ** | |
| | ಆಂಗ್ಲೋ ಇಂಡಿಯನ್ನರು | ೨ |

## ಲೋಕಸಭಾ ಸದಸ್ಯರ ಅರ್ಹತೆಗಳು

ಲೋಕಸಭಾ ಸದಸ್ಯನಾಗ ಬಯಸುವ ವ್ಯಕ್ತಿ ಈ ಕೆಳಗಿನ ಅರ್ಹತೆಗಳನ್ನು ಹೊಂದಿರಬೇಕು.

೧. ಭಾರತದ ನಾಗರಿಕನಾಗಿರಬೇಕು.

೨. ಕನಿಷ್ಠ ೨೫ ವರ್ಷ ವಯಸ್ಸಿನವನಾಗಿರಬೇಕು.

೩. ಯಾವುದಾದರೊಂದು ಲೋಕಸಭಾ ಕ್ಷೇತ್ರದ ಮತದಾರನಾಗಿರಬೇಕು.

೪. ಸಂಸತ್ತು ಕಾಲ ಕಾಲಕ್ಕೆ ನಿರ್ದಿಷ್ಟ ಪಡಿಸುವ ಇತರ ಅರ್ಹತೆಗಳನ್ನು ಹೊಂದಿರಬೇಕು.

## ಲೋಕಸಭೆಯ ಪದಾಧಿಕಾರಿಗಳು

ಲೋಕ ಸಭೆಯ ಸುಗಮ ಕಾರ್ಯ ನಿರ್ವಹಣೆಗಾಗಿ ಲೋಕ ಸಭಾಧ್ಯಕ್ಷ, ಉಪ ಲೋಕ ಸಭಾಧ್ಯಕ್ಷ ಹಾಗೂ ಅಧ್ಯಕ್ಷಾಧಿಕಾರಿಗಳಿರುತ್ತಾರೆ.

## ಲೋಕಸಭಾಧ್ಯಕ್ಷ

ಲೋಕಸಭಾದ್ಯಕ್ಷರ ಹುದ್ದೆ ಅತ್ಯಂತ ಗೌರವಯುತವಾದದ್ದಾಗಿದೆ. ಭಾರತದ ಶ್ರೇಷ್ಠ ನ್ಯಾಯಮೂರ್ತಿಯವರ ಸ್ಥಾನಕ್ಕೆ ಸಮಾನವಾದ ಗೌರವ ಪಡೆಯುವ ಹುದ್ದೆ ಅದಾಗಿದೆ.

ಲೋಕಸಭಾಧ್ಯಕ್ಷರು ಲೋಕಸಭೆಯ ಗೌರವದ ಪ್ರತೀಕವಾಗಿರುತ್ತಾರೆ.

ಹೊಸ ಲೋಕಸಭೆ ರಚನೆಗೊಂಡ ನಂತರ ಸದಸ್ಯರು ತಮ್ಮಲ್ಲೇ ಒಬ್ಬರನ್ನು ಸಭಾಧ್ಯಕ್ಷರನ್ನಾಗಿ ಆಯ್ಕೆಮಾಡುತ್ತಾರೆ. ಸದನದ ಕಲಾಪಗಳನ್ನು ನಿಷ್ಪಕ್ಷಪಾತವಾಗಿ

ನಡೆಸುವ ಜವಾಬ್ದಾರಿ ಸಭಾಧ್ಯಕ್ಷರದಾಗಿದೆ. ಅವರು ಎಲ್ಲ ಸದಸ್ಯರನ್ನೂ ಸಮಾನವಾಗಿ ಕಂಡು ಅವರ ಹಕ್ಕು ಬಾಧ್ಯತೆಗಳನ್ನು ರಕ್ಷಿಸಬೇಕಾಗುತ್ತದೆ. ಲೋಕಸಭಾಧ್ಯಕ್ಷರ ಸ್ಥಾನ ಅತ್ಯಂತ ಗೌರವಯುತವಾದದ್ದಾಗಿರುತ್ತದೆ. ಆದ್ದರಿಂದ ಸಭಾಧ್ಯಕ್ಷರನ್ನು ಸರ್ವಾನುಮತದಿಂದ ಆಯ್ಕೆ ಮಾಡಲು ಪ್ರಯತ್ನಿಸಲಾಗುತ್ತದೆ. ಉದಾ :- ೧೪ ನೇ ಲೋಕಸಭೆಯ ಸಭಾಧ್ಯಕ್ಷಸೋಮನಾಥ ಚಟರ್ಜಿಯವರು ಯು. ಪಿ. ಎ. ಅಭ್ಯರ್ಥಿಯಾಗಿದ್ದರೂ ವಿರೋಧಿ ಪಕ್ಷಗಳ ಬೆಂಬಲ ಪಡೆದು ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

ಸಭಾಧ್ಯಕ್ಷರು ನೀಡುವ ನಿರ್ಣಯಗಳಿಗೆ ಎಲ್ಲರೂ ಬದ್ಧರಾಗಿಬೇಕಾಗುತ್ತದೆ. ಅವರ ನಿರ್ಣಯಗಳನ್ನು ಯಾರೂ ಪ್ರಶ್ನಿಸುವಂತಿಲ್ಲ. ನಿರ್ಣಯ ಪ್ರಶ್ನಿಸಿದ ಸದಸ್ಯರನ್ನು ಸದನದಿಂದ ಹೊರಹಾಕುವ ಅಧಿಕಾರ ಸಭಾಧ್ಯಕ್ಷರಿಗಿದೆ. ಸರ್ವೋನ್ನತ ನ್ಯಾಯಾಲಯ ಕೂಡ ಸಭಾಧ್ಯಕ್ಷರ ನಿರ್ಣಯಗಳ ವಿಷಯದಲ್ಲಿ ಹಸ್ತಕ್ಷೇಪ ಮಾಡುವ ಅಧಿಕಾರ ಹೊಂದಿಲ್ಲ .ಲೋಕಸಭೆ ವಿಸರ್ಜನೆಗೊಂಡ ನಂತರ ಹೊಸ ಲೋಕ ಸಭೆಯ ರಚನೆಯಾಗಿ ಮೊದಲ ಸಭೆ ಸೇರುವ ದಿನದವರೆಗೆ ಸಭಾಧ್ಯಕ್ಷರು ತಮ್ಮ ಸ್ಥಾನದಲ್ಲಿ ಮುಂದುವರೆಯುತ್ತಾರೆ. ಲೋಕಸಭಾಧ್ಯಕ್ಷರು ತಮ್ಮ ಸ್ಥಾನ ತೆರವುಗೊಳಿಸ ಬಯಸಿದರೆ ಉಪಸಭಾಧ್ಯಕ್ಷರಿಗೆ ವಹಿಸಿಕೊಡಬೇಕು. ರಾಜೀನಾಮೆ ಪತ್ರ ನೀಡಬೇಕಾಗುತ್ತದೆ. ಲೋಕಸಭೆಯ ಸದಸ್ಯತ್ವ ಕಳೆದುಕೊಂಡರೆ ಸಭಾಧ್ಯಕ್ಷ ಪದ ನಷ್ಟವಾಗುತ್ತದೆ.

## ಉಪಸಭಾಧ್ಯಕ್ಷ

ಸಭಾಧ್ಯಕ್ಷರ ಅನುಪಸ್ಥಿತಿಯಲ್ಲಿ ಸದನದ ಕಲಾಪಗಳನ್ನು ಉಪಾಸಭಾಧ್ಯಕ್ಷರು ನೆರವೇರಿಸಿಕೊಡುತ್ತಾರೆ. ಸಭಾಧ್ಯಕ್ಷರಂತೆ ಲೋಕಸಭಾ ಸದಸ್ಯರ ಪೈಕಿ ಒಬ್ಬರು ಉಪಸಭಾಧ್ಯಕ್ಷರಾಗಿ ಆಯ್ಕೆ ಆಗುತ್ತಾರೆ. ಅವರ ಪದಚ್ಯುತಿ ವಿಧಾನ ಹಾಗೂ ಸಭಾಧ್ಯಕ್ಷರ ಪದಚ್ಯುತಿ ವಿಧಾನ ಒಂದೇ ಆಗಿವೆ. ಅಧ್ಯಕ್ಷ ಪೀಠದಲ್ಲಿದ್ದಾಗ ಸಭಾಧ್ಯಕ್ಷರ ಎಲ್ಲ ಅಧಿಕಾರಗಳನ್ನು ಉಪಸಭಾಧ್ಯಕ್ಷರು ಹೊಂದಿರುತ್ತಾರೆ.

## ಲೋಕಸಭೆಯ ಕಾರ್ಯಗಳು.

ಭಾರತದ ಸಂಸತ್ತು ಬ್ರಿಟನ್ನಿನ ಸಂಸತ್ತಿನಂತೆ ಸಾರ್ವಭೌಮ ಸಂಸ್ಥೆಯಲ್ಲ. ಸಂವಿಧಾನದ ನಿಯಂತ್ರಣಕ್ಕೊಳಪಟ್ಟು ಅದು ಕಾರ್ಯನಿರ್ವಹಿಸುತ್ತದೆ. ನಮ್ಮ ದೇಶದಲ್ಲಿ ಶಾಸನೀಯ ಅಧಿಕಾರಗಳು ಸಂಸತ್ತು ಹಾಗೂ ರಾಜ್ಯ ಶಾಸನಾಂಗಗಳ ನಡುವೆ ಹಂಚಲ್ಪಟ್ಟಿವೆ. ಸಂವಿಧಾನ ನೀಡಿದ ಅಧಿಕಾರಗಳನ್ನು ಚಲಾಯಿಸಿ ಸಂಸತ್ತು ಕಾರ್ಯ ನಿರ್ವಹಿಸಬೇಕಾಗುತ್ತದೆ. ಸಂಸತ್ತಿನ ಕಾರ್ಯಗಳು ನ್ಯಾಯಿಕ ವಿಮರ್ಶೆಗೆ ಒಳಪಡುತ್ತವೆ. ಸಂವಿಧಾನದ ಚೌಕಟ್ಟನ್ನು ಮೀರಿ ರಚಿತವಾದ (ಅಂದರೆ ಸಂವಿಧಾನಕ್ಕೆ ವ್ಯತಿರಿಕ್ತವಾಗಿ

ರಚಿತವಾದ) ಕಾನೂನುಗಳನ್ನು ಸಂವಿಧಾನ ವಿರೋಧಿ ಎಂದು ಸಾರಿ ರದ್ದುಪಡಿಸುವ ಅಧಿಕಾರ ನ್ಯಾಯಾಂಗಕ್ಕಿದೆ.

ಜನರನ್ನು ನೇರವಾಗಿ ಪ್ರತಿನಿಧಿಸುವ ಲೋಕಸಭೆ, ಪರೋಕ್ಷ ಚುನಾವಣೆಯ ಮೂಲಕ ಅಸ್ತಿತ್ವಕ್ಕೆ ಬರುವ ರಾಜ್ಯಸಭೆಗಿಂತ ಹೆಚ್ಚು ಅಧಿಕಾರ ಹೊಂದಿದೆ. ಜನರ ಆಶೆ ಆಕಾಂಕ್ಷೆಗಳ ಈಡೇರಿಕೆಗಾಗಿ ಅದು ಕಾರ್ಯನಿರ್ವಹಿಸುತ್ತದೆ. ಲೋಕಸಭೆಯು ವರ್ಷದಲ್ಲಿ ಕನಿಷ್ಠ ಎರಡು ಸಲ ಸಭೆ ಸೇರಬೇಕು ಹಾಗೂ ಎರಡು ಅಧಿವೇಶನಗಳ ನಡುವಿನ ಅವಧಿ ಆರು ತಿಂಗಳಿಗೆ ಮಿಕ್ಕಬಾರದು ಎಂದು ಸಂವಿಧಾನ ವಿಧಿಸುತ್ತದೆ. ಸಾಮಾನ್ಯವಾಗಿ ವರ್ಷದಲ್ಲಿ ಮೂರು ಅಧಿವೇಶನಗಳನ್ನು ನಡೆಸಲಾಗುತ್ತದೆ. (ಬಜೆಟ್ ಅಧಿವೇಶನ, ಮಳೆಗಾಲದ ಅಧಿವೇಶನ ಹಾಗೂ ಚಳಿಗಾಲದ ಅಧಿವೇಶನಗಳೆಂದು ಅವುಗಳಿಗೆ ಕರೆಲಾಗುತ್ತದೆ.) ಸದನದ ಕಲಾಪ ಪ್ರಾರಂಭವಾಗುವ ಮೊದಲು ಸದಸ್ಯರು ಹಾಜರಿಯ ಪಯಸ್ತಕದಲ್ಲಿ ಸದನದ ಒಟ್ಟು ಸದಸ್ಯರ ೧/೧೦ ಸದಸ್ಯರು ಹಾಜರಿದ್ದರೆಕಲಾಪ ಪ್ರಾರಂಭವಾಗುತ್ತದೆ.

## ಶಾಸನೀಯ ಕಾರ್ಯಗಳು

ಕೇಂದ್ರ ಪಟ್ಟಿ ಹಾಗೂ ಸಮವರ್ತಿ ಪಟ್ಟಿಯಲ್ಲಿ ಬರುವ ಎಲ್ಲ ವಿಷಯಗಳ ಬಗ್ಗೆ ಕಾನೂನು ರಚಿಸುವ ಅಧಿಕಾರ ಸಂಸತ್ತಿಗಿದೆ. ತುರ್ತು ಪರಿಸ್ಥಿತಿಯಲ್ಲಿ ಸಂಸತ್ತಿನ ಅಧಿಕಾರ ರಾಜ್ಯ ಪಟ್ಟಿಗೂ ವ್ಯಾಪಿಸುತ್ತದೆ. ಲೋಕಸಭೆಯ ಒಪ್ಪಿಗೆ ಇಲ್ಲದೇ ಯಾವದೇ ಮಸೂದೆ ಶಾಸನವಾಗುವದಿಲ್ಲ. ಮಸೂದೆಯನ್ನು ಲೋಕಸಭೆ ಹಾಗೂ ರಾಜ್ಯಸಭೆ ಇವೆರಡರ ಪೈಕಿ ಒಂದರಲ್ಲಿ ಮಂಡಿಸಬಹುದು. ಲೋಕಸಭೆ ಪಾಸು ಮಾಡಿದ ಮಸೂದೆ ರಾಜ್ಯಸಭೆಗೆ ಹಾಗೂ ರಾಜ್ಯಸಭೆ ಪಾಸು ಮಾಡಿದ ಮಸೂದೆ ಲೋಕಸಭೆಗೆ ಬರುತ್ತದೆ. ಹಾಗೆ ಬಂದ ಮಸೂದೆಯನ್ನು ಆ ಸದನ ಒಪ್ಪಿಕೊಂಡರೆ ರಾಷ್ಟ್ರಪತಿಯವರ ಅನುಮೋದನೆಯೊಂದಿಗೆ ಶಾಸನವಾಗುತ್ತದೆ. ಎರಡೂ ಸದನಗಳ ನಡುವೆ ಮಸೂದೆಯ ಬಗ್ಗೆ ಭಿನ್ನಾಭಿಪ್ರಾಯ ಬಂದರೆ ರಾಷ್ಟ್ರಪತಿಯವರು ಎರಡೂ ಸದನಗಳ ಸಂಯುಕ್ತ ಸಭೆಯನ್ನು ಕರೆಯುತ್ತಾರೆ. ಲೋಕಸಭಾಧ್ಯಕ್ಷರು ಸಂಯುಕ್ತ ಅಧಿವೇಶನದ ಅಧ್ಯಕ್ಷತೆ ವಹಿಸುತ್ತಾರೆ. ಸಭೆಯಲ್ಲಿ ಮಸೂದೆಯನ್ನು ಮತಕ್ಕೆ ಹಾಕಲಾಗುತ್ತದೆ. ಲೋಕ ಸಭೆಯ ಸದಸ್ಯರ ಸಂಖ್ಯೆ ರಾಜ್ಯ ಸಭೆಯ ಸದಸ್ಯರ ಸಂಖ್ಯೆಯ ಎರಡು ಪಟ್ಟಿಗಿಂತ ಹೆಚ್ಚು ಇರುವದರಿಂದ ಸಂಯುಕ್ತ ಅಧಿವೇಶನದಲ್ಲಿ ಲೋಕಸಭೆಯೇ ಮೇಲುಗೈ ಸಾಧಿಸುತ್ತದೆ.

## ಹಣಕಾಸಿನ ಕಾರ್ಯಗಳು

ದೇಶದ ಬೊಕ್ಕಸವು ಲೋಕಸಭೆಯ ನಿಯಂತ್ರಣಕ್ಕೊಳಪಟ್ಟಿದೆ. ಹಣಕಾಸಿನ ವಿಷಯದಲ್ಲಿ ಜನರ ನೇರ ಪ್ರತಿನಿಧಿಯಾದ ಲೋಕಸಭೆ ಅತ್ಯಂತ ಬಲಶಾಲಿಯಾಗಿದೆ. ಒಂದು

ಮಸೂದೆ ಹಣಕಾಸಿನ ಮಸೂದೆಯೋ ಅಲ್ಲವೋ ಎಂಬುದನ್ನು ಲೋಕಸಭಾಧ್ಯಕ್ಷರು ನಿರ್ಧರಿಸುತ್ತಾರೆ. ಸಾಮಾನ್ಯ ಮಸೂದೆ ಯಾವದೇ ಒಂದು ಸದನದಲ್ಲಿ ಮಂಡಿಸಲ್ಪಡಬಹುದಾದರೆ ಹಣಕಾಸಿನ ಮಸೂದೆ ಮಾತ್ರ ಲೋಕಸಭೆಯಲ್ಲೇ ಮೊದಲು ಮಂಡಿತವಾಗುತ್ತದೆ. ಜನರಿಂದ ತೆರಿಗೆಯ ಮೂಲಕ ಪಡೆಯುವ ಹಣದ ವ್ಯವಹಾರಕ್ಕೆ ಸಂಬಂಧಪಟ್ಟ ಮಸೂದೆಯಾದ್ದರಿಂದ ಜನರಿಂದ ನೇರವಾಗಿ ಚುನಾಯಿತರಾದ ಸದಸ್ಯರನ್ನು ಹೊಂದಿದ ಸದನವೇ ಅದನ್ನು ಸಂಪೂರ್ಣ ನಿಯಂತ್ರಿಸಬೇಕೆಂಬ ತತ್ವ ಇದರಲ್ಲಿ ಅಡಕವಾಗಿದೆ. ಲೋಕಸಭೆ ಒಪ್ಪಿಗೆ ನೀಡಿದ ಮಸೂದೆಯನ್ನು ರಾಜ್ಯಸಭೆ ೧೪ ದಿನಗಳವರೆಗೆ ತಡೆಹಿಡಿಯಬಹುದು. ಅಥವಾ ಅದಕ್ಕೆ ತನ್ನ ಒಪ್ಪಿಗೆ ನೀಡಬಹುದು. ೧೪ ದಿನಗಳ ನಂತರ ಹಣಕಾಸಿನ ಮಸೂದೆ ಎರಡೂ ಸದನಗಳಿಂದ ಸ್ವೀಕೃತವಾಗಿದೆ ಎಂದು ತಿಳಿಯಲಾಗುವದು. ಒಂದು ವೇಳೆ ರಾಜ್ಯಸಭೆ ತಿದ್ದುಪಡಿಯೊಂದಿಗೆ ಮಸೂದೆಯನ್ನು ಮರಳಿಸಿದರೆ ಲೋಕಸಭೆ ಅದನ್ನು ಒಪ್ಪಬಹುದು ಅಥವಾ ಒಪ್ಪದಿರಬಹುದು. ಎರಡನೇ ಸಲ ಲೋಕಸಭೆಯ ಒಪ್ಪಿಗೆ ದೊರೆತನಂತರ ರಾಷ್ಟ್ರಪತಿಯವರ ಒಪ್ಪಿಗೆಗೆ ಮಸೂದೆಯನ್ನು ಕಳಿಸಲಾಗುವದು. ಇಲಾಖೆಗಳ ಅನುದಾನದ ಬೇಡಿಕೆಯನ್ನು ಮಂಜೂರು ಮಾಡುವ ಪೂರ್ಣ ಅಧಿಕಾರ ಲೋಕಸಭೆಗಿದೆ.

### ಆಡಳಿತಾತ್ಮಕ ಕಾರ್ಯಗಳು

ಕೇಂದ್ರ ಸರಕಾರದ ಆಡಳಿತ ನಿರ್ವಹಣೆಯ ಜವಾಬ್ದಾರಿ ಹೊಂದಿದ ಕಾರ್ಯಾಂಗ ಅಂದರೆ ಸಚಿವ ಸಂಪುಟ ಲೋಕಸಭೆಗೆ ಹೊಣೆಗಾರನಾಗಿರುತ್ತದೆ. ಲೋಕಸಭೆಯಿಂದ ಆಯ್ಕೆಹೊಂದಿದ ಸಚಿವ ಸಂಪುಟ ಅದರ ಬೆಂಬಲವಿರುವವರೆಗೆ ಅಧಿಕಾರದಲ್ಲಿ ಮುಂದುವರೆಯುತ್ತದೆ. ಅವಿಶ್ವಾಸ ಗೊತ್ತುವಳಿಯನ್ನು ಸ್ವೀಕರಿಸುವ ಮೂಲಕ ಲೋಕಸಭೆ ಮಂತ್ರಿಮಂಡಲವನ್ನು ಪದಚ್ಯುತಗೊಳಿಸಬಹುದು. ಲೋಕಸಭೆ ತಾನು ಆಯ್ಕೆ ಮಾಡಿದ ಮಂತ್ರಿಮಂಡಲದ ಮೂಲಕ ಕೇಂದ್ರ ಸರಕಾರದ ಆಡಳಿತವನ್ನು ನಿಯಂತ್ರಿಸುತ್ತದೆ. ರಾಜ್ಯಸಭೆಗೆ ಮಂತ್ರಿಮಂಡಲ ಪದಚ್ಯುತಿಗಾಗಿ ನಿರ್ಣಯ ಮಂಡಿಸುವ ಅಧಿಕಾರವಿಲ್ಲ.

ಸರಕಾರದ ಸಮಗ್ರ ಆಡಳಿತದ ಬಗ್ಗೆ ಅಥವಾ ವಿವಿಧ ಇಲಾಖೆಗಳ ಕಾರ್ಯನಿರ್ವಹಣೆಯ ಬಗ್ಗೆ ಚರ್ಚಿಸುವ, ಪ್ರಶ್ನೆಕೇಳಿ ಉತ್ತರ ಪಡೆಯುವ, ಆಡಳಿತ ವೈಖರಿಯನ್ನು ಟೀಕಿಸುವ ಅಧಿಕಾರ ಎರಡೂ ಸದನಗಳ ಸದಸ್ಯರಿಗಿದೆ. ಪ್ರಶ್ನೋತ್ತರ ಅವಧಿಯು ಮಂತ್ರಿಗಳನ್ನು ಜಾಗರೂಕರನ್ನಾಗಿಸುತ್ತದೆ. ಪ್ರಬಲ ವಿರೋಧಿ ಪಕ್ಷ, ಸರಕಾರವನ್ನು ತುದಿಗಾಲ ಮೇಲೆ ನಿಲ್ಲಿಸಲು ಹಾಗೂ ಅದರ ಲೋಪದೋಷಗಳನ್ನು ಬಯಲಿಗೆಳೆಯಲು ಸಾಧ್ಯವಾಗುತ್ತದೆ. ಸರಕಾರದ ಆಡಳಿತ ವ್ಯವಸ್ಥೆಯ ಪರಿಶೀಲನೆ

ಹಾಗೂ ವಿಮರ್ಶೆಗಾಗಿ ಅನೇಕ ಸಮಿತಿಗಳಿರುತ್ತವೆ. ಈ ಸಮಿತಿಗಳು ತಮಗೆ ಅಗತ್ಯವಿರುವ ಮಾಹಿತಿಯನ್ನು ಸರಕಾರದಿಂದ ಕೇಳಿ ಪಡೆಯುತ್ತವೆ.

ಸದಸ್ಯರು ಪ್ರಶ್ನೋತ್ತರ ವೇಳೆ, ಶೂನ್ಯ ವೇಳೆ, ನಿಲುವಳಿ ಸೂಚನೆ, ಕಡಿತದ ಸೂಚನೆ, ಗಮನ ಸೆಳೆಯುವ ಸೂಚನೆಗಳ ಮೂಲಕ ಸರಕಾರದ ಗಮನ ಸೆಳೆದು ಆಡಳಿತಕ್ಕೆ ಸಂಬಂಧಿಸಿದ ಅಗತ್ಯ ಮಾಹಿತಿ ಪಡೆಯಬಹುದು.

## ನ್ಯಾಯಿಕ ಕಾರ್ಯಗಳು

ನ್ಯಾಯಿಕ ಕಾರ್ಯಗಳ ವಿಷಯದಲ್ಲಿ ಲೋಕಸಭೆ ರಾಜ್ಯಸಭೆಯೊಂದಿಗೆ ಸಮಾನ ಅಧಿಕಾರ ಹೊಂದಿದೆ. ರಾಷ್ಟ್ರಪತಿ, ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳ ಪದಚ್ಯುತಿಗಾಗಿ ಎರಡೂ ಸದನಗಳು ಗೊತ್ತುವಳಿ ಸ್ವೀಕರಿಸಬೇಕಾಗುತ್ತದೆ. ರಾಷ್ಟ್ರಪತಿಯವರ ಪದಚ್ಯುತಿಗಾಗಿ ಒಂದು ಸದನ ೨/೩ ಬಹುಮತದ ಮೂಲಕ ನಿರ್ಣಯ ಮಂಡಿಸಿದರೆ (ಆಪಾದನಾ ಪಟ್ಟಿ ತಯಾರಿಸಿದರೆ) ಇನ್ನೊಂದು ಆಪಾನೆಗಳ ತನಿಖೆ ಮಾಡಿ ೨/೩ ಬಹುಮತದ ಮೂಲಕ ಪದಚ್ಯುತಿಯ ನಿರ್ಣಯ ಒಪ್ಪಿಕೊಳ್ಳಬಹುದು. ಉಪರಾಷ್ಟ್ರಪತಿಯವರ ವಿರುದ್ಧ ರಾಜ್ಯಸಭೆ ಆಪಾದನಾ ಪಟ್ಟಿ ತಯಾರಿಸಿದರೆ ಲೋಕಸಭೆ ಬಹುಮತದ ಮೂಲಕ ವಜಾಗೊತ್ತುವಳಿ ಪಾಸು ಮಾಡಬೇಕಾಗುತ್ತದೆ.

ನ್ಯಾಯಾಧೀಶರ ಬಗ್ಗೆ ವಾಗ್ದಂಡನಾ ನಿರ್ಣಯವನ್ನು ಯಾವ ಸದನವಾದರೂ ಮಂಡಿಸಬಹುದು. ಇನ್ನೊಂದು ಸದನ ವಿಚಾರಣೆ ನಡೆಸಿ ತೀರ್ಮಾನ ನೀಡುತ್ತದೆ. ಎರಡೂ ಸದನಗಳಲ್ಲೂ ೨/೩ ಬಹುಮತದಿಂದ ನಿರ್ಣಯ ತೆಗೆದುಕೊಳ್ಳಬೇಕು. ನಂತರ ರಾಷ್ಟ್ರಪತಿಯವರು ಆಪಾದನೆಗೊಳಗಾದ ನ್ಯಾಯಾಧೀಶನನ್ನು ವಜಾಮಾಡುತ್ತಾರೆ. ಚುನಾವಣಾ ಆಯುಕ್ತರು, ಜಾಗೃತದಳದ ಅಧಿಕಾರಿಗಳು, ಕಂಪ್ಟ್ರೋಲರ್ ಹಾಗೂ ಆಡಿಟರ್ ಜನರಲ್ ಮುಂತಾದವರ ಮೇಲೆ ತೆಗೆದುಕೊಳ್ಳುವ ಕ್ರಮಗಳಲ್ಲೂ ಲೋಕಸಭೆ ಭಾಗವಹಿಸುತ್ತದೆ.

## ಇತರ ಕಾರ್ಯಗಳು

i) ಚುನಾವಣಾ ಕಾರ್ಯಗಳು :- ಭಾರತದ ರಾಷ್ಟ್ರಪತಿಯವರ ಹಾಗೂ ಉಪರಾಷ್ಟ್ರಪತಿಯವರ ಆಯ್ಕೆ ಕಾರ್ಯದಲ್ಲಿ ಲೋಕಸಭೆ ಭಾಗಿಯಾಗುತ್ತದೆ. ii) ಸಂವಿಧಾನದ ತಿದ್ದುಪಡಿ :- ಭಾರತದ ಸಂವಿಧಾನ ತಿದ್ದುಪಡಿ ಮಾಡುವದಕ್ಕೆ ಇರುವ ಮೂರು ವಿಧಾನಗಳಲ್ಲೂ ಲೋಕಸಭೆ ಭಾಗ ತೆಗೆದುಕೊಳ್ಳುತ್ತದೆ. iii) ತುರ್ತು ಪರಿಸ್ಥಿತಿಗೆ ಅನುಮೋದನೆ :- ರಾಷ್ಟ್ರಪತಿಯವರು ಸಾರಿದ ತುರ್ತು ಪರಿಸ್ಥಿತಿಯನ್ನು ಎರಡು ತಿಂಗಳಿಗಿಂತ ಹೆಚ್ಚು ಅವಧಿಗೆ ವಿಸ್ತರಿಸಲು ಸಂಸತ್ತಿನ ಎರಡೂ ಸದನಗಳ ಒಪ್ಪಿಗೆ ಅಗತ್ಯ. iv) ಮೂಲಭೂತ ಹಕ್ಕುಗಳ ಸ್ಥಗಿತಕ್ಕೆ ಒಪ್ಪಿಗೆ :- ತುರ್ತು ಪರಿಸ್ಥಿತಿಯ ಅವಧಿಯಲ್ಲಿ

ರಾಷ್ಟ್ರಪತಿಯವರು ಮೂಲಭೂತ ಹಕ್ಕುಗಳನ್ನು ಸ್ಥಗಿತಗೊಳಿಸಬಹುದು. ಆದರೆ ನಂತರ ಸಂಸತ್ತಿನ ಒಪ್ಪಿಗೆಯನ್ನು ಪಡೆಯಬೇಕಾಗುತ್ತದೆ.

**v) ಆಯೋಗಗಳ ವರದಿ ಪರಿಶೀಲನೆ :-** ಕೇಂದ್ರ ಲೋಕ ಸೇವಾ ಆಯೋಗ, ಕಂಪ್ಟ್ರೋಲರ್ ಹಾಗೂ ಆಡಿಟರ್ ಜನರಲ್, ಪರಿಶಿಷ್ಟಜಾತಿ, ಜನಾಂಗಗಳ ಆಯೋಗ, ಹಣಕಾಸು ಆಯೋಗಗಳು ಸಲ್ಲಿಸುವ ವರದಿಯನ್ನು ಚರ್ಚೆ ಹಾಗೂ ಮಾಹಿತಿಗಾಗಿ ಸಂಸತ್ತಿನ ಎರಡೂ ಸದನಗಳಲ್ಲಿ ಮಂಡಿಸಲಾಗುತ್ತದೆ.

## ✸ ರಾಜ್ಯಸಭೆ

ರಾಜ್ಯ ಸಭೆಯ ಒಟ್ಟು ಸದಸ್ಯ ಸಂಖ್ಯೆ ೨೫೦. ಆ ಪೈಕಿ ೧೨ ಜನರು ತಮ್ಮ ವಿಶೇಷ ಸಾಧನೆಗಳಿಗಾಗಿ ರಾಷ್ಟ್ರಪತಿಯವರಿಂದ ನಾಮಕರಣ ಹೊಂದಿದವರಾಗಿರುತ್ತಾರೆ. ಉಳಿದವರು ವಿವಿಧ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳಿಂದ ಆಯ್ಕೆಯಾಗುತ್ತಾರೆ. ವಿವಿಧ ರಾಜ್ಯಗಳು, ಅಥವಾ ಕೇಂದ್ರಾಡಳಿತ ಪ್ರದೇಶಗಳು ಆಯ್ಕೆ ಮಾಡಬೇಕಾದ ರಾಜ್ಯಸಭಾ ಸ'ದಸ್ಯರ ಸಂಖ್ಯೆ ಆಯಾ ರಾಜ್ಯಗಳ ಅಥವಾ ಕೇಂದ್ರಾಡಳಿತ ಪ್ರದೇಶಗಳ ಜನಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ನಿರ್ಧರಿಸಲ್ಪಟ್ಟಿದೆ. ಅಮೇರಿಕಾ ಸಂಯುಕ್ತಸಂಸ್ಥಾನ ಅಥವಾ ಸ್ವಿಸ್ ಒಕ್ಕೂಟದ ಮಾದರಿಯಲ್ಲಿ ರಾಜ್ಯಗಳಿಗೆ ಸಮಾನ ಪ್ರಾತಿನಿಧ್ಯವನ್ನು ನೀಡಲಾಗಿಲ್ಲ. ಉತ್ತರ ಪ್ರದೇಶ ಅತಿ ಹೆಚ್ಚು ಅಂದರೆ ೩೧ ಸದಸ್ಯರನ್ನು ಆಯ್ಕೆಮಾಡಿದರೆ ಸಿಕ್ಕಿಂ ಅತಿ ಕಡಿಮೆ ಅಂದರೆ ಒಬ್ಬ ಸದಸ್ಯನನ್ನು ಆಯ್ಕೆ ಮಾಡುತ್ತದೆ. ಸದ್ಯ ರಾಜ್ಯಸಭೆಯ ಒಟ್ಟು ಸದಸ್ಯರ ಸಂಖ್ಯೆ ೨೪೫ ಇದೆ.

## ✸ ರಚನೆ ಮತ್ತು ಕಾರ್ಯಗಳು

ರಾಜ್ಯಸಭೆಯ ಒಟ್ಟು ಸದಸ್ಯರ ಸಂಖ್ಯೆ 250 ಇದ್ದರೂ ಈಗಿನ ಸಂಖ್ಯೆ ೨೪೫ ಇದೆ. ಆ ಪೈಕಿ ೧೨ ಜನ ಸದಸ್ಯರು ಕಲೆ, ವಿಜ್ಞಾನ, ಸಮಾಜ ಸೇವೆ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಸಲ್ಲಿಸಿದ ವಿಶೇಷ ಸೇವೆಗಾಗಿ ರಾಷ್ಟ್ರಪತಿಯವರಿಂದ ನಾಮಕರಣ ಗೊಂಡಿರುತ್ತಾರೆ. ಇತರ ೨೩೩ ಸದಸ್ಯರು ವಿವಿಧ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳಿಂದ ಆಯ್ಕೆಯಾದವರಾಗಿರುತ್ತಾರೆ.

ರಾಜ್ಯ ವಿಧಾನಸಭೆಯ ಚುನಾಯಿತ ಸದಸ್ಯರು ಪ್ರಮಾಣಾನುಸಾರ ಪ್ರಾತಿನಿಧ್ಯದ ಮೇರೆಗೆ ವರ್ಗಾವಣೆಗೊಳ್ಳುವ ಮತದ ಮೂಲಕ ತಮ್ಮ ರಾಜ್ಯದಿಂದ ಆಯ್ಕೆಗೊಳ್ಳ-ಬೇಕಾದ ರಾಜ್ಯ ಸಭಾಸದಸ್ಯರನ್ನು ಚುನಾಯಿಸುತ್ತಾರೆ. ಸಂಸತ್ತಿನ ಕಾನೂನುಗಳು ನಿರ್ಧರಿಸುವ ಮೇರೆಗೆ ಕೇಂದ್ರಾಡಳಿತ ಪ್ರದೇಶಗಳ ಪ್ರತಿನಿಧಿಗಳನ್ನು ಆಯ್ಕೆ ಮಾಡಲಾಗುತ್ತದೆ.

ರಾಜ್ಯಸಭೆಯಲ್ಲಿ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳು ಹೊಂದಿರುವ ಪ್ರಾತಿನಿಧ್ಯ ಮುಂದಿನಂತಿದೆ.

| ಅ ನಂ. | ರಾಜ್ಯ | ಸದಸ್ಯರ ಸಂಖ್ಯೆ |
|---|---|---|
| ೧ | ಆಂಧ್ರ ಪ್ರದೇಶ | ೧೮ |
| ೨ | ಅರುಣಾಚಲ ಪ್ರದೇಶ | ೦೧ |
| ೩ | ಅಸ್ಸಾಮ್ | ೦೭ |
| ೪ | ಬಿಹಾರ | ೧೬ |
| ೫ | ಛತ್ತೀಸಗಡ | ೦೫ |
| ೬ | ಗೋವಾ | ೦೧ |
| ೭ | ಗುಜರಾತ | ೧೧ |
| ೮ | ಹರಿಯಾನಾ | ೦೫ |
| ೯ | ಹಿಮಾಚಲ ಪ್ರದೇಶ | ೦೩ |
| ೧೦ | ಜಮ್ಮು ಕಾಶ್ಮೀರ | ೦೪ |
| ೧೧ | ಝಾರಖಂಡ | ೦೬ |
| ೧೨ | ಕರ್ನಾಟಕ | ೧೨ |
| ೧೩ | ಕೇರಳ | ೦೯ |
| ೧೪ | ಮಧ್ಯ ಪ್ರದೇಶ | ೧೧ |
| ೧೫ | ಮಹಾರಾಷ್ಟ್ರ | ೧೯ |
| ೧೬ | ಮಣಿಪುರ | ೦೧ |
| ೧೭ | ಮೇಘಾಲಯ | ೦೧ |
| ೧೮ | ಮಿಜೋರಾಂ | ೦೧ |
| ೧೯ | ನಾಗಾಲ್ಯಾಂಡ್ | ೦೧ |
| ೨೦ | ಓಡಿಸಾ | ೦೧ |
| ೨೧ | ಪಂಜಾಬ | ೦೭ |
| ೨೨ | ರಾಜಸ್ಥಾನ | ೧೦ |
| ೨೩ | ಸಿಕ್ಕಿಂ | ೦೧ |
| ೨೪ | ತಮಿಳುನಾಡು | ೧೮ |
| ೨೫ | ತ್ರಿಪುರಾ | ೦೧ |
| ೨೬ | ಉತ್ತರ ಪ್ರದೇಶ | ೩೧ |
| ೨೭ | ಉತ್ತರಾಂಚಲ | ೦೩ |
| ೨೮ | ಪಶ್ಚಿಮ ಬಂಗಾಲ | ೧೬ |
| | | ಒಟ್ಟು : ೨೨೯ |

## ಕೇಂದ್ರಾಡಳಿತ ಪ್ರದೇಶಗಳು

| ಅ ನಂ. | ಕೇಂದ್ರಾಡಳಿತ ಪ್ರದೇಶ | ಸದಸ್ಯರ ಸಂಖ್ಯೆ |
|---|---|---|
| ೧ | ಅಂಡಮಾನ್ ನಿಕೋಬಾರ್ | - |
| ೨ | ಚಂದಿಗಡ | - |
| ೩ | ದಾದ್ರಾ ನಗರ ಹವೇಲಿ | - |
| ೪ | ದಮನ್ ಮತ್ತು ದೀವ್ | - |
| ೫ | ದೆಹಲಿ | ೩ |
| ೬ | ಲಕ್ಷದ್ವೀಪ | - |
| ೭ | ಪಾಂಡಿಚೇರಿ | ೧ |
| ೮ | ನಾಮಕರಣ ಹೊಂದಿದ ಸದಸ್ಯರು | ೧೨ |
| | | ಒಟ್ಟು: ೧೬ |

### ಅರ್ಹತೆಗಳು

ರಾಜ್ಯಸಭೆಯ ಅಭ್ಯರ್ಥಿಗಳಿಗಾಗಿ ಸಂವಿಧಾನ ಕೆಳಗಿನ ಅರ್ಹತೆಗಳನ್ನು ನಿರ್ದಿಷ್ಟಪಡಿಸಿದೆ.

೧. ಭಾರತದ ನಾಗರಿಕನಾಗಿರಬೇಕು.

೨. ಕನಿಷ್ಟ ೩೦ ವರ್ಷ ವಯಸ್ಸಿನವನಾಗಿರಬೇಕು.

೩. ಸಂಸತ್ತು ಕಾಲಕಾಲಕ್ಕೆ ನಿರ್ಧರಿಸುವ ಅರ್ಹತೆಗಳನ್ನು ಹೊಂದಿರಬೇಕು.

### ಅಧಿಕಾರದ ಅವಧಿ

ರಾಜ್ಯಸಭೆ ಶಾಶ್ವತ ಸದನವಾಗಿದೆ. ಲೋಕಸಭೆಯಂತೆ ಅದು ವಿಸರ್ಜನೆಗೊಳ್ಳುವದಿಲ್ಲ. ರಾಜ್ಯಸಭಾ ಸದಸ್ಯರ ಕಾರ್ಯಾವಧಿ ಮಾತ್ರ ೬ ವರ್ಷದ್ದಾಗಿರುತ್ತದೆ. ಆ ಪೈಕಿ ಪ್ರತಿ ಎರಡು ವರ್ಷಗಳಿಗೊಮ್ಮೆ ೧/೩ ಸದಸ್ಯರು ನಿವೃತ್ತರಾಗುತ್ತಾರೆ. ಅವರ ಸ್ಥಾನಕ್ಕೆ ಹೊಸ ಸದಸ್ಯರು ಆಯ್ಕೆಗೊಳ್ಳುತ್ತಾರೆ.

### ರಾಜ್ಯಸಭೆಯ ಪದಾಧಿಕಾರಿಗಳು

ಭಾರತದ ಉಪರಾಷ್ಟ್ರಪತಿಯವರು ರಾಜ್ಯಸಭೆಯ ಪದನಿಮಿತ್ತ ಸಭಾಪತಿಯಾಗಿರುತ್ತಾರೆ. ಅವರ ಅಧಿಕಾರದ ಅವಧಿ ೫ ವರ್ಷಗಳು. ಉಪರಾಷ್ಟ್ರಪತಿಯಾಗಿ ಅವರು ವೇತನ ಹಾಗೂ ಭತ್ಯೆ ಪಡೆಯುತ್ತಾರೆ. ಸಧ್ಯ ೪೦,೦೦೦ರೂ. ಮಾಸಿಕ ವೇತನ ಹಾಗೂ ಇತರ ಸೌಲಭ್ಯಗಳನ್ನು ಪಡೆಯುತ್ತಾರೆ. ಸದನದ ಕಲಾಪಗಳನ್ನು ಶಾಂತಿಯುತವಾಗಿ ನಡೆಸಿಕೊಂಡು ಹೋಗುವ ಜವಾಬ್ದಾರಿ ಸಭಾಪತಿ

(ಉಪರಾಷ್ಟ್ರಪತಿ) ಯವರದಾಗಿದೆ. ಕೆಲವೊಂದು ವಿಷಯಗಳನ್ನು ಹೊರತುಪಡಿಸಿ ಅವರು ಲೋಕ ಸಭಾಧ್ಯಕ್ಷರೊಂದಿಗೆ ಸಮಾನ ಅಧಿಕಾರ ಹೊಂದಿದ್ದಾರೆ.

ಉಪರಾಷ್ಟ್ರಪತಿಯವರು ರಾಷ್ಟ್ರಪತಿಯ ಕಾರ್ಯನಿರ್ವಹಿಸುವ ಪ್ರಸಂಗ ಬಂದಾಗ ಉಪ ಸಭಾಪತಿಯವರು ರಾಜ್ಯಸಭೆಯ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗುತ್ತಾರೆ. ರಾಜ್ಯಸಭೆಯ ಸದಸ್ಯರು ತಮ್ಮಲ್ಲೇ ಒಬ್ಬರನ್ನು ಉಪಸಭಾಪತಿಯಾಗಿ ಆಯ್ಕೆಮಾಡುತ್ತಾರೆ. ಸದನದ ಅಧ್ಯಕ್ಷತೆ ವಹಿಸಿಕೊಂಡಾಗ ಉಪಸಭಾಪತಿಯವರು ಸಭಾಪತಿಯವರ ಎಲ್ಲ ಅಧಿಕಾರಗಳನ್ನು ಚಲಾಯಿಸುತ್ತಾರೆ. ಸಭಾಪತಿಯವರು ಅಧ್ಯಕ್ಷತೆ ವಹಿಸಿಕೊಂಡಾಗ ಅವರು ಇತರ ಸದಸ್ಯರಂತೆ ಕಲಾಪದಲ್ಲಿ ಭಾಗವಹಿಸುತ್ತಾರೆ. ಸಭಾಪತಿ ಹಾಗೂ ಉಪಸಭಾಪತಿ ಇಬ್ಬರ ಗೈರು ಹಾಜರಿಯಲ್ಲಿ ಸಭೆಯ ಕಲಾಪ ನಡೆಸಿಕೊಂಡು ಹೋಗುವದಕ್ಕಾಗಿ ಆರು ಜನ ಅಧ್ಯಕ್ಷಾಧಿಕಾರಿಗಳ ಪಟ್ಟಿ ಇರುತ್ತದೆ. ಅವರ ಪೈಕಿ ಒಬ್ಬರು ಅಧ್ಯಕ್ಷತೆ ವಹಿಸುತ್ತಾರೆ.

ಸಭಾಪತಿಯವರ ಪದಚ್ಯುತಿ ವಿಧಾನ ಪ್ರತ್ಯೇಕವಾಗಿ ಇಲ್ಲ. ಉಪರಾಷ್ಟ್ರ-ಪತಿಯವರೇ ಪದನಿಮಿತ್ತ ಸಭಾಪತಿಯಾಗಿರುವದರಿಂದ ಉಪರಾಷ್ಟ್ರಪತಿಯವರ ಪದಚ್ಯುತಿ ವಿಧಾನಗಳ ಮೂಲಕ ಅವರನ್ನು ವಜಾಮಾಡಬಹುದು.

## ರಾಜ್ಯಸಭೆಯ ಕಾರ್ಯಗಳು

### ಶಾಸನೀಯ ಕಾರ್ಯಗಳು

ಮಸೂದೆಯೊಂದು ಕಾನೂನಾಗಬೇಕಾದರೆ ಸಂಸತ್ತಿನ ಎರಡೂ ಸದನಗಳ ಅನುಮೋದನೆ ಅಗತ್ಯ. ಅಂದರೆ ರಾಜ್ಯಸಭೆಯ ಒಪ್ಪಿಗೆಯೊಂದಿಗೆ ಒಂದು ಮಸೂದೆ ಶಾಸನವಾಗುತ್ತದೆ. ಸಾಮಾನ್ಯ ಮಸೂದೆ ಯಾವದೇ ಸದನದಲ್ಲಿ ಮೊದಲು ಮಂಡಿಸಲ್ಪಡಬಹುದು. ರಾಜ್ಯಸಭೆಯಲ್ಲಿ ಮೊದಲು ಮಂಡಿತವಾದ ಮಸೂದೆ ಅಲ್ಲಿ ಪಾಸಾದನಂತರ ಲೋಕಸಭೆಗೆ ಹೋಗುತ್ತದೆ. ಲೋಕಸಭೆಯಲ್ಲಿ ಪಾಸಾದ ಮಸೂದೆ ರಾಜ್ಯಸಭೆಗೆ ಹೋಗುತ್ತದೆ. ಎರಡೂ ಸದನಗಳ ಅನುಮೋದನೆಯೊಂದಿಗೆ ರಾಷ್ಟ್ರಪತಿಯವರ ಒಪ್ಪಿಗೆಗೆ ಕಳಿಸಲ್ಪಡುತ್ತದೆ. ಲೋಕಸಭೆ ಪಾಸು ಮಾಡಿದ ಮಸೂದೆಯನ್ನು ರಾಜ್ಯಸಭೆ ಇದ್ದಕ್ಕಿದ್ದಂತೆ ಒಪ್ಪಬಹುದು. ತಿದ್ದುಪಡಿಯೊಂದಿಗೆ ಸ್ವೀಕರಿಸಬಹುದು ಅಥವಾ ತಿರಸ್ಕರಿಸಬಹುದು. ಒಂದು ತಿಂಗಳ (೩೦ ದಿನಗಳ) ವರೆಗೆ ಲೋಕಸಭೆ ಪಾಸು ಮಾಡಿದ ಮಸೂದೆಯನ್ನು ರಾಜ್ಯಸಭೆ ತನ್ನಲ್ಲಿರಿಸಿಕೊಳ್ಳಬಹುದು. ತಿದ್ದುಪಡಿಯೊಂದಿಗೆ ಮಸೂದೆಯನ್ನು ಮರಳಿಸಿದಾಗ ಅಥವಾ ತಿರಸ್ಕರಿಸಿದಾಗ, ಲೋಕಸಭೆ ಎರಡನೇ ಸಲ ರಾಜ್ಯಸಭೆಯ ತಿದ್ದುಪಡಿಯನ್ನೊಪ್ಪಿಕೊಳ್ಳದೇ ಹೊದಾಗ ಎರಡೂ ಸದನಗಳ ನಡುವೆ ಬಿಕ್ಕಟ್ಟು ಉಂಟಾಗಿ ಅದನ್ನು ಪರಿಹರಿಸಲು

ರಾಷ್ಟ್ರಪತಿಯವರು ಎರಡೂ ಸದನಗಳ ಸಂಯುಕ್ತ ಅಧಿವೇಶನ ಕರೆಯುತ್ತಾರೆ. ಲೋಕ ಸಭಾಧ್ಯಕ್ಷರ ಅಧ್ಯಕ್ಷತೆಯಲ್ಲಿ ನಡೆಯುವ ಈ ಸಭೆಯಲ್ಲಿ ಲೋಕಸಭೆಯ ಅಭಿಪ್ರಾಯಕ್ಕೆ ಗೆಲವು ಸಿಗುತ್ತದೆ. ಎರಡೂ ಸದನಗಳ ನಡುವೆ ಭಿನ್ನಾಭಿಪ್ರಾಯ ಬಂದಲ್ಲಿ ರಾಜ್ಯಸಭೆ ಒಟ್ಟು ಆರುತಿಂಗಳ ಅವಧಿಯವರೆಗೆ ಮಸೂದೆಯನ್ನು ತಡೆಹಿಡಿಯಬಹುದು.

### ಹಣಕಾಸಿನ ಕಾರ್ಯಗಳು

ಜನರನ್ನು ನೇರವಾಗಿ ಪ್ರತಿನಿಧಿಸದ ರಾಜ್ಯಸಭೆ ಹಣಕಾಸಿನ ವಿಷಯದಲ್ಲಿ ಬಲಹೀನ ಸದನವಾಗಿದೆ. ಕೇವಲ ಸಲಹೆಗಾರನಾಗಿ ಮಾತ್ರ ಅದು ಕಾರ್ಯನಿರ್ವಹಿಸುತ್ತದೆ. ಲೋಕಸಭೆಯಲ್ಲಿ ಪಾಸಾದ ಹಣಕಾಸಿನ ಮಸೂದೆ ರಾಜ್ಯಸಭೆಗೆ ಕಳಿಸಲ್ಪಡುತ್ತದೆ. ಅದು ೧೪ ದಿನಗಳ ಅವಧಿಯಲ್ಲಿ ೧) ಲೋಕಸಭೆಯಲ್ಲಿ ಸ್ವೀಕೃತವಾದ ರೀತಿಯಲ್ಲಿ ಸ್ವೀಕರಿಸಬಹುದು ಇಲ್ಲವೇ ೨) ತಿದ್ದುಪಡಿ ಮಾಡಿ ಮರಳಿಸಬಹುದು ಅಥವಾ ೩) ತನ್ನಲ್ಲೇ ಇಟ್ಟುಕೊಳ್ಳಬಹುದು. ತಿದ್ದುಪಡಿ ಮಾಡಿದರೆ ತನ್ನಲ್ಲೇ ಇರಿಸಿಕೊಂಡರೆ ಅಥವಾ ತಿರಸ್ಕರಿಸಿದರೆ ಲೋಕಸಭೆಗೆ ರಾಜ್ಯಸಭೆಯ ತಿದ್ದುಪಡಿಗೆ ಒಪ್ಪಿ ಅಥವಾ ತಿರಸ್ಕರಿಸಿ ಮಸೂದೆಯನ್ನು ಎರಡನೇ ಸಲ ಪಾಸು ಮಾಡಿದ ನಂತರ ರಾಷ್ಟ್ರಪತಿಯವರ ಅನುಮತಿಗೆ ಕಳಿಸಲ್ಪಡುತ್ತದೆ.

### ಆಡಳಿತಾತ್ಮಕ ಕಾರ್ಯಗಳು

ರಾಜಕೀಯ ಕಾರ್ಯಾಂಗವು (ಮಂತ್ರಿ ಮಂಡಲ) ತನ್ನೆಲ್ಲ ಕೆಲಸ ಕಾರ್ಯಗಳಿಗಾಗಿ ಲೋಕಸಭೆಗೆ ಜವಾಬ್ದಾರಿ ಹೊಂದಿರುತ್ತದೆ. ರಾಜ್ಯಸಭೆ ಆಡಳಿತದ ಬಗ್ಗೆ ಅಗತ್ಯ ಮಾಹಿತಿ ಪಡೆಯುವ, ಅದರ ಕಾರ್ಯನಿರ್ವಹಣೆ ಕುರಿತು ಚರ್ಚಿಸುವ ಅಧಿಕಾರವನ್ನು ಮಾತ್ರ ಹೊಂದಿದೆ. ಮಾಹಿತಿ ಕೇಳುವ ಮೂಲಕ ಹಾಗೂ ಆಡಳಿತದ ವಿಮರ್ಶೆ ಮಾಡುವ ಮೂಲಕ ಆಡಳಿತದ ಮೇಲೆ ರಾಜ್ಯಸಭೆ ಪ್ರಭಾವ ಬೀರಬಹುದು. ಆಡಳಿತಕ್ಕೆ ಸಂಬಂಧಿಸಿದ ಮಹತ್ವದ ವಿಷಯಗಳನ್ನು ಕುರಿತು ನಿಲುವಳಿ ಸೂಚನೆ, ಗಮನ ಸೆಳೆಯುವ ಸೂಚನೆಗಳನ್ನು ಮಂಡಿಸಬಹುದು. ರಾಜ್ಯಸಭಾ ಸದಸ್ಯರನ್ನು ಮಂತ್ರಿಗಳನ್ನಾಗಿ ನೇಮಿಸಲು ಅವಕಾಶವಿದೆ. ಕೆಲ ಸಂದರ್ಭಗಳಲ್ಲಿ ರಾಜ್ಯಸಭೆಯ ಸದಸ್ಯರೇ ಪ್ರಧಾನಿಯಾಗಿ ನೇಮಕ ಹೊಂದಿದ್ದಾರೆ. ಉದಾ :- ೧೯೬೬ ರಲ್ಲಿ ಇಂದಿರಾ ಗಾಂಧಿ ಪ್ರಧಾನಿಯಾದಾಗ ಹಾಗೂ ೨೦೦೪ ರಲ್ಲಿ ಡಾ. ಮನಮೋಹನಸಿಂಗ್ ಪ್ರಧಾನಿಯಾದಾಗ ರಾಜ್ಯಸಭೆಯ ಸದಸ್ಯರಾಗಿದ್ದರು.

### ಸಂವಿಧಾನಾತ್ಮಕ ಕಾರ್ಯಗಳು

ಸಂವಿಧಾನದ ತಿದ್ದುಪಡಿಯ ವಿಷಯದಲ್ಲಿ ರಾಜ್ಯಸಭೆ ಹಾಗೂ ಲೋಕಸಭೆ ಸಮಾನ ಅಧಿಕಾರ ಹೊಂದಿವೆ. ತಿದ್ದುಪಡಿ ಮಸೂದೆ ಯಾವದೇ ಒಂದು ಸದನದಲ್ಲಿ ಮೊದಲು

ಮಂಡಿಸಲ್ಪಡಬಹುದು. ಇನ್ನೊಂದು ಸದನ ಅದಕ್ಕೆ ಒಪ್ಪಿಗೆ ನೀಡಿದರೆ ತಿದ್ದುಪಡಿಯ ಮುಂದಿನ ಕ್ರಮ ತೆಗೆದುಕೊಳ್ಳಲಾಗುವದು. ಸಂವಿಧಾನ ತಿದ್ದುಪಡಿಯ ಮೂರು ವಿಧಾನಗಳಲ್ಲೂ ರಾಜ್ಯಸಭೆಯ ಒಪ್ಪಿಗೆ ಅಗತ್ಯ. ಒಂದು ಸದನದಲ್ಲಿ ಸ್ವೀಕೃತಗೊಂಡ ತಿದ್ದುಪಡಿ ಮಸೂದೆ ಇನ್ನೊಂದು ಸದನದಲ್ಲಿ ತಿರಸ್ಕೃತಗೊಂಡರೆ ಸಂಯುಕ್ತ ಅಧಿವೇಶನ ಕರೆಯುವ ಅವಕಾಶವಿಲ್ಲ. ಉದಾ :- ೧೯೭೦ ರಲ್ಲಿ ಸಂವಿಧಾನದ ೨೪ ನೇ ತಿದ್ದು ಪಡಿ ಹಾಗೂ ೧೯೭೭ ರಲ್ಲಿ ಸಂವಿಧಾನದ ೪೩ ನೇ ತಿದ್ದುಪಡಿಗಳು ರಾಜ್ಯಸಭೆಯಿಂದ ತಿರಸ್ಕರಿಸಲ್ಪಟ್ಟಿವೆ. ಇಂಥ ಸಂದರ್ಭಗಳಿಗೆ ಸಂವಿಧಾನ ಪರಿಹಾರ ಸೂಚಿಸಿಲ್ಲ.

## ನ್ಯಾಯ ಸಂಬಂಧಿ ಕಾರ್ಯಗಳು

ನ್ಯಾಯ ಸಂಬಂಧದ ಅಧಿಕಾರದ ವಿಷಯದಲ್ಲಿ ಲೋಕಸಭೆಯೊಂದಿಗೆ ರಾಜ್ಯಸಭೆ ಸಮಾನ ಅಧಿಕಾರ ಹೊಂದಿದೆ. ರಾಷ್ಟ್ರಪತಿ, ಉಪರಾಷ್ಟ್ರಪತಿ, ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚನ್ಯಾಯಾಲಯಗಳ ನ್ಯಾಯಾಧೀಶರ ಪದಚ್ಯುತಿಯ ಸಂದರ್ಭದಲ್ಲಿ ಎರಡೂ ಸದನಗಳು ಭಾಗವಹಿಸುತ್ತವೆ. ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳ ನ್ಯಾಯಾಧೀಶರ ವಿರುದ್ಧ ವಾಗ್ದಂಡನಾ ನಿರ್ಣಯವನ್ನು ಒಂದು ಸದನ ಮಂಡಿಸಿದರೆ ಇನ್ನೊಂದು ಸದನ ವಿಚಾರಣೆ ನಡೆಸುತ್ತದೆ. ರಾಷ್ಟ್ರಪತಿಯವರ ಪದಚ್ಯುತಿಯ ವಿಷಯದಲ್ಲಿ ಲೋಕಸಭೆ ನಿರ್ಣಯ ಮಂಡಿಸಿದರೆ. ರಾಜ್ಯಸಭೆ ತನಿಖೆ ನಡೆಸಿ ತೀರ್ಮಾನ ಕೊಡುತ್ತದೆ. ಉಪರಾಷ್ಟ್ರಪತಿಯವರ ವಜಾ ವಿಷಯದಲ್ಲಿ ರಾಜ್ಯಸಭೆ ನಿರ್ಣಯ ಮಂಡಿಸುತ್ತದೆ. ಲೋಕಸಭೆ ವಿಚಾರಣೆ ನಡೆಸಿ ನಿರ್ಣಯ ಕೊಡುತ್ತದೆ. ಚುನಾವಣಾ ಆಯುಕ್ತರು, ಜಾಗೃತದಳದ ಅಧಿಕಾರಿಗಳು, ಕಂಪ್ಟ್ರೋಲರ್ ಮತ್ತು ಆಡಿಟರ್ ಜನರಲ್ ಮುಂತಾದವರ ಪದಚ್ಯುತಿಯ ವಿಷಯದಲ್ಲಿ ಕೂಡ ರಾಜ್ಯಸಭೆ ಭಾಗವಹಿಸುತ್ತದೆ.

## ಇತರ ಕಾರ್ಯಗಳು

೧. **ಚುನಾವಣಾ ಕಾರ್ಯಗಳು :-** ಭಾರತದ ರಾಷ್ಟ್ರಪತಿಯವರನ್ನು ಆಯ್ಕೆ ಮಾಡುವ ಕಾರ್ಯದಲ್ಲಿ ಲೋಕಸಭೆ ಹಾಗೂ ರಾಜ್ಯವಿಧಾನ ಸಭೆಯ ಚುನಾಯಿತ ಸದಸ್ಯರೊಂದಿಗೆ ರಾಜ್ಯಸಭೆಯ ಚುನಾಯಿತ ಸದಸ್ಯರು ಭಾಗವಹಿಸುತ್ತಾರೆ. ಉಪರಾಷ್ಟ್ರಪತಿಯವರ ಆಯ್ಕೆಯಲ್ಲೂ ರಾಜ್ಯಸಭಾ ಸದಸ್ಯರು ಭಾಗವಹಿಸುತ್ತಾರೆ.

೨. **ರಾಜ್ಯ ಪಟ್ಟಿಯಲ್ಲಿನ ವಿಷಯದ ಬಗ್ಗೆ ಸಂಸತ್ತಿಗೆ ಅಧಿಕಾರ ನೀಡಿಕೆ :-** ರಾಜ್ಯ ಪಟ್ಟಿಯಲ್ಲಿ ಒಳಗೊಂಡಿರುವ ವಿಷಯಗಳ ಮೇಲೆ ಸಂಸತ್ತಿಗೆ ಕಾನೂನು ರಚಿಸುವ ಅಧಿಕಾರ ಬರಬೇಕಾದರೆ ರಾಜ್ಯಸಭೆ ಆ ಬಗ್ಗೆ ೨/೩ ಬಹುಮತದ ಗೊತ್ತುವಳಿ ಸ್ವೀಕರಿಸ ಬೇಕಾಗುತ್ತದೆ.

೩. **ಅಖಿಲ ಭಾರತ ಸೇವಾವರ್ಗ ನಿರ್ಮಾಣ :-** ಹೊಸ ಅಖಿಲ ಭಾರತ ಸೇವಾವರ್ಗಗಳ ನಿರ್ಮಾಣಕ್ಕಾಗಿ ರಾಜ್ಯಸಭೆ ೨/೩ ಬಹುಮತದಿಂದ ಗೊತ್ತುವಳಿ ಸ್ವೀಕರಿಸಬೇಕಾಗುತ್ತದೆ.

೪. **ತುರ್ತುಪರಿಸ್ಥಿತಿ ಮುಂದುವರಿಸಲು ಅನುಮತಿ :-** ರಾಷ್ಟ್ರಪತಿಯವರು ಸಾರಿದ ತುರ್ತು ಪರಿಸ್ಥಿತಿಯನ್ನು ಎರಡು ತಿಂಗಳಿಗಿಂತ ಹೆಚ್ಚಿನ ಅವಧಿಗೆ ಮುಂದುವರೆಸಲು ಸಂಸತ್ತಿನ ಅನುಮೋದನೆ ಅಗತ್ಯ. ಆ ಸಂದರ್ಭದಲ್ಲಿ ಲೋಕಸಭೆ ವಿಸರ್ಜನೆ ಗೊಂಡಿದ್ದರೆ ರಾಜ್ಯ ಸಭೆಯೊಂದೇ ಅನುಮೋದನೆ ನೀಡಿದರೆ ಸಾಕು.

೫. **ಮೂಲಭೂತ ಹಕ್ಕುಗಳ ಸ್ಥಗಿತಕ್ಕೆ ಅನುಮೋದನೆ :-** ತುರ್ತು ಪರಿಸ್ಥಿತಿಯ ಸಮಯದಲ್ಲಿ ರಾಷ್ಟ್ರಪತಿಯವರು ಮೂಲಭೂತ ಹಕ್ಕುಗಳನ್ನು ಸ್ಥಗಿತಗೊಳಿಸುವ ಅಧಿಕಾರ ಹೊಂದಿದ್ದಾರೆ. ಮೂಲಭೂತ ಹಕ್ಕುಗಳನ್ನು ಸ್ಥಗಿತ ಗೊಳಿಸಿದಾಗ ಸಂಸತ್ತಿನ ಎರಡೂ ಸದನಗಳ ಒಪ್ಪಿಗೆ ಪಡೆಯುವದು ಅಗತ್ಯವಾಗಿದೆ.

೬. **ಆಯೋಗಗಳ ವರದಿ ಪರಿಶೀಲನೆ :-** ಲೋಕಸೇವಾ ಆಯೋಗ, ಕಂಪ್ಟ್ರೋಲರ್ ಮತ್ತು ಆಡಿಟರ್ ಜನರಲ್, ಪರಿಶಿಷ್ಟ ಜಾತಿ ಪರಿಶಿಷ್ಟ ಜನಾಂಗಗಳ ಆಯೋಗ, ಹಣಕಾಸಿನ ಆಯೋಗಗಳು ಸಲ್ಲಿಸುವ ವರದಿಗಳನ್ನು ಪರಿಶೀಲನೆಗಾಗಿ ಎರಡೂ ಸದನಗಳಲ್ಲಿ ಮಂಡಿಸಲಾಗುವದು.

## ಮೌಲ್ಯ ಮಾಪನ

ರಾಜ್ಯಸಭೆಯನ್ನು ಪ್ರಭಾವಶಾಲಿ ಹಾಗೂ ಗೌರವಯುತ ಸಂಸ್ಥೆಯನ್ನಾಗಿ ನಿರ್ಮಿಸಬೇಕೆಂಬುದು ಸಂವಿಧಾನ ನಿರ್ಮಾಪಕರ ಆಶಯವಾಗಿತ್ತು. ೫೪ ವರ್ಷಗಳಿಗೂ ಮಿಕ್ಕಿದ ಅವಧಿಯಲ್ಲಿನ ರಾಜ್ಯಸಭೆಯ ಕಾರ್ಯನಿರ್ವಹಣೆಯನ್ನು ಅವಲೋಕಿಸಿದಾಗ ಸಂವಿಧಾನ ನಿರ್ಮಾಪಕರ ಆಶಯ ಕೆಲಮಟ್ಟಿಗೆ ನಿಷ್ಫಲಗೊಂಡಿದ್ದು ಕಂಡು ಬರುತ್ತದೆ. ಅನುಭವಿ ಸದಸ್ಯರಿಂದ ಉನ್ನತ ಗುಣಮಟ್ಟದ ಚರ್ಚೆಯನ್ನು ಅವರು ನಿರೀಕ್ಷಿಸಿದ್ದರು. ಆದರೆ ಲೋಕಸಭೆಗಿಂತ ಚಿಕ್ಕವಯಸ್ಸಿನವರು, ಅನನುಭವಿಗಳು, ಲೋಕಸಭಾ ಚುನಾವಣೆಯಲ್ಲಿ ಜನರಿಂದ ತಿರಸ್ಕೃತಗೊಂಡವರು ರಾಜ್ಯಸಭೆಯ ಸದಸ್ಯರಾಗುತ್ತಿದ್ದಾರೆ. ೨೦೦೪ ರ ಲೋಕಸಭಾ ಚುನಾವಣೆಗಳಲ್ಲಿ ಸೋತ ಮುರಳಿ ಮನೋಹರ ಜೋಷಿ, ಅರುಣ ಜೈಟ್ಲಿ, ಶಿವರಾಜ ಪಾಟೀಲ ಮುಂತಾದವರು ರಾಜ್ಯಸಭೆಯ ಸದಸ್ಯರಾಗುವ ಮೂಲಕ ಸಂಸತ್ತಿಗೆ ಹಿಂಬಾಗಿಲ ಪ್ರವೇಶ ಪಡೆದಿದ್ದಾರೆ. ರಾಜ್ಯಸಭೆಯನ್ನು ರಾಜ್ಯಗಳ ಪ್ರತಿನಿಧಿಯಾಗಿ ರಚಿಸಲಾಗಿದೆ. ಆದರೆ ರಾಜ್ಯಸಭಾ ಸದಸ್ಯರು ರಾಜ್ಯಗಳ ಪ್ರತಿನಿಧಿಗಳಾಗಿ ವರ್ತಿಸದೇ ತಮ್ಮ ರಾಜಕೀಯ ಪಕ್ಷದ ಪ್ರತಿನಿಧಿಗಳಾಗಿ ಕಾರ್ಯನಿರ್ವಹಿಸುತ್ತಾರೆ.

ರಾಜ್ಯಸಭೆ ಸಂಪೂರ್ಣ ನಿರುಪಯೋಗಿಯಾಗಿದೆ ಎಂದು ಹೇಳಲಾಗದು. ಅನುಭವಿಗಳು, ಮುತ್ಸದ್ದಿಗಳು, ಶಿಕ್ಷಣ ತಜ್ಞರು, ವಿಜ್ಞಾನಿಗಳು ಮುಂತಾದವರನ್ನು

ನಾಮಕರಣಗೊಂಡ ಸದಸ್ಯರನ್ನಾಗಿ ಹೊಂದಿರುತ್ತದೆ. ಲೋಕಸಭೆ ಅವಸರದಲ್ಲಿ ತೆಗೆದುಕೊಳ್ಳಬಹುದಾದ ನಿರ್ಣಯಗಳ ಸಾಧಕ ಬಾಧಕಗಳನ್ನು ವಿವೇಚಿಸಿ, ತಪ್ಪು ತಿದ್ದಿಕೊಳ್ಳಲು ಅವಕಾಶ ಮಾಡಿಕೊಡುವ ಕಾರ್ಯವನ್ನು ರಾಜ್ಯಸಭೆ ನಿರ್ವಹಿಸುತ್ತದೆ.

ರಾಜ್ಯಗಳ ಪ್ರತಿನಿಧಿಯಾದ ರಾಜ್ಯಸಭೆ ಗೊತ್ತುವಳಿ ಸ್ವೀಕರಿಸಿದರೆ ಮಾತ್ರ ಅಖಿಲ ಭಾರತ ಸೇವಾವರ್ಗ ನಿರ್ಮಾಣ ಸಾಧ್ಯ. ಅಲ್ಲದೇ ರಾಜ್ಯ ಪಟ್ಟಿಯಲ್ಲಿನ ವಿಷಯದ ಬಗ್ಗೆ ಶಾಸನ ರಚಿಸಲು ಸಂಸತ್ತಿಗೆ ಅಧಿಕಾರ ಬರುವದು ರಾಜ್ಯಸಭೆ ಗೊತ್ತುವಳಿ ಸ್ವೀಕರಿಸಿದಾಗ ಮಾತ್ರ, ತುರ್ತುಪರಿಸ್ಥಿತಿಯ ಮುಂದುವರಿಕೆಗೆ, ಲೋಕಸಭೆ ವಿಸರ್ಜನೆಯಾದ ಸಂದರ್ಭದಲ್ಲಿ ರಾಜ್ಯಸಭೆ ಅನುಮತಿ ನೀಡಿದರೆ ಸಾಕೆಂಬುದು ಅದರ ಮಹತ್ವವನ್ನು ಎತ್ತಿ ತೋರಿಸುತ್ತದೆ.

ರಾಜ್ಯಸಭೆಯ ಸದಸ್ಯರ ಸಂಖ್ಯೆ ಮಿತ ಪ್ರಮಾಣದಲ್ಲಿ ಇರುತ್ತದೆ. ಆದ್ದರಿಂದ ಯಾವದೇ ವಿಷಯದ ಬಗ್ಗೆ ವಿಸ್ತೃತವಾಗಿ ಚರ್ಚಿಸಿ ಉತ್ತಮ ನಿರ್ಣಯ ತಗೆದುಕೊಳ್ಳಲು ಸಾಧ್ಯವಾಗುತ್ತದೆ. ಕಲೆ, ವಿಜ್ಞಾನ, ಸಮಾಜಸೇವೆ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ವಿಶೇಷ ಸಾಧನೆ ಮಾಡಿದವರಿಗೆ ನಾಮಕರಣದ ಮೂಲಕ ಪ್ರಾತಿನಿಧ್ಯ ದೊರೆಯುತ್ತದೆ. ಚುನಾವಣೆಗೆ ಸ್ಪರ್ಧಿಸಲು ತಯಾರಾಗದ ಬುದ್ಧಿಜೀವಿಗಳನ್ನು ನಾಮಕರಣದ ಮೂಲಕ ಶಾಸನೀಯ ಕಾರ್ಯಗಳಲ್ಲಿ ಹಾಗೂ ರಾಷ್ಟ್ರಸೇವೆಯಲ್ಲಿ ತೊಡಗಿಸಿಕೊಳ್ಳಲು ರಾಜ್ಯಸಭೆ ಅವಕಾಶ ಮಾಡಿ ಕೊಡುತ್ತದೆ.

## ಕಾನೂನು (ಶಾಸನ) ರಚನಾ ವಿಧಾನ

ಸಂಸತ್ತಿನ ಅತ್ಯಂತ ಮಹತ್ವದ ಕೆಲಸವೆಂದರೆ ಕಾನೂನು ರಚಿಸುವದು. ಆ ಕಾರ್ಯಕ್ಕಾಗಿಯೇ ಸಂಸತ್ತು ಸರಕಾರದ ಪ್ರತ್ಯೇಕ ಅಂಗವಾಗಿ ರೂಪುಗೊಂಡಿದೆ. ಇತರ ಹೆಚ್ಚಿನ ಕೆಲಸಗಳ ಜೊತೆಗೆ ಈಗಲೂ ಕಾನೂನು ರಚನೆ ಸಂಸತ್ತಿನ ಬಹುಮುಖ್ಯ ಕಾರ್ಯವಾಗಿದೆ. ಸಂಸತ್ತಿನ ಅಧಿವೇಶನದ ಬಹುಪಾಲು ಸಮಯ ಶಾಸನರಚನಾ ಕಾರ್ಯಕ್ಕೆ ವಿನಿಯೋಗವಾಗುತ್ತದೆ.

ಬ್ರಿಟೀಶ್ ಸಂಸತ್ತಿನ ಮಾದರಿಯಲ್ಲೇ ನಮ್ಮ ಸಂಸತ್ತು ಕಾನೂನು ರಚಿಸುವ ವಿಧಾನವನ್ನು ಅಳವಡಿಸಿಕೊಂಡಿದೆ. ಸಂವಿಧಾನದ ೧೦೭ ರಿಂದ ೧೨೨ ರ ವರೆಗಿನ ಕಲಮುಗಳು ಸಂಸತ್ತಿನ ಕಾನೂನು ರಚನಾ ವಿಧಾನಗಳನ್ನು ವಿವರಿಸುತ್ತವೆ. ಸಂವಿಧಾನದ ಪ್ರಕಾರ ಹಣಕಾಸಿನ ಮಸೂದೆಯನ್ನು ಲೋಕಸಭೆಯಲ್ಲೇ ಮೊದಲು ಮಂಡಿಸಬೇಕು. ಇತರ ಮಸೂದೆಗಳನ್ನು ಯಾವದೇ ಸದನದಲ್ಲಿ ಮೊದಲು ಮಂಡಿಸಬಹುದು. ಸಂಸತ್ತಿನಲ್ಲಿ ಮಂಡಿಸಲಾಗುವ ಸಾಮಾನ್ಯ ಮಸೂದೆಗಳಲ್ಲಿ ೧) ಸಾರ್ವಜನಿಕ ಅಥವಾ ಸರಕಾರಿ ಮಸೂದೆ ಹಾಗೂ ೨) ಖಾಸಗಿ ಮಸೂದೆ, ಹೀಗೆ ಎರಡು ವಿಧಗಳಿವೆ.

ಸಾರ್ವಜನಿಕ ಮಸೂದೆಗಳನ್ನು ಸಂಬಂಧಪಟ್ಟ ಇಲಾಖೆಯ ಉನ್ನತ ದರ್ಜೆಯ ಅಧಿಕಾರಿಗಳು ಕಾನೂನು ಇಲಾಖೆಯ ಅಧಿಕಾರಿಗಳೊಂದಿಗೆ ಚರ್ಚಿಸಿ ತಯಾರಿಸುತ್ತಾರೆ. ಸಾರ್ವಜನಿಕ ಮಸೂದೆಗಳನ್ನು ಸಂಬಂಧಿಸಿದ ಮಂತ್ರಿಗಳು ಮಂಡಿಸಿದರೆ ಖಾಸಗಿ ಮಸೂದೆಗಳನ್ನು ಸದಸ್ಯರು ಮಂಡಿಸುತ್ತಾರೆ. ಮಸೂದೆಗಳು ಎರಡೂ ಸದನಗಳಲ್ಲಿ ಮೂರು ವಾಚನಗಳ ಮೂಲಕ ಚರ್ಚೆ ಹಾಗೂ ಮತಗಣನೆಯೊಂದಿಗೆ ಹಾಯ್ದು ಬರುತ್ತವೆ. ಎರಡೂ ಸದನಗಳ ಸಮ್ಮತಿ ದೊರೆತನಂತರ ರಾಷ್ಟ್ರಪತಿಯವರ ಅನುಮತಿಯೊಂದಿಗೆ ಶಾಸನಗಳಾಗುತ್ತವೆ.

## ಮೊದಲನೇ ವಾಚನ

ಮಸೂದೆ ಮಂಡನೆಗೆ ಗೊತ್ತುಪಡಿಸಿದ ದಿನದಂದು ಅದನ್ನು ಮಂಡಿಸುವ ಸದಸ್ಯನು ಸದನದ ಅನುಮತಿ ಪಡೆದು ಮಸೂದೆಯ ತಲೆ ಬರಹವನ್ನು ಓದಿ ಅದರ ಧ್ಯೇಯ ಹಾಗೂ ಗುರಿಗಳನ್ನು ಸಂಕ್ಷಿಪ್ತವಾಗಿ ವಿವರಿಸಿ ಮಸೂದೆ ಮಂಡನೆಗೆ ಅನುಮತಿ ಕೋರುತ್ತಾನೆ. ಆ ಬಗ್ಗೆ ವಿರೋಧಿ ಪಕ್ಷದ ಸದಸ್ಯನೊಬ್ಬ ಮಾತನಾಡಬಹುದು. ಮಸೂದೆ ಮಂಡನೆಗೆ ಸಾಮಾನ್ಯವಾಗಿ ಅನುಮತಿ ದೊರೆಯುವದು. ಸದಸ್ಯರಿಂದ ವಿರೋಧ ಬಂದರೆ ಮತಗಣನೆ ನಡೆಸಿ, ಒಪ್ಪಿಗೆ ದೊರೆತರೆ ಮಂಡನೆಗೆ ಅವಕಾಶ ಕೊಡಲಾಗುವದು. ಮಸೂದೆ ಶಾಸನವಾದರೆ ಅದರ ಜಾರಿಗೊಳಿಸುವಿಕೆಗಾಗಿ ಎಷ್ಟು ಖರ್ಚು ಬರಬಹುದೆಂಬುದನ್ನುಸಂಬಂಧಪಟ್ಟ ಸದಸ್ಯನು ಆ ಸಮಯದಲ್ಲಿ ವಿವರಿಸ-ಬೇಕಾಗುತ್ತದೆ. ಮಸೂದೆ ಮಂಡನೆಯಾದರೆ ಅದನ್ನು ರಾಜ್ಯಪತ್ರದಲ್ಲಿ ಪ್ರಕಟಿಸಲಾಗುತ್ತದೆ ಹಾಗೂ ಅದರ ಪ್ರತಿಗಳನ್ನು ಸದಸ್ಯರಿಗೆಲ್ಲ ವಿತರಿಸಲಾಗುತ್ತದೆ. ಎರಡನೇ ವಾಚನದ ದಿನಾಂಕವನ್ನು ಗೊತ್ತುಪಡಿಸುವದರೊಂದಿಗೆ ಮೊದಲನೇ ವಾಚನ ಮುಗಿಯುತ್ತದೆ.

## ಎರಡನೇ ವಾಚನ

ಎರಡನೇ ವಾಚನದ ಸಮಯದಲ್ಲಿ ಮಸೂದೆ ಮಂಡನಕಾರ ಮಸೂದೆಯ ಬಗ್ಗೆ ಚರ್ಚೆ ನಡೆಸುವಂತೆ, ಅಥವಾ ಸೆಲೆಕ್ಟ್ ಕಮಿಟಿಗೆ ಒಪ್ಪಿಸುವಂತೆ ಅಥವಾ ಸಾರ್ವಜನಿಕ ಅಭಿಪ್ರಾಯಕ್ಕಾಗಿ ಪ್ರಕಟಣೆ ಹೊರಡಿಸುವಂತೆ ಕೋರಬಹುದು. ಜಂಟಿಸಮಿತಿಗೆ ಮಸೂದೆಯನ್ನು ಒಪ್ಪಿಸುವದಾದಲ್ಲಿ ಎರಡೂ ಸದನಗಳ ಅನುಮತಿ ಪಡೆಯ ಬೇಕಾಗುತ್ತದೆ.

ನೇರ ಚರ್ಚೆಗೆ ಸದನದ ಒಪ್ಪಿಗೆ ದೊರೆತರೆ ಮಸೂದೆಯ ವಿಸ್ತೃತ ಚರ್ಚೆ ನಡೆಯುತ್ತದೆ. ಸೆಲೆಕ್ಟ್‌ಕಮಿಟಿ (ಆಯ್ದುಸಮಿತಿ) ಗೆ ಮಸೂದೆಯನ್ನು ಒಪ್ಪಿಸುವದಾದಲ್ಲಿ ಮಸೂದೆ ಮಂಡಿಸಿದ ಸದಸ್ಯನು ಕಮಿಟಿಯ ಸದಸ್ಯರ ಹೆಸರುಗಳನ್ನು ಸೂಚಿಸುತ್ತಾನೆ.

ಕಮಿಟಿಯ ಅಧ್ಯಕ್ಷರನ್ನು ಸಭಾಧ್ಯಕ್ಷರು ನೇಮಿಸುತ್ತಾರೆ. ಎರಡೂ ಸದನಗಳ ಜಂಟಿಸಮಿತಿ ರಚಿಸುವ ತೀರ್ಮಾನವಾದಲ್ಲಿ ೨:೧ ಪ್ರಮಾಣದಲ್ಲಿ ಲೋಕಸಭೆ ಹಾಗೂ ರಾಜ್ಯಸಭೆಯ ಸದಸ್ಯರ ಹೆಸರುಗಳನ್ನು ಮಂಡನೆಕಾರನು ಸೂಚಿಸುತ್ತಾನೆ. ಸೆಲೆಕ್ಟ್ ಸಮಿತಿ ಅಥವಾ ಜಂಟಿ ಸಮಿತಿ ಕೂಲಂಕಶವಾಗಿ ಚರ್ಚೆ ನಡೆಸಿ ಮೂರು ತಿಂಗಳ ಅವಧಿಯೊಳಗೆ ವರದಿ ಸಲ್ಲಿಸಬೇಕಾಗುತ್ತದೆ.

ಸಮಿತಿ ನೀಡಿದ ವರದಿಯ ಮೇರೆಗೆ ಮಸೂದೆಯ ಪ್ರತಿಯೊಂದು ಭಾಗವನ್ನು ಪ್ರತ್ಯೇಕವಾಗಿ ಚರ್ಚೆಗೆ ಒಳಪಡಿಸಲಾಗುತ್ತದೆ. ಚರ್ಚೆಯ ಸಮಯದಲ್ಲಿ ಸದಸ್ಯರು ತಿದ್ದುಪಡಿಗಳನ್ನು ಸೂಚಿಸಬಹುದು. ಚರ್ಚೆ ಮುಕ್ತಾಯಗೊಂಡ ನಂತರ ಮಸೂದೆಯ ಪ್ರತಿಯೊಂದು ಭಾಗವನ್ನು ಪ್ರತ್ಯೇಕವಾಗಿ ಮತಕ್ಕೆ ಹಾಕಲಾಗುತ್ತದೆ.

## ಮೂರನೇ ವಾಚನ

ಮೂರನೇ ವಾಚನದಲ್ಲಿ ಮಸೂದೆಯನ್ನು ಇಡಿಯಾಗಿ ಚರ್ಚಿಸಿ ಮತಕ್ಕೆ ಹಾಕಲಾಗುತ್ತದೆ. ಮಸೂದೆಗೆ ಒಪ್ಪಿಗೆ ನೀಡುವದರೊಂದಿಗೆ ಅಥವಾ ತಿರಸ್ಕಾರ ಮಾಡುವದರೊಂದಿಗೆ ಮೂರನೇ ವಾಚನ ಮುಗಿಯುತ್ತದೆ.

ಒಂದು ಸದನದಲ್ಲಿ ಮಸೂದೆ ಪಾಸಾದ ನಂತರ ಇನ್ನೊಂದು ಸದನಕ್ಕೆ ಹೋಗುತ್ತದೆ. ಅಲ್ಲಿಯೂ ಕೂಡಾ ಮೇಲೆ ವಿವರಿಸಿದ ರೀತಿಯಲ್ಲಿಯೇ ಮೂರು ವಾಚನಗಳು ನಡೆಯುತ್ತವೆ. ತಿದ್ದುಪಡಿಯಿಲ್ಲದೇ ಆ ಸದನ ಮಸೂದೆಯನ್ನು ಪಾಸುಮಾಡಿದರೆ ರಾಷ್ಟ್ರಪತಿಯವರ ಒಪ್ಪಿಗೆಗೆ ಕಳಿಸಲಾಗುವದು. ತಿದ್ದುಪಡಿಯೊಂದಿಗೆ ಮಸೂದೆಯನ್ನು ಪಾಸುಮಾಡಿದರೆ ಮತ್ತೆ ಮೊದಲ ಸಭೆಗೆ ಅದನ್ನು ಕಳಿಸಲಾಗುತ್ತದೆ. ಮೊದಲ ಸದನ ಇನ್ನೊಂದು ಸದನ ಮಾಡಿದ ತಿದ್ದುಪಡಿಯನ್ನು ತಿರಸ್ಕರಿಸಿದರೆ ಬಿಕ್ಕಟ್ಟು ಉಂಟಾಗುತ್ತದೆ. ಅಂಥ ಸಂದರ್ಭದಲ್ಲಿ ರಾಷ್ಟ್ರಪತಿಯವರು ಎರಡೂ ಸದನಗಳ ಸಂಯುಕ್ತ ಸಭೆ ಕರೆಯಲು ಆದೇಶ ನೀಡುತ್ತಾರೆ. ಸಂಯುಕ್ತ ಸಭೆಯಲ್ಲಿ ಮಸೂದೆ ಪಾಸಾದರೆ ರಾಷ್ಟ್ರಪತಿಯವರ ಒಪ್ಪಿಗೆಗಾಗಿ ಕಳಿಸಲಾಗುವದು. ರಾಷ್ಟ್ರಪತಿಯವರು ಮಸೂದೆಗೆ ಒಪ್ಪಿಗೆ ನೀಡಬಹುದು ಅಥವಾ ನಿಷೇಧಾಧಿಕಾರ (Vetopower) ಚಲಾಯಿಸಬಹುದು ಇಲ್ಲವೇ ಪುನರ್ ಪರಿಶೀಲನೆಗಾಗಿ ಮರಳಿಸಬಹುದು. ಮತ್ತೊಮ್ಮೆ ಎರಡೂ ಸದನಗಳಲ್ಲಿ ಮಸೂದೆ ಪಾಸಾದರೆ ರಾಷ್ಟ್ರಪತಿಯವರು ತಮ್ಮ ಒಪ್ಪಿಗೆ ನೀಡಲೇಬೇಕಾಗುತ್ತದೆ. ರಾಷ್ಟ್ರಪತಿಯವರ ಒಪ್ಪಿಗೆಯೊಂದಿಗೆ ಮಸೂದೆ ಶಾಸನವಾಗುತ್ತದೆ. ಇಲ್ಲಿಗೆ ಕಾನೂನು ರಚನಾ ಪ್ರಕ್ರಿಯೆ ಮುಗಿಯುತ್ತದೆ.

ಖಾಸಗಿ ಸದಸ್ಯರ ಮಸೂದೆಗಳನ್ನು ಶುಕ್ರವಾರ ೨-೩೦ ಗಂಟೆಗೆ ಮಂಡಿಸಲು ಅವಕಾಶ ನೀಡಲಾಗುತ್ತದೆ. ಇಂಥ ಮಸೂದೆಗಳ ಪರಿಶೀಲನೆಗೆ ೧೫ ಸದಸ್ಯರ ಒಂದು ಸದನ ಸಮಿತಿ ಇರುತ್ತದೆ. ಈ ಸಮಿತಿ ಕೂಲಂಕಶ ಅಧ್ಯಯನ ನಡೆಸಿ ಮಸೂದೆ ಮಂಡನೆಗೆ

ಅವಕಾಶ ನೀಡುವ ಬಗ್ಗೆ ತೀರ್ಮಾನಿಸಿ ಅದಕ್ಕಾಗಿ ದಿನಾಂಕವನ್ನು ನಿರ್ಧರಿಸುತ್ತದೆ. ಸರಕಾರಿ ಮಸೂದೆಗಿರುವ ಕಾನೂನು ಪ್ರಕ್ರಿಯೆಯನ್ನೇ ಖಾಸಗಿ ಮಸೂದೆಯ ವಿಷಯದಲ್ಲೂ ಅನುಸರಿಸಲಾಗುತ್ತದೆ.

## ಹಣಕಾಸಿನ ಮಸೂದೆ

ತೆರಿಗೆ ಹಾಕುವದು ಅಥವಾ ರದ್ದು ಪಡಿಸುವದು, ಸಂಚಿತ ನಿಧಿ ಹಾಗೂ ಆಕಸ್ಮಿಕ ನಿಧಿಯಿಂದ ಹಣ ಪಡೆಯುವದು ಹಾಗೂ ಜಮಾ ಮಾಡುವದು, ಸಾರ್ವಜನಿಕ ಸಾಲಕ್ಕೆ ಸಂಬಂಧಿಸಿದ ವಿಷಯಗಳು, ಲೆಕ್ಕಪತ್ರ ನಿರ್ವಹಣೆ, ಕೇಂದ್ರ ಹಾಗೂ ರಾಜ್ಯಗಳ ಲೆಕ್ಕಪತ್ರ ತಪಾಸಣೆ ಮುಂತಾದ ವಿಷಗಳನ್ನೊಳಗೊಂಡ ಮಸೂದೆಗಳನ್ನು ಹಣಕಾಸಿನ ಮಸೂದೆಗಳೆಂದು ಕರೆಯಲಾಗುತ್ತದೆ. ಹಣಕಾಸಿನ ಮಸೂದೆಗಳನ್ನು ಲೋಕಸಭೆಯಲ್ಲೇ ಮೊದಲು ಮಂಡಿಸಬೇಕಾಗುತ್ತದೆ. ರಾಷ್ಟ್ರಪತಿಯವರ ಒಪ್ಪಿಗೆಯೊಂದಿಗೆ ಮಾತ್ರ ಹಣಕಾಸಿನ ಮಸೂದೆಯನ್ನು ಮಂಡಿಸಲು ಅವಕಾಶವಿದೆ. ಲೋಕಸಭೆ ಅನುಮೋದಿಸಿದ ಮಸೂದೆಯನ್ನು ಅಭಿಪ್ರಾಯ ನೀಡಿಕೆಗಾಗಿ ಮಾತ್ರ ರಾಜ್ಯಸಭೆಯಲ್ಲಿ ಮಂಡಿಸಲಾಗುತ್ತದೆ. ಮಂಡನೆಯಾದ ೧೪ ದಿನಗಳೊಳಗಾಗಿ ರಾಜ್ಯಸಭೆ ತನ್ನ ಒಪ್ಪಿಗೆ ಅಥವಾ ಸಲಹೆ ಸೂಚನೆಗಳೊಂದಿಗೆ ಹಣಕಾಸಿನ ಮಸೂದೆಯನ್ನು ಮರಳಿಸಬೇಕು. ೧೪ ದಿನಗಳೊಳಗಾಗಿ ವಾಪಸು ಕಳಿಸದಿದ್ದರೆ ಆ ಮಸೂದೆ ಎರಡೂ ಸದನಗಳ ಅನುಮೋದನೆ ಪಡೆದಿದೆ ಎಂದು ಪರಿಗಣಿಸಲಾಗುವದು. ಹಣಕಾಸಿನ ಮಸೂದೆಯ ವಿಷಯದಲ್ಲಿ ರಾಜ್ಯಸಭೆಗೆ ಯಾವದೇ ಅಧಿಕಾರವಿಲ್ಲ.

## ಮುಂಗಡ ಪತ್ರ

ಪ್ರತಿವರ್ಷ ಹಣಕಾಸಿನ ಇಲಾಖೆ ಸರಕಾರದ ವಿವಿಧ ಇಲಾಖೆಗಳಿಂದ ಆದಾಯ ಮತ್ತು ಖರ್ಚಿನ ಅಂದಾಜುಗಳನ್ನು ಪಡೆಯುತ್ತದೆ. ಅವುಗಳನ್ನು ಪರಿಸೀಲಿಸಿ, ಕ್ರೋಡೀಕರಿಸಿ ಸರಕಾರದ ಮುಂದಿನ ವರ್ಷದ ಆದಾಯ ಮತ್ತು ಖರ್ಚಿನ ಅಂದಾಜುಗಳನ್ನು ತಯಾರಿಸುತ್ತದೆ. ಅದನ್ನೇ ಮುಂಗಡ ಪತ್ರ ಅಥವಾ ಅಂದಾಜು ಪತ್ರಿಕೆ ಎಂದು ಕರೆಯಲಾಗುತ್ತದೆ. ಭಾರತದಲ್ಲಿ ಎಪ್ರಿಲ್ ೧ ರಿಂದ ಮಾರ್ಚ್ ೩೧ ರ ವರೆಗಿನ ಅವಧಿಯು ಹಣಕಾಸಿನ ವರ್ಷವಾಗಿದೆ.ಹೊಸ ಹಣಕಾಸಿನ ವರ್ಷ ಪ್ರಾರಂಭವಾಗುವ ಮೊದಲೇ ಮುಂಗಡ ಪತ್ರಕ್ಕೆ ಸಂಸತ್ತಿನ ಒಪ್ಪಿಗೆ ಪಡೆದುಕೊಳ್ಳಬೇಕಾಗುತ್ತದೆ.

ಸರಕಾರದ ಆದಾಯ ಮತ್ತು ಖರ್ಚುಗಳ ಬಗ್ಗೆ ಪ್ರಧಾನಿಯೊಂದಿಗೆ ಚರ್ಚಿಸಿದ ನಂತರ ಹಣಕಾಸಿನಮಂತ್ರಿ, ಸರಕಾರದ ಹಣಕಾಸಿನ ನೀತಿಯನ್ನು ತಯಾರಿಸುತ್ತಾನೆ. ಅದನ್ನು ಫೆಬ್ರುವರಿ ತಿಂಗಳ ಕೊನೆಯ ದಿನ ಸಂಸತ್ತಿನಲ್ಲಿ ಮಂಡಿಸಲಾಗುವದು. ಪ್ರತಿಯೊಂದು ಇಲಾಖೆಯು ತನ್ನ ವಾರ್ಷಿಕ ಆಯವ್ಯಯ ಪಟ್ಟಿಯನ್ನು ಹಣಕಾಸಿನ

ಮಂತ್ರಿಯ ಮೂಲಕ ಸಂಸತ್ತಿನಲ್ಲಿ ಮಂಡಿಸಿ ಅನುಮೋದನೆ ಪಡೆಯಬೇಕಾಗುತ್ತದೆ. ಸಂಸತ್ತಿನ ಒಪ್ಪಿಗೆ ಇಲ್ಲದೇ ಯಾವದೇ ಇಲಾಖೆ ತೆರಿಗೆ ಸಂಗ್ರಹಿಸುವಂತಿಲ್ಲ, ಹಾಗೂ ಸಂಗ್ರಹಿಸಿದ ಹಣ ಖರ್ಚುಮಾಡುವಂತಿಲ್ಲ. ಎಪ್ರಿಲ್ ಒಂದರಂದು ಹೊಸ ಹಣಕಾಸಿನ ವರ್ಷ ಪ್ರಾರಂಭವಾಗುವದರಿಂದ ಅದಕ್ಕೆ ಮೊದಲು ಸಂಸತ್ತಿನ ಅನುಮತಿ ಪಡೆಯ ಬೇಕಾಗುತ್ತದೆ. ರೇಲ್ವೆ ಮುಂಗಡ ಪತ್ರವನ್ನು ರೇಲ್ವೆ ಮಂತ್ರಿ ಮಂಡಿಸಿದರೆ ಸಾಮಾನ್ಯ ಮುಂಗಡ ಪತ್ರವನ್ನು ಹಣಕಾಸಿನ ಮಂತ್ರಿ ಮಂಡಿಸುತ್ತಾನೆ.

ಸಂಚಿತ ನಿಧಿಯಿಂದ ಪಡೆಯುವ ಹಣದ ಬಗ್ಗೆ ಸಂಸತ್ತು ಚರ್ಚೆ ನಡೆಸಬಹುದೇ ಹೊರತು, ಅದರ ಬಗ್ಗೆ ಮತದಾನ ನಡೆಸುವಂತಿಲ್ಲ. ರಾಷ್ಟ್ರಪತಿ, ಲೋಕಸಭೆ ಹಾಗೂ ರಾಜ್ಯಸಭೆಯ ಪದಾಧಿಕಾರಿಗಳು, ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳ ನ್ಯಾಯಾಧೀಶರು, ಚುನಾವಣಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರು, ಕಂಪ್ಟ್ರೋಲರ್ ಹಾಗೂ ಆಡಿಟರ್ ಜನರಲ್ ಮುಂತಾದವರ ವೇತನ, ಹಾಗೂ ಭತ್ಯೆಗಳು ಸಂಚಿತ ನಿಧಿಯಿಂದ ಪಡೆಯುವಂಥವುಗಳಾಗಿವೆ.

## ಆ. ರಾಜ್ಯ ಶಾಸಕಾಂಗ

ಭಾರತ ಒಕ್ಕೂಟ ವ್ಯವಸ್ಥೆಯನ್ನು ಹೊಂದಿದ ರಾಜ್ಯವಾಗಿದೆ. ಕೇಂದ್ರ ಹಾಗೂ ರಾಜ್ಯಗಳ ನಡುವಿನ ಅಧಿಕಾರ ಹಂಚಿಕೆಯ ಆಧಾರದ ಮೇಲೆ ಒಕ್ಕೂಟ ವ್ಯವಸ್ಥೆ ಕಾರ್ಯ ನಿರ್ವಹಿಸುತ್ತದೆ. ಶಾಸನೀಯ ಕಾರ್ಯನಿರ್ವಹಣೆಗಾಗಿ ಕೇಂದ್ರದಲ್ಲಿ ಸಂಸತ್ತು ಇರುವ ಹಾಗೆ ರಾಜ್ಯಗಳಲ್ಲಿ ವಿಧಾನಮಂಡಲಗಳಿವೆ. ಕೆಲವು ರಾಜ್ಯಗಳಲ್ಲಿ ದ್ವಿಸದನ ಶಾಸನಾಂಗಗಳಿವೆ. ಉದಾ :- ಆಂಧ್ರ ಪ್ರದೇಶ, ಬಿಹಾರ, ಜಮ್ಮು ಕಾಶ್ಮೀರ, ಕರ್ನಾಟಕ, ಮಹಾರಾಷ್ಟ್ರ ಹಾಗೂ ಉತ್ತರ ಪ್ರದೇಶಗಳಲ್ಲಿ ದ್ವಿಸದನ ಶಾಸಕಾಂಗ ಅಸ್ತಿತ್ವದಲ್ಲಿದೆ. ಉಳಿದ ರಾಜ್ಯಗಳಲ್ಲಿ ಏಕ ಸದನ ಶಾಸನಾಂಗವಿದೆ.

ಏಕ ಸದನ ಶಾಸನಾಂಗ ಹೊಂದಿದ ರಾಜ್ಯಗಳಲ್ಲಿ ವಿಧಾನ ಸಭೆ ಅಸ್ತಿತ್ವದಲ್ಲಿರುತ್ತದೆ. ದ್ವಿಸದನ ಶಾಸಕಾಂಗ ಇರುವ ರಾಜ್ಯಗಳಲ್ಲಿ ಕೆಳಮನೆಯಾಗಿ ವಿಧಾನ ಸಭೆ ಹಾಗೂ ಮೇಲ್ಮನೆಯಾಗಿ ವಿಧಾನಪರಿಷತ್ತು ಕಾರ್ಯ ನಿರ್ವಹಿಸುತ್ತವೆ. ವಿಧಾನಸಭೆಗೆ ಪ್ರತಿನಿಧಿ ಸದನವೆಂದು ಹಾಗೂ ವಿಧಾನಪರಿಷತ್ತಿಗೆ ದ್ವಿತೀಯ ಸದನವೆಂದು ಅಥವಾ ಹಿರಿಯರ ಸದನವೆಂದು ಕರೆಯಲಾಗುತ್ತದೆ.ಈ ಎರಡು ಸದನಗಳ ಪೈಕಿ ಜನರನ್ನು ನೇರವಾಗಿ ಪ್ರತಿನಿಧಿಸುವ ವಿಧಾನಸಭೆ ಅತ್ಯಂತ ಪ್ರಭಾವಶಾಲಿ ಹಾಗೂ ಅಧಿಕಾರ ಸಂಪನ್ನ ಸದನವಾಗಿದೆ. ವಿಧಾನಪರಿಷತ್ತು ಅಷ್ಟೊಂದು ಅಧಿಕಾರಗಳನ್ನು ಹೊಂದಿಲ್ಲ. ಅದು ಕೇವಲ ಭೂಷಣಪ್ರಾಯವಾಗಿದೆ.

## ✷ ವಿಧಾನಸಭೆ

ರಾಜ್ಯ ವಿಧಾನಸಭೆಯು ಕನಿಷ್ಟ ೬೦ ಹಾಗೂ ಗರಿಷ್ಠ ೫೦೦ ಸದಸ್ಯರನ್ನು ಹೊಂದಿರುತ್ತದೆ. ವಿಧಾನಸಭೆಯ ಸದಸ್ಯರು ಪ್ರೌಢ ಮತದಾನ ಪದ್ಧತಿಯ ಮೂಲಕ ಜನರಿಂದ ನೇರ ಚುನಾವಣೆಯಲ್ಲಿ ಆಯ್ಕೆಯಾಗುತ್ತಾರೆ. ವಿಧಾನಸಭಾ ಸದಸ್ಯರು ೧ ಲಕ್ಷಕ್ಕಿಂತ ಹೆಚ್ಚು ಮತದಾರರನ್ನು ಪ್ರತಿನಿಧಿಸುತ್ತಾರೆ. ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡಗಳಿಗೆ ಜನಸಂಖ್ಯೆಯ ಆಧಾರದ ಮೇಲೆ ಸೂಕ್ತ ಪ್ರಾತಿ-ನಿಧ್ಯವಿರುತ್ತದೆ. ಆಂಗ್ಲೋ ಇಂಡಿಯನ್ನರು ವಾಸಿಸುವ ರಾಜ್ಯಗಳಲ್ಲಿ ಅವರಿಗೆ ಪ್ರಾತಿನಿಧ್ಯವಿಲ್ಲದಿದ್ದರೆ ಒಬ್ಬರು ಅಥವಾ ಇಬ್ಬರು ಆಂಗ್ಲೋ ಇಂಡಿಯನ್ನರನ್ನು ರಾಜ್ಯಪಾಲರು ನಾಮಕರಣ ಮಾಡುತ್ತಾರೆ ಉದಾ :- ಕರ್ನಾಟಕದ ೧೧ ನೇ ವಿಧಾನ ಸಭೆಯಲ್ಲಿ ಖ್ಯಾತ ಕ್ರಿಕೆಟ್ ಪಟು ರೋಜರ್ ಬಿನ್ನಿ ಅವರನ್ನು ರಾಜ್ಯಪಾಲರು ನಾಮಕರಣ ಮಾಡಿದ್ದರು.

### ಅರ್ಹತೆಗಳು

ರಾಜ್ಯ ವಿಧಾನಸಭಾ ಸದಸ್ಯನಾಗಬಯಸುವ ವ್ಯಕ್ತಿ ಕೆಳಗಿನ ಅರ್ಹತೆಗಳನ್ನು ಹೊಂದಿರಬೇಕು.

೧. ಭಾರತದ ಪ್ರಜೆಯಾಗಿರಬೇಕು.
೨. ಕನಿಷ್ಠ ೨೫ ವರ್ಷ ವಯಸ್ಸಾಗಿರಬೇಕು.
೩. ಸಂಸತ್ತು ಕಾಲ ಕಾಲಕ್ಕೆ ನಿಗದಿಪಡಿಸುವ ಅರ್ಹತೆ ಹೊಂದಿರಬೇಕು.

### ಅನರ್ಹತೆಗಳು

೧. ಕೇಂದ್ರ, ರಾಜ್ಯ ಅಥವಾ ಸ್ಥಾನಿಕ ಸಂಸ್ಥೆಗಳಲ್ಲಿ ಲಾಭದಾಯಕ ಹುದ್ದೆ ಹೊಂದುವದು,
೨. ಬುದ್ಧಿ ಭ್ರಮಣೆ ಹೊಂದಿದವನೆಂದು ಅಥವಾ ದಿವಾಳಿ ತೆಗೆದವನೆಂದು ನ್ಯಾಯಾಲಯದಿಂದ ಘೋಷಿಸಲ್ಪಡುವದು,
೩. ಚುನಾವಣಾ ಅವ್ಯವಹಾರ ಮಾಡಿದ ಬಗ್ಗೆ ನ್ಯಾಯಾಲಯ ತೀರ್ಮಾನ ಮಾಡುವದು.
೪. ಯಾವದೇ ಅಪರಾಧಕ್ಕಾಗಿ ಕನಿಷ್ಠ ಎರಡು ವರ್ಷಗಳ ಜೇಲು ಶಿಕ್ಷೆ ಅನುಭವಿಸುವದು.
೫. ಚುನಾವಣಾ ಖರ್ಚು ವೆಚ್ಚದ ವಿವರಗಳನ್ನು ಚುನಾವಣಾ ಆಯೋಗಕ್ಕೆ ಸಲ್ಲಿಸಿರದಿರುವದು.
೬. ಭ್ರಷ್ಟಾಚಾರ ಅಥವಾ ಅವಿಧೇಯತೆಗಾಗಿ ಸರಕಾರಿ ಹುದ್ದೆಯಿಂದ ವಜಾ ಆಗುವದು.

## ರಾಜ್ಯವಾರು ವಿಧಾನ ಸಭಾ ಸದಸ್ಯರ ಸಂಖ್ಯೆ

| ಅ ನಂ. | ರಾಜ್ಯದ ಹೆಸರು | ಸದಸ್ಯರ ಸಂಖ್ಯೆ | ನಾಮಕರಣ ಸದಸ್ಯರು |
|---|---|---|---|
| ೧ | ಆಂಧ್ರ ಪ್ರದೇಶ | ೨೯೪ | ೧ |
| ೨ | ಅರುಣಾಚಲ ಪ್ರದೇಶ | ೪೦ | |
| ೩ | ಅಸ್ಸಾಂ | ೧೨೬ | |
| ೪ | ಬಿಹಾರ | ೨೪೩ | ೧ |
| ೫ | ಛತ್ತೀಸಗಡ | ೯೦ | |
| ೬ | ಗೋವಾ | ೪೦ | |
| ೭ | ಗುಜರಾತ | ೧೮೨ | |
| ೮ | ಹರಿಯಾಣಾ | ೯೦ | |
| ೯ | ಹಿಮಾಚಲ ಪ್ರದೇಶ | ೬೮ | |
| ೧೦ | ಜಮ್ಮು ಕಾಶ್ಮೀರ | ೭೬ | |
| ೧೧ | ಝಾರಖಂಡ | ೮೧ | |
| ೧೨ | ಕರ್ನಾಟಕ | ೨೨೪ | ೧ |
| ೧೩ | ಕೇರಳ | ೧೪೦ | ೧ |
| ೧೪ | ಮಧ್ಯ ಪ್ರದೇಶ | ೨೩೦ | ೧ |
| ೧೫ | ಮಹಾರಾಷ್ಟ್ರ | ೨೮೮ | ೧ |
| ೧೬ | ಮಣಿಪುರ | ೬೦ | |
| ೧೭ | ಮೇಘಾಲಯ | ೬೦ | |
| ೧೮ | ಮಿಝೋರಾಮ್ | ೪೦ | |
| ೧೯ | ನಾಗಾಲ್ಯಾಂಡ್ | ೬೦ | |
| ೨೦ | ಒರಿಸ್ಸಾ | ೧೪೭ | |
| ೨೧ | ಪಂಜಾಬ | ೧೧೭ | |
| ೨೨ | ರಾಜಸ್ಥಾನ | ೨೦೦ | |
| ೨೩ | ಸಿಕ್ಕಿಂ | ೩೨ | |
| ೨೪ | ತಮಿಳು ನಾಡು | ೨೩೪ | ೧ |
| ೨೫ | ತ್ರಿಪುರಾ | ೬೦ | |
| ೨೬ | ಉತ್ತರಾಂಚಲ | ೭೦ | |
| ೨೭ | ಉತ್ತರ ಪ್ರದೇಶ | ೪೦೩ | ೧ |
| ೨೮ | ಪಶ್ಚಿಮ ಬಂಗಾಳ | ೨೯೪ | ೧ |

ಯಾವುದೇ ಒಬ್ಬ ವ್ಯಕ್ತಿ ಎರಡೂ ಸದನಗಳಿಗೆ ಆಯ್ಕೆಯಾಗಿದ್ದರೆ ಒಂದು ಸದನದ ಸದಸ್ಯತ್ವಕ್ಕೆ ರಾಜೀನಾಮೆ ನೀಡಬೇಕಾಗುತ್ತದೆ. ಉದಾ :- ಎಂ. ಪಿ. ಪ್ರಕಾಶ ಹಾಗೂ ಬಿ.ಎಸ್.ಯಡೆಯೂರಪ್ಪ ವಿಧಾನಪರಿಷತ್ತಿನ ಸದಸ್ಯರಾಗಿದ್ದುಕೊಂಡು ಕರ್ನಾಟಕದ ೧೨ ನೇ ವಿಧಾನಸಭೆಗೆ ಆಯ್ಕೆಯಾಗಿದ್ದರಿಂದ ಪರಿಷತ್ತಿನ ಸದಸ್ಯತ್ವ ತ್ಯಜಿಸಬೇಕಾಯಿತು.

ಅಧಿವೇಶನ ನಡೆದಾಗ ಸತತ ೬೦ ದಿನಗಳವರೆಗೆ ಸದನದ ಅನುಮತಿ ಇಲ್ಲದೇ ಗೈರು ಹಾಜರಾಗುವ ಸದಸ್ಯರು ತಮ್ಮ ಸ್ಥಾನ ಕಳೆದುಕೊಳ್ಳುತ್ತಾರೆ. ಸ್ವಇಚ್ಛೆಯಿಂದ ಸದಸ್ಯತ್ವಕ್ಕೆ ರಾಜೀನಾಮೆ ಕೊಡುವದಿದ್ದಲ್ಲಿ ವಿಧಾನ ಸಭಾಧ್ಯಕ್ಷರಿಗೆ ರಾಜೀನಾಮೆ ಪತ್ರ ಸಲ್ಲಿಸಬೇಕು.

## ಕಾರ್ಯಾವಧಿ

ವಿಧಾನಸಭೆಯ ಸದಸ್ಯರ ಅವಧಿ ೫ ವರ್ಷಗಳು. ಅವಧಿ ಮುಗಿಯುವ ಪೂರ್ವದಲ್ಲೇ ರಾಜ್ಯಪಾಲರು ಸದನವನ್ನು ವಿಸರ್ಜಿಸಬಹುದು. ತುರ್ತು ಪರಿಸ್ಥಿತಿಯ ಸಮಯದಲ್ಲಿ ಸದನದ ಅವಧಿಯನ್ನು ಒಂದು ಸಲಕ್ಕೆ ಒಂದು ವರ್ಷದಂತೆ ವಿಸ್ತರಿಸಬಹುದು. ತುರ್ತು ಪರಿಸ್ಥಿತಿ ಕೊನೆಗೊಂಡ ಆರು ತಿಂಗಳ ಅವಧಿಯೊಳಗಾಗಿ ವಿಧಾನಸಭೆಯನ್ನು ವಿಸರ್ಜಿಸಿ ಹೊಸ ವಿಧಾನಸಭೆಯ ಆಯ್ಕೆಯಾಗಿ ಚುನಾವಣೆ ನಡೆಸಬೇಕಾಗುತ್ತದೆ.

## ವೇತನ ಹಾಗೂ ಇತರ ಸೌಲಭ್ಯಗಳು

ರಾಜ್ಯ ವಿಧಾನ ಮಂಡಲ ಕಾಲ ಕಾಲಕ್ಕೆ ಗೊತ್ತು ಪಡಿಸುವ ವೇತನ ಹಾಗೂ ಭತ್ಯೆಗಳನ್ನು ಸದಸ್ಯರು ಪಡೆಯುತ್ತಾರೆ.

## ಅಧಿವೇಶನಗಳು

ಸಂವಿಧಾನದ ಪ್ರಕಾರ ವರ್ಷದಲ್ಲಿಕನಿಷ್ಠಎರಡು ಅಧಿವೇಶನಗಳನ್ನು ನಡೆಸಬೇಕು. ಎರಡು ಅಧಿವೇಶನಗಳ ನಡುವಿನ ಅಂತರ 6 ತಿಂಗಳಿಗಿಂತ ಹೆಚ್ಚಾಗಬಾರದು. ಸಾಮಾನ್ಯವಾಗಿ ವರ್ಷದಲ್ಲಿ ಮೂರು ಅಧಿವೇಶನಗಳನ್ನು ನಡೆಸಲಾಗುತ್ತದೆ. ಅಧಿವೇಶನದ ಸಂದರ್ಭದಲ್ಲಿ ಸದನದ ಕಲಾಪ ಪ್ರಾರಂಭವಾಗುವ ಮೊದಲು ಸದಸ್ಯರು ಸದನದಲ್ಲಿರಿಸಿದ ಹಾಜರಿ ಪುಸ್ತಕದಲ್ಲಿ ಸಹಿ ಮಾಡಬೇಕು. ಕಲಾಪಗಳನ್ನು ನಡೆಸಲು ಕನಿಷ್ಠ ೧/೧೦ ಸದಸ್ಯರು ಅಥವಾ ೧೦ ಜನ ಸದಸ್ಯರು,ಇದರಲ್ಲಿ ಯಾವದು ಹೆಚ್ಚೋ ಅಷ್ಟು ಸದಸ್ಯರ ಹಾಜರಾತಿ ಅಗತ್ಯ.

## ವಿಧಾನಸಭಾಧ್ಯಕ್ಷ

ವಿಧಾನಸಭೆಯ ಕಲಾಪಗಳನ್ನು ಸುಗಮವಾಗಿ ನಡೆಸಿಕೊಂಡು ಹೋಗುವ ಸಲುವಾಗಿ ಸಭಾಧ್ಯಕ್ಷನಿರುತ್ತಾನೆ. ಸದನದ ಹಕ್ಕು ಬಾಧ್ಯತೆಗಳನ್ನು ರಕ್ಷಿಸುವ ಹೊಣೆ ಸಭಾಧ್ಯಕ್ಷರದು. ಸದನದ ಗೌರವದ ಪ್ರತೀಕವಾದ ಸಭಾಧ್ಯಕ್ಷರ ಸ್ಥಾನಕ್ಕೆ ನೂತನ ವಿಧಾನ ಸಭೆಯ ಮೊದಲ ಅಧಿವೇಶನದಲ್ಲಿ ಸದಸ್ಯರು ತಮ್ಮಲ್ಲೇ ಒಬ್ಬರನ್ನು ಆಯ್ಕೆ ಮಾಡುತ್ತಾರೆ. ಸದನದ ಕಲಾಪಗಳನ್ನು ಸುಸೂತ್ರವಾಗಿ, ಗಂಭೀರವಾಗಿ, ಕ್ರಮಬದ್ಧವಾಗಿ ಹಾಗೂ ಗೌರವಯುತವಾಗಿ ನಡೆಸಿಕೊಂಡು ಹೋಗುವ ಜವಾಬ್ದಾರಿ ಸಭಾಧ್ಯಕ್ಷರ-ದಾಗಿದೆ. ಲೋಕಸಭಾಧ್ಯಕ್ಷರಿಗಿರುವ ಅಧಿಕಾರ, ಗೌರವ ಹಾಗೂ ಕಾರ್ಯಗಳನ್ನು ವಿಧಾನ ಸಭಾಧ್ಯಕ್ಷರು ನೆರವೇರಿಸುತ್ತಾನೆ.

ರಾಜ್ಯ ಶಾಸನಾಂಗವು ಕಾಲಕಾಲಕ್ಕೆ ನಿರ್ಧರಿಸುವ ವೇತನ ಹಾಗೂ ಇತರ ಸೌಲಭ್ಯಗಳನ್ನು ಸಭಾಧ್ಯಕ್ಷರು ಪಡೆಯುತ್ತಾರೆ. ಸಭಾಧ್ಯಕ್ಷನ ಅನುಪಸ್ಥಿತಿಯಲ್ಲಿ ಸದನದ ಅಧ್ಯಕ್ಷತೆ ವಹಿಸಿಕೊಳ್ಳವದಕ್ಕಾಗಿ ಸದಸ್ಯರು ತಮ್ಮಲ್ಲಿ ಒಬ್ಬರನ್ನು ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡುತ್ತಾರೆ. ಇವರಿಬ್ಬರ ಅನುಪಸ್ಥಿತಿಯಲ್ಲಿ ಕಾರ್ಯ ನಿರ್ವಹಿಸುವದಕ್ಕಾಗಿ ಆರು ಜನರ ಪಟ್ಟಿಯನ್ನು ಸಭಾಧ್ಯಕ್ಷರು ತಯಾರಿಸಿರುತ್ತಾರೆ.

## ಸಭಾಧ್ಯಕ್ಷರ ಕಾರ್ಯಗಳು

ಸಭಾಧ್ಯಕ್ಷರು ಕೆಳಗಿನ ಕಾರ್ಯಗಳನ್ನು (ಅಧಿಕಾರಗಳನ್ನು) ನಿರ್ವಹಿಸುತ್ತಾರೆ.

೧. ಮಸೂದೆಯೊಂದು ಹಣಕಾಸಿನ ಮಸೂದೆಯೇ ಹೇಗೆಂಬುದನ್ನು ನಿರ್ಧರಿಸುವದು.
೨. ಸದನದ ನಿಯಮಾವಳಿಗಳು ಹಾಗೂ ಕಾರ್ಯ ನಿರ್ವಹಣೆಯ ವಿಶ್ಲೇಷಣೆ ಮಾಡುವದು.
೩. ಸದನದಲ್ಲಿ ಸದಸ್ಯರಿಗೆ ಮಾತನಾಡಲು ಅವಕಾಶ ಒದಗಿಸಿಕೊಡುವದು ಹಾಗೂ ಸಮಯ ನಿಗದಿ ಪಡಿಸುವದು.
೪. ರಾಜ್ಯಪಾಲರಿಂದ ಬಂದ ಸಂದೇಶಗಳನ್ನು ಸದನದ ಗಮನಕ್ಕೆ ತರುವದು.
೫. ಸದನದ ಪರವಾಗಿ ಆದೇಶ ಹೊರಡಿಸುವದು.

ಸಭಾಧ್ಯಕ್ಷರ ನಿರ್ಣಯಗಳನ್ನು ಯಾರೂ ಪ್ರಶ್ನಿಸುವಂತಿಲ್ಲ. ನ್ಯಾಯಾಲಯಗಳು ಕೂಡಾ ಆ ಬಗ್ಗೆ ವಿಚಾರಣೆ ನಡೆಸುವಂತಿಲ್ಲ. ಸದನದಲ್ಲಿ ಮತದಾನ ನಡೆದಾಗ ಸಭಾಧ್ಯಕ್ಷರು ಅದರಲ್ಲಿ ಭಾಗವಹಿಸುವಂತಿಲ್ಲ. ವಿಷಯದ ಪರ ಹಾಗೂ ವಿರೋಧವಾಗಿ ಸಮಾನ ಮತಗಳು ಬಂದಾಗ ಮಾತ್ರ ನಿರ್ಣಾಯಕ ಮತ ಚಲಾಯಿಸುತ್ತಾರೆ.

## ✸ ವಿಧಾನಸಭೆಯ ಕಾರ್ಯಗಳು

**೧. ಶಾಸನೀಯ ಕಾರ್ಯಗಳು :-** ಕಾನೂನು ರಚನೆ ಮಾಡುವದು ಶಾಸನಾಂಗದ ಅತ್ಯಂತ ಮಹತ್ವದ ಕಾರ್ಯವಾಗಿದೆ. ಈ ಕಾರ್ಯದಲ್ಲಿ ವಿಧಾನ ಸಭೆ ಹೆಚ್ಚಿನ ಪಾತ್ರ ವಹಿಸುತ್ತದೆ. ಕಾನೂನು ರಚನೆಗಾಗಿ ಮಸೂದೆಯನ್ನು ಯಾವದೇ ಸದನದಲ್ಲಿ ಮೊದಲು ಮಂಡಿಸಬಹುದು. ಆದರೆ ವಿಧಾನಸಭೆಯ ಒಪ್ಪಿಗೆ ಇಲ್ಲದೇ ಮಸೂದೆ ಶಾಸನವಾಗಲಾರದು.

ರಾಜ್ಯ ಪಟ್ಟಿ ಹಾಗೂ ಸಮವರ್ತಿ ಪಟ್ಟಿಯಲ್ಲಿರುವ ವಿಷಯಗಳ ಬಗ್ಗೆ ಕಾನೂನು ರಚಿಸುವ ಅಧಿಕಾರ ರಾಜ್ಯಶಾಸನಾಂಗಕ್ಕಿದೆ. ಆದರೆ ಸಮವರ್ತಿ ಪಟ್ಟಿಯಲ್ಲಿರುವ ವಿಷಯವೊಂದರ ಬಗ್ಗೆ ಸಂಸತ್ತು ಹಾಗೂ ರಾಜ್ಯಶಾಸನಾಂಗ ಕಾನೂನು ರಚಿಸಿದರೆ ಸಂಸತ್ತಿನ ಕಾನೂನು ಮೇಲುಗೈ ಸಾಧಿಸುತ್ತದೆ. ಸಂಸತ್ತಿನ ಕಾನೂನಿಗೆ ವಿರುದ್ಧವಾಗಿರುವ ರಾಜ್ಯಕಾನೂನಿನ ಅಂಶ ರದ್ದಾಗುತ್ತದೆ.ಕೆಲವು ವಿಷಯಗಳ ಬಗ್ಗೆ ರಾಷ್ಟ್ರಪತಿಯವರ ಅನುಮತಿಯೊಡನೆ ಕಾನೂನು ರಚಿಸಬೇಕಾಗುತ್ತದೆ. ಇನ್ನು ಕೆಲ ವಿಷಯಗಳ ಬಗ್ಗೆ ಪಾಸುಮಾಡಿದ ಮಸೂದೆಗೆ ರಾಷ್ಟ್ರಪತಿಯವರ ಅನುಮೋದನೆ ಅವಶ್ಯವಾಗಿದೆ. ತುರ್ತು ಪರಿಸ್ಥಿತಿಯ ಸಮಯದಲ್ಲಿ ರಾಜ್ಯ ಪಟ್ಟಿಯಲ್ಲಿರುವ ವಿಷಯದ ಬಗ್ಗೆ ಸಂಸತ್ತಿಗೆ ಕಾನೂನು ರಚಿಸುವ ಅಧಿಕಾರವಿದೆ.

**೨. ಹಣಕಾಸಿನ ಕಾರ್ಯಗಳು :-** ರಾಜ್ಯ ಸರಕಾರದ ಹಣಕಾಸಿನ ವ್ಯವಹಾರಗಳು ವಿಧಾನ ಸಭೆಯ ನಿಯಂತ್ರಣಕ್ಕೊಳಪಟ್ಟಿರುತ್ತವೆ. ವಿಧಾನಸಭೆಯ ಒಪ್ಪಿಗೆ ದೊರೆತರೆ ಮಾತ್ರ ಸರಕಾರ ಜನರಿಂದ ತೆರಿಗೆ ವಸೂಲು ಮಾಡಲು ಮತ್ತು ವಸೂಲಾದ ಹಣವನ್ನು ಖರ್ಚು ಮಾಡಲು ಅಧಿಕಾರ ದೊರೆಯುತ್ತದೆ. ಹಣಕಾಸಿನ ಮಸೂದೆ ವಿಧಾನ ಸಭೆಯಲ್ಲಿ ಮೊದಲು ಮಂಡಿಸಲ್ಪಡುತ್ತದೆ. ಮುಂಗಡಪತ್ರ ಮಂಡನೆಯಾದಾಗ ವಿವಿಧ ಇಲಾಖೆಗಳ ಹಣದ ಬೇಡಿಕೆ ಕುರಿತು ಚರ್ಚಿಸಿ ಮಂಜೂರಿ ನೀಡುವ ಅಥವಾ ನಿರಾಕರಿಸುವ ಅಧಿಕಾರ ವಿಧಾನ ಸಭೆಗಿದೆ. ಹಣಕಾಸಿನ ವಿಷಯದಲ್ಲಿ ವಿಧಾನ ಪರಿಷತ್ತು ದುರ್ಬಲ ಸದನವಾಗಿದೆ.

**೩. ಆಡಳಿತ ಕಾರ್ಯಗಳು :-** ಸರಕಾರದ ಆಡಳಿತ ನಡೆಸುವ ಅಧಿಕಾರ ರಾಜಕೀಯ ಕಾರ್ಯಾಂಗಕ್ಕೆ ಅಂದರೆ ಮಂತ್ರಿಮಂಡಲಕ್ಕೆ ಸೇರಿದೆ. ಮಂತ್ರಿ ಮಂಡಲವು ವಿಧಾನ ಸಭೆಯಿಂದ ನಿರ್ಮಿಸಲ್ಪಟ್ಟಿರುತ್ತದೆ. ವಿಧಾನಸಭೆಯಲ್ಲಿ ಬಹುಮತದ ಬೆಂಬಲವಿರುವ ವರೆಗೆ ಅಧಿಕಾರದಲ್ಲಿ ಮುಂದುವರೆಯುತ್ತದೆ. ಮಂತ್ರಿ ಮಂಡಲದ ಮೂಲಕ ವಿಧಾನ ಸಭೆ ಆಡಳಿತ ಕಾರ್ಯದಲ್ಲಿ ಭಾಗವಹಿಸುತ್ತದೆ.

ಪ್ರಶ್ನೋತ್ತರ ವೇಳೆ, ನಿಲುವಳಿ ಸೂಚನೆ, ಶೂನ್ಯ ವೇಳೆ, ಕಡಿತದ ಸೂಚನೆ, ಗಮನ ಸೆಳೆಯುವ ಸೂಚನೆ ಮುಂತಾದವುಗಳ ಮೂಲಕ ಸದಸ್ಯರು ಸರಕಾರದ

ಆಡಳಿತದ ಬಗ್ಗೆ ಮಾಹಿತಿ ಪಡೆಯಲು ಸಾಧ್ಯವಾಗುತ್ತದೆ. ಆಡಳಿತದ ಲೋಪದೋಷಗಳನ್ನು ಬಯಲಿಗೆಳೆಯಲು ಕೂಡಾ ಅವಕಾಶ ವಾಗುತ್ತದೆ. ಸದಸ್ಯರಿಗೆ ಉತ್ತರ ನೀಡುವದಕ್ಕಾಗಿ ಮಂತ್ರಿಗಳು ಪೂರ್ಣತಯಾರಿಯೊಂದಿಗೆ ಸದನಕ್ಕೆ ಬರಬೇಕಾಗುತ್ತದೆ.

**೪. ಚುನಾವಣಾ ಕಾರ್ಯಗಳು :-** ರಾಷ್ಟ್ರಪತಿಯವರ ಆಯ್ಕೆಗಾಗಿ ಒಂದು ''ಚುನಾಯಿತ ಸಮುದಾಯ'' ವಿರುತ್ತದೆ. ಲೋಕಸಭೆ, ರಾಜ್ಯಸಭೆ ಹಾಗೂ ವಿಧಾನ ಸಭೆಯ ಚುನಾಯಿತ ಸದಸ್ಯರು ಅದರ ಸದಸ್ಯರು. ಅಂದರೆ ರಾಷ್ಟ್ರಪತಿಯವರ ಚುನಾವಣೆಯಲ್ಲಿ ವಿಧಾನ ಸಭೆಯ ಚುನಾಯಿತ ಸದಸ್ಯರು ಭಾಗವಹಿಸುತ್ತಾರೆ. ರಾಜ್ಯ ಸಭೆಯ ಸದಸ್ಯರು ರಾಜ್ಯ ವಿಧಾನ ಸಭೆಯಿಂದ ಆಯ್ಕೆಯಾಗುತ್ತಾರೆ. ದ್ವಿಸದನ ಶಾಸನಾಂಗವಿರುವ ರಾಜ್ಯದಲ್ಲಿ ವಿಧಾನ ಸಭೆಯ ಸದಸ್ಯರು ವಿಧಾನಪರಿಷತ್ತಿನ ೧/೩ ಸದಸ್ಯರನ್ನು ಚುನಾಯಿಸುತ್ತಾರೆ. ಮೇಲಿನ ಮೂರೂ ಚುನಾವಣೆಗಳಲ್ಲಿ ಪ್ರಮಾಣಾನುಸಾರ ಪ್ರಾತಿನಿಧ್ಯದ ಆಧಾರದ ಮೇಲೆ ಆಯ್ಕೆ ನಡೆಯುತ್ತದೆ.

**೫. ಸಂವಿಧಾನ ತಿದ್ದುಪಡಿ :-** ಸಂವಿಧಾನದ ತಿದ್ದುಪಡಿಯ ವಿಧಾನಗಳ ಪೈಕಿ ಮೊದಲನೇ ವಿಧಾನದಲ್ಲಿ ವಿಧಾನಸಭೆ ಕೂಡಾ ಭಾಗವಹಿಸುತ್ತದೆ. ಸಂಸತ್ತಿನ ಎರಡೂ ಸದನಗಳಲ್ಲಿ ಹಾಜರಿದ್ದು ಮತ ನೀಡುವವರ ಪೈಕಿ ೨/೩ ಬಹುಮತದಿಂದ ಪಾಸಾದ ತಿದ್ದುಪಡಿ ಮಸೂದೆಗೆ ಅರ್ಧದಷ್ಟು ರಾಜ್ಯ ಶಾಸನಾಂಗಗಳ ಅನುಮೋದನೆ ಅಗತ್ಯವಾಗಿದೆ. ಮಹತ್ವದ ವಿಷಯಗಳಾದ ರಾಷ್ಟ್ರಪತಿಯವರ ಚುನಾವಣೆ ಹಾಗೂ ಚುನಾವಣಾ ವಿಧಾನ, ಕೇಂದ್ರ ಕಾರ್ಯಾಂಗದ ಅಧಿಕಾರ ವ್ಯಾಪ್ತಿ, ಕೇಂದ್ರ ರಾಜ್ಯಗಳ ನಡುವೆ ಅಧಿಕಾರದ ಹಂಚಿಕೆ ಮುಂತಾದ ವಿಷಯಗಳ ತಿದ್ದುಪಡಿಗೆ ಈ ವಿಧಾನ ಅನ್ವಯಿಸಲ್ಪಡುತ್ತದೆ.

## * ವಿಧಾನ ಪರಿಷತ್ತು

ರಾಜ್ಯ ಶಾಸನಾಂಗದ ಮೇಲ್ಮನೆಗೆ ವಿಧಾನ ಪರಿಷತ್ತು ಎಂದು ಕರೆತಲಾಗುತ್ತದೆ. ಸಂವಿಧಾನ ರಚನಾ ಸಭೆಯಲ್ಲಿ ವಿಧಾನ ಪರಿಷತ್ತಿನ ಉಪಯುಕ್ತತೆಯ ಬಗ್ಗೆ ನಿರುತ್ತೇಜಕ ಪ್ರತಿಕ್ರಿಯೆಗಳೇ ಬಂದವು. ಪರಿಷತ್ತು ಅನಗತ್ಯ ಹಾಗೂ ವೆಚ್ಚದಾಯಕ ಸದನವೆಂದು ಪ್ರತಿಪಾದಿಸಲಾಯಿತು. ಆದರೂ ಆರು ರಾಜ್ಯಗಳಲ್ಲಿ ವಿಧಾನ ಪರಿಷತ್ತುಗಳನ್ನು ನಿರ್ಮಿಸಲಾಗಿದೆ. ಸಮಾಜದ ವಿವಿಧ ವರ್ಗಗಳಿಗೆ ಪ್ರಾತಿನಿಧ್ಯ ನೀಡುವದಕ್ಕಾಗಿ ಮೇಲ್ಮನೆ ರಚಿಸಲಾಗಿದೆ.

**ರಚನೆ :-** ರಾಜ್ಯ ಶಾಸನಾಂಗದ ಮೇಲ್ಮನೆಗೆ ವಿಧಾನ ಪರಿಷತ್ತು ಎಂದು ಹೆಸರಿಸಲಾಗಿದೆ. ಇದಕ್ಕೆ ಹಿರಿಯರ ಸದನ ಅಥವಾ ಅನುಭವಿಗಳ ಸದನವೆಂದೂ ಕರೆಯಲಾಗುತ್ತದೆ.

ವಿಧಾನ ಪರಿಷತ್ತಿನ ಸದಸ್ಯರ ಸಂಖ್ಯೆ ೪೦ ಕ್ಕಿಂತ ಕಡಿಮೆ ಇರಕೂಡದು ಹಾಗೂ ಸಂಬಂಧಿಸಿದ ರಾಜ್ಯ ವಿಧಾನಸಭೆಯ ಸದಸ್ಯರ ೧/೩ ಕ್ಕಿಂತ ಹೆಚ್ಚಿಗೆ ಇರಕೂಡದೆಂದು ಸಂವಿಧಾನ ವಿಧಿಸುತ್ತದೆ. ಪರಿಷತ್ತಿನ ರಚನೆ ವೈವಿಧ್ಯಮಯವಾಗಿದ್ದು ಕೆಳಗೆ ವಿವರಿಸಿದ ರೀತಿಯಲ್ಲಿ ಸದಸ್ಯರನ್ನು ಆಯ್ಕೆ ಮಾಡಲಾಗುತ್ತದೆ.

೧. ೧/೩ ಸದಸ್ಯರು ರಾಜ್ಯ ವಿಧಾನಸಭೆಯಿಂದ ಆಯ್ಕೆಯಾಗುತ್ತಾರೆ.

೨. ೧/೩ ಸದಸ್ಯರು ಸ್ಥಳೀಯ ಸಂಸ್ಥೆಗಳ ಸದಸ್ಯರಿಂದ ಆಯ್ಕೆಯಾಗುತ್ತಾರೆ.

೩. ೧/೧೨ ಸದಸ್ಯರು ಭಾರತದ ಯಾವದೇ ವಿಶ್ವವಿದ್ಯಾಲಯದಿಂದ ಪದವಿ ಪಡೆದು ಸಂಬಂಧಿಸಿದ ರಾಜ್ಯದಲ್ಲಿ ವಾಸಿಸುವಪದವೀಧರರಿಂದ ಆಯ್ಕೆಯಾಗುತ್ತಾರೆ.

೪. ೧/೧೨ ಸದಸ್ಯರು ಕನಿಷ್ಠ ಮೂರು ವರ್ಷಗಳಿಂದ ಪ್ರೌಢ ಶಾಲೆಗಳಿಗಿಂತ ಕೆಳಮಟ್ಟ ದಲ್ಲಿಲ್ಲದ ಶಿಕ್ಷಕರುಗಳಿಂದ ಆಯ್ಕೆಯಾಗುತ್ತಾರೆ.

೫. ೧/೬ ಸದಸ್ಯರನ್ನು ಸಮಾಜಸೇವೆ, ವಿಜ್ಞಾನ, ಕಲೆ, ಸಾಹಿತ್ಯ, ಸಂಸ್ಕೃತಿ ಮುಂತಾದ ಕ್ಷೇತ್ರಗಳಲ್ಲಿ ವಿಶೇಷ ಪರಿಣತಿ ಹೊಂದಿದ ಆಧಾರದ ಮೇಲೆ ರಾಜ್ಯಪಾಲರು ನಾಮಕರಣ ಮಾಡುತ್ತಾರೆ. ಉದಾ :-ಡಾ. ಚಂದ್ರಶೇಖರ ಕಂಬಾರ ಹಾಗೂ ಶ್ರೀಮತಿ ಉಮಾಶ್ರೀಅವರನ್ನು ಜಾನಪದ ಹಾಗೂ ಚಿತ್ರರಂಗದ ಸಾಧನೆಗಾಗಿ ಕರ್ನಾಟಕ ವಿಧಾನ ಪರಿಷತ್ತಿಗೆ ನಾಮಕರಣ ಮಾಡಲಾಗಿದೆ.

## ಅರ್ಹತೆಗಳು

೧. ಭಾರತದ ನಾಗರಿಕನಾಗಿರಬೇಕು.

೨. ಮೂವತ್ತು ವರ್ಷ ತುಂಬಿರಬೇಕು.

೩. ಸಂಸತ್ತು ಕಾಲಕಾಲಕ್ಕೆ ನಿರ್ಧಿಷ್ಟ ಪಡಿಸುವ ಇತರ ಅರ್ಹತೆಗಳನ್ನು ಹೊಂದಿರಬೇಕು.

## ಅನರ್ಹತೆಗಳು

ವಿಧಾನಸಭಾ ಸದಸ್ಯತ್ವಕ್ಕಿರುವ ಅನರ್ಹತೆಗಳು ವಿಧಾನಪರಿಷತ್ತಿನ ಸದಸ್ಯತ್ವಕ್ಕೂ ಅನ್ವಯಿಸುತ್ತವೆ.

## ಅವಧಿ :

ರಾಜ್ಯ ಸಭೆಯಂತೆ ವಿಧಾನಪರಿಷತ್ತು ಕೂಡಾ ಶಾಶ್ವತ ಸದನವಾಗಿದೆ. ಸದಸ್ಯರ ಅವಧಿ ಆರು ವರ್ಷಗಳು. ಎರಡು ವರ್ಷಗಳಿಗೊಮ್ಮೆ ೧/೩ ಸದಸ್ಯರು ನಿವೃತ್ತಿ ಹೊಂದುತ್ತಾರೆ. ಅವರ ಸ್ಥಾನಗಳಿಗೆ ಹೊಸ ಸದಸ್ಯರು ಆಯ್ಕೆಯಾಗಿ ಬರುತ್ತಾರೆ.

## ಅಧಿವೇಶನಗಳು

ಸಂವಿಧಾನದ ಪ್ರಕಾರ ವರ್ಷದಲ್ಲಿ ಎರಡು ಅಧಿವೇಶನಗಳು ನಡೆಯಬೇಕು. ಎರಡು ಅಧಿವೇಶನಗಳ ನಡುವಿನ ಅಂತರ ಆರು ತಿಂಗಳಿಗೆ ಮೀರಬಾರದು. ಸಾಮಾನ್ಯವಾಗಿ ವರ್ಷದಲ್ಲಿ ಮೂರು ಅಧಿವೇಶನಗಳು ನಡೆಯುತ್ತವೆ. ಸದನದ ಕಲಾಪಗಳು ನಡೆಯಬೇಕಾದರೆ ಸದನದ ಒಟ್ಟು ಸದಸ್ಯರ ಸಂಖ್ಯೆಯ ೧/೧೦ ಅಥವಾ ಕನಿಷ್ಠ ೧೦ ಸದಸ್ಯರು ಇವುಗಳಲ್ಲಿ ಯಾವದು ಹೆಚ್ಚು ಅಷ್ಟು ಸದಸ್ಯರು ಹಾಜರಿರಬೇಕು.

## ವೇತನ ಹಾಗೂ ಇತರ ಸೌಲಭ್ಯಗಳು :

ವಿಧಾನ ಸಭಾ ಸದಸ್ಯರು ಪಡೆಯುವ ವೇತನ ಹಾಗೂ ಇತರ ಸೌಲಭ್ಯಗಳನ್ನು ಪರಿಷತ್ತಿನ ಸದಸ್ಯರು ಪಡೆಯುತ್ತಾರೆ.

## ಪದಾಧಿಕಾರಿಗಳು

ಪರಿಷತ್ತಿನ ಕಲಾಪಗಳನ್ನು ನಡೆಸಿಕೊಂಡು ಹೋಗಲು ಸದಸ್ಯರು ತಮ್ಮಲ್ಲೇ ಒಬ್ಬರನ್ನು ಸಭಾಪತಿಯನ್ನಾಗಿ ಹಾಗೂ ಇನ್ನೊಬ್ಬರನ್ನು ಉಪಸಭಾಪತಿಯನ್ನಾಗಿ ಆಯ್ಕೆಮಾಡುತ್ತಾರೆ. ಸಭಾಪತಿಯವರು ಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಳ್ಳುತ್ತಾರೆ. ಯಾವದೇ ವಿಷಯದ ಬಗ್ಗೆ ಮತಗಣನೆ ನಡೆದಾಗ ಮತನೀಡುವ ಅಧಿಕಾರ ಅವರಿಗಿಲ್ಲ. ಪರ ಹಾಗೂ ವಿರೋಧವಾಗಿ ಸಮಾನ ಮತಗಳು ಬಂದಾಗ ನಿರ್ಣಾಯಕ ಮತ ಚಲಾಯಿಸುತ್ತಾರೆ. ಪರಿಷತ್ತಿನ ಗೌರವದ ಪ್ರತೀಕವಾಗಿ ಸಭಾಪತಿಯವರು ಇರುತ್ತಾರೆ.

ಸಭಾಪತಿಯವರ ಅನುಪಸ್ಥಿತಿಯಲ್ಲಿ ಪರಿಷತ್ತಿನ ಕಲಾಪಗಳ ಅಧ್ಯಕ್ಷತೆಯನ್ನು ಉಪಸಭಾಪತಿಯವರು ವಹಿಸಿಕೊಳ್ಳುತ್ತಾರೆ. ಸಭಾಪತಿ ಹಾಗೂ ಉಪಸಭಾಪತಿ ಇಬ್ಬರೂ ಸದನದಲ್ಲಿ ಹಾಜರಿರದಿದ್ದಾಗ ಅಧ್ಯಕ್ಷತೆ ವಹಿಸಿಕೊಳ್ಳಲು ಆರು ಜನರ ಪಟ್ಟಿಯನ್ನು ಸಭಾಪತಿಯವರು ತಯಾರಿಸುತ್ತಾರೆ. ಸಭಾಪತಿ ಹಾಗೂ ಉಪಸಭಾಪತಿಯವರು ಸದನದ ಸದಸ್ಯರಾಗಿರುವವರೆಗೆ ತಮ್ಮ ಹುದ್ದೆಯಲ್ಲಿ ಮುಂದುವರಿಯುತ್ತಾರೆ. ಸದಸ್ಯತ್ವದ ಅವಧಿ ಮುಗಿದೊಡನೆ ತಮ್ಮ ಹುದ್ದೆಗಳನ್ನು ಕಳೆದುಕೊಳ್ಳುತ್ತಾರೆ.

ಸಭಾಪತಿ ಹಾಗೂ ಉಪ ಸಭಾಪತಿಯವರು ವಿಧಾನಸಭೆಯ ಅಧ್ಯಕ್ಷ ಉಪಾಧ್ಯಕ್ಷರಿಗೆ ಸಮಾನವಾದ ವೇತನ ಹಾಗೂ ಇತರ ಸೌಲಭ್ಯಗಳನ್ನು ಪಡೆಯುತ್ತಾರೆ.

## ✷ ವಿಧಾನಪರಿಷತ್ತಿನ ಕಾರ್ಯಗಳು

**೧. ಶಾಸನೀಯ ಕಾರ್ಯಗಳು :-** ಸಾಮಾನ್ಯ ಮಸೂದೆ ಶಾಸನಾಂಗದ ಯಾವದೇ ಸದನದಲ್ಲಿ ಮೊದಲು ಮಂಡಿಸಲ್ಪಡಬಹುದು. ಅಲ್ಲಿ ಪಾಸಾದನಂತರ ಇನ್ನೊಂದು ಸದನಕ್ಕೆ ಅನುಮೋದನೆಗೆ ಕಳಿಸಲಾಗುತ್ತದೆ. ವಿಧಾನಸಭೆ ಅಂಗೀಕರಿಸಿದ ಮಸೂದೆಯನ್ನು ಪರಿಷತ್ತಿಗೆ ಕಳಿಸಲಾಗುತ್ತದೆ. ಪರಿಷತ್ತು ಅದಕ್ಕೆ ಅನುಮೋದನೆ

ನೀಡಿದರೆ ರಾಜ್ಯಪಾಲರ ಅಂಕಿತಕ್ಕಾಗಿ ಕಳಿಸಲಾಗುತ್ತದೆ. ಮಸೂದೆಯನ್ನು ಪರಿಷತ್ತು ತಿದ್ದುಪಡಿಯೊಂದಿಗೆ ಮರಳಿ ಕಳಿಸದರೆ ವಿಧಾನಸಭೆ ಆ ಮಸೂದೆಯನ್ನು ಮತ್ತೆ ಪರಿಸೀಲಿಸುತ್ತದೆ. ಪರಿಷತ್ತು ಆ ಮಸೂದೆಯನ್ನು ತಿರಸ್ಕರಿಸಿದರೆ ಅಥವಾ ಮೂರು ತಿಂಗಳವರೆಗೆ ವಿಧಾನಸಭೆಗೆ ಮರಳಿಸದಿದ್ದರೆ ವಿಧಾನಸಭೆ ಮತ್ತೆ ಪರಿಶೀಲಿಸುತ್ತದೆ. ಎರಡನೇ ಸಲ ಮಸೂದೆ ವಿಧಾನಸಭೆಯಲ್ಲಿ ಪಾಸಾದ ನಂತರ ಮತ್ತೆ ವಿಧಾನಪರಿಷತ್ತಿಗೆ ಕಳಿಸಲಾಗುತ್ತದೆ.ಈ ಸಲ ಪರಿಷತ್ತು ಒಂದು ತಿಂಗಳವರೆಗೆ ತಡೆ ಹಿಡಿದರೆ ಅಥವಾ ಮತ್ತೆ ತಿದ್ದುಪಡಿ ಮಾಡಿದರೆ ಒಂದು ತಿಂಗಳ ನಂತರ ಮಸೂದೆ ಎರಡೂ ಸದನಗಳಿಂದ ಪಾಸಾಗಿದೆ ಎಂದು ತಿಳಿಯಲಾಗುವದು.

೨. **ಹಣಕಾಸಿನ ಕಾರ್ಯಗಳು :-** ಹಣಕಾಸಿನ ಮಸೂದೆಯನ್ನು ವಿಧಾನಸಭೆಯಲ್ಲಿ ಮಾತ್ರ ಮಂಡಿಸಲಾಗುತ್ತದೆ. ವಿಧಾನ ಸಭೆ ಅಂಗೀಕರಿಸಿದ ಮಸೂದೆಯನ್ನು ಅಭಿಪ್ರಾಯ ಸೂಚಿಸುವ ಸಲುವಾಗಿ ಪರಿಷತ್ತಿಗೆ ಕಳಿಸಲಾಗುತ್ತದೆ. ಪರಿಷತ್ತು ೧೪ ದಿನಗಳೊಳಗಾಗಿ ತನ್ನ ಒಪ್ಪಿಗೆ ಅಥವಾ ಅಭಿಪ್ರಾಯದೊಂದಿಗೆ ಮರಳಿಸಬೇಕು. ಮೇಲ್ಮನೆಯ ಅಭಿಪ್ರಾಯವನ್ನು ವಿಧಾನಸಭೆ ಒಪ್ಪಬೇಕೆಂದಿಲ್ಲ. ಪರಿಷತ್ತು ೧೪ ದಿನಗಳವರೆಗೆ ಮಸೂದೆಯನ್ನು ಮರಳಿಸದಿದ್ದರೆ ಅದು ಎರಡೂ ಸದನಗಳಿಂದ ಅಂಗೀಕರಿಸಲ್ಪಟ್ಟಿದೆ ಎಂದು ಭಾವಿಸಲಾಗುತ್ತದೆ. ಹಣಕಾಸಿನ ವಿಷಯದಲ್ಲಿ ಪರಿಷತ್ತು ಅತ್ಯಂತ ಬಲಹೀನವಾಗಿದೆ.

೩. **ಆಡಳಿತ ಕಾರ್ಯಗಳು :-** ರಾಜ್ಯದ ಆಡಳಿತ ನಡೆಸುವ ಮಂತ್ರಿಮಂಡಲ ವಿಧಾನ ಸಭೆಯಿಂದ ನಿರ್ಮಿಸಲ್ಪಡುತ್ತದೆ. ವಿಧಾನಸಭೆಯ ನಿಯಂತ್ರಣಕ್ಕೊಳಪಟ್ಟು ಅದು ಕಾರ್ಯನಿರ್ವಹಿಸುತ್ತದೆ.ವಿಧಾನಪರಿಷತ್ತಿಗೆ ಮಂತ್ರಿ ಮಂಡಲದ ಮೇಲೆ ನಿಯಂತ್ರಣ-ವಿರುವದಿಲ್ಲ. ಪ್ರಶ್ನೋತ್ತರ ವೇಳೆ, ನಿಲುವಳಿ ಸೂಚನೆ, ಶೂನ್ಯವೇಳೆ, ಗಮನ ಸೆಳೆಯುವ ಸೂಚನೆಗಳ ಮೂಲಕ ಪರಿಷತ್ತಿನ ಸದಸ್ಯರು ಆಡಳಿತದ ಬಗ್ಗೆ ಮಾಹಿತಿ ಪಡೆಯಬಹುದು. ಆಡಳಿತದ ಲೋಪದೋಷ ಕುರಿತು ಚರ್ಚೆ ಹಾಗೂ ಟೀಕೆ ಮಾಡುವ ಮೂಲಕ ಪರಿಷತ್ತು ಆಡಳಿತ ಕಾರ್ಯಗಳಲ್ಲಿ ಭಾಗವಹಿಸುತ್ತದೆ.

## ವಿಧಾನ ಪರಿಷತ್ತಿನಪರ ಹಾಗೂ ವಿರೋಧಿ ವಾದಗಳು

ವಿಧಾನ ಪರಿಷತ್ತಿನ ಅಗತ್ಯತೆಯ ಬಗ್ಗೆ ಚರ್ಚೆಗಳು ನಡೆಯುತ್ತಲೇ ಬಂದಿವೆ. ಕೆಲವರು ಅದರ ರದ್ದತಿಗಾಗಿ ಪ್ರತಿಪಾದಿಸಿದರೆ ಇನ್ನೂ ಕೆಲವರು ಅದನ್ನು ಮುಂದು-ವರೆಸಿಕೊಂಡು ಹೋಗುವದು ಸೂಕ್ತವೆಂದು ಪ್ರತಿಪಾದನೆ ಮಾಡಿದ್ದಾರೆ. ಸಂವಿಧಾನ ರಚನಾಕಾರರು ಪರಿಷತ್ತಿನ ರಚನೆ ಅಥವಾ ರದ್ದುಗೊಳಿಸುವ ಅವಕಾಶವನ್ನು ರಾಜ್ಯ ವಿಧಾನಸಭೆಗೆ ನೀಡಿದ್ದಾರೆ. ವಿಧಾನಸಭೆ ನಿರ್ಣಯ ಮಾಡಿದರೆ ಸಂಸತ್ತು ಆ ಬಗ್ಗೆ ಕ್ರಮ ಕೈಗೊಳ್ಳುತ್ತದೆ.

## ವಿಧಾನ ಪರಿಷತ್ತಿನ ಪರವಾದಗಳು

೧. ಈ ದೇಶದ ಬಹುತೇಕ ಜನ ಇನ್ನೂ ಅನಕ್ಷರಸ್ಥರು. ರಾಜಕೀಯ ವಿದ್ಯಮಾನಗಳನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ ಅಷ್ಟೊಂದು ಪ್ರಮಾಣದಲ್ಲಿ ಅವರಲ್ಲಿಲ್ಲ. ಆ ಕಾರಣದಿಂದಾಗಿ ಕೆಳಮನೆಯ ಸದಸ್ಯರ ಆಯ್ಕೆ ಯೋಗ್ಯತೆ, ದಕ್ಷತೆಗಳ ಆಧಾರದ ಮೇಲೆ ಆಗುವದಿಲ್ಲ. ಆದ್ದರಿಂದ ಅನುಭವಿಗಳನ್ನು ಒಳಗೊಂಡ ಮೇಲ್ಮನೆ ರಾಜ್ಯದ ಹಾಗೂ ಜನರ ಹಿತಾಸಕ್ತಿ ಕಾಯಲು ಅಗತ್ಯವಾಗಿದೆ.

೨. ವಿಧಾನಸಭೆಯು ಅನೇಕ ಸಲ ಸರ್ವಾಧಿಕಾರಿ ಪ್ರವೃತ್ತಿಯನ್ನು ತೋರುವ ಸಂಭವವಿದೆ. ಅವರಿಗೆ ಮಾರ್ಗದರ್ಶನ ನೀಡುವದಕ್ಕಾಗಿ ವಿಧಾನಪರಿಷತ್ತಿನ ಅವಶ್ಯಕತೆ ಇದೆ.

೩. ವಿಧಾನಸಭೆಯ ಸದಸ್ಯರು ಅನನುಭವಿಗಳು ಹಾಗೂ ಯುವಕರಾಗಿರುವ ಸಂಭವವಿದೆ. ವಿಧಾನಪರಿಷತ್ತಿನ ಸದಸ್ಯರು ಹಿರಿಯರು, ಅನುಭವಿಗಳು ಹಾಗೂ ಸಾರಾಸಾರ ವಿಚಾರಿಸಿ ತೀರ್ಮಾನ ತಗೆದುಕೊಳ್ಳವವರಾಗಿರುತ್ತಾರೆ. ಕೆಳಮನೆಯ ಸದಸ್ಯರ ದುಡುಕಿನ ಪ್ರವೃತ್ತಿಗೆ ಮೇಲ್ಮನೆಯ ಸದಸ್ಯರು ಕಡಿವಾಣ ಹಾಕುವ ಮೂಲಕ ಶಾಸನೀಯ ಕಾರ್ಯಗಳು ಸಮರ್ಪಕವಾಗಿ ನಡೆಯುವಂತೆ ನೋಡಿಕೊಂಡು ಹೋಗುತ್ತಾರೆ.

೪. ಸಮಾಜದ ವಿವಿಧ ಕ್ಷೇತ್ರಗಳಲ್ಲಿ ವಿಶೇಷ ಸಾಧನೆ ಮಾಡಿದ ಹಿರಿಯರಿಗೆ ವಿಧಾನ ಪರಿಷತ್ತಿನಲ್ಲಿ ಸ್ಥಾನ ಕಲ್ಪಿಸುವ ಮೂಲಕ ಅವರ ಸೇವೆಯನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ.

೫. ಸಾರ್ವತ್ರಿಕ ಚುನಾವಣೆಗಳಲ್ಲಿ ಪ್ರಾತಿನಿಧ್ಯ ದೊರೆಯಲು ಸಾಧ್ಯವಿಲ್ಲದ ಸಮುದಾಯಗಳಿಗೆ ಮೇಲ್ಮನೆಯಲ್ಲಿ ಅವಕಾಶ ಕಲ್ಪಿಸಲು ಸಾಧ್ಯವಾಗುತ್ತದೆ.

## ವಿರೋಧಿ ವಾದಗಳು

೧. ಮೇಲ್ಮನೆಯು ಕೆಳಮನೆಯೊಂದಿಗೆ ಸಹಕರಿಸಿದರೂ ಅನವಶ್ಯಕ, ವಿರೋಧ ವ್ಯಕ್ತ ಗೊಳಿಸಿದರೂ ಅನವಶ್ಯಕವಾಗಿದೆ. ಕೆಳಮನೆಯೊಂದಿಗೆ ಸಹಕರಿಸಿದರೆ ಅಥವಾ ಕೆಳಮನೆಯ ಅಭಿಪ್ರಾಯಕ್ಕೆಲ್ಲಾ ಸಮ್ಮತಿ ನೀಡಿದರೆ ಅಂಥ ಒಂದು ಸದನ ಅನಗತ್ಯವಾಗುತ್ತದೆ. ವಿಧಾನಪರಿಷತ್ತು ಕೆಳಮನೆಯನ್ನು ವಿರೋಧಿಸಿದರೆ ಅದು ಪ್ರಜಾಪ್ರಭುತ್ವದ ತತ್ವಗಳಿಗೆ ವಿರುದ್ಧವಾದ ಕಾರ್ಯಗುತ್ತದೆ. ಯಾಕೆಂದರೆ ಜನಾಭಿಪ್ರಾಯ ಪ್ರತಿನಿಧಿಸುವ ಕೆಳಮನೆಯ ಅಭಿಪ್ರಾಯವನ್ನು ಅದು ತುಚ್ಛೀಕರಿಸಿ-ದಂತಾಗುತ್ತದೆ.

೨. ಪರಿಷತ್ತು ಅನಗತ್ಯ ವೆಚ್ಚಕ್ಕೆ ಅವಕಾಶ ಮಾಡಿಕೊಡುತ್ತದೆ. ಸಾರ್ವಜನಿಕ ಹಣದ ದುಂದು ವೆಚ್ಚಕ್ಕೆ ಪರಿಷತ್ತು ಕಾರಣವಾಗುತ್ತದೆ. ಆ ಕಾರಣದಿಂದಾಗಿಯೇ ತಮಿಳು ನಾಡು,

ಮಧ್ಯ ಪ್ರದೇಶ, ಪಶ್ಚಿಮ ಬಂಗಾಲದಂಥ ರಾಜ್ಯಗಳು ಪರಿಷತ್ತನ್ನು ರದ್ದುಗೊಳಿಸಿವೆ.
೩. ನಾಮಕರಣದಲ್ಲೂ ರಾಜಕೀಯ ನುಸುಳುತ್ತದೆ. ಅನೇಕ ಸಲ ರಾಜಕೀಯ ವ್ಯಕ್ತಿಗಳೇ ನಾಮಕರಣ ಹೊಂದುತ್ತಾರೆ. ಅಲ್ಲದೇ ನಾಮಕರಣಗೊಂಡ ಸದಸ್ಯರು ಜನ ಸಂಪರ್ಕದಿಂದ ದೂರವಿರುವವರಾಗಿರುತ್ತಾರೆ.
೪. ಸಾರ್ವತ್ರಿಕ ಚುನಾವಣೆಗಳಲ್ಲಿ ಸೋತವರಿಗೆ ಹಿಂಬಾಗಿಲ ಪ್ರವೇಶ ನೀಡುವ ಸಾಧನವಾಗಿ ವಿಧಾನಪರಿಷತ್ತುಗಳು ಕಾರ್ಯನಿರ್ವಹಿಸುತ್ತಲಿವೆ. ಜನರಿಂದ ತಿರಸ್ಕೃತಗೊಂಡವರನ್ನು ಸದಸ್ಯರನ್ನಾಗಿ ಪಡೆಯುವ ಸದನದ ಅವಶ್ಯಕತೆಯೇ ಇರುವದಿಲ್ಲ.
೫. ಒಂದೇ ಸದನವಿದ್ದಾಗಲೂ ಆತುರದ ನಿರ್ಧಾರ ಸಾಧ್ಯವಿಲ್ಲ. ವಿರೋಧಿ ಪಕ್ಷಗಳು ಅದಕ್ಕೆ ಅವಕಾಶ ನೀಡುವದಿಲ್ಲ. ಅಲ್ಲದೇ ರಾಜ್ಯಪಾಲರು ಕೂಡಾ ಆತುರದ ನಿರ್ಧಾರಕ್ಕೆ ಕಡಿವಾಣ ಹಾಕುವ ಅಧಿಕಾರ ಹೊಂದಿದ್ದಾರೆ.

ಈ ಎಲ್ಲ ಕಾರಣಗಳಿಂದಾಗಿ ವಿಧಾನಪರಿಷತ್ತು ಅನವಶ್ಯಕ ಸದನವೆಂದು ವಾದಿಸಲಾಗುತ್ತದೆ.

## ಪ್ರಶ್ನೆಗಳು

ಅ. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ. ಒಂದು ಅಂಕದ ಪ್ರಶ್ನೆಗಳು

೧. ಸಂಸದೀಯ ಪದ್ಧತಿಯ ಮೂಲವಾವುದು ?

೨. ಏಕಸದನ ಶಾಸನಾಂಗವೆಂದರೇನು ?

೩. ಲೋಕಸಭಾ ಸದಸ್ಯರ ಕಾರ್ಯಾವಧಿ ಎಷ್ಟು ?

೪. ಕರ್ನಾಟಕ ವಿಧಾನ ಸಭೆಯ ಚುನಾಯಿತ ಸದಸ್ಯರ ಸಂಖ್ಯೆ ಎಷ್ಟು ?

೫. ರಾಜ್ಯ ಸಭೆಯ ಸಭಾಪತಿಯ ಮೂಲ ಹುದ್ದೆ ಯಾವುದು ?

ಆ. ಕೆಳಗಿನ ಪ್ರಶ್ನೆಗಳಿಗೆ ೨-೩ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಎರಡು ಅಂಕದ ಪ್ರಶ್ನೆಗಳು

೬. ಚುನಾಯಕ ಸಮುದಾಯ ಎಂದರೇನು ?

೭. ದ್ವಿಸದನ ಶಾಸನಾಂಗ ಹೊಂದಿದ ರಾಜ್ಯಗಳಾವವು ?

೮. ಲೋಕಸಭಾ ಸದಸ್ಯರ ಅರ್ಹತೆಗಳನ್ನು ತಿಳಿಸಿರಿ.

೯. ಸಂಯುಕ್ತ ಅಧಿವೇಶನ ವೆಂದರೇನು ?

೧೦. ಲೋಕಸಭಾ ಸದಸ್ಯರ ವೇತನ ಹಾಗೂ ಸೌಲಭ್ಯ ಕುರಿತು ಬರೆಯಿರಿ.

ಇ. ಕೆಳಗಿನ ಪ್ರಶ್ನೆಗಳಿಗೆ ೮ -೧೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಐದು ಅಂಕದ ಪ್ರಶ್ನೆಗಳು

೧೧. ಸಂಸತ್ತಿನ ಶಾಸನ ರಚನಾ ವಿಧಾನ ವಿವರಿಸಿರಿ .

೧೨. ವಿಧಾನ ಪರಿಷತ್ತಿನ ರಚನೆ ಕುರಿತು ಬರೆಯಿರಿ .

೧೩. ಲೋಕ ಸಭಾ ಅಧ್ಯಕ್ಷನ ಕಾರ್ಯಗಳನ್ನು ವಿವರಿಸಿರಿ .

೧೪. ರಾಜ್ಯ ಸಭಾ ಸದಸ್ಯರ ಅರ್ಹತೆ ಹಾಗೂ ಅಧಿಕಾರದ ಅವಧಿ ಕುರಿತು ತಿಳಿಸಿರಿ.

೧೫. ವಿಧಾನ ಸಭಾ ಸದಸ್ಯರ ಹಾಗೂ ವಿಶೇಷಾಧಿಕಾರಿಗಳನ್ನು ವಿವರಿಸಿರಿ.

ಈ. ಕೆಳಗಿನ ಪ್ರಶ್ನೆಗಳಿಗೆ ೩೦ -೪೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಹತ್ತು ಅಂಕದ ಪ್ರಶ್ನೆಗಳು

೧೬. ಲೋಕಸಭೆಯ ರಚನೆ ಹಾಗೂ ಅಧಿಕಾರಗಳನ್ನು ವಿವರಿಸಿರಿ.

೧೭. ರಾಜ್ಯಸಭೆಯ ರಚನೆ ಹಾಗೂ ಅಧಿಕಾರಗಳನ್ನು ವಿವರಿಸಿರಿ.

೧೮. ವಿಧಾನ ಮಂಡಲದ ಶಾಸನ ರಚನಾ ವಿಧಾನ ವಿವರಿಸಿರಿ

೧೯. ವಿಧಾನ ಪರಿಷತ್ತು ಅವಶ್ಯವೇ ವಿವರಿಸಿರಿ .

೨೦. ಲೋಕಸಭೆಯ/ವಿಧಾನ ಸಭೆಯ ಸಭಾಧ್ಯಕ್ಷನ ಆಯ್ಕೆ ಹಾಗೂ ಅಧಿಕಾರಗಳನ್ನು ವಿವರಿಸಿರಿ.

❑❑

# ಅಧ್ಯಾಯ ೭

# ಕಾರ್ಯಾಂಗ

## ✷ ಅರ್ಥ ಮತ್ತು ಮಹತ್ವ

ಸರಕಾರದ ಮೂರು ಅಂಗಗಳ ಪೈಕಿ ಕಾರ್ಯಾಂಗವು ಎರಡನೇ ಅಂಗವಾಗಿದೆ. ಶಾಸನಾಂಗ ರಚಿಸುವ ಕಾನೂನುಗಳನ್ನು ಜಾರಿಗೊಳಿಸುವ ಮೂಲಕ ಸರಕಾರದ ಆಡಳಿತ ನಿರ್ವಹಿಸುವ ಜವಾಬ್ದಾರಿ ಕಾರ್ಯಂಗದ್ದು. ಶಾಸನಾಂಗ ಅಂಗೀಕರಿಸುವ ಕಾನೂನುಗಳನ್ನು ಹಾಗೂ ವ್ಯಕ್ತಗೊಳಿಸುವ ಜನಾಭಿಪ್ರಾಯಗಳನ್ನು ಕಾರ್ಯಗತ ಗೊಳಿಸುವ ಹೊಣೆ ಕಾರ್ಯಾಂಗದ್ದು. ಕಾರ್ಯಾಂಗವೇ ಸರಕಾರವೆನ್ನುವ ಮಟ್ಟಿಗೆ ಅದು ಮಹತ್ವ ಹೊಂದಿದೆ.

ಕಾರ್ಯಾಂಗ ಎಂಬ ಪದವು ವಿಶಾಲಾರ್ಥ ಹಾಗೂ ಸೀಮಿತಾರ್ಥ ಹೀಗೆ ಎರಡು ಬಗೆಗಳಲ್ಲಿ ಉಪಯೋಗಿಸಲ್ಪಡುತ್ತದೆ. ವಿಶಾಲಾರ್ಥದಲ್ಲಿ ಅದು ರಾಜಕೀಯ ಕಾರ್ಯಾಂಗ ಹಾಗೂ ಶಾಶ್ವತ ಕಾರ್ಯಾಂಗ ಅಥವಾ ನೌಕರ ವರ್ಗವನ್ನೊಳಗೊಂಡಿರುತ್ತದೆ. ಸೀಮಿತ ಅರ್ಥದಲ್ಲಿ ಕೇವಲ ರಾಜಕೀಯ ಕಾರ್ಯಾಂಗ ಅಂದರೆ ಕೇಂದ್ರದಲ್ಲಿ ರಾಷ್ಟ್ರಪತಿ ಹಾಗೂ ಮಂತ್ರಿಮಂಡಲವನ್ನೊಳಗೊಂಡಿದೆ. ರಾಜ್ಯಗಳಲ್ಲಿ ರಾಜ್ಯಪಾಲ ಹಾಗೂ ಮಂತ್ರಿಮಂಡಲ ಗಳನ್ನೊಳಗೊಂಡಿದೆ.

## ಅ. ಕೇಂದ್ರಕಾರ್ಯಾಂಗ

ಭಾರತವು ಒಂದು ಒಕ್ಕೂಟ ರಾಜ್ಯವಾಗಿರುವದರಿಂದ ಸರಕಾರದ ಅಧಿಕಾರಗಳು ಕೇಂದ್ರ ಹಾಗೂ ರಾಜ್ಯಗಳ ನಡುವೆ ಹಂಚಲ್ಪಟ್ಟಿವೆ. ಕೇಂದ್ರ ಸರಕಾರದ ಕಾರ್ಯಾಂಗವು ರಾಷ್ಟ್ರಪತಿ, ಪ್ರಧಾನ ಮಂತ್ರಿ ಹಾಗೂ ಮಂತ್ರಿಮಂಡಲವನ್ನು ಒಳಗೊಂಡಿದೆ. ರಾಷ್ಟ್ರಪತಿಯವರು ನಾಮಮಾತ್ರ ಕಾರ್ಯಾಂಗವಾದರೆ ಪ್ರಧಾನಿಯನ್ನೊಳಗೊಂಡ ಮಂತ್ರಿಮಂಡಲ ನೈಜ ಕಾರ್ಯಾಂಗವಾಗಿದೆ. ರಾಷ್ಟ್ರಪತಿ ಹುದ್ದೆ ಅಲಂಕಾರಿಕವಾಗಿದ್ದು ರಾಷ್ಟ್ರ ಗೌರವ ಹಾಗೂ ಗಾಂಭೀರ್ಯಗಳ ಪ್ರತೀಕವಾಗಿದೆ. ರಾಷ್ಟ್ರಪತಿಯವರು ರಾಷ್ಟ್ರವನ್ನು ಪ್ರತಿನಿಧಿಸುತ್ತಾರೆಯೇ ಹೊರತು ಸರಕಾರವನ್ನಲ್ಲ. ಕೇಂದ್ರ ಕಾರ್ಯಾಂಗದ ಅಧಿಕಾರಗಳೆಲ್ಲ ರಾಷ್ಟ್ರಪತಿಯವರಿಗೆ ನೀಡಲ್ಪಟ್ಟಿವೆ. ನೈಜ ಕಾರ್ಯಾಂಗವಾದ ಪ್ರಧಾನಿಯ ನೇತೃತ್ವದ ಮಂತ್ರಿಮಂಡಲವು ರಾಷ್ಟ್ರಪತಿಯವರ ಹೆಸರಿನಲ್ಲಿ ಕೇಂದ್ರದ ಆಡಳಿತವನ್ನು ನಿರ್ವಹಿಸುತ್ತದೆ.

ನಮ್ಮ ಸಂವಿಧಾನ ನಿರ್ಮಾಪಕರು ಕಾರ್ಯಾಂಗದ ಸ್ವರೂಪದ ಬಗ್ಗೆ ವಿಸ್ತೃತ ಚರ್ಚೆ ನಡೆಸಿ ಕೊನೆಗೆ ಸಂಸದೀಯ ಪದ್ಧತಿಯನ್ನು ಸ್ವೀಕರಿಸಿದ್ದಾರೆ. ಸಂವಿಧಾನ ಸಭೆಯ ಕೆಲ ಸದಸ್ಯರು ಅಮೇರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಜಾರಿಯಲ್ಲಿರುವ ಅಧ್ಯಕ್ಷೀಯ ಪದ್ಧತಿಯ ಪರವಾಗಿ ವಾದಿಸಿದರು. ಇನ್ನು ಕೆಲವರು ಸ್ವಿಸ್ ಮಾದರಿ ಅಥವಾ ಸೋವಿಯತ್ ಯುನಿಯನ್ ಮಾದರಿಯನ್ನು ಅನುಸರಿಸುವ ಬಗ್ಗೆ ವಾದ ಮಂಡಿಸಿದರು. ಆದರೆ ಬಹುತೇಕ ಸದಸ್ಯರು ಈಗಾಗಲೇ ತುಸು ಮಟ್ಟಿಗೆ ಜಾರಿಯಲ್ಲಿದ್ದ ಸಂಸದೀಯ ಪದ್ಧತಿಯನ್ನು ಬೆಂಬಲಿಸಿದರು. ಶಾಸನಾಂಗ ಮತ್ತು ಕಾರ್ಯಾಂಗಗಳ ನಡುವೆ ಸಮನ್ವಯ ಹಾಗೂ ಸಹಕಾರ ತರುವ ಸಂಸದೀಯ ಪದ್ಧತಿಯನ್ನು ಅಳವಡಿಸಿಕೊಳ್ಳುವುದೇ ಸೂಕ್ತವೆಂದು ನಿರ್ಣಯಿಸಲಾಯಿತು.

## * ರಾಷ್ಟ್ರಪತಿ

ಸಂಸದೀಯ ಪ್ರಜಾಪ್ರಭುತ್ವವನ್ನು ಒಪ್ಪಿ ಜಾರಿಗೆ ತಂದಿದ್ದರಿಂದ ಕೇಂದ್ರದಲ್ಲಿ ಕಾರ್ಯಾಂಗದ ನಾಮಮಾತ್ರ ಮುಖ್ಯಸ್ಥರಾಗಿ ರಾಷ್ಟ್ರಪತಿ ಹುದ್ದೆ ನಿರ್ಮಿಸಲಾಯಿತು. ನಮ್ಮ ಸಂವಿಧಾನದ ೫೨ನೇ ಕಲಮಿನ ಪ್ರಕಾರ ಭಾರತಕ್ಕೆ ಒಬ್ಬ ರಾಷ್ಟ್ರಪತಿ ಇರುತ್ತಾರೆ. ೫೩ನೇ ಕಲಮಿನ ಪ್ರಕಾರ ಅವರು ಕಾರ್ಯಾಂಗದ ಮುಖ್ಯಸ್ಥರಾಗಿರುತ್ತಾರೆ. ಸೈನ್ಯದ ಮೂರು ವಿಭಾಗಗಳ ಮುಖ್ಯಸ್ಥರಾದ ರಾಷ್ಟ್ರಪತಿಯವರು ಸೈನ್ಯದ ಮಹಾದಂಡನಾಯಕರಾಗಿರುತ್ತಾರೆ. ಪ್ರಧಾನಿಯ ನೇತೃತ್ವದ ಮಂತ್ರಿ ಮಂಡಲದ ಸಲಹೆಯ ಮೇರೆಗೆ ರಾಷ್ಟ್ರಪತಿಯವರು ಕಾರ್ಯಾಂಗದ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಇಂಗ್ಲೆಂಡಿನಲ್ಲಿ ಎನ್ನುವ ಹಾಗೆ ಭಾರತದ ರಾಷ್ಟ್ರಪತಿಯವರು ಕೂಡ ಏನೂ ತಪ್ಪು ಮಾಡಲಾರರು. ಏಕೆಂದರೆ ಅವರಿಗೆ ನೀಡಲಾದ ಅಧಿಕಾರಗಳಾವವನ್ನು ಅವರು ಚಲಾಯಿಸುವದಿಲ್ಲ.

### ಅರ್ಹತೆಗಳು

ಭಾರತದ ರಾಷ್ಟ್ರಪತಿ ಹುದ್ದೆಗೆ ಸ್ಪರ್ಧಿಸ ಬಯಸುವ ವ್ಯಕ್ತಿ ಕೆಳಗೆ ವಿವರಿಸಲಾದ ಅರ್ಹತೆಗಳನ್ನು ಹೊಂದಿರಬೇಕು.

೧. ಭಾರತದ ನಾಗರಿಕನಾಗಿರಬೇಕು.

೨. ಕನಿಷ್ಠ ೩೫ ವರ್ಷ ವಯಸ್ಸಿನವನಾಗಿರಬೇಕು.

೩. ಲೋಕ ಸಭಾ ಚುನಾವಣೆಗೆ ಸ್ಪರ್ಧಿಸುವ ಅರ್ಹತೆಯನ್ನು ಹೊಂದಿರಬೇಕು.

೪. ಲಾಭದಾಯಕ ಕೇಂದ್ರ ಅಥವಾ ರಾಜ್ಯ ಸರಕಾರಿ ಹುದ್ದೆಯಲ್ಲಿರಬಾರದು.

೫. ಸಂಸತ್ತಿನ ಅಥವಾ ರಾಜ್ಯ ಶಾಸನಾಂಗದ ಸದಸ್ಯನಾಗಿರಬಾರದು. ಒಂದು ವೇಳೆ ಸದಸ್ಯನಾಗಿದ್ದರೆ ರಾಷ್ಟ್ರಪತಿ ಹುದ್ದೆವಹಿಸಿಕೊಳ್ಳುವ ಪೂರ್ವದಲ್ಲಿ ಆ ಹುದ್ದೆಗೆ ರಾಜೀನಾಮೆ ನೀಡಬೇಕು.

ರಾಷ್ಟ್ರಪತಿ ಚುನಾವಣೆಗೆ ಸ್ಪರ್ಧಿಸುವ ವ್ಯಕ್ತಿ ರೂ.೧೫,೦೦೦ ಠೇವಣಿಯೊಂದಿಗೆ ನಾಮಪತ್ರ ಸಲ್ಲಿಸಬೇಕು. ಕನಿಷ್ಟ ೫೦ ಜನ ಮತದಾರರು (ಸಂಸತ್ತಿನ ಅಥವಾ ರಾಜ್ಯ ವಿಧಾನ ಸಭೆಯ ಚುನಾಯಿತ ಸದಸ್ಯರು) ಸೂಚಕರಾಗಿರಬೇಕು ಮತ್ತು ಅಷ್ಟೇ ಸದಸ್ಯರು ಅನುಮೋದಕರಾಗಿರಬೇಕು. ಗಂಭೀರವಲ್ಲದ ಸ್ಪರ್ಧಿಗಳನ್ನು ತಡೆಗಟ್ಟುವ ಸಲುವಾಗಿ ಈ ವಿಧಾನವನ್ನು ಜಾರಿಗೆ ತರಲಾಗಿದೆ.

## ಚುನಾವಣಾ ವಿಧಾನ

ಸಂವಿಧಾನದ ೫೪ನೇ ಕಲಮು ರಾಷ್ಟ್ರಪತಿಯವರ ಆಯ್ಕೆಯ ವಿಧಾನವನ್ನು ಸ್ಪಷ್ಟಪಡಿಸುತ್ತದೆ. ಸಂಸತ್ತಿನ ಎರಡೂ ಸದನಗಳ ಚುನಾಯಿತ ಸದಸ್ಯರು ಹಾಗೂ ರಾಜ್ಯ ವಿಧಾನ ಸಭೆಗಳ ಚುನಾಯಿತ ಸದಸ್ಯರನ್ನು ಒಳಗೊಂಡ "ಚುನಾಯಕ ಸಮುದಾಯ"ದ **(Electoral College)**ದ ಮೂಲಕ ರಾಷ್ಟ್ರ ಪತಿಯವರು ಆಯ್ಕೆ ನಡೆಸುತ್ತದೆ. ಪ್ರಮಾಣಾನುಸಾರ ಪ್ರಾತಿನಿಧ್ಯದ ಮೇರೆಗೆ ವರ್ಗಿಕರಣಗೊಳ್ಳುವ ಮತದ **(Proportional Representation by means of single transferable Vote )** ಮೂಲಕ ರಾಷ್ಟ್ರಪತಿಯವರು ಆಯ್ಕೆ ನಡೆಸುತ್ತದೆ. ಸಂಸತ್ ಸದಸ್ಯರು ಹಾಗೂ ರಾಜ್ಯವಿಧಾನ ಸಭೆ ಸದಸ್ಯರು ಚಲಾಯಿಸುವ ಮತ ಸಂಖ್ಯೆ ಬೇರೆ ಬೇರೆಯಾಗಿರುತ್ತದೆ. ರಾಜ್ಯ ವಿಧಾನ ಸಭೆಯ ಸದಸ್ಯರು ಚಲಾಯಿಸುವ ಮತಗಳ ಸಂಖ್ಯೆ ಆಯಾ ರಾಜ್ಯದ ಜನಸಂಖ್ಯೆ ಹಾಗೂ ರಾಜ್ಯ ವಿಧಾನ ಸಭೆಯ ಸದಸ್ಯರ ಸಂಖ್ಯೆಯನ್ನು ಅವಲಂಬಿಸಿರುತ್ತಾರೆ.

ರಾಜ್ಯ ವಿಧಾನಸಭಾ ಸದಸ್ಯರು ಚಲಾಯಿಸುವ ಮತಗಳ ಸಂಖ್ಯೆಯನ್ನು ಮುಂದೆ ವಿವರಿಸಿದ ವಿಧಾನದಿಂದ ನಿರ್ಧರಿಲಾಗುತ್ತದೆ.

$$\frac{\text{ರಾಜ್ಯದ ಜನಸಂಖ್ಯೆ}}{\text{ವಿಧಾನ ಸಭಾಸದಸ್ಯರ ಸಂಖ್ಯೆ} \times ೧೦೦೦} = \text{ಆ ರಾಜ್ಯದ ವಿಧಾನ ಸಭೆಯ ಪ್ರತಿಯೊಬ್ಬ ಸದಸ್ಯನು ಚಲಾಯಿಸುವ ಮತಸಂಖ್ಯೆ.}$$

ಉದಾ :- ಕರ್ನಾಟಕದ ಜನ ಸಂಖ್ಯೆ ೫,೦೪,೦೦,೦೦೦ ಎಂದು ಭಾವಿಸೋಣ. ಅದನ್ನು ಸಾವಿರದಿಂದ ಭಾಗಿಸಿದಾಗ ೫೦,೪೦೦ ಬರುತ್ತದೆ. ಈ ಸಂಖ್ಯೆಯನ್ನು ಕರ್ನಾಟಕದ ವಿಧಾನ ಸಭೆಯ ಚುನಾಯಿತ ಸದಸ್ಯರ ಸಂಖ್ಯೆಯಿಂದ ಭಾಗಿಸಿದಾಗ (೫೦,೪೦೦÷ ೨೨೪) ಬರುವ ಸಂಖ್ಯೆ ೨೨೫. ಇದು ಕರ್ನಾಟಕದ ಪ್ರತಿಯೊಬ್ಬ ಸದಸ್ಯನು ಚಲಾಯಿಸುವ ಮತ ಸಂಖ್ಯೆಯಾಗಿರುತ್ತದೆ. (ಅಂಕಿ ಅಂಶಗಳು ಕಾಲ್ಪನಿಕ)

ಎಲ್ಲಾ ರಾಜ್ಯಗಳ ವಿಧಾನ ಸಭಾ ಸದಸ್ಯರು ಚಲಾಯಿಸುವ ಒಟ್ಟು ಮತಗಳ ಸಂಖ್ಯೆಯಷ್ಟೇ ಮತಗಳನ್ನು ಸಂಸತ್ತಿನ ಎರಡೂ ಸದನಗಳ ಚುನಾಯಿತ ಸದಸ್ಯರು ಸೇರಿ ಚಲಾಯಿಸುತ್ತಾರೆ.

ಪ್ರತಿಯೊಬ್ಬ ಸಂಸದನ ಮತ ಸಂಖ್ಯೆಗಳು = ಎಲ್ಲ ರಾಜ್ಯಗಳ ವಿಧಾನ ಸಭಾಸದಸ್ಯರು ಚಲಾಯಿಸುವ ಮತಗಳು / ಸಂಸತ್ತಿನ ಚುನಾಯಿತ ಸದಸ್ಯರ ಒಟ್ಟು ಸಂಖ್ಯೆ

ರಾಷ್ಟ್ರಪತಿ ಚುನಾವಣೆ ಗುಪ್ತ ಮತದಾನ ಪದ್ಧತಿಯ ಮೇರೆಗೆ ನಡೆಯುತ್ತದೆ. ಆಯ್ಕೆಯಾಗುವ ಅಭ್ಯರ್ಥಿ ಚಲಾವಣೆಯಾದ ಮತಗಳ ಪೈಕಿ ಅರ್ಧಕ್ಕಿಂತ ಹೆಚ್ಚು ಮತಗಳನ್ನು ಪಡೆಯಬೇಕಾಗಿರುವದರಿಂದ ಹಾಗೂ ಇಬ್ಬರಿಗಿಂತ ಹೆಚ್ಚು ಜನ ಅಭ್ಯರ್ಥಿಗಳಿರುವ ಸಾಧ್ಯತೆಯಿಂದಾಗಿ ಪ್ರಮಾಣಾನುಸಾರ ಪ್ರಾತಿನಿಧ್ಯದ ಮೇರೆಗೆ ವರ್ಗಾಯಿಸಲ್ಪಡುವ ಮತ ನೀಡಿಕೆಯ ಆಧಾರದ ಮೇಲೆ ಚುನಾವಣೆ ನಡೆಯುತ್ತದೆ.

## ಕಾರ್ಯಾವಧಿ

ಸಂವಿಧಾನದ ೫೬ ನೇ ಕಲಮಿನ ಪ್ರಕಾರ ರಾಷ್ಟ್ರಪತಿಯವರ ಅಧಿಕಾರದ ಅವಧಿ, ಹುದ್ದೆ ವಹಿಸಿಕೊಂಡ ದಿನದಿಂದ ಐದು ವರ್ಷಗಳು. ಅವಧಿ ಮುಗಿದ ನಂತರದ ಚುನಾವಣೆಗೆ ಮತ್ತೆ ಸ್ಪರ್ಧಿಸಬಹುದು. ಮೊದಲ ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದ್ ಎರಡು ಅವಧಿಗಳವರೆಗೆ ಅಧಿಕಾರದಲ್ಲಿದ್ದರು. ನಂತರ ಬಂದ ಎಲ್ಲಾ ರಾಷ್ಟ್ರಪತಿಗಳು ಒಂದು ಅವಧಿಗೆ ಮಾತ್ರ ಚುನಾಯಿತರಾದವರಾಗಿದ್ದಾರೆ.

ರಾಷ್ಟ್ರಪತಿಯವರ ನಿಧನ, ರಾಜೀನಾಮೆ, ಅಥವಾ ಪದಚ್ಯುತಿಯಿಂದ ತೆರವಾದ ಸ್ಥಾನದಲ್ಲಿ ಉಪರಾಷ್ಟ್ರಪತಿಯವರು ಆರು ತಿಂಗಳವರೆಗೆ ಹಂಗಾಮಿ ರಾಷ್ಟ್ರಪತಿಯಾಗಿ ಕಾರ್ಯನಿರ್ವಹಿಸುತ್ತಾರೆ. ಉದಾ :- ೧೯೬೯ ರಲ್ಲಿ ರಾಷ್ಟ್ರಪತಿ ಡಾ. ಝಾಕೀರ ಹುಸೇನ್ ನಿಧನ ಹೊಂದಿದಾಗ ಉಪರಾಷ್ಟ್ರಪತಿಯಾಗಿದ್ದ ವಿ. ವಿ. ಗಿರಿ ಅವರು ಹಂಗಾಮಿ ರಾಷ್ಟ್ರಪತಿಯಾಗಿದ್ದರು. ಆರುತಿಂಗಳು ಅವಧಿ ಮುಗಿಯುವದರೊಳಗಾಗಿ ಹೊಸ ರಾಷ್ಟ್ರಪತಿಯ ಆಯ್ಕೆ ನಡೆಯಬೇಕು. ರಾಷ್ಟ್ರಪತಿ ಹಾಗೂ ಉಪರಾಷ್ಟ್ರಪತಿ ಹುದ್ದೆಗಳೆರಡೂ ತೆರವಾದಾಗ ಸರ್ವೋನ್ನತ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರು ಹಂಗಾಮಿ ರಾಷ್ಟ್ರಪತಿಯಾಗುತ್ತಾರೆ. ಹಂಗಾಮಿ ರಾಷ್ಟ್ರಪತಿ ವಿ. ವಿ. ಗಿರಿ ಅವರು ರಾಷ್ಟ್ರಪತಿ ಚುನಾವಣೆಗೆ ಸ್ಪರ್ಧಿಸುವ ಸಲುವಾಗಿ ರಾಜೀನಾಮೆ ನೀಡಿದ್ದರಿಂದ ೧೯೬೯ ರಲ್ಲಿ ನ್ಯಾ. ಹಿದಾಯತ್ ಉಲ್ಲಾ (ಸುಪ್ರೀಂ ಕೋರ್ಟ್‌ನ ಮುಖ್ಯ ನ್ಯಾಯಮೂರ್ತಿ) ಹಂಗಾಮಿ ರಾಷ್ಟ್ರಪತಿಯಾಗಿ ಕಾರ್ಯ ನಿರ್ವಹಿಸಿದರು.

## ಪ್ರತಿಜ್ಞಾವಿಧಿ

ಸಂವಿಧಾನದ ೬೦ ನೇ ಕಲಮಿನ ಪ್ರಕಾರ ರಾಷ್ಟ್ರಪತಿ ಹುದ್ದೆ ಸ್ವೀಕರಿಸುವ

ಪೂರ್ವದಲ್ಲಿ ಸರ್ವೋನ್ನತ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರ ಸಮ್ಮುಖದಲ್ಲಿ ಸಂವಿಧಾನದ ಪಾಲನೆ ಹಾಗೂ ರಕ್ಷಣೆ ಮಾಡುವದಾಗಿ ಪ್ರತಿಜ್ಞೆ ಸ್ವೀಕರಿಸಬೇಕಾಗುತ್ತದೆ.

### ವೇತನ

ಸಂಸತ್ತು ಕಾಲಕಾಲಕ್ಕೆ ಕಾನೂನಿನ ಮೂಲಕ ರಾಷ್ಟ್ರಪತಿಯವರ ವೇತನವನ್ನು ನಿರ್ಧರಿಸುತ್ತದೆ. ರಾಷ್ಟ್ರಪತಿಯವರ ವೇತನ ಹಾಗೂ ಭತ್ಯೆಗಳನ್ನು ಅವರಿಗೆ ಅನನುಕೂಲವಾಗುವಂತೆ ಬದಲಾಯಿಸಲು ಬರುವದಿಲ್ಲ. ಅಂದರೆ ಅವರ ಕಾರ್ಯಾವಧಿಯಲ್ಲಿ ವೇತನ ಕಡಿಮೆ ಮಾಡಲು ಬರುವದಿಲ್ಲ. ರಾಷ್ಟ್ರಪತಿಯವರ ಈಗಿನ ತಿಂಗಳ ವೇತನ ರೂ. ೫೦,೦೦೦ ಇದೆ. ಇದರೊಂದಿಗೆ ಬಾಡಿಗೆ ರಹಿತ ವಾಸಸ್ಥಾನ, ವಿದ್ಯುತ್ತು, ಸಾರಿಗೆ ಸಂಪರ್ಕ ಸೌಲಭ್ಯ, ಸಿಬ್ಬಂದಿ ಸೌಲಭ್ಯ, ವೈದ್ಯಕೀಯ ವೆಚ್ಚ, ಪ್ರವಾಸ ವೆಚ್ಚ, ಮನರಂಜನೆ ವೆಚ್ಚ ಮುಂತಾದವುಗಳನ್ನು ಭರಿಸಲಾಗುತ್ತದೆ. ರಾಷ್ಟ್ರಪತಿಯವರು ಪಡೆಯುವ ವೇತನ ಆದಾಯ ತೆರಿಗೆ ಮುಕ್ತವಾಗಿದೆ. ನಿವೃತ್ತಿಯ ನಂತರ ಅವರಿಗೆ ವರ್ಷಕ್ಕೆ ಮೂರು ಲಕ್ಷ ನಿವೃತ್ತಿ ವೇತನ ದೊರೆಯುತ್ತದೆ. ರಾಷ್ಟ್ರಪತಿಯವರ ವೇತನ ಹಾಗೂ ಭತ್ಯೆಗಳನ್ನು ಸಂಚಿತ ನಿಧಿಯಿಂದ ಪಡೆಯಲಾಗುತ್ತದೆ.

### ರಾಷ್ಟ್ರಪತಿಗಿರುವ ವಿನಾಯತಿ

ಅತ್ಯಂತ ಗೌರವಾನ್ವಿತ ಹುದ್ದೆಯಾದ ರಾಷ್ಟ್ರಪತಿಯವರ ಸ್ಥಾನದಲ್ಲಿರುವವರಿಗೆ ಕೆಲವೊಂದು ಕಾನೂನುಬದ್ಧ ವಿನಾಯತಿಗಳಿವೆ. ರಾಷ್ಟ್ರಪತಿಯವರು ಕರ್ತವ್ಯ ನಿರ್ವಹಿಸಿದ ಬಗ್ಗೆ ಅಥವಾ ಅಧಿಕಾರ ಚಲಾವಣೆ ಮಾಡಿದ ಬಗ್ಗೆ ನ್ಯಾಯಾಂಗ ವಿಚಾರಣೆಗೆ ಅವಕಾಶವಿಲ್ಲ. ಅವರ ವಿರುದ್ಧ ಮೊಕದ್ದಮೆ ದಾಖಲಿಸಲು ಬರುವದಿಲ್ಲ. ರಾಷ್ಟ್ರಪತಿಯವರ ಬಂಧನಕ್ಕಾಗಿ ಆಜ್ಞೆ ಹೊರಡಿಸುವ ಅಧಿಕಾರ ಯಾವದೇ ನ್ಯಾಯಾಲಯಕ್ಕಿರುವದಿಲ್ಲ. ಆದರೆ ೨೦೦೩ ರಲ್ಲಿ ಗುಜರಾತಿನ ಜಿಲ್ಲಾ ನ್ಯಾಯಾಧೀಶ ಬ್ರಹ್ಮಭಟ್ ಎಂಬ ತಲೆತಿರುಕ ಲಂಚದ ಆಸೆಗಾಗಿ ರಾಷ್ಟ್ರಪತಿ ಹಾಗೂ ಸರ್ವೋನ್ನತ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರ ಬಂಧನಕ್ಕಾಗಿ ಹೊರಡಿಸಿದ ಆಜ್ಞೆ ಈ ದೇಶದ ನ್ಯಾಯ ವ್ಯವಸ್ಥೆಗೆ ತಗುಲಿದ ಒಂದು ಕಪ್ಪು ಚುಕ್ಕೆಯಾಗಿದೆ.

### ಪದಚ್ಯುತಿ

ಸಂವಿಧಾನದ ಉಲ್ಲಂಘನೆಗಾಗಿ ರಾಷ್ಟ್ರಪತಿಯವರನ್ನು ಮಹಾಭಿಯೋಗ ಅಥವಾ ವಾಗ್ದಂಡನೆಯ ಮೂಲಕ ಅಧಿಕಾರದಿಂದ ಹೊರಹಾಕಬಹುದು. ಸಂವಿಧಾನದ ೬೧ನೇ ಕಲಮಿನ ಪ್ರಕಾರ ವಾಗ್ದಂಡನಾ ನಿರ್ಣಯವನ್ನು ಸಂಸತ್ತಿನ ಯಾವ ಸದನದಲ್ಲಾದರೂ ಮಂಡಿಸಬೇಕು. ಸದನದ ೧/೪ ಸದಸ್ಯರು ಸಹಿಮಾಡಿದ ಆಪಾದನಾ

ನೋಟಿಸನ್ನು ೧೪ ದಿನ ಮೊದಲು ನೀಡಬೇಕು. ಸದನದಲ್ಲಿ ಹಾಜರಿರುವ ಸದಸ್ಯರ ೨/೩ ಬಹುಮತದಿಂದ ನಿರ್ಣಯವನ್ನು ಮಂಡಿಸಬಹುದು. ಒಂದು ಸದನದಲ್ಲಿ ನಿರ್ಣಯ ಮಂಡನೆಯಾದರೆ ಇನ್ನೊಂದು ಸದನ ಆಪಾದನೆಗಳ ವಿಚಾರಣೆ ನಡೆಸಿ ೨/೩ ಬಹುಮತದಿಂದ ನಿರ್ಣಯ ಸ್ವೀಕರಿಸಿದರೆ ರಾಷ್ಟ್ರಪತಿಯವರು ಸ್ಥಾನ ಕಳೆದುಕೊಳ್ಳುತ್ತಾರೆ.

ಭಾರತದಲ್ಲಿ ಇದುವರೆಗೂ ಯಾವ ರಾಷ್ಟ್ರಪತಿಯೂ ವಾಗ್ದಂಡನೆಯ ಮೂಲಕ ಅಧಿಕಾರ ಕಳೆದುಕೊಂಡಿಲ್ಲ. ೧೯೭೦ ರಲ್ಲಿ ವಿ. ವಿ. ಗಿರಿ ಹಾಗೂ ೧೯೮೯ ರಲ್ಲಿ ನೀಲಂ ಸಂಜೀವರೆಡ್ಡಿ ಅವರ ಪದಚ್ಯುತಿ ಪ್ರಯತ್ನ ನಡೆದರೂ ನಂತರ ಕೈ ಬಿಡಲಾಯಿತು.

## ✷ ಪಾತ್ರ ಮತ್ತು ಕಾರ್ಯಗಳು

ರಾಷ್ಟ್ರಪತಿಯವರ ಹುದ್ದೆ ರಾಷ್ಟ್ರದ ಗೌರವ, ಘನತೆಗಳ ಪ್ರತೀಕವಾಗಿದೆ. ಆಡಳಿತಾತ್ಮಕ, ಶಾಸನೀಯ, ನ್ಯಾಯಿಕ, ರಾಜತಾಂತ್ರಿಕ, ಸೈನಿಕ ಹಾಗೂ ತುರ್ತುಪರಿಸ್ಥಿತಿಯ ಅಧಿಕಾರಗಳನ್ನು ಅವರು ಹೊಂದಿದ್ದಾರೆ. ರಾಷ್ಟ್ರಪತಿಯವರ ಅಧಿಕಾರ ಕೇಂದ್ರ ಸರಕಾರದ ಎಲ್ಲ ಕ್ಷೇತ್ರಗಳಿಗೂ ವ್ಯಾಪಿಸಿದೆ.

ಕೆಲ ವಿಮರ್ಶಕರು ರಾಷ್ಟ್ರಪತಿಯವರನ್ನು ರಬ್ಬರ್ ಸ್ಟ್ಯಾಂಪ್‌ಗೆ ಹೋಲಿಸುತ್ತಾರೆ. ಅದು ಸರಿಯಲ್ಲ. ಹಲವಾರು ಸಂದರ್ಭಗಳಲ್ಲಿ ರಾಷ್ಟ್ರಪತಿಯವರು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವ ಅವಕಾಶ ಹೊಂದಿದ್ದಾರೆ. ಲೋಕಸಭೆಯಲ್ಲಿ ಯಾವದೇ ಪಕ್ಷ ಅಥವಾ ಪಕ್ಷಗಳ ಗುಂಪು ಬಹುಮತ ಪಡೆಯದಿದ್ದಾಗ ಪ್ರಧಾನಿಯ ಆಯ್ಕೆ ರಾಷ್ಟ್ರಪತಿಯ ವಿವೇಚನೆಗೆ ಬಿಟ್ಟಿದ್ದು. ಲೋಕಸಭೆಯಲ್ಲಿ ಬಹುಮತದ ಬೆಂಬಲ ಪಡೆಯಲು ಸಮರ್ಥನಾದ ನಾಯಕನನ್ನು ಪ್ರಧಾನಿಯನ್ನಾಗಿ ನೇಮಿಸುವ ಜವಾಬ್ದಾರಿ ಅವರದು. ೧೯೯೧ ರಲ್ಲಿ ಯಾವದೇ ಪಕ್ಷ ಲೋಕ ಸಭೆಯಲ್ಲಿ ಬಹುಮತ ಪಡೆಯದಿದ್ದಾಗ ರಾಷ್ಟ್ರಪತಿ ವೆಂಕಟರಾಮನ್‌ರವರು ಅಲ್ಪಮತ ಪಕ್ಷದ ನಾಯಕ ಪಿ. ವಿ. ನರಸಿಂಹರಾವ್ ಅವರನ್ನು ಪ್ರಧಾನಿಯನ್ನಾಗಿ ನೇಮಕ ಮಾಡಿದರು. ನಂತರ ನರಸಿಂಹರಾವ್ ಲೋಕಸಭೆಯಲ್ಲಿ ಬಹುಮತ ಸಾಬೀತು ಪಡಿಸಿ ೫ ವರ್ಷ ಅಧಿಕಾರ ಲ್ಲಿ ಮುಂದುವರೆದರು. ಲೋಕ ಸಭೆಯ ವಿಸರ್ಜನೆಯ ಪ್ರಸಂಗದಲ್ಲಿ ರಾಷ್ಟ್ರಪತಿ ಬಹುಮತ ಕಳೆದುಕೊಂಡ ಪ್ರಧಾನಿಯ ಸಲಹೆ ಮೇರೆಗೆ ಕಾರ್ಯನಿರ್ವಹಿಸಬೇಕಾಗಿಲ್ಲ.

ರಾಷ್ಟ್ರಪತಿಯವರು ಕೆಳಗೆ ವಿವರಿಸಲಾದ ಮಹತ್ವದ ಕಾರ್ಯಗಳನ್ನು ನಿರ್ವಹಿಸುತ್ತಾರೆ.

### ಆಡಳಿತ ಕಾರ್ಯಗಳು (ಕಾರ್ಯಾಂಗದ ಕಾರ್ಯಗಳು)

ಸಂವಿಧಾನದ ೫೩ ನೇ ಕಲಮಿನ ಪ್ರಕಾರ ಕಾರ್ಯಾಂಗದ ಎಲ್ಲ

ಅಧಿಕಾರಗಳನ್ನು ರಾಷ್ಟ್ರಪತಿಯವರಿಗೆ ನೀಡಲಾಗಿದೆ. ೭೪ ನೇ ಕಲಮಿನ ಪ್ರಕಾರ ಪ್ರಧಾನ ಮಂತ್ರಿಯ ನಾಯಕತ್ವದ ಮಂತ್ರಿ ಮಂಡಲದ ಸಲಹೆಯ ಮೇರೆಗೆ ಈ ಅಧಿಕಾರಗಳನ್ನು ಚಲಾಯಿಸಬೇಕು. ಸಂವಿಧಾನದ ೭೫ ನೇ ಕಲಮಿನ ಪ್ರಕಾರ ರಾಷ್ಟ್ರಪತಿಯವರು ಪ್ರಧಾನಿಯನ್ನು ನೇಮಿಸುತ್ತಾರೆ. ಸಂಸದೀಯ ಪದ್ಧತಿಯ ಪ್ರಕಾರ ಲೋಕ ಸಭೆಯಲ್ಲಿ ಬಹುಮತ ಪಡೆದ ಪಕ್ಷದ ನಾಯಕನನ್ನು ಪ್ರಧಾನಿಯನ್ನಾಗಿ ನೇಮಿಸಬೇಕಾಗುತ್ತದೆ. ಯಾವದೇ ಪಕ್ಷ ಲೋಕಸಭೆಯಲ್ಲಿ ಬಹುಮತ ಹೊಂದಿರದಿದ್ದರೆ ರಾಷ್ಟ್ರಪತಿಯವರು ವಿವೇಚನಾಧಿಕಾರ ಉಪಯೋಗಿಸಿ ಪ್ರಧಾನಿಯ ನೇಮಕ ಮಾಡಬೇಕಾಗುತ್ತದೆ. ೨೦೦೪ ರ ಚುನಾವಣೆಯ ನಂತರ ರಚಿತವಾದ ೧೪ ನೇ ಲೋಕಸಭೆಯಲ್ಲಿ ಯಾವದೇ ಪಕ್ಷ ಬಹುಮತ ಪಡೆಯದಿದ್ದಾಗ ರಾಷ್ಟ್ರಪತಿ ಡಾ.ಅಬ್ದುಲ್ ಕಲಾಂರವರು ಲೋಕಸಭೆಯಲ್ಲಿ ಬಹುಮತ ಸಾಬೀತು ಪಡಿಸಲು ಸಾಧ್ಯವಿದ್ದ ಡಾ. ಮನಮೋಹನ ಸಿಂಗ್‌ರನ್ನು ಪ್ರಧಾನಿಯಾಗಿ ನೇಮಕ ಮಾಡಿದರು.

ಕೇಂದ್ರ ಸರಕಾರದ ಪ್ರಮುಖ ನೇಮಕಗಳನ್ನೆಲ್ಲಾ ಮಂತ್ರಿಮಂಡಲದ ಸಲಹೆಯ ಮೇರೆಗೆ ರಾಷ್ಟ್ರಪತಿಯವರು ಮಾಡುತ್ತಾರೆ. ರಾಜ್ಯಪಾಲರು, ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚನ್ಯಾಯಾಲಯಗಳ ನ್ಯಾಯಾಧೀಶರು, ಅಟಾರ್ನಿಜನರಲ್, ಕಂಪ್ಟ್ರೋಲರ್ ಮತ್ತು ಆಡಿಟರ್ ಜನರಲ್, ಕೇಂದ್ರ ಹಾಗೂ ಜಂಟಿ ಲೋಕ ಸೇವಾ ಆಯೋಗಗಳ ಅಧ್ಯಕ್ಷರು ಹಾಗೂ ಸದಸ್ಯರು, ಚುನಾವಣಾ ಆಯುಕ್ತರು, ಮುಂತಾದವರನ್ನು ರಾಷ್ಟ್ರಪತಿಯವರು ನೇಮಕ ಮಾಡುತ್ತಾರೆ. ಕೇಂದ್ರಾಡಳಿತ ಪ್ರದೇಶಗಳ ಆಡಳಿತಾಧಿಕಾರಿಗಳನ್ನುನೇಮಿಸುವ ಹಾಗೂ ವಜಾಮಾಡುವ ಅಧಿಕಾರ ರಾಷ್ಟ್ರಪತಿ- ಯವರಿಗಿದೆ. ಮಂತ್ರಿಮಂಡಲದ ಸಭೆಯಲ್ಲಿ ತೆಗೆದುಕೊಳ್ಳುವ ತೀರ್ಮಾನ ಕುರಿತು ರಾಷ್ಟ್ರಪತಿಯವರಿಗೆ ಪ್ರಧಾನಿ ವಿವರಿಸಬೇಕಾಗುತ್ತದೆ.

## ಶಾಸನೀಯ ಕಾರ್ಯಗಳು

ಕೇಂದ್ರ ಶಾಸನಾಂಗವಾದ ಸಂಸತ್ತು ರಾಷ್ಟ್ರಪತಿ, ಲೋಕಸಭೆ ಹಾಗೂ ರಾಜ್ಯ ಸಭೆಗಳನ್ನು ಒಳಗೊಂಡಿದೆ. ರಾಷ್ಟ್ರಪತಿಯವರು ಸಂಸತ್ತಿನ ಅವಿಭಾಜ್ಯ ಅಂಗವಾಗಿದ್ದಾರೆ. ಕೆಳಗಿನ ಶಾಸನೀಯ ಕಾರ್ಯಗಳನ್ನು ರಾಷ್ಟ್ರಪತಿಯವರು ನಿರ್ವಹಿಸುತ್ತಾರೆ.

೧. ಸಂಸತ್ತಿನ ಅಧಿವೇಶನ ಕರೆಯುವ, ಮುಂದೂಡುವ ಹಾಗೂ ಲೋಕಸಭೆಯನ್ನು ವಿಸರ್ಜಿಸುವ ಅಧಿಕಾರ ರಾಷ್ಟ್ರಪತಿಯವರಿಗಿದೆ. ಪ್ರಧಾನಿಯ ಸಲಹೆಯ ಮೇರೆಗೆ ಈ ಕಾರ್ಯಗಳನ್ನು ರಾಷ್ಟ್ರಪತಿಯವರು ನಿರ್ವಹಿಸುತ್ತಾರೆ.

೨. ಲೋಕಸಭಾ ಚುನಾವಣೆಗಳ ನಂತರದ ಮೊದಲ ಅಧಿವೇಶನ ಹಾಗೂ ಪ್ರತಿ ವರ್ಷ ಕರೆಯಲಾಗುವ ಮೊದಲ ಅಧಿವೇಶನದಲ್ಲಿ ರಾಷ್ಟ್ರಪತಿಯವರು ಎರಡೂ ಸದನಗಳ

ಜಂಟಿ ಸಭೆಯನ್ನು ಉದ್ದೇಶಿಸಿ ಸರಕಾರದ ಧ್ಯೇಯ ಧೋರಣೆ ವಿವರಿಸುವ ಭಾಷಣ ಮಾಡುತ್ತಾರೆ. ರಾಷ್ಟ್ರಪತಿಯ ಈ ಭಾಷಣ ಮಂತ್ರಿಮಂಡಲದಿಂದ ತಯಾರಿಸಲ್ಪಟ್ಟಿರುತ್ತದೆ.

೩. ಯಾವದೇ ಒಂದು ಸಾಮಾನ್ಯ ಮಸೂದೆಯ ಬಗ್ಗೆ ಎರಡೂ ಸದನಗಳ ನಡುವೆ ಭಿನ್ನಾಭಿಪ್ರಾಯವುಂಟಾದರೆ ಎರಡೂ ಸದನಗಳ ಜಂಟಿ ಅಧಿವೇಶನ ಕರೆಯುತ್ತಾರೆ.

೪. ಲೋಕಸಭೆಗೆ ಆಂಗ್ಲೋ ಇಂಡಿಯನ್ನರು ಆಯ್ಕೆಯಾಗಿರದಿದ್ದರೆ ಆ ಸಮುದಾಯದ ಇಬ್ಬರನ್ನು ನಾಮಕರಣ ಮಾಡುತ್ತಾರೆ.

೫. ಸಂಸತ್ತು ಅಂಗೀಕರಿಸಿದ ಮಸೂದೆ ರಾಷ್ಟ್ರಪತಿಯವರ ಅನುಮೋದನೆ ಹಾಗೂ ಸಹಿಯೊಂದಿಗೆ ಶಾಸನವಾಗುತ್ತದೆ. ಸಾಮಾನ್ಯ ಮಸೂದೆಯನ್ನು ತಡೆ ಹಿಡಿಯುವ ಅಥವಾ ಪುನರ್ ಪರಿಶೀಲನೆಗಾಗಿ ಕಳಿಸುವ ಅಧಿಕಾರ ರಾಷ್ಟ್ರಪತಿಯವರಿಗಿದೆ. ಈ ಅಧಿಕಾರಕ್ಕೆ ನಿಷೇದಾಧಿಕಾರ (Veto Power) ಎನ್ನುತ್ತಾರೆ. ಎರಡನೇ ಸಲ ಅಂಗೀಕಾರವಾಗಿ ಬಂದ ಮಸೂದೆಗೆ ಸಹಿ ಮಾಡಲೇ ಬೇಕಾಗುತ್ತದೆ.

೬. ಸಂವಿಧಾನದ ೧೨೩ ನೇ ಕಲಮಿನ ಮೇರೆಗೆ ಸುಗ್ರೀವಾಜ್ಞೆ ಹೊರಡಿಸುವ ಅಧಿಕಾರ ರಾಷ್ಟ್ರಪತಿಗಿದೆ. ಕಾರ್ಯಾಂಗ ರಚಿಸಿದ ಕಾನೂನಿಗೆ ಸುಗ್ರೀವಾಜ್ಞೆ ಎನ್ನಲಾಗುತ್ತದೆ. ಸಂಸತ್ತಿನ ಅಧಿವೇಶನ ನಡೆಯದಿದ್ದಾಗ ಹೊಸ ಕಾನೂನೊಂದರ ಅಗತ್ಯತೆ ಕಂಡು ಬಂದರೆ ಸುಗ್ರೀವಾಜ್ಞೆ ಹೊರಡಿಸಲಾಗುತ್ತದೆ. ಸುಗ್ರೀವಾಜ್ಞೆಯ ಅವಧಿ ಆರು ತಿಂಗಳುಗಳು. ಸಂಸತ್ತಿನ ಅಧಿವೇಶನ ಪ್ರಾರಂಭವಾದ ಆರು ವಾರಗಳೊಳಗಾಗಿ ಸುಗ್ರೀವಾಜ್ಞೆಯನ್ನು ಸಂಸತ್ತಿನ ಮುಂದೆ ಮಂಡಿಸಿ ಒಪ್ಪಿಗೆ ಪಡೆಯಬೇಕು. ಇಲ್ಲದಿದ್ದರೆ ಆರು ವಾರಗಳ ನಂತರ ಅದು ರದ್ದಾಗುತ್ತದೆ. ಇಂದಿರಾಗಾಂಧಿಯವರ ಅಧಿಕಾರದ ಅವಧಿಯಲ್ಲಿ ಸುಗ್ರೀವಾಜ್ಞೆ ಹೊರಡಿಸುವ ಅಧಿಕಾರ ದುರುಪಯೋಗದ ಉದಾಹರಣೆಗಳು ಸಾಕಷ್ಟು ಇವೆ. ಅಧಿವೇಶನ ನಡೆದಾಗ ಬರುವ ಶನಿವಾರ ಹಾಗೂ ರವಿವಾರದ ಬಿಡುವಿನ ಸಂದರ್ಭದಲ್ಲೂ ಸುಗ್ರೀವಾಜ್ಞೆ ಹೊರಡಿಸಿದ್ದಿದೆ.

೭. ರಾಜ್ಯ ಶಾಸನಾಂಗ ಪಾಸು ಮಾಡಿದ ಮಸೂದೆಗಳನ್ನು ರಾಜ್ಯಪಾಲರು ರಾಷ್ಟ್ರಪತಿಯವರ ಅನುಮೋದನೆಗೆ ಕಳಿಸಬಹುದು. ಅವುಗಳಿಗೆ ರಾಷ್ಟ್ರಪತಿಯ ಒಪ್ಪಿಗೆ ದೊರೆತರೆ ಮಾತ್ರ ಶಾಸನಗಳಾಗುತ್ತವೆ. ೧೯೮೪ ರಲ್ಲಿ ಕರ್ನಾಟಕ ವಿಧಾನ ಮಂಡಲ ಪಾಸು ಮಾಡಿದ್ದ ಪಂಚಾಯತ ರಾಜ್ ವಿಧೇಯಕವನ್ನು ರಾಷ್ಟ್ರಪತಿಯವರ ಅನುಮೋದನೆಗೆ ಕಳಿಸಲಾಗಿತ್ತು. ಕರ್ನಾಟಕದ ಆಗಿನ ಪಂಚಾಯತ ರಾಜ್ ಮಂತ್ರಿ ಹಾಗೂ ವಿಧೇಯಕದ ರೂವಾರಿ ನಜೀರ ಸಾಹೇಬರು ರಾಷ್ಟ್ರಪತಿ ಭವನದೆದುರು ಸತ್ಯಾಗ್ರಹ ಮಾಡುವದಾಗಿ ಎಚ್ಚರಿಕೆ ನೀಡಿದ ನಂತರ ವಿಧೇಯಕಕ್ಕೆ ಒಪ್ಪಿಗೆ ದೊರೆಯಿತು.

೮. ಸಂಸತ್ತಿನ ಎರಡೂ ಸದನಗಳನ್ನು ಪ್ರತ್ಯೇಕವಾಗಿ ಅಥವಾ ಜಂಟಿಯಾಗಿ ಉದ್ದೇಶಿಸಿ

ಮಾತನಾಡುವ ಅಥವಾ ಸಂದೇಶ ಕಳಿಸುವ ಅಧಿಕಾರ ರಾಷ್ಟ್ರಪತಿಗಿದೆ.

೯. ವಿವಿಧ ಆಯೋಗಗಳು ನೀಡುವ ವರದಿಯನ್ನು ರಾಷ್ಟ್ರಪತಿಯವರು ಸಂಸತ್ತಿನ ಮುಂದೆ ಮಂಡಿಸುತ್ತಾರೆ.

## ಹಣಕಾಸಿನ ಕಾರ್ಯಗಳು

ಪ್ರತಿ ವರ್ಷ ಹಣಕಾಸಿನ ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸುವಂತೆ ರಾಷ್ಟ್ರಪತಿಯವರು ನೋಡಿಕೊಳ್ಳುತ್ತಾರೆ. ರಾಷ್ಟ್ರಪತಿಯವರ ಅನುಮತಿ ಪಡೆದು ಹಣಕಾಸಿನ ಸಚಿವರು ಮುಂಗಡ ಪತ್ರವನ್ನು ಮಂಡಿಸುತ್ತಾರೆ. ಸಂಸತ್ತಿನ ಅನುಮೋದನೆ ಪಡೆದ ಹಣಕಾಸಿನ ಮಸೂದೆ ರಾಷ್ಟ್ರಪತಿಯವರ ಒಪ್ಪಿಗೆ ಯೊಂದಿಗೆ ಶಾಸನವಾಗುತ್ತದೆ. ಐದು ವರ್ಷಗಳಿಗೊಮ್ಮೆ ಹಣಕಾಸಿನ ಆಯೋಗವನ್ನುರಾಷ್ಟ್ರಪತಿಗಳು ರಚಿಸುತ್ತಾರೆ. ಕೇಂದ್ರ ಹಾಗೂ ರಾಜ್ಯಗಳ ನಡುವೆ ಹಣಕಾಸಿನ ಆದಾಯ ಮೂಲಗಳ ವಿತರಣೆಗಾಗಿ ಆಯೋಗ ಸಲಹೆ ನೀಡುತ್ತದೆ. ಆಯೋಗದ ವರದಿಯನ್ನು ರಾಷ್ಟ್ರಪತಿಯವರು ಸಂಸತ್ತಿನಲ್ಲಿ ಮಂಡಿಸುತ್ತಾರೆ. ದೇಶದ ಹಣಕಾಸಿನ ಪರಿಸ್ಥಿತಿ ಹದಗೆಟ್ಟರೆ ಸಂವಿಧಾನದ ೩೬೦ ನೇ ಕಲಮಿನ ಮೇರೆಗೆ ಹಣಕಾಸಿನ ತುರ್ತು ಪರಿಸ್ಥಿತಿ ಘೋಷಿಸುತ್ತಾರೆ.

## ನ್ಯಾಯಿಕ ಕಾರ್ಯಗಳು

ಸರ್ವೋನ್ನತ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸ್ವೀಕರಿಸುವ ಅಧಿಕಾರ ರಾಷ್ಟ್ರಪತಿಯವರಿಗಿದೆ. ಕ್ಷಮಾದಾನ ಮಾಡುವ, ಶಿಕ್ಷೆ ಕಡಿಮೆ ಮಾಡುವ ಅಥವಾ ಮುಂದೂಡುವ ಅಧಿಕಾರ ಅವರಿಗಿದೆ. ಮರಣದಂಡನೆಗೆ ಗುರಿಯಾದವರ ಮೇಲ್ಮನವಿ ಸ್ವೀಕರಿಸಿ ತೀರ್ಮಾನ ತೆಗೆದುಕೊಳ್ಳುವ ಅಧಿಕಾರ ರಾಷ್ಟ್ರಪತಿಯವರಿಗಿದೆ. ಮಂತ್ರಿ ಮಂಡಲದ ಸಲಹೆಯ ಮೇರೆಗೆ ಈ ವಿಷಯದಲ್ಲಿ ತೀರ್ಮಾನ ತೆಗೆದುಕೊಳ್ಳ ಲಾಗುತ್ತದೆ. ದೇಶದ್ರೋಹಿಗಳಿಗೆ ಕ್ಷಮಾದಾನ ಮಾಡಬೇಕಾದರೆ ಸಂಸತ್ತಿನ ಅನುಮತಿ ಪಡೆಯಬೇಕಾಗುತ್ತದೆ.

ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚನ್ಯಾಯಾಲಯಗಳ ಮುಖ್ಯ ನ್ಯಾಯಮೂರ್ತಿಗಳು ಹಾಗೂ ಇತರ ನ್ಯಾಯಾಧೀಶರ ನೇಮಕಾಧಿಕಾರ ರಾಷ್ಟ್ರಪತಿಯವರಿಗಿದೆ. ಸರ್ವೋನ್ನತ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರ ಸಲಹೆಯ ಮೇರೆಗೆ ಈ ನೇಮಕಗಳನ್ನು ಮಾಡಬೇಕಾಗುತ್ತದೆ.

ಮಸೂದೆಯೊಂದಕ್ಕೆ ಒಪ್ಪಿಗೆ ನೀಡುವ ಮೊದಲು ಅದರ ಸಂವಿಧಾನ ಬದ್ಧತೆ ಕುರಿತು ಸರ್ವೋನ್ನತ ನ್ಯಾಯಾಲಯದ ಸಲಹೆ ಪಡೆಯುವ ಅಧಿಕಾರ ರಾಷ್ಟ್ರಪತಿಯ ವರಿಗಿದೆ.

## ಸೈನ್ಯಕ್ಕೆ ಸಂಬಂಧಿಸಿದ ಕಾರ್ಯಗಳು

ರಾಷ್ಟ್ರಪತಿಯವರು ಸೇನಾಬಲಗಳ ಮಹಾದಂಡನಾಯಕರಾಗಿರುತ್ತಾರೆ. ವಿದೇಶಗಳ ವಿರುದ್ಧ ಯುದ್ಧ ಸಾರುವ ಅಧಿಕಾರ ಅವರಿಗಿದೆ. ಆದರೆ ಯುದ್ಧ ಘೋಷಣೆಗೆ ಸಂಸತ್ತಿನ ಅಂಗೀಕಾರ ಅಗತ್ಯವಾಗಿದೆ. ರಕ್ಷಣಾ ಇಲಾಖೆಯ ಮೂರೂ ವಿಭಾಗಗಳ ಮುಖ್ಯಸ್ಥರನ್ನು ರಾಷ್ಟ್ರಪತಿಯವರು ನೇಮಕ ಮಾಡುತ್ತಾರೆ.

### ರಾಜತಾಂತ್ರಿಕ ಕಾರ್ಯಗಳು

ವಿದೇಶಾಂಗ ವ್ಯವಹಾರಗಳ ವಿಷಯದಲ್ಲಿ ರಾಷ್ಟ್ರಪತಿ ಸಾಂಕೇತಿಕ ಅಧಿಕಾರ ಹೊಂದಿದ್ದಾರೆ. ವಿದೇಶಗಳೊಂದಿಗಿನ ಎಲ್ಲ ವ್ಯವಹಾರಗಳು ರಾಷ್ಟ್ರಪತಿಯವರ ಹೆಸರಿನಲ್ಲಿ ನಡೆಯುತ್ತವೆ. ವಿದೇಶಗಳಲ್ಲಿ ಅವರು ಭಾರತವನ್ನು ಪ್ರತಿನಿಧಿಸುತ್ತಾರೆ. ಪರರಾಷ್ಟ್ರಗಳಿಗೆ ಭಾರತದ ರಾಯಭಾರಿಗಳನ್ನು ನೇಮಿಸುತ್ತಾರೆ. ವಿದೇಶಗಳ ರಾಯಭಾರಿಗಳನ್ನು ಸಮಾರಂಭದ ಮೂಲಕ ಸ್ವಾಗತಿಸುತ್ತಾರೆ. ಬೇರೆ ರಾಷ್ಟ್ರಗಳೊಂದಿಗೆ ಉತ್ತಮ ಬಾಂಧವ್ಯ ಬೆಳೆಸಲು ರಾಷ್ಟ್ರಪತಿ ಪ್ರಯತ್ನಿಸುತ್ತಾರೆ.

### ತುರ್ತು ಪರಿಸ್ಥಿತಿಯ ಕಾರ್ಯಗಳು

ಸಂವಿಧಾನದ ೩೫೨ ರಿಂದ ೩೬೦ರ ವರೆಗಿನ ಕಲಮುಗಳು ರಾಷ್ಟ್ರಪತಿ ಹೊಂದಿದ ತುರ್ತುಪರಿಸ್ಥಿತಿಯ ಅಧಿಕಾರಗಳನ್ನು ವಿವರಿಸುತ್ತವೆ. ಮುಂದೆ ವಿವರಿಸಿದ ಮೂರು ಸಂದರ್ಭಗಳಲ್ಲಿ ರಾಷ್ಟ್ರಪತಿಯವರು ತುರ್ತುಪರಿಸ್ಥಿತಿ ಸಾರಬಹುದು. (೧) ವಿದೇಶಿಯರ ದಾಳಿ ಅಥವಾ ಆಂತರಿಕ ದಂಗೆಯುಂಟಾದಾಗ ೩೫೨ ನೇ ಕಲಮಿನ ಮೇರೆಗೆ ಗಂಡಾಂತರ ಪರಿಸ್ಥಿತಿ ಸಾರಬಹುದು. (೨) ರಾಜ್ಯವೊಂದರಲ್ಲಿ ಸಂವಿಧಾನ ಬದ್ಧವಾಗಿ ಸರಕಾರ ನಡೆಸಲು ಸಾಧ್ಯವಿರದಿದ್ದಾಗ ರಾಜ್ಯಪಾಲರ ವರದಿಯ ಆಧಾರದ ಮೇಲೆ 356 ನೇ ಕಲಮಿನನ್ವಯ ಆ ರಾಜ್ಯದಲ್ಲಿ ರಾಷ್ಟ್ರಪತಿ ಆಡಳಿತ ಘೋಷಿಸಬಹುದು. ಆ ಸಂದರ್ಭದಲ್ಲಿ ರಾಜ್ಯಪಾಲರ ಮೂಲಕ ರಾಷ್ಟ್ರಪತಿಯವರು ಆಡಳಿತ ನಡೆಸುತ್ತಾರೆ. (೩) ರಾಷ್ಟ್ರದ ಯಾವದೇ ಭಾಗದಲ್ಲಿ ಅಥವಾ ಇಡೀ ರಾಷ್ಟ್ರದಲ್ಲಿ ಆರ್ಥಿಕ ಮುಗ್ಗಟ್ಟು ಉಂಟಾದಾಗ ಸಂವಿಧಾನದ ೩೬೦ ನೇ ಕಲಮಿನ ಮೇರೆಗೆ ಹಣಕಾಸಿನ ತುರ್ತು ಪರಿಸ್ಥಿತಿ ಸಾರಬಹುದು.

ತುರ್ತು ಪರಿಸ್ಥಿತಿ ಜಾರಿಗೊಳಿಸಿದ ನಂತರ ಎರಡು ತಿಂಗಳೊಳಗಾಗಿ ಸಂಸತ್ತಿನ ಅನುಮೋದನೆ ಪಡೆಯಬೇಕು. ಇಲ್ಲದಿದ್ದರೆ ತುರ್ತುಪರಿಸ್ಥಿತಿ ರದ್ದಾಗುತ್ತದೆ. ೩೫೨ ಹಾಗೂ ೩೬೦ ನೇ ಕಲಮಿನ ಮೇರೆಗೆ ತುರ್ತುಪರಿಸ್ಥಿತಿ ಸಾರಿದಾಗ ಮೂಲಭೂತ ಹಕ್ಕುಗಳನ್ನು ರದ್ದುಗೊಳಿಸಬಹುದು. ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ರಾಜ್ಯ ಪಟ್ಟಿಯಲ್ಲಿರುವ ವಿಷಯಗಳ ಬಗ್ಗೆ ಕಾನೂನು ರಚಿಸುವ ಅಧಿಕಾರ ಸಂಸತ್ತಿಗೆ ಬರುತ್ತದೆ. ಆ ಸಂದರ್ಭದಲ್ಲಿ ಕೇಂದ್ರ ಸರಕಾರ ರಾಜ್ಯ ಸರಕಾರಗಳಿಗೆ ಆಡಳಿತ ನಡೆಸುವ ಬಗ್ಗೆ

ನಿರ್ದೇಶನ ನೀಡಬಹುದಾಗಿದೆ. ಗಂಡಾಂತರ ಸ್ಥಿತಿಯನ್ನು ಎದುರಿಸುವ ಸಲುವಾಗಿ ಸಂಸತ್ತು ಇಡೀ ರಾಷ್ಟ್ರಕ್ಕೆ ಅನ್ವಯಿಸುವ ಕಾನೂನು ರಚಿಸಬಹುದು. ತುರ್ತು ಪರಿಸ್ಥಿತಿ ರದ್ದಾದ ಆರು ತಿಂಗಳ ನಂತರ ಆ ಕಾನೂನುಗಳು ರದ್ದಾಗುತ್ತದೆ. ತುರ್ತು ಪರಿಸ್ಥಿತಿ ಸಾರುವ ಬಗ್ಗೆ ಸಲಹೆ ನೀಡುವ ಮಂತ್ರಿ ಮಂಡಲ ಸಂಸತ್ತಿನ ನಿಯಂತ್ರಣಕ್ಕೊಳಪಟ್ಟು ಕಾರ್ಯ ನಿರ್ವಹಿಸುವದರಿಂದ ತುರ್ತುಸ್ಥಿತಿಯ ಅಧಿಕಾರ ದುರುಪಯೋಗ ಕಡಿಮೆ ಎಂದು ಹೇಳಬಹುದು.

## ರಾಷ್ಟ್ರಪತಿ - ಸಂವಿಧಾನತ್ಮಕ ಮುಖ್ಯಸ್ಥ

ಭಾರತದ ಸಂಸದೀಯ ವ್ಯವಸ್ಥೆಯಲ್ಲಿ ರಾಷ್ಟ್ರಪತಿಯ ಸ್ಥಾನವು ರಾಷ್ಟ್ರದ ಗೌರವ, ಘನತೆ ಹಾಗೂ ಗಾಂಭೀರ್ಯವನ್ನು ಪ್ರತಿನಿಧಿಸುತ್ತದೆ. ಬ್ರಿಟನ್ನಿನ ರಾಣಿ ಅಥವಾ ರಾಜನಂತೆ ಅವರು ಯಾವ ತಪ್ಪುಗಳನ್ನೂ ಮಾಡುವದಿಲ್ಲ, ಯಾವದೇ ದೇಶದ ಕಾರ್ಯಾಂಗದ ಮುಖ್ಯಸ್ಥನಿಗೆ ಭಾರತ ಸಂವಿಧಾನ ಈ ದೇಶದ ರಾಷ್ಟ್ರಪತಿಗೆ ನೀಡಿದ ರೀತಿಯಲ್ಲಿ ಅಧಿಕಾರ ನೀಡಿಲ್ಲ. ನಮ್ಮದು ಬ್ರಿಟೀಶ್ ಮಾದರಿಯ ಸಂಸದೀಯ ಪದ್ಧತಿಯಾಗಿರುವದರಿಂದ ರಾಷ್ಟ್ರಪತಿ ನಾಮ ಮಾತ್ರ ಮುಖ್ಯಸ್ಥನಾಗಿದ್ದಾನೆ.

ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ (President) ಹಾಗೂ ಭಾರತದ ರಾಷ್ಟ್ರಪತಿ ಇವರಿಬ್ಬರ ನಡುವೆ ಹೆಸರಿನ ಸಾಮ್ಯತೆ ಮಾತ್ರ ಇದೆ. ಅಮೇರಿಕದ ಅಧ್ಯಕ್ಷ ಕಾರ್ಯಾಂಗದ ನೈಜ ಮುಖ್ಯಸ್ಥ. ಕಾರ್ಯಾಂಗದ ಅಧಿಕಾರಗಳನ್ನೆಲ್ಲ ಅವರೇ ಚಲಾಯಿಸುತ್ತಾರೆ. ಆದರೆ ಭಾರತದಲ್ಲಿ ರಾಷ್ಟ್ರಪತಿ ರಾಷ್ಟ್ರದ ಮುಖ್ಯಸ್ತರೇ ಹೊರತು ಕಾರ್ಯಾಂಗದ ಮುಖ್ಯಸ್ತರಲ್ಲ. ಅವರು ರಾಷ್ಟ್ರವನ್ನು ಪ್ರತಿನಿಧಿಸುತ್ತಾರೆಯೇ ಹೊರತು ಆಳುವದಿಲ್ಲ. ಸಂಸತ್ತಿಗೆ ಜವಾಬ್ದಾರಿ ಹೊಂದಿದ ಮಂತ್ರಿಮಂಡಲವು ಕಾರ್ಯಾಂಗದ ಅಧಿಕಾರಗಳನ್ನು ಚಲಾಯಿಸುತ್ತದೆ.

ಸಂವಿಧಾನ ೭೪ ಹಾಗೂ ೭೫ ನೇ ಕಲಮುಗಳ ಮೇರೆಗೆ ರಾಷ್ಟ್ರಪತಿಗೆ ಸಲಹೆ ನೀಡುವಕ್ಕಾಗಿ ಪ್ರಧಾನಿಯ ನೇತೃತ್ವದಲ್ಲಿ ಒಂದು ಮಂತ್ರಿಮಂಡಲವಿರುತ್ತದೆ. ೭೮ ನೇ ಕಲಮಿನ ಪ್ರಕಾರ ಮಂತ್ರಿಮಂಡಲದ ಆಡಳಿತಾತ್ಮಕ ನಿರ್ಣಯಗಳನ್ನು ಪ್ರಧಾನಿಯು ಕಾಲಕಾಲಕ್ಕೆ ರಾಷ್ಟ್ರಪತಿಗೆ ತಿಳಿಸುತ್ತಿರಬೇಕು. ರಾಷ್ಟ್ರಪತಿ ಅಗತ್ಯವೆನಿಸಿದರೆ ಆಡಳಿತದ ಬಗ್ಗೆ ಮಾಹಿತಿ ಕೇಳಬಹುದು. ಮಂತ್ರಿಯೊಬ್ಬ ತೆಗೆದುಕೊಂಡ ವೈಯಕ್ತಿಕ ನಿರ್ಣಯವನ್ನು ಸಚಿವ ಸಂಪುಟದ ಸಭೆಯಲ್ಲಿ ಮಂಡಿಸುವಂತೆ ರಾಷ್ಟ್ರಪತಿಗಳು ಸೂಚಿಸಬಹುದು. ಈ ಎಲ್ಲ ವಿದ್ಯಮಾನಗಳು ರಾಷ್ಟ್ರಪತಿ ಹುದ್ದೆ ನಾಮ ಮಾತ್ರ ಕಾರ್ಯಾಂಗದ ಮುಖ್ಯಸ್ಥನ ಹುದ್ದೆ ಎಂಬುದನ್ನು ಸಾಬೀತು ಪಡಿಸುತ್ತವೆ.

ಪ್ರಧಾನಿಯನ್ನೊಳಗೊಂಡ ಮಂತ್ರಿ ಮಂಡಲದ ಸದಸ್ಯರನ್ನು ನೇಮಿಸುವ

ಅಧಿಕಾರ ಕೂಡಾ ರಾಷ್ಟ್ರಪತಿಯ ನಾಮ ಮಾತ್ರ ಅಧಿಕಾರವಾಗಿದೆ. ಲೋಕ ಸಭೆಯಲ್ಲಿ ಬಹುಮತದ ಬೆಂಬಲ ಹೊಂದಿರುವ ಅಥವಾ ಹೊಂದುವ ಅವಕಾಶವಿರುವವನನ್ನು ಮಾತ್ರ ಪ್ರಧಾನಿಯನ್ನಾಗಿ ನೇಮಕ ಮಾಡಬೇಕಾಗುತ್ತದೆ. ರಾಷ್ಟ್ರಪತಿಯ ವಿಶ್ವಾಸವಿರುವವರೆಗೆ ಮಂತ್ರಿಮಂಡಲ ಅಧಿಕಾರದಲ್ಲಿರುವದೆಂಬುದು ಕೂಡಾ ಸತ್ಯವಲ್ಲ. ಲೋಕಸಭೆಯಲ್ಲಿ ಬಹುಮತದ ಬೆಂಬಲವಿರುವವರೆಗೆ ಮಂತ್ರಿಮಂಡಲ ಅಧಿಕಾರದಲ್ಲಿರುತ್ತದೆ.

ಭಾರತದ ರಾಷ್ಟ್ರಪತಿ ಸಂವಿಧಾನಾತ್ಮಕ ಮುಖ್ಯಸ್ಥನಾದರೂ ಕೆಲ ಸಂದರ್ಭಗಳಲ್ಲಿ ಸ್ವಂತ ವಿವೇಚನೆಯಿಂದ ಕಾರ್ಯ ಮಾಡಬೇಕಾಗುತ್ತದೆ. ಸಂವಿಧಾನದ ಪ್ರಕಾರ ರಾಷ್ಟ್ರಪತಿಯವರು ಲೋಕಸಭೆಯಲ್ಲಿ ಬಹುಮತ ಪಕ್ಷದ ನಾಯಕನನ್ನು ಪ್ರಧಾನಿಯನ್ನಾಗಿ ನೇಮಕ ಮಾಡಬೇಕು. ಬಹುಪಕ್ಷ ಪದ್ಧತಿಯ ಪರಿಣಾಮವಾಗಿ ಇತ್ತೀಚೆಗೆ ಒಂದೇ ಪಕ್ಷ ಬಹುಮತ ಪಡೆಯುವ ಸಾಧ್ಯತೆ ಕಡಿಮೆಯಾಗಿದೆ. ಇಂಥ ಸಂದರ್ಭದಲ್ಲಿ ರಾಷ್ಟ್ರಪತಿಯವರ ಜವಾಬ್ದಾರಿ ಗುರುತರವಾಗಿದೆ. ಲೋಕ ಸಭೆಯಲ್ಲಿ ಬಹುಮತದ ಬೆಂಬಲ ಪಡೆಯಲು ಸಾಧ್ಯವಿರುವವನನ್ನು ಅವರು ಪ್ರಧಾನಿಯನ್ನಾಗಿ ನೇಮಕ ಮಾಡಬೇಕು. ಲೋಕಸಭೆಯಲ್ಲಿ ಬಹುಮತ ಸಾಬೀತು ಪಡಿಸಲು ಸಾಧ್ಯವಿಲ್ಲದವರನ್ನು ಪ್ರಧಾನಿ ಹುದ್ದೆಗೆ ನೇಮಕ ಮಾಡಿದರೆ ಅವಿಶ್ವಾಸ ನಿರ್ಣಯದ ಮೂಲಕ ಮಂತ್ರಿಮಂಡಲ ಪದಚ್ಯುತಿ ಹೊಂದುವದರೊಂದಿಗೆ ರಾಷ್ಟ್ರಪತಿಯ ಗೌರವಕ್ಕೆ ಕುಂದುಂಟಾಗುತ್ತದೆ. ೧೯೯೬ ರಲ್ಲಿ ರಚಿತವಾದ ೧೧ ನೇ ಲೋಕಸಭೆಯಲ್ಲಿ ಯಾವದೇ ಪಕ್ಷ ಬಹುಮತ ಹೊಂದಿರದಿದ್ದಾಗ ರಾಷ್ಟ್ರಪತಿ ಡಾ. ಎಸ್.ಡಿ. ಶರ್ಮಾ ಅತಿ ಹೆಚ್ಚು ಸದಸ್ಯರನ್ನು ಹೊಂದಿದ ಬಿ.ಜೆ.ಪಿ. ಪಕ್ಷದ ನಾಯಕ ವಾಜಪೇಯಿ ಅವರನ್ನು ಪ್ರಧಾನಿಯನ್ನಾಗಿ ನೇಮಕ ಮಾಡಿದರು. ಸದನದ ವಿಶ್ವಾಸ ಗಳಿಸಲು ಸಾಧ್ಯವಾಗದ ವಾಜಪೇಯಿ ೧೩ ದಿನಗಳಲ್ಲಿ ರಾಜೀನಾಮೆ ನೀಡಿದರು.

ಸಾಮಾನ್ಯವಾಗಿ ರಾಷ್ಟ್ರಪತಿಯವರು ಪ್ರಧಾನಿಯ ಸಲಹೆಯ ಮೇರೆಗೆ ಲೋಕ ಸಭೆಯ ವಿಸರ್ಜನೆ ಮಾಡಬೇಕಾಗುತ್ತದೆ. ಲೋಕಸಭೆಯಲ್ಲಿ ಬಹುಮತದ ಬೆಂಬಲ ಕಳೆದುಕೊಂಡ ಪ್ರಧಾನಿಯ ಸಲಹೆಯನ್ನು ರಾಷ್ಟ್ರಪತಿಯವರು ಸ್ವೀಕರಿಸಬೇಕಾಗಿಲ್ಲ. ಪ್ರತಿಯಾಗಿ ಬಹುಮತದ ಬೆಂಬಲಗಳಿಸಲು ಸಾಧ್ಯವಿರುವ ನಾಯಕನನ್ನು ಪ್ರಧಾನಿಯನ್ನಾಗಿ ನೇಮಕ ಮಾಡಬೇಕು. ಬೇರೆ ಯಾವದೇ ದಾರಿ ಇರದಿದ್ದ ಪಕ್ಷದಲ್ಲಿ ಮಾತ್ರ ಬಹುಮತ ಕಳೆದುಕೊಂಡ ಪ್ರಧಾನಿಯ ಸಲಹೆ ಮನ್ನಿಸಬಹುದು.

ಇದುವರೆಗೆ ಆಗಿಹೋದ ಬಹುತೇಕ ರಾಷ್ಟ್ರಪತಿಗಳು ತಮ್ಮ ಹುದ್ದೆಯ ಘನತೆ, ಗೌರವಗಳಿಗೆ ತಕ್ಕಹಾಗೆ ವರ್ತಿಸಿದ್ದಾರೆ. ಮೊದಲ ರಾಷ್ಟ್ರಪತಿ ಡಾ. ರಾಜೇಂದ್ರಪ್ರಸಾದರು, ಪ್ರಧಾನಿ ನೆಹರು ಅವರೊಂದಿಗೆ ಭಿನ್ನಮತ ಹೊಂದಿದ್ದರೂ ಸಂಸದೀಯ

ಸಂಪ್ರದಾಯಗಳಿಗೆ ತಕ್ಕದಾಗಿ ಕಾರ್ಯ ನಿರ್ವಹಿಸಿದರು. ಡಾ. ರಾಧಾಕೃಷ್ಣನ್‌ರು ಅವಶ್ಯಕತೆ ಕಂಡು ಬಂದಾಗ ಸರಕಾರದ ತಪ್ಪುಗಳನ್ನು ಎತ್ತಿ ತೋರಿಸುತ್ತಿದ್ದರು. ಡಾ. ಝಾಕೀರ ಹುಸೇನ್ ಪ್ರಧಾನಿಯೊಂದಿಗೆ ಸೌಹಾರ್ದಯುತ ಸಂಬಂಧ ಹೊಂದಿದ್ದರು. ವಿ. ವಿ. ಗಿರಿ ಹಾಗೂ ಫಕ್ರುದ್ದೀನ್ ಅಲಿ ಅಹ್ಮದ್ ಅವರು ಹುದ್ದೆಯ ಘನತೆಗೆ ತಕ್ಕ ಹಾಗೆ ವರ್ತಿಸಲಿಲ್ಲ. ಅವರಿಬ್ಬರೂ ''ಪ್ರಧಾನಿಯ ರಾಷ್ಟ್ರಪತಿ'' ಯಾಗಿದ್ದರು. ನಂತರ ಬಂದ ಸಂಜೀವ ರೆಡ್ಡಿ, ಚರಣಸಿಂಗ್‌ರನ್ನು ಪ್ರಧಾನಿಯಾಗಿ ನೇಮಕ ಮಾಡುವಾಗ ಹಾಗೂ ೧೯೭೯ ರಲ್ಲಿ ಸಂಸತ್ತನ್ನು ವಿಸರ್ಜಿಸುವಾಗ ಎಡವಿದ್ದಾರೆ. ಬೂಟಾಸಿಂಗ್ ಒಂದು ಸಂದರ್ಭದಲ್ಲಿ ಪ್ರಧಾನಿ ರಾಜೀವ ಗಾಂಧಿಯವರನ್ನು ವಜಾಮಾಡಬೇಕೆಂಬ ನಿರ್ಣಯ ತೆಗೆದುಕೊಳ್ಳುವ ಮಟ್ಟಿಗೆ ಪ್ರಧಾನಿಯೊಂದಿಗೆ ಅವರ ಸಂಬಂಧ ಹದಗೆಟ್ಟಿತ್ತು. ವೆಂಕಟರಾಮನ್ ಹಾಗೂ ಡಾ. ಎಸ್. ಡಿ. ಶರ್ಮಾ ಅವರು ಸಮಯ ಸಂದರ್ಭಗಳಿಗೆ ತಕ್ಕದಾಗಿ ವರ್ತಿಸುತ್ತಿದ್ದರು. ಡಾ. ಕೆ. ಆರ್. ನಾರಾಯಣನ್ ಹಾಗೂ ಡಾ. ಅಬ್ದುಲ್ ಕಲಾಂ ಅವರು ತಮ್ಮ ಹುದ್ದೆಯ ಗೌರವ ಹೆಚ್ಚಿಸುವ ರೀತಿಯಲ್ಲಿ ಮುತ್ಸದ್ದಿತನ ಹಾಗೂ ಪ್ರಬುದ್ಧತೆಯಿಂದ ಕಾರ್ಯ ನಿರ್ವಹಿಸಿದ್ದನ್ನು ನಾವು ಕಾಣುತ್ತೇವೆ.

## *ಪ್ರಧಾನ ಮಂತ್ರಿ

ಸಂಸದೀಯ ವ್ಯವಸ್ಥೆಯಲ್ಲಿ ಪ್ರಧಾನಿಯ ಸ್ಥಾನ ಅತ್ಯಂತ ಮಹತ್ವದ್ದು. ಮಂತ್ರಿ ಮಂಡಲದ ನಿರ್ಮಾಪಕರಾದ ಪ್ರಧಾನಮಂತ್ರಿ, ಅದರ ನಾಯಕರೂ ಆಗಿರುತ್ತಾರೆ. ಪ್ರಧಾನಿಯವರನ್ನು **"first among the equals"** (ಸಮಾನರಲ್ಲಿ ಪ್ರಥಮ) ಎಂದು ಕರೆಯಲಾಗುತ್ತಿದ್ದರೂ ಅದಕ್ಕಿಂತ ಮಹತ್ವದ ಸ್ಥಾನವನ್ನು ಅವರು ಹೊಂದಿದ್ದಾರೆ.

ಬ್ರಿಟೀಶ್ ಮಾದರಿಯ ಸಂಸದೀಯ ವ್ಯವಸ್ಥೆಯನ್ನು ಅಗತ್ಯ ಬದಲಾವಣೆ-ಗಳೊಂದಿಗೆ ನಮ್ಮ ದೇಶದಲ್ಲಿ ಸ್ಥಾಪಿಸಲಾಗಿದೆ. ಜವಾಬ್ದಾರಿಯುತ ಸರಕಾರವಾದ ಸಂಸದೀಯ ಪದ್ಧತಿಯಲ್ಲಿ ಪ್ರಧಾನಿಮಂತ್ರಿ ಮಂಡಲದ ಮುಖ್ಯಸ್ಥರಾಗಿರುತ್ತಾರೆ. ಬ್ರಿಟೀಶ್ ಮಾದರಿಯನ್ನು ಅನುಸರಿಸಿ ನಮ್ಮ ದೇಶದ ಪ್ರಧಾನಿಯ ಹುದ್ದೆಯನ್ನು ನಿರ್ಮಿಸಲಾಗಿದೆ. ಇಂಗ್ಲೆಂಡಿನಲ್ಲಿ ಪ್ರಧಾನಿ ಹುದ್ದೆ ಇತಿಹಾಸದ ಕೊಡುಗೆಯಾಗಿ ರೂಪಗೊಂಡಿದ್ದರೆ ಭಾರತದಲ್ಲಿ ಸಂವಿಧಾನ ನಿರ್ಮಾಪಕರು ಉದ್ದೇಶ ಪೂರ್ವಕವಾಗಿ ಹುದ್ದೆಯನ್ನು ನಿರ್ಮಿಸಿದ್ದಾರೆ. ಪ್ರಧಾನಿ ಹುದ್ದೆಯ ಅಧಿಕಾರಗಳು ಹಾಗೂ ಮಹತ್ವ ಎರಡೂ ದೇಶಗಳಲ್ಲಿ ಒಂದೇ ಬಗೆಯವಾಗಿವೆ. ಪ್ರಧಾನಿಯೇ ಕಾರ್ಯಾಂಗದ ನೈಜ ಮುಖ್ಯಸ್ಥರಾಗಿದ್ದಾರೆ. ಸಂಸತ್ತು ಹಾಗೂ ಮಂತ್ರಿ ಮಂಡಲಗಳು ಅವರ ಸೂಚನೆ ಹಾಗೂ ಮಾರ್ಗದರ್ಶನದೊಂದಿಗೆ ಕಾರ್ಯನಿರ್ವಹಿಸುತ್ತವೆ ಪ್ರಧಾನ ಮಂತ್ರಿ ಸರಕಾರದ ಕೇಂದ್ರ ವ್ಯಕ್ತಿಯಾಗಿದ್ದು ಅದರ ರಚನೆ, ಅಳಿವು, ಉಳಿವಿಗೆ ಅವರೇ ಕಾರಣರಾಗುತ್ತಾರೆ. ಪ್ರಧಾನಿಯ ಸ್ಥಾನದಲ್ಲಿರುವವರ ವ್ಯಕ್ತಿತ್ವ ಕೂಡಾ ಪ್ರಧಾನಿಯ ಸ್ಥಾನದ ಗೌರವ

ಹಾಗೂ ಮಹತ್ವವನ್ನು ಹೆಚ್ಚಿಸಲು ಕಾರಣವಾಗುತ್ತದೆ.

ಜವಾಹರಲಾಲ ನೆಹರು ಅವರಂಥ ಜನಾನುರಾಗಿ ಹಾಗೂ ಗಟ್ಟಿ ವ್ಯಕ್ತಿತ್ವದ ನಾಯಕ ಮೊದಲ ಪ್ರಧಾನಿಯಾಗುವ ಮೂಲಕ ಆ ಸ್ಥಾನದ ಪ್ರಾಧಾನ್ಯತೆಯನ್ನು ಹೆಚ್ಚಿಸಿದ್ದಾರೆ. ಅಧಿಕಾರ ಪಡೆದುಕೊಳ್ಳುವ, ಅದರ ವ್ಯಾಪ್ತಿಯನ್ನು ಹೆಚ್ಚಿಸುವ ಹಾಗೂ ಅಂಥ ಅಧಿಕಾರವನ್ನು ಮುಂದುವರಿಸಿಕೊಂಡು ಹೋಗುವ ಅವರ ರೀತಿ ನೀತಿಗಳು ಪ್ರಧಾನಿ ಸ್ಥಾನಕ್ಕೆ ವಿಶೇಷ ಮೆರಗು ನೀಡಿವೆ.ಇಂದಿರಾಗಾಂಧಿಯಂಥವರು ಸರ್ವಾಧಿಕಾರಿಯಾಗುವದಕ್ಕೆ ಕೂಡ ಅದರಿಂದ ಅವಕಾಶ ದೊರೆಯಿತು.

## ಪ್ರಧಾನಿಯ ನೇಮಕ

ಸಂವಿಧಾನದ ೭೫ ನೇ ಕಲಮಿನ ಪ್ರಕಾರ ರಾಷ್ಟ್ರಪತಿಯವರು ಪ್ರಧಾನಿಯನ್ನು ನೇಮಕ ಮಾಡುವರು. ಪ್ರಧಾನಿಯ ಸಲಹೆಯ ಮೇರೆಗೆ ಇತರ ಸಚಿವರನ್ನು ನೇಮಕ ಮಾಡುತ್ತಾರೆ. ಪ್ರಧಾನಿಯ ನೇಮಕದ ವಿಷಯದಲ್ಲಿ ರಾಷ್ಟ್ರಪತಿ ಸ್ವತಂತ್ರರಲ್ಲ. ಸಂಸದೀಯ ನಿಯಮಾವಳಿಗಳ ಮೇರೆಗೆ ಲೋಕಸಭೆಯಲ್ಲಿ ಬಹುಮತ ಪಡೆದ ನಾಯಕನನ್ನೇ ಪ್ರಧಾನಿಯನ್ನಾಗಿ ನೇಮಕ ಮಾಡಬೇಕಾಗುತ್ತದೆ. ಯಾಕೆಂದರೆ ಪ್ರಧಾನಿ ಹಾಗೂ ಅವರ ಮಂತ್ರಿಮಂಡಲ ಲೋಕಸಭೆಯಲ್ಲಿ ಬಹುಮತದ ಬೆಂಬಲವಿರುವವರೆಗೆ ಅಧಿಕಾರದಲ್ಲಿ ಮುಂದುವರಿಯಲು ಸಾಧ್ಯವಿದೆ. ಆದ್ದರಿಂದ ಲೋಕಸಭೆಯಲ್ಲಿ ಬಹುಮತದ ಬೆಂಬಲ ಹೊಂದಿರುವವರನ್ನು ಬಿಟ್ಟು ಬೇರೆಯವರನ್ನು ಪ್ರಧಾನಿಯನ್ನಾಗಿ ನೇಮಕ ಮಾಡಿದರೆ ಲೋಕಸಭೆ ಅವಿಶ್ವಾಸ ಗೊತ್ತುವಳಿ ಪಾಸು ಮಾಡುವ ಮೂಲಕ ಪದಚ್ಯುತಗೊಳಿಸಬಹುದಾಗಿದೆ.

ಲೋಕಸಭೆಯಲ್ಲಿ ಯವುದೇ ಪಕ್ಷ ಬಹುಮತ ಪಡೆಯದಿದ್ದಲ್ಲಿ ರಾಷ್ಟ್ರಪತಿಯವರು ತಮ್ಮ ವಿವೇಚನಾಧಿಕಾರ ಚಲಾಯಿಸಿ ಲೋಕಸಭೆಯಲ್ಲಿ ಬಹುಮತ ಪಡೆಯಲು ಸಾಧ್ಯವಿರುವ ನಾಯಕನನ್ನು ಪ್ರಧಾನಿಯನ್ನಾಗಿ ನೇಮಕ ಮಾಡ ಬೇಕಾಗುತ್ತದೆ. ಉದಾ : ೧೯೯೧ರ ಸಾರ್ವತ್ರಿಕ ಚುನಾವಣೆಯ ನಂತರ ಲೋಕಸಭೆಯಲ್ಲಿ ಯಾವುದೇ ಪಕ್ಷ ಬಹುಮತ ಪಡೆದಿರಲಿಲ್ಲ. ರಾಷ್ಟ್ರಪತಿ ವೆಂಕಟರಾಮನ್‌ರವರು ಲೋಕಸಭೆಯಲ್ಲಿ ಹೆಚ್ಚು ಸ್ಥಾನಗಳನ್ನು ಪಡೆದಿದ್ದ ಕಾಂಗ್ರೆಸ್‌ನ ನಾಯಕ ಪಿ.ವಿ. ನರಸಿಂಹರಾವ್ ಅವರನ್ನು ಪ್ರಧಾನಮಂತ್ರಿಯನ್ನಾಗಿ ನೇಮಕ ಮಾಡಿದರು. ಐದು ವರ್ಷಗಳ ಅವಧಿ ಮುಗಿಯುವವರೆಗೆ ನರಸಿಂಹರಾವ್ ಸರಕಾರ ಅಧಿಕಾರದಲ್ಲಿ ಮುಂದುವರೆಯಿತು. ರಾಷ್ಟ್ರಪತಿಯವರಿಂದ ಇಂಥ ಸಂದರ್ಭದಲ್ಲಿ ನೇಮಕಗೊಂಡ ಪ್ರಧಾನಿ ಬಹುಮತ ಸಾಬಿತುಪಡಿಸಲು ಸಾಧ್ಯವಾಗದಿದ್ದರೆ ಅಷ್ಟರ ಮಟ್ಟಿಗೆ ರಾಷ್ಟ್ರಪತಿಯವರ ತೀರ್ಮಾನದ ಪಾವಿತ್ರ್ಯತೆಗೆ ಕುಂದುಂಟಾಗುತ್ತದೆ. ಉದಾ : ೧೯೯೬ ರಲ್ಲಿ ರಾಷ್ಟ್ರಪತಿ ಡಾ. ಎಸ್.ಡಿ. ಶರ್ಮಾರಿಂದ ನೇಮಕಗೊಂಡ

ವಾಜಪೇಯಿ ಸರಕಾರ ಲೋಕಸಭೆಯಲ್ಲಿ ಬಹುಮತ ಸಾಬೀತುಗೊಳಿಸಲು ಸಾಧ್ಯವಾಗದೇ ಹದಿಮೂರೇ ದಿನಗಳಲ್ಲಿ ರಾಜೀನಾಮೆ ನೀಡಬೇಕಾಯಿತು.

ಪ್ರಧಾನಿಯ ಆಯ್ಕೆಗೆ ಯಾವ ವಿಧಾನವನ್ನು ಪಾಲಿಸಬೇಕೆಂಬ ಬಗ್ಗೆ ಸಂವಿಧಾನ ಮೌನವಾಗಿದೆ. ಅವರು ಲೋಕಸಭೆಯ ಸದಸ್ಯನಾಗಿಬೇಕೇ ? ಎಂಬ ಬಗ್ಗೆ ಸಹಿತ ಏನೂ ಹೇಳಿಲ್ಲ. ೧೯೬೬ ರಲ್ಲಿ ಇಂದಿರಾಗಾಂಧಿ ಮೊದಲ ಬಾರಿಗೆ ಪ್ರಧಾನಿಯಾದಾಗ ರಾಜ್ಯಸಭಾ ಸದಸ್ಯೆಯಾಗಿದ್ದರು. ಸಂಸತ್ ಸದಸ್ಯನಲ್ಲದವರೂ ಕೂಡ ಪ್ರಧಾನಿಯಾಗಿ ನೇಮಕ ಹೊಂದುವ ಅವಕಾಶವಿದೆ. ನಂತರ ಆರು ತಿಂಗಳ ಅವಧಿ ಪೂರೈಸುವದರೊಳಗಾಗಿ ಸದಸ್ಯತ್ವ ಪಡೆಯಬೇಕಾಗುತ್ತದೆ. ಉದಾ :- ೧೯೯೬ ರಲ್ಲಿ ಸಂಸತ್ತಿನ ಸದಸ್ಯರಾಗಿರದಿದ್ದ ದೇವೇಗೌಡರು ಪ್ರಧಾನಿಯಾದರು. ನಂತರ ರಾಜ್ಯ ಸಭೆಯ ಚುನಾವಣೆಗೆ ಸ್ಪರ್ಧಿಸಿ ಆಯ್ಕೆಯಾದರು.

## ಪ್ರಧಾನಿಯವರ ಕಾರ್ಯಗಳು

ಪ್ರಧಾನಮಂತ್ರಿಯವರು ಸರಕಾರವೆಂಬ ಕಟ್ಟಡದ ಆಧಾರ ಸ್ಥಂಬವಾಗಿದ್ದಾರೆ. **ಲಾರ್ಡ್ ಮೋರ್ಲೆ**ಯವರ ಪ್ರಕಾರ ಪ್ರಧಾನಿಯವರು ''ಕ್ಯಾಬಿನೆಟ್ ಪದ್ಧತಿಯ ಮೂಲೆಗಲ್ಲು.'' ಅವರ ಸ್ಥಾನ ಅತ್ಯಂತ ಜವಾಬ್ದಾರಿಯುತವಾದದ್ದು. ಪ್ರಧಾನಿಯವರಿಗೆ ಅಪರಿಮಿತ ಅಧಿಕಾರ ನೀಡುವದನ್ನು ಸಂವಿಧಾನ ರಚನಾ ಸಭೆಯಲ್ಲಿ **ಪ್ರೊ. ಕೆ. ಟಿ. ಶಹಾ**ರವರು ವಿರೋಧಿಸಿದ್ದರು. ಬ್ರಿಟೀಶ್ ಮಾದರಿಯಲ್ಲಿಯೇ ನಮ್ಮ ರಾಜಕೀಯ ವ್ಯವಸ್ಥೆಯನ್ನು ರೂಪಿಸಿದ್ದರಿಂದ ಅನಿವಾರ್ಯವಾಗಿ ಅಷ್ಟೊಂದು ಬಲಶಾಲಿ ಪ್ರಧಾನಿ ಹುದ್ದೆ ನಿರ್ಮಿಸಬೇಕಾಯಿತು. ಮಂತ್ರಿಮಂಡಲ ಹಾಗೂ ಲೋಕಸಭೆಯ ಬೆಂಬಲವನ್ನು ಕಾಯ್ದುಕೊಂಡು ಹೋಗುವ ರೀತಿಯಲ್ಲಿ ಪ್ರಧಾನಿಯವರು ಕಾರ್ಯ ನಿರ್ವಹಿಸಬೇಕಾಗುತ್ತದೆ. ಪ್ರಧಾನ ಮಂತ್ರಿಯವರು ಕೆಳಗೆ ವಿವರಿಸಿದ ಕಾರ್ಯಗಳನ್ನು ನಿರ್ವಹಿಸುತ್ತಾರೆ.

### ✸ ಮಂತ್ರಿಮಂಡಲ ರಚನೆ ಮತ್ತು ಕಾರ್ಯಗಳು

ಪ್ರಧಾನಿಯ ಸಲಹೆಯ ಮೇರೆಗೆ ರಾಷ್ಟ್ರಪತಿಯವರು ಮಂತ್ರಿಗಳನ್ನು ನೇಮಕ ಮಾಡುತ್ತಾರೆ. ಸರಕಾರದ ದಕ್ಷ ಕಾರ್ಯ ನಿರ್ವಹಣೆ ಪ್ರಧಾನಿಯ ಜವಾಬ್ದಾರಿಯಾಗಿ-ರುವದರಿಂದ ಅರ್ಹ, ಅನುಭವಿ ನಾಯಕರನ್ನು ಮಂತ್ರಿಗಳನ್ನಾಗಿ ನೇಮಕ ಮಾಡಿಕೊಳ್ಳ-.ಲಾಗುತ್ತದೆ. ಪ್ರಧಾನಿಯವರ ವಿಶ್ವಾಸಗಳಿಸಿಕೊಂಡ ಪ್ರಭಾವಶಾಲಿ ನಾಯಕರು ಮಂತ್ರಿಗಳಾಗುತ್ತಾರೆ. ಮಂತ್ರಿಮಂಡಲ ರಚನೆಯಲ್ಲಿ ಪ್ರಧಾನಿಯವರಿಗೆ ಮುಕ್ತಹಸ್ತ ಇರಬೇಕು. ಆದರೆ ಮಂತ್ರಿಮಂಡಲ ರಚನೆಯ ಸಂದರ್ಭದಲ್ಲಿ ಅನೇಕ ಬಗೆಯ ಒತ್ತಡಗಳನ್ನು ಪ್ರಧಾನಿ ಎದುರಿಸ ಬೇಕಾಗುತ್ತದೆ. ಒತ್ತಡಗಳಿಗೆ ಮಣಿದು

ಯೋಗ್ಯರಲ್ಲದವರನ್ನು ಅನಿವಾರ್ಯವಾಗಿ ಮಂತ್ರಿ ಮಂಡಲಕ್ಕೆ ಸೇರಿಸಿಕೊಳ್ಳ ಬೇಕಾದ ಸಂದರ್ಭ ಬರುತ್ತವೆ. ಮಂತ್ರಿ ಮಂಡಲದಲ್ಲಿ ವಿವಿಧ ಪ್ರದೇಶ, ಧರ್ಮ, ಜನಾಂಗ, ಭಾಷೆ ಹಾಗೂ ಜಾತಿಗಳಿಗೆ ಪ್ರಾತಿನಿಧ್ಯ ಕೊಡಬೇಕಾಗುತ್ತದೆ. ಸ್ತ್ರೀಯರಿಗೆ, ದಲಿತರಿಗೆ, ಅಲ್ಪಸಂಖ್ಯಾತರಿಗೆ, ಹಿಂದುಳಿದ ವರ್ಗಗಳವರಿಗೆ ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಸೂಕ್ತ ಪ್ರಾತಿನಿಧ್ಯ ನೀಡಬೇಕಾಗುತ್ತದೆ. ತಮ್ಮ ಪಕ್ಷದ ಪ್ರಭಾವಶಾಲಿ ನಾಯಕರನ್ನು ಮಂತ್ರಿಗಳನ್ನಾಗಿ ನೇಮಿಸಬೇಕಾಗುತ್ತದೆ. ಇವೆಲ್ಲದರೊಂದಿಗೆ ಸಂಪುಟದ ಗಾತ್ರದ ಬಗೆಗಿನ ಕಾನೂನುಗಳನ್ನು ಗಮನದಲ್ಲಿರಿಕೊಳ್ಳಬೇಕಾಗುತ್ತದೆ. ವಿವಿಧ ಹಿತಾಸಕ್ತಿಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳ ಬೇಕಾಗಿರುವದರಿಂದ ಹಾಗೂ ಆಂತರಿಕ ಮತ್ತು ಬಾಹ್ಯ ಒತ್ತಡಗಳಿಗೆ ಮಣಿಯಲೇ ಬೇಕಾಗಿರುವದರಿಂದ ದಕ್ಷತೆ, ಅನುಭವ , ಯೋಗ್ಯತೆಗಳ ವಿಷಯದಲ್ಲಿ ಹೊಂದಾಣಿಕೆ ಮಾಡಿಕೊಳ್ಳಬೇಕಾಗುತ್ತದೆ.

### ಖಾತೆಗಳ ಹಂಚಿಕೆ

ಸಚಿವ ಸಂಪುಟದ ಸದಸ್ಯರಿಗೆ ಖಾತೆಗಳನ್ನು ಹಂಚುವದು ಪ್ರಧಾನಿಯ ವಿಶೇಷಾಧಿಕಾರವಾಗಿದೆ. ಸಾಮಾನ್ಯವಾಗಿ ಮಂತ್ರಿಗಳ ಆಡಳಿತದ ಅನುಭವ, ಹಿರಿತನ, ಸಂಘಟನಾ ಸಾಮರ್ಥ್ಯ ಮುಂತಾದ ವಿಶೇಷ ಗುಣಗಳ ಅಧಾರದ ಮೇಲೆ ಖಾತೆಗಳ ಹಂಚಿಕೆ ನಡೆಯುತ್ತದೆ. ಕೆಲಸಲ ಹಿರಿಯ ಸಚಿವರು ತಮಗೆ ಇಂಥದೇ ಖಾತೆಬೇಕೆಂದು ಆಗ್ರಹಿಸಬಹುದು. ಉದಾ :- ದೇವೆಗೌಡರು ಪ್ರಧಾನಿಯಾಗಿದ್ದಾಗ ಸಿ.ಪಿ.ಐ. ನಾಯಕ ಇಂದ್ರಜಿತ ಗುಪ್ತಾ ಗೃಹ ಖಾತೆಯನ್ನು ಬೇಡಿಪಡೆದಿದ್ದರು. ಅಂಥ ಒತ್ತಡಕ್ಕೆ ಪ್ರಧಾನಿ ಮಣಿಯದೇ ಇರಬಹುದು. ಉದಾ :-೨೦೦೪ರಲ್ಲಿ ಲಾಲೂ ಪ್ರಸಾದ ಗೃಹಖಾತೆಗಾಗಿ, ಶರದ ಪವಾರ ರಕ್ಷಣಾ ಖಾತೆಗಾಗಿ ಹಾಗೂ ರಾಂ ವಿಲಾಸ ಪಾಸ್ವಾನ ರೇಲ್ವೆಗಾಗಿ ಪಟ್ಟು ಹಿಡಿದರು. ಪ್ರಧಾನಿ ಡಾ. ಮನಮೋಹನ ಸಿಂಗ್ ಅವರ ಮನವೋಲಿಸಿ ಅನುಕ್ರಮವಾಗಿ ರೇಲ್ವೆ, ಬೇಸಾಯ ಹಾಗೂ ಉಕ್ಕು ಹಾಗೂ ರಸಗೊಬ್ಬರಗಳ ಖಾತೆಗಳನ್ನು ಕೊಟ್ಟಿದ್ದಾರೆ.

ಆಡಳಿತದ ಅನುಕೂಲತೆಯ ದೃಷ್ಟಿಯಿಂದ ಹಾಗೂ ನೂತನ ಮಂತ್ರಿಗಳಿಗೆ ಖಾತೆ ಹಂಚಿಕೆಮಾಡುವ ದೃಷ್ಟಿಯಿಂದ ಖಾತೆಗಳನ್ನು ವಿಂಗಡಿಸಿ ಹಂಚುವ ಅಥವಾ ವಿಂಗಡಿಸಿದ ಖಾತೆಗಳನ್ನು ಪುನರ್‌ರೂಪಿಸುವ ಅಥವಾ ಹೊಸ ಖಾತೆ ಸೃಷ್ಟಿಸುವ ಅಧಿಕಾರ ಪ್ರಧಾನಿಗಿದೆ. ಸಮರ್ಪಕವಾಗಿ ಹಾಗೂ ದಕ್ಷತೆಯಿಂದ ಕೆಲಸ ಮಾಡದ ಮಂತ್ರಿಗಳ ಖಾತೆ ಬದಲಾವಣೆ ಮಾಡಬಹುದು. ಅಥವಾ ಅವರನ್ನು ಮಂತ್ರಿಮಂಡಲದಿಂದ ವಜಾ ಮಾಡಬಹುದು. ಉದಾ :- ೧೯೭೧ ರಲ್ಲಿ ಇಂದಿರಾಗಾಂಧಿ ಸಚಿವ ಸಂಪುಟದಿಂದ ದಿನೇಶ ಸಿಂಗ್‌ರನ್ನು ವಜಾ ಮಾಡಲಾಯಿತು. ರಾಜೀವಗಾಂಧಿ ಹಾಗೂ ಮುರಾರಜಿ ದೇಸಾಯಿ

ಕೂಡ ಅನೇಕ ಸಲ ಖಾತೆಗಳ ಮರುಹಂಚಿಕೆ ಮಾಡಿದ್ದಾರೆ.

## ಮಂತ್ರಿಗಳ ನಿಯಂತ್ರಣ

ಕೇಂದ್ರ ಸರಕಾರದ ಆಡಳಿತದ (ಕಾರ್ಯಾಂಗದ) ಮುಖ್ಯಸ್ತನಾಗಿ, ಸಂಪುಟದ ನಾಯಕನಾಗಿ ಸಚಿವರನ್ನು ತನ್ನ ಹಿಡಿತದಲ್ಲಿರಿಸಿಕೊಳ್ಳುವ ಅಧಿಕಾರ ಪ್ರಧಾನಿಗಿದೆ. ಸಹೋದ್ಯೋಗಿಗಳೊಂದಿಗೆ ಭಿನ್ನಾಭಿಪ್ರಾಯ ಬಂದರೆ ಕಡಿಮೆ ಮಹತ್ವದ ಖಾತೆ ನೀಡುವ, ರಾಜೀನಾಮೆ ನೀಡುವಂತೆ ಸೂಚಿಸುವ, ಅದಕ್ಕೆ ಒಪ್ಪದವರನ್ನು ರಾಷ್ಟ್ರಪತಿಯ ಮೂಲಕ ವಜಾ ಮಾಡುವ ಅಧಿಕಾರ ಅವರಿಗಿದೆ. ಉದಾ :- ೧೯೬೯ ರಲ್ಲಿ ಇಂದಿರಾಗಾಂಧಿಯವರ ಸೂಚನೆಯ ಮೇರೆಗೆ ಮುರಾರಜಿ ದೇಸಾಯಿ ರಾಜೀನಾಮೆ ನೀಡಿದರು. ೧೯೭೫ ರಲ್ಲಿ ಮೋಹನ ಧಾರಿಯಾರನ್ನು ಹೊರಹಾಕಲಾಯಿತು. ಭ್ರಷ್ಟತೆ, ಅದಕ್ಷತೆ ಇಲ್ಲವೇ ಅಸಹಕಾರದ ಕಾರಣದಿಂದಾಗಿ ಮಂತ್ರಿ ಮಂಡಲದ ಅಥವಾ ಸರಕಾರದ ಗೌರವಕ್ಕೆ ಚ್ಯುತಿ ಬರುವಂತಿದ್ದರೆ ಅಂಥ ಸಚಿವರಿಗೆ ರಾಜೀನಾಮೆ ಕೊಡಲು ಕೇಳಬಹುದು. ಉದಾ :- ಶವ ಪೆಟ್ಟಿಗೆಯ ಹಗರಣದ ಕಾರಣದಿಂದಾಗಿ ಜಾರ್ಜ್ ಫರ್ನಾಂಡಿಸ್ ರಾಜೀನಾಮೆ ನೀಡಬೇಕಾಯಿತು.

ಪ್ರಧಾನಿಯವರು ಎಲ್ಲ ಇಲಾಖೆಗಳು ಹಾಗೂ ಎಲ್ಲ ಸಚಿವರ ಮೇಲೆ ನಿಯಂತ್ರಣ ಹೊಂದಿರುತ್ತಾರೆ. ಸಚಿವರು ತಮ್ಮ ಇಲಾಖೆಗಳ ಪ್ರಮುಖ ನಿರ್ಧಾರಗಳನ್ನು ಪ್ರಧಾನಿಯ ಗಮನಕ್ಕೆ ತರಬೇಕಾಗುತ್ತದೆ. ತಮ್ಮ ಇಲಾಖೆಗಳ ಕಾರ್ಯ ನಿರ್ವಹಣೆಗಾಗಿ ಮಂತ್ರಿಗಳು ಪ್ರಧಾನಿಗೆ ಜವಾಬ್ದಾರರಾಗಿರುತ್ತಾರೆ.

## ಮಂತ್ರಿ ಮಂಡಲದ ಕಾರ್ಯಗಳು

ಸಚಿವ ಸಂಪುಟದ ಸಭೆ ಪ್ರಧಾನಿಯ ಅಧ್ಯಕ್ಷತೆಯಲ್ಲಿ ನಡೆಯುತ್ತದೆ. ಸಭೆಯ ದಿನಾಂಕ, ವೇಳೆ, ಹಾಗೂ ಚರ್ಚೆಗೆ ತೆಗೆದುಕೊಳ್ಳಬೇಕಾದ ವಿಷಯಗಳ ಪಟ್ಟಿಯನ್ನು ಪ್ರಧಾನಿಯವರ ಸಚಿವಾಲಯ ತಯಾರಿಸುತ್ತದೆ. ಸಂಪುಟ ಸಭೆಯಲ್ಲಿ ವಿವಾದಗಳುಂಟಾದರೆ ಪ್ರಧಾನಿಯವರು ಮಧ್ಯಸ್ತಿಕೆ ವಹಿಸಿ ಚರ್ಚೆಯನ್ನು ಸುಖಾಂತಗೊಳಿಸುತ್ತಾರೆ. ಮಂತ್ರಿ ಮಂಡಲದ ಸಭೆಯಲ್ಲಿ ಯಾವದೇ ವಿಷಯವನ್ನು ಪ್ರಸ್ತಾಪಿಸುವ ಪೂರ್ವದಲ್ಲಿ ಆ ಬಗ್ಗೆ ಮಂತ್ರಿಗಳಿಗೆ ಸೂಚನೆ ಹೋಗಿರುತ್ತದೆ. ಮಂತ್ರಿ ಮಂಡಲ ಸಭೆಯ ಕಲಾಪಗಳು ಪ್ರಧಾನಿಯ ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತವೆ. ಸಂಪುಟ ಸಭೆಯಲ್ಲಿ ಚರ್ಚಿಸಬೇಕಾದ ವಿಷಯಗಳನ್ನು ತೀರ್ಮಾನಿಸುವ ಹಾಗೂ ಮಂತ್ರಿಗಳು ಮಂಡಿಸುವ ಪ್ರಸ್ತಾವಗಳನ್ನು ಸ್ವೀಕರಿಸುವ ಅಥವಾ ಬಿಡುವ ಅಧಿಕಾರ ಪ್ರಧಾನಿಗಿದೆ.

ಪ್ರಧಾನಿಯ ಧುರೀಣತ್ವದ ಯಶಸ್ಸು ಅವನು ತನ್ನ ಸಹೋದ್ಯೋಗಿಗಳ ಮೇಲೆ ಹೊಂದಿರುವ ಪ್ರಭಾವವನ್ನು ಅವಲಂಬಿಸಿರುತ್ತದೆ. ಮಂತ್ರಿಗಳೆಲ್ಲರೂ ಅವನ

ಸಹೋದ್ಯೋಗಿಗಳು ಹಾಗೂ ಪಕ್ಷದ ನಾಯಕರು ಆಗಿರುವದರಿಂದ ಅವರೊಂದಿಗೆ ಸೂಕ್ಷ್ಮವಾಗಿ ತಾಳ್ಮೆಯಿಂದ ವರ್ತಿಸಬೇಕಾಗುತ್ತದೆ. ಕೃಕೆಳಗಿನ ಅಧಿಕಾರಗಳೊಂದಿಗೆ ವರ್ತಿಸುವ ರೀತಿಯಲ್ಲಿ ವ್ಯವಹರಿಸಿದರೆ ಭಿನ್ನಮತವನ್ನು ಅಥವಾ ಪ್ರತಿಭಟನೆಯನ್ನು ಎದುರಿಸ ಬೇಕಾಗುತ್ತದೆ. ಮಂತ್ರಿ ಮಂಡಲದ ಸಹೋದ್ಯೋಗಿ (ಸದಸ್ಯರು) ಗಳನ್ನೆಲ್ಲ ವಿಶ್ವಾಸಕ್ಕೆ ತಗೆದುಕೊಂಡು ತೀರ್ಮಾನ ತೆಗೆದುಕೊಳ್ಳ ಬೇಕಾಗುತ್ತದೆ. ಅತ್ಯಂತ ಮಹತ್ವದ ತೀರ್ಮಾನದ ಸಂದರ್ಭದಲ್ಲಿ ಹಿರಿಯ ಸಹೋದ್ಯೋಗಿಗಳೊಂದಿಗೆ ವಿಚಾರ ವಿನಿಮಯ ನಡೆಸಬೇಕಾಗುತ್ತದೆ.

## ಮೇಲ್ವಿಚಾರಣಾ ಕಾರ್ಯಗಳು

ಕಾರ್ಯಾಂಗದ ಮುಖ್ಯಸ್ತನಾದ ಪ್ರಧಾನಮಂತ್ರಿ ತಮ್ಮ ಸರಕಾರದ ಸ್ವೀಕೃತ ನೀತಿ ಹಾಗೂ ಧ್ಯೇಯಧೋರಣೆಗಳ ಮೇರೆಗೆ ಆಡಳಿತ ನಡೆಯುವಂತೆ ನೋಡಿಕೊಂಡು ಹೋಗಬೇಕಾಗುತ್ತದೆ. ಎಲ್ಲ ಇಲಾಖೆಗಳು ಸರಕಾರದ ನೀತಿ ನಿರ್ಧಾರಗಳ ಆಧಾರದಿಂದ ಆಡಳಿತ ನಡೆಸುವಂತೆ ಮೇಲ್ವಿಚಾರಣೆ ಮಾಡಬೇಕಾಗುತ್ತದೆ. ವಿವಿಧ ಇಲಾಖೆಗಳ ನಡುವೆ ಸಹಕಾರ ಹಾಗೂ ಸಮನ್ವಯ ತರಬೇಕಾಗುತ್ತದೆ. ಎತ್ತು ಏರಿಗೆ, ಕೋಣ ನೀರಿಗೆ ಎಳೆಯುವ ರೀತಿಯಲ್ಲಿ ನಡೆಯುವ ಸರಕಾರ ದಕ್ಷತೆಯಿಂದ ಆಡಳಿತ ನಡೆಸಲು ಸಾಧ್ಯವಿಲ್ಲ. ಮಂತ್ರಿ ಮಂಡಲದಲ್ಲಿ ಭಿನ್ನಮತ ಬೆಳೆಯಲು ಅವಕಾಶ ದೊರೆತರೆ ಸರಕಾರ ಬಹಳ ದಿನ ಅಧಿಕಾರದಲ್ಲಿ ಉಳಿಯಲಾರದು.

ಪ್ರಬಲರಾದ ಮಂತ್ರಿಗಳ ಮೇಲೆ ನಿಯಂತ್ರಣ ಇರಿಸಿಕೊಳ್ಳಲು ಪ್ರಧಾನ ಮಂತ್ರಿಗೆ ಸಾಧ್ಯ ವಾಗದಿರಬಹುದು. ಉದಾ :- ಎಲ್.ಕೆ. ಅಡ್ವಾಣಿ, ಜಾರ್ಜ್ ಫರ್ನಾಂಡಿಸ್‌ರ ಆಡಳಿತದಲ್ಲಿ ವಾಜಪೇಯಿ ಹಸ್ತಕ್ಷೇಪ ಮಾಡುತ್ತಿರಲಿಲ್ಲ. ಅಷ್ಟೊಂದು ಬಲಶಾಲಿಯಲ್ಲದ ಸಚಿವರ ಇಲಾಖೆಗಳ ಕಾರ್ಯ ನಿರ್ವಹಣೆಯಲ್ಲಿ ಪ್ರಧಾನಿ ಕೈಹಾಕಬಹುದು.

## ಸಮನ್ವಯಕಾರ

ಒಬ್ಬರು ಏತಿ ಎಂದರೆ ಇನ್ನೊಬ್ಬರು ನೇತಿ ಎನ್ನುವಂತೆ ಮಂತ್ರಿಗಳು ಕಾರ್ಯ ನಿರ್ವಹಿಸಿದರೆ ಆಡಳಿತ ಹದಗೆಡುತ್ತದೆ. ಆದ್ದರಿಂದ ಮಂತ್ರಿಗಳ ನಡುವೆ ಸಮನ್ವಯ ಹಾಗೂ ಸಹಕಾರ ಉಂಟು ಮಾಡುವ ಜವಾಬ್ದಾರಿ ಪ್ರಧಾನಿಯದಾಗಿದೆ. ವಿವಿಧ ಇಲಾಖೆಗಳ ಹಾಗೂ ಮಂತ್ರಿಗಳ ನಡುವೆ ಸಂಯೋಜನೆ ಏರ್ಪಡಿಸುವ ಮೂಲಕ ಪ್ರಧಾನಿಯವರು ಆಡಳಿತವನ್ನು ಸರಿದಾರಿಗೆ ತರುತ್ತಾರೆ. ಪರಸ್ಪರ ಅಪನಂಬಿಕೆ, ಭಿನ್ನಾಭಿಪ್ರಾಯಗಳು, ಹಮ್ಮು ಬಿಮ್ಮು (Pride and prejudice) ಉಂಟಾದಾಗ ಬೆಣ್ಣೆಯಲ್ಲಿಯ ಕೂದಲು ತಗೆಯುವ ರೀತಿಯಲ್ಲಿ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಪ್ರಭಾವಶಾಲಿ ನಾಯಕತ್ವ ಪ್ರಧಾನಿಯಲ್ಲಿದ್ದಾಗ ಆಡಳಿತದಲ್ಲಿ ಎಲ್ಲವೂ

ಸರಿಯಾಗಿರುತ್ತದೆ.

ವಿವಿಧ ಇಲಾಖೆಗಳ ನಡುವಿನ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸಿ ಸಹಕಾರ ಮೂಡಿಸುವ ಕೆಲಸ ಪ್ರಧಾನಿಯದಾಗಿದೆ. ಆ ಕಾರಣದಿಂದಾಗಿ ಪ್ರಧಾನಿಯನ್ನು ವಿವಿಧ ಇಲಾಖೆಗಳ ಧೋರಣೆಗಳು ಹಾಗೂ ಕಾರ್ಯಾಚರಣೆಗಳ ಸಂಯೋಜಕನೆಂದು ಗುರುತಿಸಲಾಗುತ್ತದೆ. ದೇಶದ ಅಭಿವೃದ್ಧಿಗಾಗಿ ವಿವಿಧ ಇಲಾಖೆಗಳ ಧೋರಣೆ ಹಾಗೂ ಕಾರ್ಯಾಚರಣೆಗಳ ನಡುವೆ ಸಮನ್ವಯ ತರುವದು ಅಗತ್ಯವಾಗಿದೆ. ಆದೃಷ್ಟಿಯಿಂದ ಪ್ರಧಾನಿಯ ಸಂಯೋಜನಾ ಕಾರ್ಯಕ್ಕೆ ಮಹತ್ವವಿದೆ.

## ಲೋಕ ಸಭಾ ನಾಯಕ

ಲೋಕ ಸಭೆಯ ಬಹುಮತ ಪಕ್ಷದ ನಾಯಕನಾದ ಪ್ರಧಾನಿ ಲೋಕಸಭಾ ನಾಯಕನಾಗಿರುತ್ತಾನೆ. ಪ್ರಧಾನಿಯ ಸಲಹೆಯ ಪ್ರಕಾರ ಸಂಸತ್ತಿನ ಅಧಿವೇಶನ ಕರೆಯುವ, ಮುಂದಕ್ಕೆ ಹಾಕುವ ಹಾಗೂ ಲೋಕ ಸಭೆಯ ವಿಸರ್ಜನೆ ಮಾಡುವ ಬಗ್ಗೆ ರಾಷ್ಟ್ರಪತಿ ನಿರ್ಣಯ ತಗೆದುಕೊಳ್ಳುತ್ತಾರೆ. ಸಂಸತ್ತಿನ ಕಲಾಪಗಳ ಪಟ್ಟಿಯನ್ನು ಪ್ರಧಾನಿಯ ಅಭಿಪ್ರಾಯದ ಮೇರೆಗೆ ತಯಾರಿಸಲಾಗುತ್ತದೆ. ಸರಕಾರದ ಧೋರಣೆಗೆ ಸಂಬಂಧಪಟ್ಟ ಹೇಳಿಕೆಗಳನ್ನು ಪ್ರಧಾನ ಮಂತ್ರಿ ನೀಡುತ್ತಾರೆ. ಸಹೋದ್ಯೋಗಿಗಳು ಚರ್ಚೆಯ ಸಮಯದಲ್ಲಿ ನೀಡುವ ಹೇಳಿಕೆಗಳಿಗೆ ಪೂರಕ ಮಾಹಿತಿ ನೀಡುವ ಅಧಿಕಾರ ಪ್ರಧಾನಿಗಿದೆ.

ಲೋಕ ಸಭೆಯ (ಆಡಳಿತ ಪಕ್ಷ ಹಾಗೂ ವಿರೋಧಿ) ಸದಸ್ಯರು ಸಭಾ ನಾಯಕನಾದ ಪ್ರಧಾನಿಯ ಅಭಿಪ್ರಾಯಗಳಿಗೆ ವಿರುದ್ಧವಾಗಿ ವರ್ತಿಸಿದರೆ ಅದರ ತೀವ್ರ ಪರಿಣಾಮಗಳನ್ನು ಅನುಭವಿಸಬೇಕಾಗಬಹುದು. ಅಂಥ ಸಂದರ್ಭದಲ್ಲಿ ಲೋಕ ಸಭೆಯನ್ನು ವಿಸರ್ಜಿಸಿ ಹೊಸ ಚುನಾವಣೆ ಸಾರಬಹುದು. ಮುಂಬರುವ ಚುನಾವಣೆಯಲ್ಲಿ ಆರಿಸಿಬರುವ ವಿಶ್ವಾಸ ಕೆಲವರಿಗೆ ಇರುವದಿಲ್ಲ. ವಿಪರೀತ ಖರ್ಚಿನ ಕಾರಣಕ್ಕಾಗಿ ಇನ್ನು ಕೆಲವರು ಲೋಕ ಸಭೆಯ ಅಕಾಲಿಕ ವಿಸರ್ಜನೆ ಬಯಸುವದಿಲ್ಲ. ಆ ಕಾರಣದಿಂದಾಗಿ ಕೆಲ ಸಂಸತ್ ಸದಸ್ಯರು ಪ್ರಧಾನಿಗೆ ವಿರೋಧವಾಗಿ ವರ್ತಿಸದೇ ತಮ್ಮ ಐದು ವರ್ಷದ ಅವಧಿ ಪೂರೈಸಲು ಬಯಸುತ್ತಾರೆ.

ಲೋಕ ಸಭೆಯ ಬಗೆಗಿನ ಪ್ರಧಾನಿಯ ಧೋರಣೆ ಅವರ ನಾಯಕತ್ವಕ್ಕೆ ಪೂರಕವಾಗಿರುತ್ತದೆ. ಜವಾಹರಲಾಲ ನೆಹರು ಸಂಸತ್ತಿನ ಬಗ್ಗೆ ಗೌರವ ಹೊಂದಿದ್ದರು. ಅದನ್ನು ಎದುರಿಸುವ ವಿಶ್ವಾಸ ಅವರಲ್ಲಿತ್ತು. ಸಂಸತ್ತಿನ ಅಧಿವೇಶನ ನಡೆಯುತ್ತಿದ್ದಾಗ ಹೆಚ್ಚು ಸಮಯವನ್ನು ಸದನಗಳಲ್ಲೇ ಕಳೆಯುತ್ತಿದ್ದರು. ಇಂದಿರಾ ಗಾಂಧಿಯವರಿಗೆ ಸಂಸತ್ತಿನ ಬಗ್ಗೆ ಗೌರವವಿರಲಿಲ್ಲ. ಅವರು ಅಧಿವೇಶನದಲ್ಲಿ ಹೆಚ್ಚಾಗಿ ಭಾಗವಹಿಸುತ್ತಿರಲಿಲ್ಲ. ಸಂಸತ್ತನ್ನು ಇಂದಿರಾ ಕಡೆಗಣಿಸುತ್ತಿದ್ದರೂ ಅವರ ಹಿಂಬಾಲಕ ಸದಸ್ಯರು ಆ ಬಗ್ಗೆ ಚಕಾರ ಶಬ್ದ ಎತ್ತುತ್ತಿರಲಿಲ್ಲ. ಆ ಕಾರಣದಿಂದಾಗಿಯೇ ಸರ್ವಾಧಿಕಾರಿ

ಮನೋಭಾವನೆ ಅವರಲ್ಲಿ ಬೆಳೆಯುವಂತಾಯಿತು.

## ರಾಷ್ಟ್ರಪತಿಯ ಸಲಹೆಗಾರ

ಪ್ರಧಾನ ಮಂತ್ರಿ ರಾಷ್ಟ್ರಪತಿಯವರ ಪ್ರಧಾನ ಸಲಹೆಗಾರನಾಗಿದ್ದಾರೆ. ರಾಷ್ಟ್ರಪತಿ ಹಾಗೂ ಸಚಿವ ಸಂಪುಟದ ಸದಸ್ಯರ ನಡುವೆ ಅವರು ಸಂಪರ್ಕ ಸೇತುವೆಯಾಗಿದ್ದಾರೆ. ಮಂತ್ರಿ ಮಂಡಲದ ನಿರ್ಣಯಗಳನ್ನು ಪ್ರಧಾನಿ ರಾಷ್ಟ್ರಪತಿಗೆ ತಲುಪಿಸುತ್ತಾರೆ. ಮಂತ್ರಿ ಮಂಡಲಕ್ಕೆ ಸಂಬಂಧಿಸಿದ ಯವದೇ ಮಾಹಿತಿಯನ್ನು ರಾಷ್ಟ್ರಪತಿ ಬಯಸಿದರೆ ಅದನ್ನು ಪೂರೈಸುತ್ತಾರೆ. ರಾಷ್ಟ್ರಪತಿಯವರು ನೀಡುವ ಸಲಹೆ ಸೂಚನೆಗಳನ್ನು ಮಂತ್ರಿ ಮಂಡಲದ ಮುಂದೆ ಇಡುತ್ತಾರೆ. ದೇಶದ ಮಹತ್ವದ ಪ್ರಮುಖ ಸಮಸ್ಯಗಳ ಬಗ್ಗೆ ರಾಷ್ಟ್ರಪತಿಯವರೊಂದಿಗೆ ಚರ್ಚಿಸುತ್ತಾರೆ.

ಸಂಸದೀಯ ನಡವಳಿಕೆಗಳ ಪ್ರಕಾರ ಪ್ರಧಾನಿಯ ನೇತೃತ್ವದ ಮಂತ್ರಿ-ಮಂಡಲ ನೀಡಿದ ಸಲಹೆಯಂತೆ ರಾಷ್ಟ್ರಪತಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಉದಾ :- ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದರು ಹಿಂದುಕೋಡ್ ಬಿಲ್ಲಿಗೆ ವಿರೋಧ-ವಾಗಿದ್ದರು. ಆದರೆ ಪ್ರಧಾನಿ ಜವಾಹರಲಾಲ ನೆಹರು ಸಂಸತ್ತಿನ ಮೂಲಕ ಪಾಸು ಮಾಡಿದ ಮಸೂದೆಗೆ ಒಪ್ಪಿಗೆ ಹಾಗೂ ಸಹಿ ನೀಡಿದರು. ಸಂವಿಧಾನದ ೪೨ ನೇ ತಿದ್ದುಪಡಿಯ ಮೇರೆಗೆ ಮಂತ್ರಿ ಮಂಡಲದ ಸಲಹೆಯನ್ನು ರಾಷ್ಟ್ರಪತಿ ಕಡ್ಡಾಯವಾಗಿ ಒಪ್ಪಿಕೊಳ್ಳಲೇ ಬೇಕಾಗುತ್ತದೆ. ರಾಷ್ಟ್ರಪತಿ ಹುದ್ದೆಯಲ್ಲಿದ್ದ ಬಹುತೇಕ ನಾಯಕರು ಪ್ರಧಾನಿಯ ಸಲಹೆಯನ್ನು ಸ್ವೀಕರಿಸಿದ್ದಾರೆ. ಉದಾ :- ರಾಷ್ಟ್ರಪತಿ ಫಕೃದ್ಧೀನಅಲಿ ಅಹ್ಮದ್-ರವರು ಇಂದಿರಾಗಾಂಧಿಯವರ ಇಚ್ಛೆಯ ಮೇರೆ ೧೯೭೫ ನೇ ಮೇ ೨೫, ೨೬ ರ ಮಧ್ಯರಾತ್ರಿಯಲ್ಲಿ ಆಂತರಿಕ ತುರ್ತು ಪರಿಸ್ಥಿತಿ ಆದೇಶಕ್ಕೆ ಸಹಿ ಮಾಡಿದರು. ಆದರೆ ಪ್ರಧಾನಿ ಮುರಾರ್ಜಿ ದೇಸಾಯಿ ಹಾಗೂ ಹಂಗಾಮಿ ರಾಷ್ಟ್ರಪತಿ ಬಿ. ಡಿ. ಜತ್ತಿಯವರ ನಡುವೆ ಹೊಂದಾಣಿಕೆ ಇರಲಿಲ್ಲ. ಅದೇ ರೀತಿ ರಾಜೀವಗಾಂಧಿ ಹಾಗೂ ರಾಷ್ಟ್ರಪತಿ ಜೈಲ್ ಸಿಂಗ ನಡುವೆ ಬಾಂಧವ್ಯ ಹಳಸಿತ್ತು.

## ಆಡಳಿತ ಪಕ್ಷದ ಧುರೀಣ

ಪಕ್ಷ ಪದ್ಧತಿ ಆಧುನಿಕ ರಾಜಕೀಯ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿದೆ. ಸಂಸದೀಯ ಪದ್ಧತಿಯಲ್ಲಂತೂ ಅದರ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಲೋಕ ಸಭೆಯಲ್ಲಿ ಬಹುಮತ ಪಡೆದ ಪಕ್ಷದ ನಾಯಕ ಪ್ರಧಾನಿಯಾಗುತ್ತಾನೆ. ಆಡಳಿತ ಪಕ್ಷದ ನಾಯಕನಾಗಿರುವ ವರೆಗೆ ಆ ಪದವಿಯಲ್ಲಿ ಮುಂದುವರಿಯುತ್ತಾನೆ. ಆಡಳಿತ ಪಕ್ಷದ ಮೇಲೆ ಹಿಡಿತವಿರುವ ಪ್ರಧಾನಿ ತನ್ನ ವೈಯಕ್ತಿಕ ಅಭಿಪ್ರಾಯಗಳನ್ನು ಪಕ್ಷದ ಅಭಿಪ್ರಾಯಗಳನ್ನಾಗಿ ಬಿಂಬಿಸುತ್ತಾನೆ. ಅವನ ಜನಪ್ರಿಯತೆ ಹಾಗೂ ವೈಯಕ್ತಿಕ ಪ್ರಭಾವದಿಂದ ಪಕ್ಷ ಬಲಿಷ್ಠವಾಗುತ್ತದೆ. ಜನಾನುರಾಗಿ ಪ್ರಧಾನಿಯಿಂದಾಗಿ ಪಕ್ಷ

ಚುನಾವಣೆಗಳಲ್ಲಿ ಜಯಗಳಿಸುತ್ತದೆ. ಉದಾ :- ೧೯೭೧ ರ ಚು ನಾವಣೆಗಳಲ್ಲಿ ಇಂದಿರಾಗಾಂಧಿಯವರ ಜನಪ್ರಿಯತೆಯ ಕಾರಣದಿಂದಾಗಿ ಕಾಂಗ್ರೆಸ್ಸು ಲೋಕ ಸಭೆಯಲ್ಲಿ ೨/೩ ಬಹುಮತ ಪಡೆಯಿತು. ಅನೇಕ ಪಕ್ಷಗಳ ಹೊಂದಾಣಿಕೆಯಿಂದಾದ ಸರಕಾರದ ಪ್ರಧಾನಿ ಅಷ್ಟೊಂದು ಬಲಶಾಲಿಯಾಗಿರುವದಿಲ್ಲ. ಅವರು ಇತರ ನಾಯಕ-ರೊಂದಿಗೆ ಸಮಾಲೋಚನೆ ನಡೆಸಿ ನಿರ್ಣಯಗಳನ್ನು ತಗೆದುಕೊಳ್ಳ ಬೇಕಾಗುತ್ತದೆ. ಉದಾ :- ದೇವೇಗೌಡರು ಪ್ರಧಾನಿಯಾಗಿದ್ದಾಗ ಆಡಳಿತ ಸಂಯುಕ್ತರಂಗದ ಅಂಗ ಪಕ್ಷಗಳ ನಾಯಕರೊಂದಿಗೆ ಸಮಾಲೋಚಿಸಿ ನಿರ್ಣಯ ತಗೆದುಕೊಳ್ಳುತ್ತಿದ್ದರು.

## ಲೋಕ ಸಭೆಯ ವಿಸರ್ಜನೆ

ಲೋಕ ಸಭೆಯ ಕಾರ್ಯಾವಧಿ ೫ ವರ್ಷಗಳು. ಸಂಸದೀಯ ಪದ್ಧತಿಯ ಪ್ರಕಾರ ಅವಧಿ ಮುಗಿಯುವ ಪೂರ್ವದಲ್ಲಿ ಲೋಕ ಸಭೆಯ ವಿಸರ್ಜನೆಯಾಗಿ ಚುನಾವಣೆ ನಡೆಯಬಹುದು. ಬಹುಮತದ ಬೆಂಬಲವಿರುವ ಪ್ರಧಾನಿ ನೀಡಿದ ಸಲಹೆಯ ಮೇರೆಗೆ ರಾಷ್ಟ್ರಪತಿಯವರು ಲೋಕ ಸಭೆಯನ್ನು ವಿಸರ್ಜಿಸುತ್ತಾರೆ. ಸರಕಾರ ಮಂಡಿಸಿದ ಮಹತ್ವದ ಮಸೂದೆಗೆ ಸೋಲಾದರೆ ಅಥವಾ ಮಂತ್ರಿ ಮಂಡಲದಲ್ಲಿ ಒಡಕು ಉಂಟಾದರೆ ಪ್ರಧಾನಿ ಲೋಕ ಸಭಾ ವಿಸರ್ಜನೆಯ ಆಯುಧವನ್ನು ಉಪಯೋಗಿಸ-ಬಹುದು. ೧೯೭೦ ರಲ್ಲಿ ಇಂದಿರಾಗಾಂಧಿ ಮೊದಲ ಬಾರಿಗೆ ಲೋಕ ಸಭೆಯ ವಿಸರ್ಜನೆ ಮಾಡಿಸಿದರು. ೧೯೮೪ ರಲ್ಲಿ ಇಂದಿರಾಗಾಂಧಿಯವರ ದುರ್ಮರಣದ ನಂತರ ಪ್ರಧಾನಿಯಾದ ರಾಜೀವಗಾಂಧಿ ಲೋಕ ಸಭೆ ವಿಸರ್ಜನೆ ಮಾಡಿಸಿದರು. ಬಹುಮತದ ಬೆಂಬಲವಿರದ ಪ್ರಧಾನಿಯ ಸಲಹೆಯ ಮೇರೆಗೆ ರಾಷ್ಟ್ರಪತಿಯವರು ಲೋಕ ಸಭೆ ವಿಸರ್ಜಿಸಬೇಕಾಗಿಲ್ಲ. ಉದಾ :- ೧೯೭೯ರಲ್ಲಿ ಪ್ರಧಾನಮಂತ್ರಿ ಹುದ್ದೆಯಲ್ಲಿದ್ದ ಚರಣಸಿಂಗ್ ಲೋಕ ಸಭೆ ಎದುರಿಸಿ ಬಹುಮತ ಸಾಬೀತು ಪಡಿಸದೇ ಲೋಕ ಸಭೆ ವಿಸರ್ಜನೆಗೆ ನೀಡಿದ ಸಲಹೆಯನ್ನು ನೀಲಂ ಸಂಜೀವ ರೆಡ್ಡಿ ಒಪ್ಪಲಿಲ್ಲ. ಮುಂದೆ ಕಾಂಗ್ರೆಸ್‌ನ ಸಿ. ಎಂ. ಸ್ಟಿಫನ್ ಮನವಿಯ ಮೇರೆಗೆ ಲೋಕ ಸಭೆ ವಿಸರ್ಜನೆ ಮಾಡಿದರು.

## ನೇಮಕಾಧಿಕಾರಗಳು

ಸರಕಾರದ ಕೆಲವು ಪ್ರಮುಖ ಹುದ್ದೆಗಳಿಗೆ ನೇಮಕ ಮಾಡುವ ಅಧಿಕಾರ ಪ್ರಧಾನಿಗಿದೆ. ರಾಯಭಾರಿಗಳು, ರಾಜ್ಯಪಾಲರು, ಅಟಾರ್ನಿ ಜನರಲ್, ಕಂಪ್ಟ್ರೋಲರ್ ಹಾಗೂ ಆಡಿಟರ್ ಜನರಲ್, ಸೈನ್ಯದ ಮೂರೂ ವಿಭಾಗಗಳ ಮುಖ್ಯಸ್ತರು, ಚುನಾವಣಾ ಆಯುಕ್ತರು, ಕೇಂದ್ರ ಹಾಗೂ ಜಂಟೀ ಲೋಕ ಸೇವಾ ಆಯೋಗದ ಅಧ್ಯಕ್ಷರು ಹಾಗೂ ಸದಸ್ಯರು, ಸರ್ವೋನ್ನತ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳ ನ್ಯಾಯಾಧೀಶರು, ಮುಂತಾದ ಉನ್ನತ ಹುದ್ದೆಗಳಿಗೆ ಪ್ರಧಾನಿಯ ಸಲಹೆಯ ಮೇರೆಗೆ

ರಾಷ್ಟ್ರಪತಿಯವರು ನೇಮಕ ಮಾಡುತ್ತಾರೆ.

## ಪ್ರಧಾನ ಮಂತ್ರಿಯ ಸ್ಥಾನ

ಸಂಸದೀಯ ಪ್ರಜಾಪ್ರಭುತ್ವದಲ್ಲಿ ರಾಷ್ಟ್ರಪತಿ ಕಾರ್ಯಾಂಗದ ನಾಮ ಮಾತ್ರ ಮುಖ್ಯಸ್ತನಾದರೆ ಪ್ರಧಾನಿ ನೈಜ ಮುಖ್ಯಸ್ತನಾಗಿದ್ದಾನೆ. ರಾಷ್ಟ್ರಪತಿಯಿಂದ ನೇಮಕ ಹೊಂದಿದ್ದರೂ ಪ್ರಧಾನಿ ಲೋಕಸಭೆಗೆ ಜವಾಬ್ದಾರನಾಗಿರುತ್ತಾನೆ. ರಾಷ್ಟ್ರಪತಿಯ ವಿಶ್ವಾಸ ಎಂಬುದು ಲೋಕಸಭೆಯ ಬಹುಮತದ ಬೆಂಬಲವನ್ನು ಸೂಚಿಸುತ್ತದೆ. ಸಂವಿಧಾನದ ೪೨ ನೇ ತಿದ್ದುಪಡಿಯ ಮೇರೆಗೆ ರಾಷ್ಟ್ರಪತಿಯವರು ಪ್ರಧಾನಿಯ ನೇತೃತ್ವದ ಮಂತ್ರಿ ಮಂಡಲದ ಸಲಹೆಯ ಮೇರೆಗೆ ಅಧಿಕಾರ ಚಲಾಯಿಸುತ್ತಾರೆ.

ಸಂವಿಧಾನದ ೭೪ ನೇ ಕಲಮಿನ ಪ್ರಕಾರ ರಾಷ್ಟ್ರಪತಿಗೆ ಸಲಹೆ ನೀಡಲು ಪ್ರಧಾನಿಯನ್ನೊಳಗೊಂಡ ಒಂದು ಮಂತ್ರಿ ಮಂಡಲವಿರುತ್ತದೆ. ೭೮ ನೇ ಕಲಮಿನ ಪ್ರಕಾರ ಕೇಂದ್ರ ಸರಕಾರದ ಆಡಳಿತಕ್ಕೆ ಸಂಬಂಧಿಸಿದ ಮಂತ್ರಿ ಮಂಡಲದ ನಿರ್ಣಯಗಳನ್ನು ಕಾಲ ಕಾಲಕ್ಕೆ ರಾಷ್ಟ್ರಪತಿಗೆ ತಿಳಸುತ್ತಿರಬೇಕಾಗುತ್ತದೆ. ೭೪ ರಿಂದ ೭೮ ರ ವರೆಗಿನ ಕಲಮುಗಳನ್ನು ಪರಿಸೀಲಿಸಿದಾಗ ಪ್ರಧಾನಿಯೇ ಕಾರ್ಯಾಂಗದ ನಿಜವಾದ ಮುಖ್ಯಸ್ಥ ಎಂಬುದು ಕಂಡುಬರುತ್ತದೆ. ಅವನು ಲೋಕಸಭೆಯ ಬಹುಮತ ಪಕ್ಷದ ನಾಯಕ. ಲೋಕಸಭೆಯಲ್ಲಿ ಬಹುಮತದ ಬೆಂಬಲವಿರುವವರೆಗೆ ಅಧಿಕಾರದಲ್ಲಿ ಮುಂದುವರೆಯುತ್ತಾನೆ. ರಾಷ್ಟ್ರಪತಿಯವರಿಂದ ನೇಮಕಗೊಳ್ಳುವದು, ಹಾಗೂ ಅವರ ವಿಶ್ವಾಸವಿರುವವರೆಗೆ ಅಧಿಕಾರದಲ್ಲಿ ಮುಂದುವರೆಯುತ್ತಾರೆಂಬುದು ಸಂಸದೀಯ ಸಂಪ್ರದಾಯಮಾತ್ರವಾಗಿದೆ.

ಬ್ರಿಟನ್ನಿನಲ್ಲಿ ಪ್ರಧಾನಿ ಸಮಾನರಲ್ಲಿ ಪ್ರಥಮನಾದರೆ ಭಾರತದಲ್ಲಿ ಹಾಗಿಲ್ಲ. ಇಲ್ಲಿ ಪ್ರಧಾನಿ ಸೂರ್ಯನಿದ್ದಂತೆ ಹಾಗೂ ಮಂತ್ರಿ ಮಂಡಲದ ಸದಸ್ಯರು ಸೂರ್ಯನ ಸುತ್ತಲೂ ತಿರುಗುತ್ತಿರುವ ಗ್ರಹಗಳಿದ್ದಂತೆ. ಮಂತ್ರಿಗಳನ್ನು ಪ್ರಧಾನಿಯೇ ಆಯ್ಕೆ ಮಾಡುತ್ತಾರೆ. ಪ್ರಧಾನಿಯೊಂದಿಗೆ ಹೊಂದಾಣಿಕೆ ಇರುವವರೆಗೆ ಅವರು ಮಂತ್ರಿಗಳಾಗಿ ಮುಂದುವರಿಯುತ್ತಾರೆ. ಆಡಳಿತ ನಿರ್ವಹಣೆಯ ಬಗ್ಗೆ ಪ್ರಧಾನಿ ನೀಡುವ ಸಲಹೆ ಸೂಚನೆಗಳನ್ನು ಮಂತ್ರಿಗಳು ಪಾಲಿಸಬೇಕು.

ರಾಷ್ಟ್ರಪತಿಯವರ ಸ್ಥಾನದ ಮಹತ್ವವನ್ನು ಪ್ರಧಾನಿಯ ಸ್ಥಾನ ಕಡಿಮೆ ಮಾಡಿದೆ ಎಂಬ ವ್ಯಾಪಕ ಟೀಕೆಗಳು ಕೇಳಿಬರುತ್ತವೆ. ನೆಹರು ಕಾಲದಲ್ಲಿ ರಾಷ್ಟ್ರಪತಿ ಸ್ಥಾನಕ್ಕೆ ಸೂಕ್ತ ಗೌರವ ನೀಡಲಾಗುತ್ತಿತ್ತು. ಇಂದಿರಾ ಗಾಂಧಿ ಕಾಲದಲ್ಲಿ ರಾಷ್ಟ್ರಪತಿಯ ಸ್ಥಾನ ಗೌಣವಾಯಿತು. ಅವರು ಪ್ರಧಾನಿ ಹೇಳದಂತೆ ಕೇಳುವ ರಾಷ್ಟ್ರಪತಿಗಳನ್ನು ಬಯಸುತ್ತಿದ್ದರು. ವಿ.ವಿ. ಗಿರಿ ಮತ್ತು ಫಕ್ರುದ್ದೀನ ಅಲಿ ಅಹ್ಮದ್ ಪ್ರಧಾನಿಯ

ರಾಷ್ಟ್ರಪತಿಯಾಗಿದ್ದರು. ರಾಜೀವಗಾಂಧಿಯವರು, ಇಂದಿರಾ ಗಾಂಧಿ ಯವರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ರಾಷ್ಟ್ರಪತಿ ಝೈಲ್ ಸಿಂಗ್ ಅವರನ್ನು ಅಲಕ್ಷಿಸುತ್ತಿದ್ದರು.

ನೆಹರು ಪ್ರಧಾನಿಯಾಗಿದ್ದಾಗ ತಮ್ಮ ಸಹೋದ್ಯೋಗಿಗಳಿಗೆಲ್ಲ ಗೌರವ ಕೊಡುತ್ತಿದ್ದರು. ಹಿರಿಯ ಸಚಿವರ ಸಲಹೆ ಸೂಚನೆಗಳಿಗೆ ಯೋಗ್ಯ ಮರ್ಯಾದೆ ಕೊಡುತ್ತಿದ್ದರು. ಲಾಲಬಹದ್ದೂರ ಶಾಸ್ತ್ರಿ ಕೂಡಾ ಸಹೋದ್ಯೋಗಿಗಳೊಂದಿಗೆ ಗೌರವ ಯುತ ಸಂಬಂಧ ಹೊಂದಿದ್ದರು. ಇಂದಿರಾಗಾಂಧಿ ಪ್ರಧಾನಿಯಾದ ನಂತರ, ಅದರಲ್ಲೂ ಕಾಂಗ್ರೆಸ್‌ನ ವಿಭಜನೆ ಮಾಡಿದ ನಂತರ ಸಹೋದ್ಯೋಗಿ ಸಚಿವರ ಬಗ್ಗೆ ಗೌರವ ಹೊಂದಿರಲಿಲ್ಲ. ಮಹತ್ವದ ವಿಷಯಗಳ ಬಗ್ಗೆ ನಿರ್ಣಯ ತಗೆದುಕೊಳ್ಳುವಾಗ ಮಂತ್ರಿ ಮಂಡಲವನ್ನು ವಿಶ್ವಾಸಕ್ಕೆ ತಗೆದುಕೊಳ್ಳದೇ ಕಾರ್ಯದರ್ಶಿಗಳ ಸಲಹೆ ಪಡೆಯುತ್ತಿದ್ದರು. ಇಂದಿರಾ ಕಾಲದಲ್ಲಿ ಮಂತ್ರಿ ಮಂಡಲ ಸರಕಾರದ ಬದಲಾಗಿ ಪ್ರಧಾನ ಮಂತ್ರಿಯ ಸರಕಾರ ಅಸ್ತಿತ್ವದಲ್ಲಿದೆ ಎಂಬ ಕಟುಟೀಕೆಗಳು ಕೇಳಿ ಬರುತ್ತಿದ್ದವು. ಇಂದಿರಾಗಾಂಧಿ ಅಧಿಕಾರದ ಅವಧಿಯಲ್ಲಿ ಸಂವಿಧಾನಕ್ಕೆ ನಡೆದ ೧೫ ತಿದ್ದುಪಡಿಗಳ ಪೈಕಿ ೯ ಪ್ರಧಾನಿಯ ಅಧಿಕಾರಕ್ಕೆ ಸಂಬಂಧ ಪಟ್ಟವುಗಳಾಗಿವೆ. ಇಂದಿರಾಗಾಂಧಿ ೧೯೭೫ ರಲ್ಲಿ ಸಹೋದ್ಯೋಗಿಗಳನ್ನು ವಿಶ್ವಾಸಕ್ಕೆ ತಗೆದುಕೊಳ್ಳದೇ ಮಧ್ಯರಾತ್ರಿಯಲ್ಲಿ ತುರ್ತು ಪರಿಸ್ಥಿತಿ ಸಾರಿದರು.

ಪ್ರಧಾನಿಗಿರುವ ವ್ಯಾಪಕ ನೇಮಕಾಧಿಕಾರ ಅವರ ಸ್ಥಾನದ ಹಿರಿಮೆಯನ್ನು ಹೆಚ್ಚಿಸಿದೆ. ದೇಶ ವಿದೇಶಗಳಲ್ಲಿರುವ ಸರಕಾರದ ಉನ್ನತ ಹುದ್ದೆಗಳಿಗೆ ನೇಮಕ ಮಾಡುವ ಅಧಿಕಾರ ಪ್ರಧಾನಿಯವರಿಗಿದೆ. ತಮ್ಮ ಬೆಂಬಲಿಗರನ್ನು ಲಾಭದಾಯಕ ಹಾಗೂ ಗೌರವಾನ್ವಿತ ಹುದ್ದೆಗಳಿಗೆ ನೇಮಕ ಮಾಡುವ ಅವಕಾಶ ಅವರಿಗಿದೆ. ಪ್ರಧಾನಿ ಅಧಿಕಾರದಲ್ಲಿರುವವರೆಗೆ ಅಥವಾ ಪ್ರಧಾನಿಯ ವಿಶ್ವಾಸವಿರುವವರೆಗೆ ಅಂಥವರು ಅಧಿಕಾರದಲ್ಲಿ ಮುಂದುವರೆಯುತ್ತಾರೆ.

ಲಾಲ ಬಹದ್ದೂರ ಶಾಸ್ತ್ರಿಯವರು ಪ್ರಧಾನಿಯ ಸಚಿವಾಲಯ ರಚಿಸಿದರು. ಇಂದಿರಾಗಾಂಧಿ ಕಾಲದಲ್ಲಿ ಅದು ಪ್ರಧಾನಿಯ ಕಾರ್ಯಾಲಯ **(Prime Minesters Office)** ಆಗಿ ಪರಿವರ್ತನೆ ಹೊಂದಿತು. ಇಂದು ಪ್ರಧಾನಮಂತ್ರಿಯ ಕಾರ್ಯಾಲಯ ತನ್ನ ನಿರ್ಮಾಪಕರನ್ನೇ ನಿಯಂತ್ರಿಸುವ ರೀತಿಯಲ್ಲಿ ಸಂವಿಧಾನೇತರ ಅಧಿಕಾರ ಸ್ಥಾನವಾಗಿ ಬೆಳೆದು ನಿಂತಿದೆ. ೧೯೮೯ ರಲ್ಲಿ ಆಗಿನ ರಕ್ಷಣಾ ಸಚಿವ ಕೆ.ಸಿ.ಪಂತ ಅವರಿಗೆ ಪ್ರಧಾನಿ ರಾಜೀವ ಗಾಂಧಿಯವರನ್ನು ಭೇಟಿಯಾಗಲು ಪ್ರಧಾನಿಯ ಕಾರ್ಯಾಲಯ ಅವಕಾಶ ನೀಡಲಿಲ್ಲ. ನರಸಿಂಹರಾವ್ ಹಾಗೂ ನಂತರದ ಪ್ರಧಾನಿಗಳ ಅವಧಿಯಲ್ಲಿ ಪರಿಸ್ಥಿತಿ ಸ್ವಲ್ಪ ಬದಲಾಯಿಸಿದೆ. ಸ್ವತಂತ್ರ ಮಾಧ್ಯಮಗಳು ಕೂಡ ಈ ಸಂವಿಧಾನೇತರ ಅಧಿಕಾರ ಸ್ಥಾನದಿಂದಾಗುವ ಅಧಿಕಾರ ದುರುಪಯೋಗ ತಡೆಯುವಲ್ಲಿ ಸೂಕ್ತ ಪಾತ್ರ ನಿರ್ವಹಿಸುತ್ತಿವೆ.

ಒಂದೇ ಪಕ್ಷ ಬಹುಮತ ಪಡೆಯಲು ಸಾಧ್ಯವಿಲ್ಲದಿರುವ ಇಂದಿನ ಪರಿಸ್ಥಿತಿಯಲ್ಲಿ ಪ್ರಧಾನಿಯ ಸ್ಥಾನದ ಮಹತ್ವ ಮೊದಲಿನಂತಿಲ್ಲ. ವಿಭಿನ್ನ ವಿಚಾರಧಾರೆಗಳ ಅನೇಕ ಪಕ್ಷಗಳನ್ನು ಕಟ್ಟಿಕೊಂಡು ಪ್ರಧಾನಿ ಕಪ್ಪೆ ತೂಗುವವನ ಸ್ಥಿತಿಗೆ ತಲುಪಿದ್ದಾರೆ. ಪ್ರಧಾನಿ ತನ್ನೆಲ್ಲ ಸಾಮರ್ಥ್ಯವನ್ನು ಆಡಳಿತಾರೂಢ ಪಕ್ಷಗಳ ನಡುವೆ ಹೊಂದಾಣಿಕೆ ಮಾಡುವದಕ್ಕೆ ವ್ಯಯ ಮಾಡಬೇಕಾಗಿದೆ. ೧೯೯೮ ರಲ್ಲಿ ವಾಜಪೇಯಿ ಸರಕಾರವನ್ನು ಜಯಲಲಿತಾ ಕೇವಲ ಒಂದು ಮತದಿಂದ ಸೋಲುವಂತೆ ಮಾಡಿದ್ದನ್ನು ಇಲ್ಲಿ ಸ್ಮರಿಸಬಹುದು.

## ಮಂತ್ರಿ ಮಂಡಲ (ಸಚಿವ ಸಂಪುಟ)

ಸಂಸದೀಯ ಪದ್ಧತಿಯಲ್ಲಿ ಕಾರ್ಯಾಂಗದ ಪ್ರಮುಖ ತೀರ್ಮಾನಗಳನ್ನು ಸಂಪುಟ ಸಭೆ (ಕ್ಯಾಬಿನೆಟ್‌ಸಭೆ) ತಗೆದುಕೊಳ್ಳುತ್ತದೆ. ಆದ್ದರಿಂದ ಅದಕ್ಕೆ ಕ್ಯಾಬಿನೆಟ್ ಸರಕಾರವೆಂದು ಕರೆಯಲಾಗುತ್ತದೆ. ಪ್ರಧಾನಿಯ ಸಲಹೆಯ ಮೇರೆಗೆ ಮಂತ್ರಿ ಮಂಡಲದ ಸದಸ್ಯರ ನೇಮಕ ನಡೆಯುತ್ತದೆ. ಅಧಿಕಾರ ಹಂಚಿಕೆ ಕೂಡ ಪ್ರಧಾನಿಯ ಸಲಹೆಯ ಮೇರೆಗೆ ನಡೆಯುತ್ತದೆ. ಪ್ರತಿಯೊಬ್ಬ ಮಂತ್ರಿ ಒಂದು ಖಾತೆಯ ಮುಖ್ಯಸ್ಥನಾಗಿರುತ್ತಾನೆ. ಅವನು ತನ್ನ ಇಲಾಖೆಯ ಆಡಳಿತದ ಹೊಣೆ ಹೊರುತ್ತಾನೆ. ಸಂಸತ್ತಿನ ಹಾಗೂ ಪ್ರಧಾನಿಯ ವಿಶ್ವಾಸ ಹೊಂದಿರುವವರೆಗೆ ಮಂತ್ರಿಗಳು ಅಧಿಕಾರದಲ್ಲಿ ಮುಂದುವರೆಯುತ್ತಾರೆ.

**ಮಂತ್ರಿಗಳು ಎರಡು ಬಗೆಯ ಜವಾಬ್ದಾರಿ ಹೊಂದಿರುತ್ತಾರೆ.**

೧. ವೈಯಕ್ತಿಕ ಜವಾಬ್ದಾರಿ ೨.ಸಾಮೂಹಿಕ ಜವಾಬ್ದಾರಿ

೧. ಪ್ರತಿಯೊಬ್ಬ ಮಂತ್ರಿ ಒಂದು ಇಲಾಖೆಯ (ಖಾತೆಯ) ಮುಖ್ಯಸ್ತನಾಗಿರುತ್ತಾನೆ. ತನ್ನಇಲಾಖೆಯ ಆಗುಹೋಗುಗಳಿಗಾಗಿ ಅವನು ಲೋಕ ಸಭೆಗೆ ಜವಾಬ್ದಾರ-ನಾಗಿರುತ್ತಾನೆ.

೨. ಮಂತ್ರಿ ಮಂಡಲವು ಸಾಮೂಹಿಕವಾಗಿ ಸರಕಾರದ ಆಡಳಿತದ ನಿರ್ವಹಣೆಗಾಗಿ ಸಂಸತ್ತಿಗೆ ಜವಾಬ್ದಾರಿ ಹೊಂದಿದೆ. ಸರಕಾರದ ಆಡಳಿತದ ಲೋಪದೋಷಗಳಿಗೆ ಪ್ರಧಾನಿಯನ್ನೊಳಗೊಂಡು ಎಲ್ಲ ಮಂತ್ರಿಗಳು ಜವಾಬ್ದಾರರಾಗಿರುತ್ತಾರೆ. ಲೋಕ ಸಭೆ ಒಂದು ಖಾತೆಯ ಲೋಪದೋಷಗಳ ಬಗ್ಗೆ ಅವಿಶ್ವಾಸ ವ್ಯಕ್ತ ಪಡಿಸಿದರೆ ಸಂಬಂಧ ಪಟ್ಟ ಮಂತ್ರಿ ರಾಜೀನಾಮೆ ಕೊಡಬೇಕಾಗುತ್ತಾರೆ.ಮಂತ್ರಿಮಂಡಲದ ಅಥವಾ ಸರಕಾರದ ಆಡಳಿತದ ಬಗ್ಗೆ ಅವಿಶ್ವಾಸ ಗೊತ್ತುವಳಿ ಪಾಸಾದರೆ ಪ್ರಧಾನಿ ರಾಜೀನಾಮೆ ನೀಡುತ್ತಾರೆ. ಪ್ರಧಾನಿ ರಾಜೀನಾಮೆ ನೀಡಿದರೆ ಎಲ್ಲ ಮಂತ್ರಿಗಳೂ ನೀಡಿದಂತೆ.

ಮಂತ್ರಿ ಮಂಡಲದಲ್ಲಿ ನಾಲ್ಕು ದರ್ಜೆಯ ಮಂತ್ರಿಗಳಿರುತ್ತಾರೆ.

೧. ಸಂಪುಟದರ್ಜೆ ಸಚಿವರು ೨. ರಾಜ್ಯಸಚಿವರು ೩. ಉಪಸಚಿವರು ೪. ಸಂಸದೀಯ ಕಾರ್ಯದರ್ಶಿಗಳು.

**೧. ಸಂಪುಟದರ್ಜೆಯ ಸಚಿವರು :-** ಸಚಿವಸಂಪುಟದಲ್ಲಿ ಸಂಪುಟದರ್ಜೆಯ ಸಚಿವರಿಗೆ ಉನ್ನತ ಸ್ಥಾನವಿದೆ. ಇವರು ಸರಕಾರದ ಧ್ಯೇಯಧೋರಣೆಗಳ ಬಗ್ಗೆ ತೀರ್ಮಾನ ತಗೆದು ಕೊಳ್ಳುತ್ತಾರೆ. ಪ್ರತಿಯೊಬ್ಬ ಸಂಪುಟದ ಸಚಿವರು ಒಂದು ಇಲಾಖೆಯ ಮುಖ್ಯಸ್ತರಾಗಿರುತ್ತಾರೆ. ತಮ್ಮ ಇಲಾಖೆಯ ಆಡಳಿತದ ಸಂಪೂರ್ಣ ಜವಾಬ್ದಾರಿ ಇವರದಾಗಿರುತ್ತದೆ. ಪ್ರಧಾನಿಯ ಅಧ್ಯಕ್ಷತೆಯಲ್ಲಿ ಸಂಪುಟ ಸಭೆ ವಾರದಲ್ಲಿ ಒಂದು ಅಥವಾ ಎರಡು ಸಲ ನಡೆಯುತ್ತದೆ.

**೨. ರಾಜ್ಯ ಸಚಿವರು :-** ಸಂಪುಟ ದರ್ಜೆಯ ಸಚಿವರ ನಂತರದ ಸ್ಥಾನ ರಾಜ್ಯ ಸಚಿವರದು. ಇವರು ಒಂದು ಖಾತೆಯ ಸ್ವತಂತ್ರ ಜವಾಬ್ದಾರಿ ಹೊಂದಿರಬಹುದು ಅಥವಾ ಹಿರಿಯ ಸಂಪುಟ ಸಚಿವರ ಅಧೀನದಲ್ಲಿ ಕೆಲಸ ಮಾಡಬೇಕಾಗಬಹುದು ಉದಾ:- ಎಂ.ವಿ. ರಾಜಶೇಖರನ್ ಸ್ವತಂತ್ರ ಜವಾಬ್ದಾರಿ ಹೊಂದಿದ ರಾಜ್ಯಸಚಿವರಾಗಿದ್ದಾರೆ. ಸಂಪುಟ ಸಭೆಯಲ್ಲಿ ಸಾಮಾನ್ಯವಾಗಿ ರಾಜ್ಯ ಸಚಿವರು ಭಾಗವಹಿಸುವದಿಲ್ಲ. ಆದರೆ ಅವರ ಇಲಾಖೆಗೆ ಸಂಬಂಧಿಸಿದ ವಿಷಯ ಸಂಪುಟ ಸಭೆಯಲ್ಲಿ ಚರ್ಚೆಗೆ ಬರುವಂತಿದ್ದರೆ ಭಾಗವಹಿಸುತ್ತಾರೆ.

**೩. ಉಪ ಸಚಿವರು :-** ಇವರು ಕಿರಿಯ ಸಚಿವರು. ಸಂಪುಟ ದರ್ಜೆಯ ಸಚಿವರ ಕೈಕೆಳಗೆ ಕೆಲಸ ಮಾಡುತ್ತಾರೆ. ಸ್ವತಂತ್ರ ಜವಾಬ್ದಾರಿ ಇವರಿಗಿರುವದಿಲ್ಲ. ಹಿರಿಯ ಸಚಿವರಿಗೆ ಆಡಳಿತ ನಿರ್ವಹಣೆಯಲ್ಲಿ ಸಹಾಯ ಮಾಡುವದು ಇವರ ಕರ್ತವ್ಯ.

**೪. ಸಂಸದೀಯ ಕಾರ್ಯದರ್ಶಿಗಳು :-** ಇವರು ಮಂತ್ರಿ ಮಂಡಲದಲ್ಲೇ ಅತ್ಯಂತ ಕಿರಿಯ ಹಾಗೂ ಸಂಸತ್ತಿಗೆ ಮೊದಲಬಾರಿ ಆಯ್ಕೆಯಾದ ಸದಸ್ಯರಾಗಿರುತ್ತಾರೆ. ಯುವಕರಾದವರಿಗೆ ತರಬೇತಿಯ ರೂಪದಲ್ಲಿ ಸಂಸದೀಯ ಕಾರ್ಯದರ್ಶಿ ಹುದ್ದೆ ನೀಡಲಾಗುತ್ತದೆ.

ಮಂತ್ರಿ ಮಂಡಲವು ಇಡೀ ರಾಷ್ಟ್ರದ ಆಡಳಿತ ವ್ಯವಸ್ಥೆಯನ್ನು ನಿರ್ವಹಿಸುವ ಸಂಸ್ಥೆಯಾಗಿದೆ. ಅದರ ಕಾರ್ಯಗಳು ಹಾಗೂ ಜವಾಬ್ದಾರಿ ಅಪರಿಮಿತ ವಾಗಿರುತ್ತವೆ. ಮಂತ್ರಿ ಮಂಡಲದ ಕಾರ್ಯಗಳನ್ನು ಸುಲಭಗೊಳಿಸಲು ವಿವಿಧ ಸಮಿತಿಗಳನ್ನು ರಚಿಸಲಾಗುತ್ತದೆ. ಉದಾ:- ವಿದೇಶಾಂಗ ವ್ಯವಹಾರಗಳ ಸಮಿತಿ, ಆರ್ಥಿಕ ವ್ಯವಹಾರಗಳ ಸಮಿತಿ ಮುಂತಾದ ಸಮಿತಿಗಳು ಆಯಾ ಇಲಾಖೆಗೆ ಸಂಬಂಧಿಸಿದ ಎಲ್ಲ ಮಾಹಿತಿ

ಸಂಗ್ರಹಿಸಿ ಕೊಟ್ಟು ಆಡಳಿತ ನಿರ್ವಹಣೆಗೆ ನೆರವಾಗುತ್ತವೆ. ಈ ಸಮಿತಿಗಳು ಶಾಶ್ವತವಾಗಿರಬಹುದು ಅಥವಾ ತಾತ್ಕಾಲಿಕವಾಗಿರಬಹುದು.

## * ಮಂತ್ರಿ ಮಂಡಲದ ಕಾರ್ಯಗಳು

ಮಂತ್ರಿಮಂಡಲ ನಿರ್ವಹಿಸುವ ಕಾರ್ಯಗಳು ಕೆಳಗಿನಂತಿವೆ.

### ೧. ಶಾಸನೀಯ ಕಾರ್ಯಗಳು

ಸರಕಾರಿ ಅಥವಾ ಸಾರ್ವಜನಿಕ ಮಸೂದೆಗಳನ್ನು ಸಂಬಂಧ ಪಟ್ಟ ಇಲಾಖೆಯ ಸಚಿವರು ಸಂಸತ್ತಿನಲ್ಲಿ ಮಂಡಿಸುತ್ತಾರೆ. ಆಯಾ ಇಲಾಖೆಯ ಉನ್ನತ ದರ್ಜೆಯ ಅಧಿಕಾರಿಗಳು ಕಾನೂನು ಇಲಾಖೆಯ ಅಧಿಕಾರಿಗಳ ಸಹಾಯ, ಸಹಕಾರದೊಂದಿಗೆ ಮಸೂದೆಯನ್ನು ತಯಾರಿಸುತ್ತಾರೆ. ಮಸೂದೆಯನ್ನು ಸಂಬಂಧಿಸಿದ ಮಂತ್ರಿಗಳು ಸಂಸತ್ತಿನ ಎರಡೂ ಸದನಗಳಲ್ಲಿ ಮಂಡಿಸುತ್ತಾರೆ. ಆ ಬಗ್ಗೆ ನಡೆಯುವ ಚರ್ಚೆಗಳಿಗೆ ಉತ್ತರ ನೀಡಿ ಮಸೂದೆ ಮಂಡನೆಯನ್ನು ಸಮರ್ಥಿಸಿಕೊಂಡು ಅದು ಎರಡೂ ಸದನಗಳಲ್ಲಿ ಪಾಸಾಗುವಂತೆ ನೋಡಿಕೊಳ್ಳುತ್ತಾರೆ. ಸಧ್ಯ ಜಾರಿಯಲ್ಲಿರುವ ಕಾನೂನಿಗೆ ತಿದ್ದುಪಡಿ ಮಾಡುವ ಅಗತ್ಯವಿದ್ದರೆ ಆ ಬಗ್ಗೆ ಕೂಡಾ ತಿದ್ದುಪಡಿ ಮಸೂದೆ ಮಂಡಿಸಿ ಎರಡೂ ಸದನಗಳ ಒಪ್ಪಿಗೆ ಪಡೆಯುತ್ತಾರೆ. ಸರಕಾರೀ ಮಸೂದೆಗೆ ಲೋಕ ಸಭೆಯಲ್ಲಿ ಸೋಲುಂಟಾದರೆ ಮಂತ್ರಿ ಮಂಡಲ ರಾಜೀನಾಮೆ ನೀಡಬೇಕಾಗುತ್ತದೆ.

### ೨. ಆಡಳಿತ ಕಾರ್ಯಗಳು

ರಾಷ್ಟ್ರದ ಆಡಳಿತದ ಅಂತಿಮ ಜವಾಬ್ದಾರಿ ಮಂತ್ರಿ ಮಂಡಲದ್ದಾಗಿದೆ. ಆದ್ದರಿಂದ ಮಂತ್ರಿಗಳು ತಮ್ಮ ಇಲಾಖೆಯ ಆಡಳಿತದ ಮೇಲ್ವಿಚಾರಣೆಯನ್ನು ಎಚ್ಚರಿಕೆಯಿಂದ ಮಾಡುತ್ತಾರೆ. ಇಲಾಖೆಯ ಲೋಪದೋಷಗಳ ನೈತಿಕ ಹೊಣೆ ಆ ಇಲಾಖೆಯ ಮುಖ್ಯಸ್ತನಾದ ಸಚಿವನ ಮೇಲಿರುತ್ತದೆ. ಆಡಳಿತದ ಅವ್ಯವಸ್ಥೆಯ ಜವಾಬ್ದಾರಿ ಹೊತ್ತುಕೊಂಡು ಇಲಾಖಾಮಂತ್ರಿ ರಾಜೀನಾಮೆ ನೀಡಬೇಕಾಗುತ್ತದೆ. ಉದಾ :- ೧೯೫೭ ರಲ್ಲಿ ಒಂದು ವಾರದಲ್ಲಿ ಮೂರು ರೇಲ್ವೆ ಅಪಘಾತಗಳು ಜರುಗಿದ್ದರಿಂದ ಅವುಗಳ ನೈತಿಕ ಹೊಣೆ ಹೊತ್ತುಕೊಂಡು ಆಗಿನ ರೇಲ್ವೆ ಸಚಿವ ಲಾಲಬಹದ್ದೂರ ಶಾಸ್ತ್ರಿಯವರು ರಾಜಿನಾಮೆ ನೀಡಿದರು. ಮಂತ್ರಿಗಳು ತಮ್ಮ ಇಲಾಖೆಯ ಆಡಳಿತದ ಬಗ್ಗೆ ರಾಷ್ಟ್ರಪತಿಯವರು ಬಯಸುವ ವಿವರಗಳನ್ನು ನೀಡಬೇಕಾಗುತ್ತದೆ. ಸಂಸತ್ ಸದಸ್ಯರು ಆಡಳಿತದ ಬಗ್ಗೆ ಕೇಳುವ ಪ್ರಶ್ನೆಗಳಿಗೆ ಸೂಕ್ತ ಉತ್ತರ ನೀಡಬೇಕಾಗುತ್ತದೆ.

ಆಡಳಿತದ ವಿಷಯದಲ್ಲಿ ೧. ವೈಯಕ್ತಿಕ ಹಾಗೂ ೨. ಸಾಮೂಹಿಕ ಜವಾಬ್ದಾರಿಗಳಿರುತ್ತವೆ. ಪ್ರತಿಯೊಬ್ಬ ಮಂತ್ರಿ ತನ್ನ ಖಾತೆಯ ಆಡಳಿತದ ಬಗ್ಗೆ ವೈಯಕ್ತಿಕ

ಜವಾಬ್ದಾರಿ ಹೊಂದಿರುತ್ತಾನೆ. ತನ್ನ ಖಾತೆಯ ಅಡಳಿತದಲ್ಲಿನ ಲೋಪದೋಷಗಳ ನೈತಿಕ ಹೊಣೆಹೊತ್ತು ಅವನು ರಾಜೀನಾಮೆ ನೀಡಬೇಕಾಗುತ್ತದೆ. ಸರಕಾರದ ಆಡಳಿತದ ನೈತಿಕ ಜವಾಬ್ದಾರಿ ಮಂತ್ರಿ ಮಂಡಲದ ಮೇಲೆ ಇದೆ. ಆಡಳಿತದ ಲೋಪದೋಷಕ್ಕೆ ನೈತಿಕ ಹೊಣೆ ಹೊತ್ತು ಮಂತ್ರಿ ಮಂಡಲ ರಾಜೀನಾಮೆ ನೀಡುವದು ಸಾಮೂಹಿಕ ಜವಾಬ್ದಾರಿಯ ದ್ಯೋತಕವಾಗಿದೆ. **They sail or sink to geiter,** ಅಂದರೆ ಕೂಡಿಯೇ ತೇಲುತ್ತಾರೆ ಕೂಡಿಯೇ ಮುಳುಗುತ್ತಾರೆ. ಮಂತ್ರಿ ಮಂಡಲ ನಿರ್ಣಯ ತಗೆದುಕೊಳ್ಳುವ ಪೂರ್ವದಲ್ಲಿ ಮಂತ್ರಿಗಳು ತಮ್ಮ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಬಹುದು. ಆದರೆ ನಿರ್ಣಯ ತಗೆದುಕೊಂಡ ನಂತರ ಎಲ್ಲ ಮಂತ್ರಿಗಳೂ ಅದನ್ನು ಸಮರ್ಥಿಸಬೇಕು. ಇಲ್ಲದಿದ್ದರೆ ಸಚಿವ ಸಂಪುಟಕ್ಕೆ ರಾಜೀನಾಮೆ ನೀಡಬೇಕು. ನೆಹರು ಮಂತ್ರಿ ಮಂಡಲ ರಚಿಸಿದ ತ್ರಿಭಾಷಾ ಸೂತ್ರವು ಶಿಕ್ಷಣ ಸಚಿವರಾಗಿದ್ದ ಎಂ. ಸಿ. ಚಾಗ್ಲಾರಿಗೆ ಸರಿ ಬರಲಿಲ್ಲ. ಅವರು ವಿದ್ಯಾರ್ಥಿಗಳಿಗೆ ಕೇವಲ ಮಾತೃ ಭಾಷೆ ಹಾಗೂ ಇಂಗ್ಲಿಷ್ ಎರಡೇ ಭಾಷೆ ಕಡ್ಡಾಯ ಮಾಡಬೇಕು. ಹಿಂದಿಯನ್ನು ಕಡ್ಡಾಯ ಗೊಳಿಸಬಾರದೆಂಬ ಅಭಿಪ್ರಾಯ ಹೊಂದಿದ್ದರು. ತ್ರಿಭಾಷಾ ಸೂತ್ರದ ನಿರ್ಣಯ ವಿರೋಧಿಸಿ ಚಾಗ್ಲಾ ಮಂತ್ರಿ ಮಂಡಲಕ್ಕೆ ರಾಜೀನಾಮೆ ನೀಡಿದರು.

### ೩. ಹಣಕಾಸಿನ ಕಾರ್ಯಗಳು

ವಿವಿಧ ಇಲಾಖೆಗಳ ಮುಖ್ಯಸ್ತರಾದ ಮಂತ್ರಿಗಳು ಪ್ರತಿವರ್ಷ ತಮ್ಮ ಇಲಾಖೆಗಳ ಅಂದಾಜು ಪಟ್ಟಿ ತಯಾರಿಸಿ ಹಣಕಾಸಿನ ಮಂತ್ರಿಗೆ ಕಳಿಸುತ್ತಾರೆ. ಅವೆಲ್ಲವುಗಳನ್ನು ಕ್ರೋಢಿಕರಿಸಿ ಹಣಕಾಸಿನ ಮಂತ್ರಿ ಸರಕಾರದ ಮುಂದಿನ ವರ್ಷದ ಅಂದಾಜು ಪತ್ರಿಕ ತಯಾರಿಸುತ್ತಾನೆ. ಅದೇ ಸಂದಂರ್ಭದಲ್ಲಿ ಅಂದಾಜಿನ ಪ್ರಮುಖ ಅಂಶಗಳನ್ನು ಮಂತ್ರಿ ಮಂಡಲದ ಗಮನಕ್ಕೆ ತರುತ್ತಾನೆ. ಸಚಿವ ಸಂಪುಟದ ತಾತ್ವಿಕ ಒಪ್ಪಿಗೆ ಪಡೆದ ನಂತರ ಹಣಕಾಸಿನ ಮಂತ್ರಿ ಸಂಸತ್ತಿನಲ್ಲಿ ಅಂದಾಜು ಪತ್ರಿಕೆ ಮಂಡಿಸುತ್ತಾನೆ. ಫೆಬ್ರುವರಿ ತಿಂಗಳ ಕೊನೆಯ ದಿನ ಬಜೆಟ್ ಮಂಡನೆಯಾಗುತ್ತದೆ.

ತೆರಿಗೆ ನೀತಿಯನ್ನು ಬದಲಿಸಬೇಕಾದಲ್ಲಿ ಪ್ರಧಾನಿಯ ಮೂಲಕ ಆ ವಿಷಯವನ್ನು ಮಂತ್ರಿ ಮಂಡಲದ ಗಮನಕ್ಕೆ ತಂದು ಅಭಿಪ್ರಾಯ ಪಡೆಯ ಬೇಕಾಗುತ್ತದೆ. ಸಂಸತ್ತು ಹಣಕಾಸಿನ ಮಸೂದೆಯನ್ನು ತಿರಸ್ಕರಿಸಿದರೆ ಮಂತ್ರಿ ಮಂಡಲ ರಾಜೀನಾಮೆ ನೀಡಬೇಕಾಗುತ್ತದೆ. ಬಜೆಟ್ ತಿರಸ್ಕೃತಗೊಂಡರೆ ಸರಕಾರ ತೆರಿಗೆಯ ಮೂಲಕ ಜನರಿಂದ ಹಣ ಪಡೆಯಲು ಹಾಗೂ ಹಾಗೆ ಪಡೆದ ಹಣವನ್ನು ಉಪಯೋಗಿಸಿ-ಕೊಳ್ಳಲು ಆಗುವದಿಲ್ಲ. ಆದ್ದರಿಂದ ಮಂತ್ರಿ ಮಂಡಲ ರಾಜೀನಾಮೆ ನೀಡುತ್ತದೆ.

## ಆಡಳಿತ ಸಂಯೋಜನೆ

ಆಡಳಿತದ ದಕ್ಷತೆಯ ದೃಷ್ಟಿಯಿಂದ ವಿವಿಧ ಇಲಾಖೆಗಳ ಕಾರ್ಯ ನಿರ್ವಹಣೆಯಲ್ಲಿ ಸಮನ್ವಯ ತರುವದು ಮಂತ್ರಿ ಮಂಡಲದ ಕರ್ತವ್ಯವಾಗಿದೆ. ವಿವಿಧ ಇಲಾಖೆಗಳ ನಡುವೆ ಬರಬಹುದಾದ ಸಮಸ್ಯೆಗಳನ್ನು ಪರಿಹರಿಸಿ, ಪರಸ್ಪರ ಸಹಕಾರದಿಂದ ಕಾರ್ಯ ನಿರ್ವಹಿಸುವಂತೆ ಮಾಡಲಾಗುತ್ತದೆ. ವಿವಿಧ ಇಲಾಖೆಗಳು ಒಕ್ಕಟ್ಟು ಹಾಗೂ ಸಮನ್ವಯದಿಂದ ಕಾರ್ಯ ಮಾಡಿದರೆ ಸರಕಾರದ ಗುರಿ ಸಾಧಿಸಲು ಸಾಧ್ಯವಾಗುತ್ತದೆ.

## ನೇಮಕಾಧಿಕಾರ

ಉನ್ನತ ಹುದ್ದೆಗಳಾದ ರಾಜ್ಯಪಾಲರು, ರಾಯಭಾರಿಗಳು, ಸೇನಾ ಮುಖ್ಯಸ್ತರು, ನ್ಯಾಯಾಧೀಶರು, ಯೋಜನಾ ಆಯೋಗದ ಉಪಾಧ್ಯಕ್ಷ, ಮಹಾಲೆಕ್ಕ ತಪಾಸಿಗ, ಲೋಕ ಸೇವಾ ಆಯೋಗದ ಅಧ್ಯಕ್ಷರು ಹಾಗೂ ಸದಸ್ಯರು ಮುಂತಾದ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ನೇಮಕ ಮಾಡುವ ಸಂದರ್ಭದಲ್ಲಿ ಸಚಿವ ಸಂಪುಟದಲ್ಲಿ ಚರ್ಚಿಸಲಾಗುತ್ತದೆ.

## ವಿದೇಶ ನೀತಿ ನಿರೂಪಣೆ

ವಿದೇಶಗಳೊಂದಿಗೆ ಭಾರತವು ಹೊಂದಿರಬೇಕಾದ ಸಂಬಂಧಗಳನ್ನು ಕುರಿತು ನೀತಿ ನಿರ್ಧಾರಗಳನ್ನು ಸಚಿವ ಸಂಪುಟದಲ್ಲಿ ತಗೆದುಕೊಳ್ಳಲಾಗುತ್ತದೆ. ವಿದೇಶಗಳಿಗೆ ರಾಯಭಾರಿಗಳ ನೇಮಕ ಮಾಡುವದು, ಯುದ್ಧ ಘೋಷಣೆ ಅಥವಾ ಯುದ್ಧ ನಿಲುಗಡೆ ಘೋಷಣೆ, ವಾಣಿಜ್ಯ ವ್ಯವಹಾರ ಕುರಿತ ಒಪ್ಪಂದ ಮುಂತಾದ ವಿಷಯಗಳ ಬಗ್ಗೆ ಸಚಿವ ಸಂಪುಟ ರಾಷ್ಟ್ರ ಪತಿಯವರಿಗೆ ಸಲಹೆ ನೀಡುತ್ತದೆ. ಅಂತರ-ರಾಷ್ಟ್ರೀಯ ವಿದ್ಯಮಾನಗಳ (ಘಟನೆಗಳ) ಬಗ್ಗೆ ವಿಚಾರ ವಿನಿಮಯ ಮಾಡಿ ಸಚಿವ ಸಂಪುಟ ಸರಕಾರದ ಧೋರಣೆಯನ್ನು ರೂಪಿಸುತ್ತದೆ.

## ತುರ್ತು ಪರಿಸ್ಥಿತಿಯ ಕಾರ್ಯಗಳು

ಯಾವದೇ ಕಾರಣಕ್ಕಾಗಿ ರಾಷ್ಟ್ರಪತಿಯವರು ತುರ್ತು ಪರಿಸ್ಥಿತಿ ಸಾರಿದಲ್ಲಿ ನಂತರ ಸಚಿವ ಸಂಪುಟದ ಅನುಮೋದನೆ ಪಡೆಯ ಬೇಕಾಗುತ್ತದೆ. ಮಂತ್ರಿ ಮಂಡಲವು ತುರ್ತು ಪರಿಸ್ಥಿಯನ್ನು ಯಶಸ್ವಿಯಾಗಿ ಎದುರಿಸುವ ಬಗ್ಗೆ ಸೂಕ್ತ ಕ್ರಮಗಳನ್ನು ತಗೆದುಕೊಳ್ಳುತ್ತದೆ. ರಾಜ್ಯಗಳಲ್ಲಿ ತುರ್ತು ಪರಿಸ್ಥಿತಿ ಸಾರಿದಾಗ ರಾಷ್ಟ್ರಪತಿಯವರ ಪರವಾಗಿ ಆ ರಾಜ್ಯದ ಆಡಳಿತದ ಹೊಣೆಯನ್ನು ಮಂತ್ರಿ ಮಂಡಲ ನಿರ್ವಹಿಸುತ್ತದೆ.

## ಆ. ರಾಜ್ಯ ಕಾರ್ಯಾಂಗ

ಕೇಂದ್ರ ಕಾರ್ಯಾಂಗವು ರಾಷ್ಟ್ರಪತಿ ಹಾಗೂ ಪ್ರಧಾನಿಯ ನೇತೃತ್ವದ ಸಚಿವ ಸಂಪುಟವನ್ನು ಒಳಗೊಂಡಿರುವ ರೀತಿಯಲ್ಲಿ ರಾಜ್ಯ ಸರಕಾರದ ಕಾರ್ಯಾಂಗವು ರಾಜ್ಯಪಾಲ ಹಾಗೂ ಮುಖ್ಯ ಮಂತ್ರಿಯ ನೇತೃತ್ವದ ಮಂತ್ರಿ ಮಂಡಲವನ್ನು ಒಳಗೊಂಡಿರುತ್ತದೆ. ರಾಜ್ಯಪಾಲನು ನಾಮಮಾತ್ರ ಮುಖ್ಯಸ್ತನಾದರೆ ಮುಖ್ಯಮಂತ್ರಿಯ ಧುರಿಣತ್ವದ ಮಂತ್ರಿ ಮಂಡಲ ನೈಜ ಮುಖ್ಯಸ್ತನಾಗಿರುತ್ತದೆ. ಕಾರ್ಯಾಂಗದ ಎಲ್ಲಾ ಅಧಿಕಾರಗಳು ರಾಜ್ಯಪಾಲರಿಗೆ ನೀಡಲ್ಪಟ್ಟಿವೆ. ಸಂವಿಧಾನದ ೧೫೪ ನೇ ಕಲಮಿನ ಪ್ರಕಾರ ರಾಜ್ಯಪಾಲರು ಆಡಳಿತದ ಅಧಿಕಾರವನ್ನು ನೇರವಾಗಿ ತಾವೇ ಚಲಾಯಿಸಬಹುದು ಅಥವಾ ತಮ್ಮ ಕೈಕೆಳಗಿನ ಅಧಿಕಾರಿಗಳ ಮೂಲಕ ಚಲಾಯಿಸಬಹುದು.

ಭಾರತದಲ್ಲಿ ಈಗ ೨೮ ರಾಜ್ಯಗಳು ಹಾಗೂ ೭ ಕೇಂದ್ರಶಾಸಿತ ಪ್ರದೇಶಗಳಿವೆ. ಜಮ್ಮು ಕಾಶ್ಮೀರವನ್ನು ಹೊರತು ಪಡಿಸಿ ಉಳಿದ ಎಲ್ಲ ರಾಜ್ಯಗಳು ರಾಷ್ಟ್ರೀಯ (ಭಾರತದ) ಸಂವಿಧಾನದಡಿಯಲ್ಲಿ ಕೆಲಸ ಮಾಡುತ್ತದೆ. ಸಂವಿಧಾನದ ೩೭೦ ನೇ ಕಲಮಿನ ಮೇರೆಗೆ ಜಮ್ಮು ಕಾಶ್ಮೀರಕ್ಕೆ ತನ್ನದೇ ಆದ ಸಂವಿಧಾನ ಹೊಂದುವ ಅವಕಾಶವಿದೆ. ನಮ್ಮ ಸಂವಿಧಾನದ ೧೫೩ ನೇ ಕಲಮಿನ ಪ್ರಕಾರ ಪ್ರತಿಯೊಂದು ರಾಜ್ಯದಲ್ಲಿ ರಾಜ್ಯಪಾಲರಿರುತ್ತಾರೆ. ಒಬ್ಬ ವ್ಯಕ್ತಿ ಒಂದು ರಾಜ್ಯದ ರಾಜ್ಯಪಾಲನಾಗಿ ನೇಮಕ ಹೊಂದಬಹುದು ಅಥವಾ ಒಂದಕ್ಕಿಂತ ಹೆಚ್ಚು ರಾಜ್ಯಗಳ ರಾಜ್ಯ ಪಾಲನಾಗಿ ನೇಮಕಹೊಂದಬಹುದು. ಉದಾ :- ಆಸ್ಸಾಂ ಮತ್ತು ಮೇಘಾಲಯ ರಾಜ್ಯಗಳಿಗೆ ಒಬ್ಬನೇ ರಾಜ್ಯಪಾಲನಿರುತ್ತಾನೆ. ಮಣಿಪುರ,ನಾಗಾಲ್ಯಾಂಡ್ ತ್ರಿಪುರ ಮೂರು ರಾಜ್ಯಗಳಿಗೆ ಸೇರಿದಂತೆ ಒಬ್ಬನೇ ರಾಜ್ಯಪಾಲನಿರುತ್ತಾನೆ. ರಾಜ್ಯಪಾಲರನ್ನು ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ರಾಜ್ಯಕ್ಕೆ ವರ್ಗಾಯಿಸುವದಕ್ಕೆ ಅವಕಾಶವಿದೆ.

### * ರಾಜ್ಯಪಾಲರು

ರಾಜ್ಯಪಾಲರು ರಾಷ್ಟ್ರಪತಿಯವರಿಂದ ನೇಮಕ ಹೊಂದಿರುತ್ತಾರೆ. ಕೇಂದ್ರ ಮಂತ್ರಿಮಂಡಲದ ಸಲಹೆಯ ಮೇರೆಗೆರಾಷ್ಟ್ರಪತಿಯವರು ರಾಜ್ಯಪಾಲರ ನೇಮಕ ಮಾಡುತ್ತಾರೆ. ಕೇಂದ್ರದ ಪ್ರತಿನಿಧಿಯಾದ ರಾಜ್ಯಪಾಲರು ಕೇಂದ್ರ ರಾಜ್ಯಗಳ ನಡುವಿನ ಕೊಂಡಿಯಾಗಿದ್ದಾರೆ. ರಾಜ್ಯಪಾಲರು ರಾಜ್ಯದ ಮುಖ್ಯಸ್ಥ ನಾಗಿರುವದಕ್ಕಿಂತ ಹೆಚ್ಚಾಗಿ ಕೇಂದ್ರದ ಕೈಗೊಂಬೆಯಾಗಿರುತ್ತಾರೆಂಬುದಕ್ಕೆ ಹೇರಳ ಉದಾಹಣೆಗಳಿವೆ. ಕೇಂದ್ರದ ಪರಿಣಾಮಕಾರಿ ಅಸ್ತ್ರವಾಗಿ ಅವರು ವರ್ತಿಸುತ್ತಾರೆ. ವಿಶೇಷ ಪರಿಸ್ಥಿತಿಯ ಸಂದರ್ಭದಲ್ಲಿ ರಾಷ್ಟ್ರಪತಿಯ ಆಜ್ಞಾನುವರ್ತಿಯಾಗಿ ಕೆಲಸಮಾಡುತ್ತಾರೆ. ರಾಜ್ಯದ ಮುಖ್ಯಸ್ತರಾದ

ರಾಜ್ಯಪಾಲರು ಕೇಂದ್ರದ ಪ್ರತಿನಿಧಿಯಾಗಿರುವದು ಸಂಯುಕ್ತ ಪದ್ಧತಿಗೆ ವಿರುದ್ಧವಾಗಿದೆ. ರಾಜ್ಯದ ಅಧಿಕಾರಗಳಲ್ಲಿ ಹಸ್ತ ಕ್ಷೇಪ ಮಾಡಲು ಈ ವ್ಯವಸ್ಥೆ ಕೇಂದ್ರಕ್ಕೆ ಅವಕಾಶ ಮಾಡಿಕೊಡುತ್ತದೆ.

### ಅರ್ಹತೆಗಳು

ರಾಜ್ಯಪಾಲರು ಈ ಕೆಳಗಿನ ಅರ್ಹತೆಗಳನ್ನು ಹೊಂದಿರಬೇಕು.

೧. ಭಾರತದ ನಾಗರಿಕನಾಗಿರಬೇಕು.

೨. ಕನಿಷ್ಠ ಮೂವತ್ತೈದು ವರ್ಷ ವಯಸ್ಸಿನವನಾಗಿರಬೇಕು.

೩. ಸಂಸತ್ತಿನ ಅಥವಾ ರಾಜ್ಯ ಶಾಸನಾಂಗದ ಸದಸ್ಯನಾಗಿರಬಾರದು.

೪. ಲಾಭದಾಯಕ ಸರಕಾರಿ ಹುದ್ದೆಯಲ್ಲಿರಬಾರದು.

೫. ದಿವಾಳಿಯಾಗಿರಬಾರದು ಅಥವಾ ಬುದ್ಧಿಮಾಂದ್ಯನಾಗಿಬಾರದು.

### ವೇತನ ಹಾಗೂ ಭತ್ಯೆಗಳು

ರಾಜ್ಯಪಾಲರ ವೇತನವನ್ನು ಕೇಂದ್ರ ಸರಕಾರ ಕಾಲ ಕಾಲಕ್ಕೆ ನಿಗದಿ ಮಾಡುತ್ತದೆ. ರಾಜ್ಯಪಾಲರ ಈಗಿನ ವೇತನ ರೂ. ೩೬,೦೦೦ ಆಗಿದೆ. ವೇತನದೊಂದಿಗೆ ಭಾಡಿಗೆ ಇಲ್ಲದ ವಾಸಸ್ಥಾನ, ಸಿಬ್ಬಂದಿ, ವಿದ್ಯುತ್ತು, ಸಾರಿಗೆ ಸಂಪರ್ಕ ಮುಂತಾದ ಸೌಲಭ್ಯಗಳು ಸಿಗುತ್ತವೆ.

### ನೇಮಕ

ಪ್ರಧಾನಿಯ ನೇತೃತ್ವದ ಕೇಂದ್ರ ಮಂತ್ರಿ ಮಂಡಲದ ಸಲಹೆಯ ಮೇರೆಗೆ ರಾಷ್ಟ್ರಪತಿಯವರು ರಾಜ್ಯಪಾಲರ ನೇಮಕ ಮಾಡುತ್ತಾರೆ. ಸರ್ಕಾರಿಯಾ ಆಯೋಗದ ವರದಿಯ ಪ್ರಕಾರ ರಾಜ್ಯಪಾಲರ ಹುದ್ದೆಗೆ ವಿವಾದಾತೀತ ವ್ಯಕ್ತಿ ನೇಮಕಗೊಳ್ಳಬೇಕು. ಸಂಬಂಧಪಟ್ಟ ರಾಜ್ಯದ ಮುಖ್ಯಮಂತ್ರಿಯೊಂದಿಗೆ ಸಮಾಲೋಚನೆ ನಡೆಸಿ ನೇಮಕ ಮಾಡಬೇಕು. ಹಾಗೂ ಹೊರ ರಾಜ್ಯದವರು ರಾಜ್ಯಪಾಲರಾಗಿ ನೇಮಕ ಹೊಂದಬೇಕು.

### ಅಧಿಕಾರದ ಅವಧಿ

ರಾಜ್ಯಪಾಲರು ೫ ವರ್ಷಗಳ ಅವಧಿಗೆ ನೇಮಕ ಹೊಂದಿರುತ್ತಾರೆ. ಅವಧಿ ಮುಗಿಯುವ ಪೂರ್ವದಲ್ಲೇ ರಾಷ್ಟ್ರಪತಿಯವರು ಅವರನ್ನು ವಜಾ ಮಾಡಬಹುದು. ರಾಷ್ಟ್ರಪತಿಯವರ ಮರ್ಜಿ (ವಿಶ್ವಾಸ) ಹೊಂದಿರುವವರೆಗೆ ಅಧಿಕಾರದಲ್ಲಿ ಮುಂದುವರಿಯಲು ಅವರಿಗೆ ಅವಕಾಶವಿದೆ. ಅವಧಿ ಮುಗಿಯುವ ಮೊದಲೇ ರಾಜ್ಯಪಾಲರು ರಾಷ್ಟ್ರಪತಿಯವರಿಗೆ ರಾಜೀನಾಮೆ ಪತ್ರ ಸಲ್ಲಿಸಿ ಹೊರಬರಬಹುದು. ಉದಾ :- ಬಿಹಾರದ ರಾಜ್ಯಪಾಲರಾಗಿದ್ದ ರಾಮಾಜೋಯ್ಸ್ ಅವಧಿ ಮುಗಿಯುವ ಪೂರ್ವದಲ್ಲಿ ರಾಜಿನಾಮೇ ನೀಡಿದ್ದನ್ನು ಇಲ್ಲಿ ಸ್ಮರಿಸಬಹುದು.

## ವಿನಾಯತಿಗಳು

ತಮ್ಮ ಹುದ್ದೆಯ ಅಧಿಕಾರ ಚಲಾವಣೆಯ ಬಗ್ಗೆ ರಾಜ್ಯಪಾಲರ ವಿರುದ್ಧ ಯಾವದೇ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡುವಂತಿಲ್ಲ. ರಾಜ್ಯಪಾಲ ಹುದ್ದೆಯಲ್ಲಿರುವವರೆಗೆ ದಸ್ತಗಿರಿ ಮಾಡುವಂತಿಲ್ಲ. ರಾಜ್ಯ ಕಾರ್ಯಾಂಗದ ಮುಖ್ಯಸ್ತರಾಗಿ ಅಧಿಕಾರ ಚಲಾಯಿಸಿದ ಬಗ್ಗೆ ಯಾವದೇ ನ್ಯಾಯಾಲಯದಲ್ಲಿ ಉತ್ತರ ನೀಡಬೇಕಾಗಿಲ್ಲ. ರಾಜ್ಯ ಪಾಲರಾಗುವ ಪೂರ್ವದ ಅಥವಾ ಅಧಿಕಾರದಿಂದ ಹೊರಬಂದ ನಂತರದ ಅಪರಾಧಗಳಿಗೆ ರಕ್ಷಣೆ ಇರುವದಿಲ್ಲ.

## ಪ್ರಮಾಣ ವಚನ

ರಾಜ್ಯಪಾಲ ಹುದ್ದೆ ವಹಿಸಿಕೊಳ್ಳುವ ಮೊದಲು ಸಂವಿಧಾನ ರಕ್ಷಿಸುವ ಹಾಗೂ ಅದರ ಉದಾತ್ತ ತತ್ವಗಳಿಗೆ ಅನುಗುಣವಾಗಿ ಕೆಲಸ ಮಾಡುವ ಬಗ್ಗೆ ಪ್ರಮಾಣ ವಚನ ಸ್ವೀಕರಿಸಬೇಕಾಗುತ್ತದೆ. ರಾಜ್ಯ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರು ರಾಜ್ಯಪಾಲರಿಗೆ ಅಧಿಕಾರದ ಪ್ರಮಾಣ ವಚನ ಬೋಧಿಸುತ್ತಾರೆ.

## ಕಾರ್ಯಗಳು

ರಾಜ್ಯಪಾಲರು ರಾಜ್ಯ ಕಾರ್ಯಾಂಗದ ಮುಖ್ಯಸ್ತರಾಗಿರುತ್ತಾರೆ. ತಮ್ಮ ಹೆಸರಿನಲ್ಲಿರುವ ಅಧಿಕಾರಗಳನ್ನು ಅವರೇ ಸ್ವತ ಚಲಾಯಿಸಬಹುದು ಅಥವಾ ತಮ್ಮ ಕೈ ಕೆಳಗಿನ ಅಧಿಕಾರಗಳ ಮೂಲಕ ಚಲಾಯಿಸಬಹುದು. ರಾಜ್ಯಪಾಲರು ನಾಮ ಮಾತ್ರ ಮುಖ್ಯಸ್ತರಾಗಿರುವದರಿಂದ ಅವರ ಹೆಸರಿನಲ್ಲಿರುವ ಅಧಿಕಾರಗಳನ್ನು ಮುಖ್ಯ ಮಂತ್ರಿಯ ನೇತೃತ್ವದ ಮಂತ್ರಿ ಮಂಡಲ ಚಲಾಯಿಸುತ್ತದೆ. ರಾಜ್ಯಪಾಲರ ಕಾರ್ಯಗಳು ಕೆಳಗಿನಂತೆ ಇವೆ.

## ಆಡಳಿತ ಕಾರ್ಯಗಳು

ರಾಜ್ಯಪಾಲರು ರಾಜ್ಯ ಕಾರ್ಯಾಂಗದ ಮುಖ್ಯಸ್ತರಾಗಿರುತ್ತಾರೆ. ರಾಜ್ಯ ಸರಕಾರದ ಆಡಳಿತ ಅವರ ಹೆಸರಿನಲ್ಲಿ ನಡೆಯುತ್ತದೆ. ಆಡಳಿತ ನಿರ್ವಹಣೆಯಲ್ಲಿ ಸಲಹೆ ಸೂಚನೆ ನೀಡಲು ಮುಖ್ಯ ಮಂತ್ರಿಯ ನೇತೃತ್ವದ ಒಂದು ಮಂತ್ರಿಮಂಡಲವಿರುತ್ತದೆ. ವಿಧಾನ ಸಭೆಯ ಬಹುಮತ ಪಕ್ಷದ ನಾಯಕನನ್ನು ರಾಜ್ಯಪಾಲರು ಮುಖ್ಯ ಮಂತ್ರಿಯನ್ನಾಗಿ ನೇಮಕ ಮಾಡುತ್ತಾರೆ. ಮುಖ್ಯ ಮಂತ್ರಿಯ ಸಲಹೆಯ ಮೇರೆಗೆ ಇತರ ಮಂತ್ರಿಗಳು ನೇಮಕಗೊಳ್ಳುತ್ತಾರೆ. ಅಡ್ವೋಕೇಟ್ ಜನರಲ್, ಜಿಲ್ಲಾ ಹಾಗೂ ಶಶನ್ಸ್ ನ್ಯಾಯಧೀಶರು, ರಾಜ್ಯ ಲೋಕ ಸೇವಾ ಆಯೋಗದ ಅಧ್ಯಕ್ಷರು ಹಾಗೂ ಸದಸ್ಯರು ಮುಂತಾದ ಪ್ರಮುಖ ಹುದ್ದೆಗಳಿಗೆ ರಾಜ್ಯಪಾಲರಿಂದ ನೇಮಕ ನಡೆಯುತ್ತದೆ.

ಆಡಳಿತದ ಪ್ರಮುಖ ವಿದ್ಯಮಾನಗಳ ಬಗ್ಗೆ ಮುಖ್ಯ ಮಂತ್ರಿಯವರು

ರಾಜ್ಯಪಾಲರಿಗೆ ಮಾಹಿತಿ ನೀಡುತ್ತಾರೆ. ಮಂತ್ರಿ ಮಂಡಲದ ನಿರ್ಣಯಗಳು ಕೂಡ ಮುಖ್ಯ ಮಂತ್ರಿಯ ಮೂಲಕ ರಾಜ್ಯಪಾಲರಿಗೆ ತಲುಪುತ್ತವೆ. ರಾಜ್ಯ ಸರಕಾರ ಸಂವಿಧಾನದ ಚೌಕಟ್ಟಿನಲ್ಲಿ ಕೆಲಸ ಮಾಡುತ್ತಿರುವ ಬಗ್ಗೆ ರಾಜ್ಯಪಾಲರು ರಾಷ್ಟ್ರಪತಿಯವರಿಗೆ ವರದಿ ಸಲ್ಲಿಸುತ್ತಾರೆ. ರಾಜ್ಯದಲ್ಲಿ ರಾಷ್ಟ್ರಪತಿ ಆಡಳಿತ ಜಾರಿಯಲ್ಲಿದ್ದಾಗ ರಾಜ್ಯಪಾಲರೇ ನೇರವಾಗಿ ಆಡಳಿತ ನಡೆಸುತ್ತಾರೆ.

ರಾಜ್ಯ ಶಾಸನ ಸಭಾ ಚುನಾವಣೆಯಲ್ಲಿ ಯಾವದೇ ಪಕ್ಷಕ್ಕೆ ಬಹುಮತ ದೊರೆಯದಿದ್ದಲ್ಲಿ ರಾಜ್ಯಪಾಲರು ತಮ್ಮ ವಿವೇಚನಾಧಿಕಾರ ಚಲಾಯಿಸಿ ಮುಖ್ಯ ಮಂತ್ರಿಯನ್ನು ನೇಮಕ ಮಾಡುತ್ತಾರೆ. ಉದಾ :- ೧೯೮೩ ರ ಕರ್ನಾಟಕ ವಿಧಾನ ಸಭಾ ಚುನಾವಲ್ಲಿ ಯಾವ ಪಕ್ಷವೂ ಬಹುಮತ ಪಡೆದಿರಲಿಲ್ಲ. ರಾಜ್ಯಪಾಲ ಗೋವಿಂದ ನಾರಾಯಣರು ವಿಧಾನ ಸಭೆಯಲ್ಲಿ ಅತಿ ಹೆಚ್ಚು ಅಂದರೆ ೯೫ ಸದಸ್ಯರನ್ನೊಳಗೊಂಡ ಜನತಾ ರಂಗದ ನಾಯಕ ರಾಮಕೃಷ್ಣ ಹೆಗಡೆಯವರನ್ನು ಮುಖ್ಯ ಮಂತ್ರಿಯನ್ನಾಗಿ ನೇಮಿಸಿದರು. ಅದಕ್ಕೆ ಪೂರ್ವದಲ್ಲಿ ೧೮ ಜನ ಬಿ.ಜೆ.ಪಿ. ೧೮ ಜನ ಪಕ್ಷೇತರರು ಹಾಗೂ ೬ ಜನ ಇತರ ಪಕ್ಷಗಳ ಸದಸ್ಯರ ಬೆಂಬಲವನ್ನು ಖಾತ್ರಿ ಪಡಿಸಿಕೊಂಡರು. ಕರ್ನಾಟಕದ ಈಗಿನ ರಾಜ್ಯಪಾಲ ಚತುರ್ವೇದಿಯವರು ಬಹುಮತದ ಭರವಸೆ ಪಡೆದುಕೊಂಡು ಧರಂಸಿಂಗ್ ನೇತೃತ್ವದ ಕಾಂಗ್ರೆಸ್ ಹಾಗೂ ಜನತಾದಳ (ಎಸ್) ಪಕ್ಷಗಳ ಸಂಮ್ಮಿಶ್ರ ಸರಕಾರ ರಚನೆಗೆ ಅವಕಾಶ ಮಾಡಿಕೊಟ್ಟಿದ್ದಾರೆ.

## ಶಾಸನೀಯ ಕಾರ್ಯಗಳು

ರಾಷ್ಟ್ರಪತಿಯವರು ಸಂಸತ್ತಿನ ಅವಿಭಾಜ್ಯ ಅಂಗವಾಗಿರುವಂತೆ ರಾಜ್ಯಪಾಲರು ರಾಜ್ಯ ಶಾಸನಾಂಗ (ವಿಧಾನ ಮಂಡಲ)ದ ಅವಿಭಾಜ್ಯ ಅಂಗವಾಗಿರುತ್ತಾರೆ. ವಿಧಾನ ಮಂಡಲ ಪಾಸು ಮಾಡಿದ ಮಸೂದೆ ರಾಜ್ಯ ಪಾಲರ ಒಪ್ಪಿಗೆ ಹಾಗೂ ಸಹಿಯೊಂದಿಗೆ ಶಾಸನವಾಗುತ್ತದೆ.ರಾಷ್ಟ್ರಪತಿಯವರಿಗಿರುವಂತೆ ರಾಜ್ಯಪಾಲರಿಗೂ ನಿಷೇದಾಧಿಕಾರ ವಿದೆ. ಮಸೂದೆ ತಮ್ಮ ಕಡೆ ಬಂದಾಗ ರಾಜ್ಯಪಾಲರು ಒಪ್ಪಿಗೆ ನೀಡಬಹುದು, ಪುನರ್ ಪರಿಶೀಲನೆಗೆ ಕಳಿಸಬಹುದು ಅಥವಾ ರಾಷ್ಟ್ರಪತಿಯವರ ಅನುಮೋದನೆಗಾಗಿ ಕಳಿಸಬಹುದು. ಪುನರ್ ಪರಿಶೀಲನೆಗೆ ಕಳಿಸಿದ ಮಸೂದೆಯನ್ನು ಶಾಸನಾಂಗ ಎರಡನೇ ಸಲ ಪಾಸು ಮಾಡಿದರೆ ರಾಜ್ಯಪಾಲರು ತಮ್ಮ ಅನುಮತಿ ನೀಡಲೇ ಬೇಕಾಗುತ್ತದೆ.

ಶಾಸನಾಂಗದ ಅಧಿವೇಶನ ಕರೆಯುವ, ಮುಂದಕ್ಕೆ ಹಾಕುವ ಅಥವಾ ವಿಧಾನ ಸಭೆಯನ್ನು ವಿಸರ್ಜಿಸುವ ಅಧಿಕಾರ ರಾಜ್ಯಪಾಲರಿಗಿದೆ. ಮುಖ್ಯ ಮಂತ್ರಿಯ ಸಲಹೆಯ ಮೇರೆಗೆ ರಾಜ್ಯಪಾಲರು ಈ ಕಾರ್ಯ ನಿರ್ವಹಿಸುತ್ತಾರೆ. ನೂತನ ವಿಧಾನ ಸಭೆಯ ಮೊದಲ ಅಧಿವೇಶನದಲ್ಲಿ ಹಾಗೂ ಪ್ರತಿ ವರ್ಷದ ಮೊದಲ ಅಧಿವೇಶನದಲ್ಲಿ ರಾಜ್ಯಪಾಲರು ಭಾಷಣ ಮಾಡುತ್ತಾರೆ. ಆ ಭಾಷಣವನ್ನು ಮಂತ್ರಿ ಮಂಡಲ ತಯಾರಿಸಿರುತ್ತದೆ. ಮುಖ್ಯ

ಮಂತ್ರಿ ವಿಧಾನ ಸಭೆಯಲ್ಲಿ ಬಹುಮತದ ಬೆಂಬಲ ಕಳೆದುಕೊಂಡಾಗ ಬಹುಮತ ಸಾಬೀತು ಪಡಿಸುವಂತೆ ರಾಜ್ಯಪಾಲರು ಆದೇಶ ನೀಡಬಹುದು. ಆದೇಶ ಪಾಲಿಸದಿದ್ದರೆ ಮುಖ್ಯ ಮಂತ್ರಿಯನ್ನು ವಜಾ ಮಾಡಬಹುದು.

ವಿಧಾನ ಮಂಡಲದ ಅಧಿವೇಶನ ನಡೆಯದಿದ್ದಾಗ ಅವಶ್ಯವಿದ್ದರೆ ಸುಗ್ರೀವಾಜ್ಞೆ ಹೊರಡಿಸುವ ಅಧಿಕಾರ ರಾಜ್ಯ ಪಾಲರಿಗಿದೆ. ಕೆಲವು ವಿಧಾನಸಭೆಗಳಲ್ಲಿ ಆಂಗ್ಲೊಇಂಡಿಯನ್ನರಿಗೆ ಪ್ರಾತಿನಿಧ್ಯವಿಲ್ಲದಿದ್ದರೆ ಆ ಸಮುದಾಯಕ್ಕೆ ಸೇರಿದವರೊಬ್ಬರನ್ನು ನಾಮಕರಣ ಮಾಡಬಹುದು. ಉದಾ :-ಕರ್ನಾಟಕ ವಿಧಾನಸಭೆಯಲ್ಲಿ ನಾಮಕರಣ ಹೊಂದಿದ ಆಂಗ್ಲೋಇಂಡಿಯನ್ ಸದಸ್ಯರೊಬ್ಬರಿರುತ್ತಾರೆ. ದ್ವಿಸದನ ಶಾಸನಾಂಗವಿದ್ದಲ್ಲಿ ಮೇಲ್ಮನೆಯಾದ ವಿಧಾನ ಪರಿಷತ್ತಿನ ೧/೬ ಸದಸ್ಯರನ್ನು ನಾಮಕರಣದ ಮೂಲಕ ತುಂಬುವ ಅಧಿಕಾರ ರಾಜ್ಯಪಾಲರಿಗಿದೆ. ಕಲೆ, ವಿಜ್ಞಾನ, ಶಿಕ್ಷಣ, ಸಮಾಜ ಸೇವೆ, ಸಹಕಾರಿ ರಂಗದ ಸೇವೆ ಇವುಗಳನ್ನು ಪರಿಗಣಿಸಿ ನಾಮಕರಣ ಮಾಡಬೇಕಾಗುತ್ತದೆ.

ವಿಧಾನ ಸಭಾ ಸದಸ್ಯರ ಅನರ್ಹತೆ ಕುರಿತು ನಿರ್ಣಯ ತಗೆದುಕೊಳ್ಳುವ ಅಧಿಕಾರ ರಾಜ್ಯ ಪಾಲರಿಗಿದೆ. ಚುನಾವಣಾ ಆಯೋಗದ ಅಭಿಪ್ರಾಯದ ಮೇರೆಗೆಅವರು ಇಂಥ ತೀರ್ಮಾನ ತಗೆದುಕೊಳ್ಳ ಬೇಕಾಗುತ್ತದೆ.

## ಹಣಕಾಸಿನ ಕಾರ್ಯಗಳು

ರಾಜ್ಯ ಪಾಲರ ಅನುಮತಿಯೊಂದಿಗೆ ಹಣಕಾಸಿನ ಮಸೂದೆಯನ್ನು ವಿಧಾನ ಮಂಡಲದಲ್ಲಿ ಮಂಡಿಸ ಬೇಕಾಗುತ್ತದೆ. ಅನುದಾನ ಬೇಡಿಕೆಗಳನ್ನು ಕೂಡ ರಾಜ್ಯ ಪಾಲರ ಗಮನಕ್ಕೆ ತಂದು ಮಂಡಿಸಬೇಕಾಗುತ್ತದೆ. ಹಣಕಾಸಿನ ಮಸೂದೆಯ ತಿದ್ದುಪಡಿಗೆ ರಾಜ್ಯ ಪಾಲರ ಒಪ್ಪಿಗೆ ಅಗತ್ಯವಾಗಿದೆ. ಪ್ರತಿ ವರ್ಷ ಆಯವ್ಯಯ ಪತ್ರಿಕೆ ಶಾಸನಾಂಗದಲ್ಲಿ ಮಂಡಿತವಾಗುವಂತೆ ನೋಡಿಕೊಂಡು ಹೋಗುವ ಜವಾಬ್ದಾರಿ ರಾಜ್ಯ ಪಾಲರದು. ಅನಿರೀಕ್ಷಿತ ಘಟನೆಗಳಿಂದ ಉದ್ಭವಿಸುವ ಪರಿಸ್ಥಿತಿಯನ್ನು ಎದುರಿಸಲು ಆಕಸ್ಮಿಕ ನಿಧಿ **(Contingency Fund)** ಯಿಂದ ಹಣ ನೀಡುವ ಅಧಿಕಾರ ರಾಜ್ಯ ಪಾಲರಿಗಿದೆ.

## ನ್ಯಾಯಿಕ ಕಾರ್ಯಗಳು

ರಾಜ್ಯ ಪಾಲರ ನ್ಯಾಯ ಸಂಬಂಧದ ಅಧಿಕಾರಗಳು ರಾಜ್ಯದಭೌಗೋಲಿಕ ವ್ಯಾಪ್ತಿಗೆ ವಿಸ್ತರಿಸಿವೆ. ರಾಜ್ಯದ ಶ್ರೇಷ್ಠ ನ್ಯಾಯಲಯದೊಂದಿಗೆ ಸಮಾಲೋಚನೆ ನಡೆಸಿ ಜಿಲ್ಲಾ ಮಟ್ಟದ ನ್ಯಾಯಾಧೀಶರನ್ನು ನೇಮಕ ಮಾಡುವ ಅಧಿಕಾರ ಅವರಿಗಿದೆ. ಜಿಲ್ಲಾ ಮಟ್ಟದ ನ್ಯಾಯಾಲಯಗಳನ್ನು ಹೊರತುಪಡಿಸಿ ಇತರ ಅಧೀನ ನ್ಯಾಯಾಲಯಗಳ ನ್ಯಾಯಾಧೀಶರನ್ನು ಹಾಗೂ ಸಿಬ್ಬಂದಿಯನ್ನು ರಾಜ್ಯ ಪಾಲರು ನೇಮಕ ಮಾಡುತ್ತಾರೆ.

ರಾಜ್ಯದ ನ್ಯಾಯಾಲಯಗಳು ನೀಡುವ ಶಿಕ್ಷೆಯನ್ನು ಕಡಿಮೆ ಮಾಡುವ ಅಥವಾ ರದ್ದುಗೊಳಿಸುವ ಅಧಿಕಾರ ರಾಜ್ಯಪಾಲರಿಗಿದೆ.

## ವಿವೇಚನಾಧಿಕಾರಗಳು

ಸಂವಿಧಾನದ ೧೬೩ ನೇ ಕಲಮಿನ ಮೇರೆಗೆ ರಾಜ್ಯ ಪಾಲರು ಕೆಲವು ವಿವೇಚನಾಧಿಕಾರಗಳನ್ನು ಹೊಂದಿರುತ್ತಾರೆ. ಮಂತ್ರಿ ಮಂಡಲದ ಸಲಹೆ ಪಡೆಯದೇ ತಮ್ಮ ನ್ಯಾಯ ಸಮ್ಮತ ವಿವೇಚನಾಧಿಕಾರ ಬಳಸಿ ಮಾಡುವ ಕಾರ್ಯಗಳು ಕೆಳಗಿನಂತಿವೆ.

೧. ವಿಧಾನ ಸಭೆಯಲ್ಲಿ ಯಾವದೇಪಕ್ಷ ಅಥವಾ ಪಕ್ಷಗಳಗುಂಪು ಬಹುಮತ ಪಡೆಯದಿದ್ದಾಗ ತಮ್ಮ ವಿವೇಚನಾಧಿಕಾರ ಚಲಾಯಿಸಿ ಮುಖ್ಯ ಮಂತ್ರಿಯ ನೇಮಕ ಮಾಡಬೇಕಾಗುತ್ತದೆ. ವಿಧಾನ ಸಭೆಯಲ್ಲಿ ಬಹುಮತ ಸಾಬೀತು ಪಡಿಸುವ ಸಾಧ್ಯತೆ ಇರುವ ನಾಯಕನನ್ನು ಗುರುತಿಸಿ ಮುಖ್ಯ ಮಂತ್ರಿನ್ನಾಗಿ ನೇಮಿಸ ಬೇಕಾಗುತ್ತದೆ.

೨. ವಿಧಾನ ಸಭೆಯ ವಿಶ್ವಾಸ ಕಳೆದುಕೊಂಡ ಮುಖ್ಯ ಮಂತ್ರಿ ರಾಜೀನಾಮೆ ನೀಡದಿದ್ದರೆ ಅವನನ್ನು ವಜಾ ಮಾಡಬಹುದು. ಈ ಅಧಿಕಾರ ಉಪಯೋಗಿಸುವ ಮೊದಲು ವಿಧಾನ ಸಭೆಯಲ್ಲಿ ವಿಶ್ವಾಸ ಮತ ಕೋರಲು ಅವಕಾಶ ನೀಡಬೇಕು. ಆದರೆ ಅನೇಕ ಸಂದರ್ಭಗಳಲ್ಲಿ ವಿಶ್ವಾಸ ಮತಕೋರಲುಅವಕಾಶ ನೀಡದೆ ಮುಖ್ಯ ಮಂತ್ರಿಯನ್ನು ವಜಾ ಮಾಡಲಾಗಿದೆ. ಉದಾ :- ೧೯೮೯ ರಲ್ಲಿ ಕರ್ನಾಟಕದ ಆಗಿನ ರಾಜ್ಯಪಾಲ ಪಿ. ವೆಂಕಟಸುಬ್ಬಯ್ಯನವರು ಮುಖ್ಯ ಮಂತ್ರಿಯಾಗಿದ್ದ ಎಸ್.ಆರ್. ಬೊಮ್ಮಾಯಿಯವರಿಗೆ ವಿಧಾನ ಸಭೆಯಲ್ಲಿ ಬಹುಮತ ಸಾಬೀತು ಪಡಿಸಲು ಅವಕಾಶ ನೀಡದೇ ವಜಾ ಮಾಡಿದರು. ನಂತರ ಸರ್ವೋನ್ನತ ನ್ಯಾಯಾಲಯ ವೆಂಕಟಸುಬ್ಬಯ್ಯನವರ ಈ ಕೃತ್ಯ ಸಂವಿಧಾನ ಬಾಹಿರವೆಂದು ಸಾರುವ ಮೂಲಕ ಅವರಿಗೆ ಮಂಗಳಾರತಿ ಎತ್ತಿತು.

೩. ಆಡಳಿತ ಪಕ್ಷ ಬಹುಮತ ಕಳೆದುಕೊಂಡಾಗ ಬದಲಿ ವ್ಯವಸ್ಥೆ ಸಾಧ್ಯವಿಲ್ಲದಿದ್ದರೆ, ರಾಷ್ಟ್ರಪತಿ ಆಡಳಿತಕ್ಕೆ ಶಿಫಾರಸು ಮಾಡಬಹುದು. ನೂತನ ವಿಧಾನ ಸಭೆಯಲ್ಲಿ ಯಾವದೇ ಪಕ್ಷ ಬಹುಮತ ಹೊಂದಲು ಸಾಧ್ಯವಿಲ್ಲದಿದ್ದರೆ ವಿಧಾನ ಸಭೆಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಿ ಆರು ತಿಂಗಳ ಮಟ್ಟಿಗೆ ರಾಷ್ಟ್ರಪತಿ ಆಡಳಿತಕ್ಕೆ ಶಿಫಾರಸು ಮಾಡಬಹುದು.

೪. ರಾಜ್ಯ ಶಾಸನಾಂಗ ರಚಿಸಿದ ಮಸೂದೆಯನ್ನು ಪುನರ್ ಪರಿಸೀಲನೆಗೆ ಕಳಿಸಬಹುದು ಅಥವಾ ರಾಷ್ಟ್ರಪತಿಯ ಒಪ್ಪಿಗೆಗೆ ಕಳಿಸಬಹುದು.

೫. ಮಂತ್ರಿ ಮಂಡಲ ಸುಗ್ರೀವಾಜ್ಞೆ ಹೊರಡಿಸುವಂತೆ ಸಲಹೆ ನೀಡಿದಾಗ ಆ ಬಗ್ಗೆ ರಾಷ್ಟ್ರಪತಿಯ ಪೂರ್ವಾನುಮತಿ ಪಡೆದು ಕ್ರಮ ಕೈಗೊಳ್ಳಬಹುದು.

೬. ರಾಜ್ಯದ ಆಡಳಿತ ಕುರಿತು ಮುಖ್ಯ ಮಂತ್ರಿಯ ಮೂಲಕ ವಿವರಣೆ ಪಡೆಯಬಹುದು.

## ✸ರಾಜ್ಯ ಪಾಲರ ಪಾತ್ರ ಮತ್ತು ಕಾರ್ಯಗಳು

ನಮ್ಮ ಸಂವಿಧಾನ ನಿರ್ಮಿಸಿದ ಹುದ್ದೆಗಳ ಪೈಕಿ ಅತ್ಯಂತ ವಿವಾದಾತ್ಮಕವಾದದ್ದೆಂದರೆ ರಾಜ್ಯ ಪಾಲರ ಹುದ್ದೆ. ರಾಜ್ಯಪಾಲರನ್ನು ಕೇಂದ್ರದ ಕೈ ಗೊಂಬೆಗಳಾಗಿ, ಎಜೆಂಟರಾಗಿ ಪರಿವರ್ತಿಸಲಾಗಿದೆ. ಈವರೆಗೆ ಕೇಂದ್ರವನ್ನಾಳಿದ ಎಲ್ಲ ರಾಜಕೀಯ ಪಕ್ಷಗಳೂ ರಾಜ್ಯದ ಗೌರವಾನ್ವಿತ ಮುಖ್ಯಸ್ತನಾಗಬೇಕಾಗಿದ್ದ ರಾಜ್ಯ ಪಾಲನ ಸ್ಥಾನವನ್ನು ಕೇಂದ್ರ ಸರಕಾರದ ''ರಬ್ಬರ್ ಸ್ಟ್ಯಾಂಪ್'' ಎಂದು ಅಣಕವಾಡುವ ಮಟ್ಟಕ್ಕೆ ತಂದು ನಿಲ್ಲಿಸಿವೆ. ಶುದ್ಧ ಚಾರಿತ್ರ್ಯವಂತ ಬುದ್ಧಿ ಜೀವಿಗಳು, ಅನುಭವಿ ಹಿರಿಯರು ಹಾಗೂ ಗೌರವಾನ್ವಿತರು ಆ ಸ್ಥಾನವನ್ನು ಒಪ್ಪಿಕೊಳ್ಳಲಾರದ ಸ್ಥಿತಿ ಇಂದು ನಿರ್ಮಾಣವಾಗಿದೆ.

ಸಂವಿಧಾನ ರಚನಾ ಸಭೆಯಲ್ಲಿ ರಾಜ್ಯಪಾಲರ ನೇಮಕ, ಕಾರ್ಯ ನಿರ್ವಹಣೆ ಮುಂತಾದ ಮಹತ್ವದ ಅಂಶಗಳ ಕುರಿತು ಸುದೀರ್ಘ ಚರ್ಚೆ ನಡೆಯಿತು. ಚುನಾಯಿತ ರಾಜ್ಯ ಪಾಲರ ಕುರಿತು ವಾದ ಮಂಡಿಸಲಾಯಿತು. ೧೯೪೭-೪೯ ರ ಅವಧಿಯಲ್ಲಿ ಕೆಲವು ಸಂಸ್ಥಾನಗಳು ಪ್ರತ್ಯೇಕತೆಗಾಗಿ ಮಾಡಿದ ಪ್ರಯತ್ನಗಳ ಪರಿಣಾಮವಾಗಿ ಚುನಾಯಿತ ರಾಜ್ಯ ಪಾಲ ಹುದ್ದೆಗೆ ಬದಲಾಗಿ ರಾಷ್ಟ್ರಪತಿಯಿಂದ ನೇಮಕಗೊಂಡ ರಾಜ್ಯಪಾಲರೇ ಸೂಕ್ತವೆಂಬ ನಿರ್ಣಯಕ್ಕೆ ಬರಲಾಯಿತು. ಅದನ್ನೇ ಸಂವಿಧಾನದಲ್ಲಿ ಅಳವಡಿಸಲಾಯಿತು.

ಇದುವರೆಗಿನ ರಾಜ್ಯ ಪಾಲರ ಕಾರ್ಯ ನಿರ್ವಹಣೆ ಪ್ರಶಂಶನೀಯವಾಗೇನೂ ಇಲ್ಲ. ಬಹುತೇಕ ರಾಜ್ಯ ಪಾಲರು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ರಾಜಕೀಯದ್ದವರಾಗಿದ್ದು ರಾಜಭವನಕ್ಕೆ ಬಂದ ನಂತರ ಕೇಂದ್ರ ಸರಕಾರದ ಕೈ ಗೊಂಬೆಗಳಂತೆ ವರ್ತಿಸುತ್ತಾರೆ. ೧೯೬೭ ರ ವರೆಗೆ ಕೇಂದ್ರ ಹಾಗೂ ರಾಜ್ಯಗಳಲ್ಲಿ ಒಂದೇ ರಾಜಕೀಯ ಪಕ್ಷ (ಕಾಂಗ್ರೆಸ್ಸು) ಅಧಿಕಾರದಲ್ಲಿದ್ದುದರಿಂದ ರಾಜ್ಯ ಪಾಲರಿಂದ ಅಧಿಕಾರದ ದುರುಪಯೋಗ ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ನಡೆಯಲಿಲ್ಲ. ಪಂಜಾಬಿನ ಗೋಪಿಚಂದ ಭಾರ್ಗವ ಸರಕಾರವನ್ನು ವಜಾ ಮಾಡಿದ್ದು ರಾಜ್ಯಪಾಲರ ಅಧಿಕಾರದ ದುರುಪಯೋಗದ ಮೊದಲ ಘಟನೆಯಾಗಿದೆ. ನಂತರ ಕೇರಳದಲ್ಲಿ ಇ.ಎಂ.ಎಸ್. ನಂಬೂದ್ರಿಪಾದ ನೇತೃತ್ವದ ಜಗತ್ತಿನಲ್ಲೇ ಮೊಟ್ಟ ಮೊದಲ ಚುನಾಯಿತ ಕಮ್ಯುನಿಸ್ಟ್ ಸರಕಾರವನ್ನು ೧೯೫೯ ಹಾಗೂ ೧೯೬೯ ರಲ್ಲಿ ವಜಾ ಮಾಡಲಾಯಿತು.

೧೯೬೭ ರ ನಾಲ್ಕನೇ ಸಾರ್ವತ್ರಿಕ ಚುನಾವಣೆಗಳಲ್ಲಿ ಉತ್ತರದ ಅನೇಕ ರಾಜ್ಯಗಳಲ್ಲಿ ಕಾಂಗ್ರೆಸ್ ಸೋತು ಸಂಮಿಶ್ರ ಸರಕಾರಗಳು ಅಧಿಕಾರಕ್ಕೆ ಬಂದವು. ಅಂದಿನಿಂದ ರಾಜ್ಯಪಾಲ ಹುದ್ದೆಯ ವ್ಯಾಪಕ ದುರುಪಯೋಗ ಪ್ರಾರಂಭವಾಯಿತು. ಎಲ್ಲೆಲ್ಲಿ ವಿರೋಧಿ ಸಂಮಿಶ್ರ ಸರಕಾರಗಳು ಅಧಿಕಾರದಲ್ಲಿದ್ದವೋ ಅಲ್ಲೆಲ್ಲ ರಾಜ್ಯಪಾಲರ ಮೂಲಕ ಸರಕಾರ ವಜಾಮಾಡಿ ಕಾಂಗ್ರೆಸ್ ಸರಕಾರ ತರುವ ಪ್ರಯತ್ನಗಳು

ಪ್ರಾರಂಭವಾದವು. ರಾಜ್ಯಪಾಲರಾಗಿದ್ದ ವೆಂಕಟಸುಬ್ಬಯ್ಯ, ರಾಮಲಾಲ್, ಚೆನ್ನಾ ರೆಡ್ಡಿ, ವಸಂತರಾವ್ ಪಾಟೀಲ, ರೋಮೇಶ ಭಂಡಾರಿ, ಗೋಪಾಲ ರೆಡ್ಡಿ ಮುಂತಾದವರು ಕೇಂದ್ರದ ಹಸ್ತಕರಾಗಿ ವಿರೋಧಿ ಪಕ್ಷಗಳನ್ನು ಅಸ್ಥಿರಗೊಳಿಸಲು ಪ್ರಯತ್ನಿಸಿ ಯಶಸ್ವಿಯಾದರು.

ಇದುವರೆಗೆ ಆಗಿಹೋದ ಎಲ್ಲಾ ರಾಜ್ಯಪಾಲರು ಪಕ್ಷಪಾತಿಗಳೆಂದು ಹೇಳಲಾಗದು. ಕೆಲ ಜನ ರಾಜ್ಯ ಪಾಲರು ಸಂವಿಧಾನದ ರಕ್ಷಕರಾಗಿ ಕಾರ್ಯ ನಿರ್ವಹಿಸುತ್ತ ಸ್ಥಾನ ಗೌರವ ಹೆಚ್ಚಿಸುವ ರೀತಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ಸಂಬಂಧಪಟ್ಟ ಮುಖ್ಯ ಮಂತ್ರಿಗೆ ಮಿತ್ರ, ತತ್ವಜ್ಞಾನಿ, ಹಾಗೂ ಮಾರ್ಗದರ್ಶಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ರಾಜ್ಯ ಮಂತ್ರಿ ಮಂಡಲ ಸರಿಯಾದ ಮಾರ್ಗದಲ್ಲಿ ಸಾಗಿದಾಗ ಬೆನ್ನುತಟ್ಟಿ ಪ್ರೋತ್ಸಾಹಿಸಿ, ತಪ್ಪೆಸಗಿದಾಗ ತಿದ್ದಿ ಸರಿದಾರಿಗೆ ತಂದು ಸರಾಕಾರದ ಯಶಸ್ವೀ ಕಾರ್ಯ ನಿರ್ವಹಣೆಗೆ ಕಾರಣ ಕರ್ತರಾಗಿದ್ದಾರೆ. ಡಾ. ಡಿ.ಸಿ. ಪಾವಟೆ, ಧರ್ಮವೀರ, ಗೋವಿಂದ ನಾರಾಯಣ, ಸರೋಜಿನಿ ನಾಯ್ಡು, ಸಿ. ಸುಬ್ರಮಣಿಯಂ, ನೂರುಲ್ ಹಸನ್ ಮುಂತಾದವರು ರಾಜ್ಯಪಾಲ ಹುದ್ದೆಗೆ ಘನತೆ ಗೌರವ ತಂದವರಾಗಿದ್ದಾರೆ.

ರಾಜ್ಯಪಾಲ ಹುದ್ದೆಯ ರಾಜಕೀಕರಣದ ವಿಷಯದಲ್ಲಿ ಕೇಂದ್ರದಲ್ಲಿ ಆಡಳಿತ ನಡೆಸಿದ ಬಹುತೇಕ ಎಲ್ಲ ರಾಜಕೀಯ ಪಕ್ಷಗಳು ಸಮಾನ ದೋಷಿಗಳಾಗಿವೆ. ವಿರೋಧಿ ಪಕ್ಷವಾಗಿದ್ದಾಗ ರಾಜ್ಯಪಾಲ ಹುದ್ದೆಯ ದುರುಪಯೋಗವನ್ನು ಕಟುಟೀಕೆಗೊಳಪಡಿಸಿದ ಪಕ್ಷಗಳು ತಾವೇ ಅಧಿಕಾರಕ್ಕೆ ಬಂದಾಗ ತಮ್ಮ ರಾಜಕೀಯ ಆಸೆ ಆಕಾಂಕ್ಷೆಗಳ ಈಡೇರಿಕೆಗೆ ರಾಜ್ಯಪಾಲರನ್ನು ದಾಳವಾಗಿಸಿಕೊಂಡಿವೆ. ೧೯೬೭ ರ ನಂತರ ಕಾಂಗ್ರೆಸ್ ಅವಕಾಶ ಸಿಕ್ಕಾಗಲೆಲ್ಲ ವಿರೋಧಿ ರಾಜ್ಯ ಸರಕಾರಗಳನ್ನು ಅಧಿಕಾರದಿಂದ ಇಳಿಸುವ ಪ್ರಯತ್ನಗಳನ್ನು ನಡೆಸುತ್ತ ಬಂದಿದೆ. ೧೯೮೦ ರಲ್ಲಿ ದೇವರಾಜ ಅರಸು ಸರಕಾರವನ್ನು, ೧೯೮೪ ರಲ್ಲಿ ಜಮ್ಮು ಕಾಶ್ಮೀರದ ಫಾರುಕ್ ಅಬ್ದುಲ್ಲಾ ಸರಕಾರವನ್ನು ಮತ್ತು ಆಂದ್ರದಲ್ಲಿ ಎನ್. ಟಿ. ರಾಮರಾವ್ ಸರಕಾರವನ್ನು ಹಾಗೂ ೧೯೮೯ ರಲ್ಲಿ ಕರ್ನಾಟಕದ ಎಸ್. ಆರ್. ಬೊಮ್ಮಾಯಿ ಸರಕಾರವನ್ನು ರಾಜ್ಯ ಪಾಲರ ವಿವೇಚನಾಧಿಕಾರದ ದುರುಪಯೋಗದ ಮೂಲಕ ಪದಚ್ಯುತ ಗೊಳಿಸಲಾಯಿತು.

ಕೇಂದ್ರದಲ್ಲಿ ಅಧಿಕಾರದ ಬದಲಾವಣೆಯಾದಾಗಲೆಲ್ಲ ರಾಜ್ಯಪಾಲರನ್ನು ಬದಲಾಯಿಸುವ ಮೂಲಕ ಆ ಹುದ್ದೆಯಲ್ಲಿರುವವರ ಮನೋಬಲಕ್ಕೆ ಬಲವಾದ ಪೆಟ್ಟು ಹಾಕುತ್ತ ಬರಲಾಗಿದೆ. ೧೯೭೭ ರಲ್ಲಿ ಅಧಿಕಾರಕ್ಕೆ ಬಂದ ಮುರಾರ್ಜಿ ದೇಸಾಯಿ ನೇತೃತ್ವದ ಜನತಾ ಸರಕಾರ ಹಿಂದಿನ ಇಂದಿರಾ ಗಾಂಧಿ ಸರಕಾರ ತುರ್ತು ಪರಿಸ್ಥಿಯ ಸಮಯದಲ್ಲಿ ನೇಮಿಸಿದ್ದ ಉಮಾಶಂಕರ ದೀಕ್ಷಿತ (ಕರ್ನಾಟಕ), ಎಂ. ಎಂ. ಚೌಧುರಿ (ಪಂಜಾಬ) ಮತ್ತು ಆರ್. ಡಿ. ಹಂದರೆ (ಆಂದ್ರ) ಅವರನ್ನು ವಜಾ ಮಾಡಿತು. ಅದಕ್ಕೆ ಪ್ರತಿಯಾಗಿ ೧೯೮೦ ರಲ್ಲಿ ಅಧಿಕಾರಕ್ಕೆ ಮರಳಿದ ಇಂದಿರಾ ಗಾಂಧಿ ಮೊರಾರ್ಜಿ ಸರಕಾರ ನೇಮಿಸಿದ್ದ

ಎಲ್ಲಾ ರಾಜ್ಯ ಪಾಲರನ್ನು ಮನೆಗೆ ಕಳಿಸಿ ಸೇಡು ತೀರಿಸಿಕೊಂಡರು. ೧೯೮೯ ರಲ್ಲಿ ಅಧಿಕಾರಕ್ಕೆ ಬಂದ ವಿ. ಪಿ. ಸಿಂಗ್ ಸರಕಾರ ಕಾಂಗ್ರೆಸ್ ನೇಮಿಸಿದ್ದ ೧೮ ಜನ ರಾಜ್ಯ ಪಾಲರನ್ನು ಪದಚ್ಯುತ ಗೊಳಿಸಿತು. ೧೯೯೮ ರಲ್ಲಿ ಅಧಿಕಾರಕ್ಕೆ ಬಂದ ವಾಜಪೇಯಿ ಸರಕಾರ ಹಿಂದಿನ ಸರಕಾರ ನೇಮಿಸಿದ್ದ ಆರು ಜನ ರಾಜ್ಯ ಪಾಲರ ರಾಜೀನಾಮೆ ಕೇಳಿ ಪಡೆಯಿತು. ಹಿಂದಿನ ಸಂಪ್ರದಾಯ ಅನುಸರಿಸಿ ಪ್ರಧಾನಿ ಮನ ಮೋಹನ ಸಿಂಗ್ ನಾಲ್ಕು ಜನ ರಾಜ್ಯಪಾಲರಿಗೆ ರಾಜೀನಾಮೆ ಕೊಡಲು ಸೂಚಿಸಿದಾಗ ಅವರು ಒಪ್ಪದಿದ್ದರಿಂದ ರಾಷ್ಟ್ರಪತಿಯವರ ಮೂಲಕ ವಜಾ ಮಾಡಿಸಿತು. ರಾಜ್ಯಪಾಲರ ಬದಲಾವಣೆಯ ಚದುರಂಗದಾಟದಲ್ಲಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಎಲ್ಲರೂ ಸಮಾನ ದೋಷಿಗಳೇ. ಆದರೆ ಕೆಲವರು ಪವಿತ್ರಾತ್ಮರಂತೆ, ಪ್ರಾಮಾಣಿಕತೆಯ ಪ್ರತಿ ರೂಪದಂತೆ ನಟಿಸುವ ಮೂಲಕ ತಮ್ಮ ರಾಜಕೀಯ ಬೇಳೆ ಬೇಯಿಸಿಕೊಳ್ಳಲು ಪ್ರಯತ್ನಿಸುತ್ತಾರೆ.

ನಮ್ಮ ಸಂವಿಧಾನ ನಿರ್ಮಾಪಕರು ಇಚ್ಛಿಸಿದ್ದಂತೆ ರಾಜ್ಯ ಪಾಲರು ಸ್ವತಂತ್ರ, ನಿಷ್ಪಕ್ಷಪಾತ ಹಾಗೂ ಪ್ರಾಮಾಣಿಕತನದಿಂದ ವರ್ತಿಸ ಬೇಕಾದರೆ ಅವರ ೫ ವರ್ಷಗಳ ಅಧಿಕಾರದ ಅವಧಿ ನಿರ್ದಿಷ್ಟವಾಗಿರಬೇಕು. ರಾಷ್ಟ್ರಪತಿಯ (ಕೇಂದ್ರಸರಕಾರದ) ಮರ್ಜಿಯ ಮೇರೆಗೆ ಮನೆಗೆ ಕಳಿಸುವ ಅವಕಾಶ ಇರಕೂಡದು. ರಾಜ್ಯ ಪಾಲರು ಸಂವಿಧಾನದ ಆಶಯಗಳಿಗೆ ವಿರುದ್ಧವಾಗಿ ಅಥವಾ ತಮ್ಮ ಹುದ್ದೆಯ ಗೌರವಕ್ಕೆ ಚ್ಯುತಿತರುವ ರೀತಿಯಲ್ಲಿ ವರ್ತಿಸಿದರೆ ಇಲ್ಲವೇ ದೇಶದ್ರೋಹದಂಥ ಗಂಭೀರ ಆಪಾದನೆಗಳಿಗೊಳಗಾದ್ದರೆ ಅವರನ್ನು ವಿಶೇಷ ವಿಧಾನಗಳ ಮೂಲಕ ವಜಾ ಮಾಡುವಂತಾಗಬೇಕು.

ಕೇಂದ್ರ, ರಾಜ್ಯಗಳ ಸಂಬಂಧ ಕುರಿತ ಸರ್ಕಾರಿ ಆಯೋಗ ರಾಜ್ಯ ಪಾಲರ ಹುದ್ದೆಯ ಬಗ್ಗೆ ನೀಡಿದ ಶಿಫಾರಸುಗಳು ಜಾರಿಗೆ ಬಂದರೆ ಆ ಹುದ್ದೆಯ ಕಾರ್ಯ ನಿರ್ವಹಣೆಯಲ್ಲಿ ಸ್ವಾತಂತ್ರ್ಯ ಹಾಗೂ ನಿಷ್ಪಕ್ಷಪಾತಗಳು ಜಾರಿಗೆ ಬಂದು ರಾಜ್ಯ ಪಾಲರು ಗೌರವಾನ್ವಿತ ಸ್ಥಾನ ಪಡೆಯಲು ಸಾಧ್ಯವಾಗುತ್ತದೆ. ನ್ಯಾಯಮೂರ್ತಿ ವೆಂಕಟಾಚಲಯ್ಯ-ನವರ ಅಧ್ಯಕ್ಷತೆಯಲ್ಲಿ ನೇಮಕಗೊಂಡಿದ್ದ ಸಂವಿಧಾನ ಪರಾಮರ್ಶಾ ಸಮಿತಿ ಕೂಡ ರಾಜ್ಯ ಪಾಲರ ಹುದ್ದೆಗೆ ಸಂಬಂಧಿಸಿದಂತೆ ಸರ್ಕಾರಿಯಾ ಆಯೋಗದ ಬಹುತೇಕ ಶಿಫಾರಸುಗಳನ್ನು ಬೆಂಬಲಿಸಿದೆ. ಸರ್ಕಾರಿಯಾ ಆಯೋಗದ ಕೆಳ ಕಾಣಿಸಿದ ಶಿಫಾರಸುಗಳು ಜಾರಿಗೆ ಕೊಡಲು ಯೋಗ್ಯವಾದವುಗಳಾಗಿವೆ.

೧. ರಾಜ್ಯ ಪಾಲರ ನೇಮಕಕ್ಕೆ ಮೊದಲು ಸಂಬಂಧಿಸಿದ ರಾಜ್ಯ ಸರಕಾರದ ಜೊತೆ ಕೇಂದ್ರ ಸಮಾಲೋಚನೆ ನಡೆಸಬೇಕು.

೨. ರಾಜ್ಯ ಪಾಲರ ನೇಮಕಕ್ಕಾಗಿ ಅಂತಾರಾಜ್ಯ ಮಂಡಲಿ ಒಂದು ಪಟ್ಟಿಯನ್ನು ತಯಾರಿಸಬೇಕು. ಪಟ್ಟಿಯಲ್ಲಿರುವವರ ಪೈಕಿ ಒಬ್ಬರನ್ನು ನೇಮಕ ಮಾಡುವ ಅಧಿಕಾರ ರಾಷ್ಟ್ರಪತಿಗಿರಬೇಕು.

೩. ಸಕ್ರಿಯ ರಾಜಕೀಯದಲ್ಲಿರುವವರು ಮತ್ತು ಆಡಳಿತ ಪಕ್ಷಕ್ಕೆ ಸೇರಿದ ರಾಜಕಾರಣಿಗಳನ್ನು ರಾಜ್ಯ ಪಾಲರನ್ನಾಗಿ ನೇಮಕ ಮಾಡಬಾರದು.

೪. ಐದು ವರ್ಷದ ಅವಧಿ ಮುಗಿಯುವ ಮೊದಲು ರಾಜ್ಯಪಾಲರನ್ನು ಪದಚ್ಯುತಗೊಳಿಸಬೇಕಿದ್ದರೆ ಅದಕ್ಕೆ ಕಾರಣವನ್ನು ನೀಡಿ ಅವರಿಂದ ವಿವರಣೆ ಪಡೆಯಬೇಕು. ಆ ವಿವರಣೆಗಳನ್ನು ಪರಿಸೀಲಿಸಿ ವರದಿ ನೀಡಲು ಉಪರಾಷ್ಟ್ರ ಪತಿ, ಲೋಕಸಭಾಧ್ಯಕ್ಷ, ಹಾಗೂ ಸರ್ವೋನ್ನತ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿಯೊಬ್ಬರನ್ನೊಳಗೊಂಡ ಸಮಿತಿ ಇರಬೇಕು. ರಾಷ್ಟ್ರಪತಿಯವರು ಸಮಿತಿಯ ಶಿಫಾರಸಿನ ಮೇರೆಗೆ ನಿರ್ಣಯ ತಗೆದುಕೊಳ್ಳಬೇಕು. ರಾಜ್ಯ ಪಾಲರ ವರ್ಗಾವಣೆಯ ವಿಷಯದಲ್ಲೂ ಇದೇ ಕ್ರಮ ಅನುಸರಿಸಬೇಕು.

### ಮುಖ್ಯ ಮಂತ್ರಿ ಹಾಗೂ ಮಂತ್ರಿ ಮಂಡಲ

ಕೇಂದ್ರದಲ್ಲಿ ಪ್ರಧಾನಿಯನ್ನೊಳಗೊಂಡ ಸಚಿವ ಸಂಪುಟ ನೈಜ ಕಾರ್ಯಾಂಗವಾಗಿರುವಂತೆ ರಾಜ್ಯಗಳಲ್ಲಿ ಮುಖ್ಯ ಮಂತ್ರಿಯನ್ನೊಳಗೊಂಡ ಮಂತ್ರಿ ಮಂಡಲ ನೈಜ ಕಾರ್ಯಾಂಗವಾಗಿದೆ. ಕೇಂದ್ರದಲ್ಲಿ ಪ್ರಧಾನ ಮಂತ್ರಿಯ ಹುದ್ದೆಗಿರುವ ಮಹತ್ವ ರಾಜ್ಯದಲ್ಲಿ ಮುಖ್ಯ ಮಂತ್ರಿಗಿದೆ. ಸಂವಿಧಾನದ ೧೬೩ ನೇ ಕಲಮಿನ ಪ್ರಕಾರ ರಾಜ್ಯ ಪಾಲರ ಅಧಿಕಾರ ನಿರ್ವಹಣೆಯಲ್ಲಿ ಸಲಹೆ ಹಾಗೂ ಸಹಾಯ ನೀಡಲು ಮುಖ್ಯ ಮಂತ್ರಿಯ ನಾಯಕತ್ವದ ಮಂತ್ರಿ ಮಂಡಲ ವಿರುತ್ತದೆ. ವಿವೇಚನಾಧಿಕಾರಗಳನ್ನು ಹೊರತು ಪಡಿಸಿ ಇತರ ಎಲ್ಲ ಕಾರ್ಯಗಳನ್ನು ರಾಜ್ಯ ಪಾಲರು ಮಂತ್ರಿ ಮಂಡಲದ ಸಲಹೆಯ ಮೇರೆಗೆ ನಿರ್ವಹಿಸುತ್ತಾರೆ.

## *ಮುಖ್ಯಮಂತ್ರಿ

### ನೇಮಕ

ವಿಧಾನಸಭೆಯಲ್ಲಿ ಬಹುಮತ ಪಡೆದ ಪಕ್ಷದ ನಾಯಕನನ್ನು ರಾಜ್ಯ ಪಾಲರು ಮುಖ್ಯಮಂತ್ರಿಯನ್ನಾಗಿ ನೇಮಕ ಮಾಡುತ್ತಾರೆ. ಯಾವದೇ ಪಕ್ಷ ಬಹುಮತ ಪಡೆಯದಿದ್ದಲ್ಲಿ ವಿಧಾನ ಸಭೆಯಲ್ಲಿ ಬಹುಮತ ಸಾಬೀತು ಪಡಿಸಲು ಸಾಧ್ಯವಿದ್ದವನನ್ನು ಮುಖ್ಯ ಮಂತ್ರಿಯನ್ನಾಗಿ ನೇಮಕ ಮಾಡುತ್ತಾರೆ. ಅಂಥ ಮುಖ್ಯ ಮಂತ್ರಿ ರಾಜ್ಯ ಪಾಲರು ನಿಗದಿ ಪಡಿಸಿದ ಅವಧಿಯೊಳಗಾಗಿ ವಿಧಾನ ಸಭೆಯಲ್ಲಿ ತನಗಿರುವ ಬಹುಮತವನ್ನು ಸಿದ್ಧಪಡಿಸಬೇಕಾಗುತ್ತದೆ.

ಮುಖ್ಯ ಮಂತ್ರಿ ಶಾಸನಾಂಗದ ಅದರಲ್ಲೂ ಕೆಳಮನೆಯಾದ ವಿಧಾನ ಸಭೆಯ ಸದಸ್ಯನಾಗಿರಬೇಕೆಂಬ ಸಂಪ್ರದಾಯವಿದೆ. ಒಂದು ವೇಳೆ ಸದಸ್ಯನಲ್ಲದ ವ್ಯಕ್ತಿ ಮುಖ್ಯ

ಮಂತ್ರಿಯಾಗಿ ನೇಮಕಗೊಂಡರೆ ಆರು ತಿಂಗಳ ಅವಧಿ ಪೂರೈಸುವದರೊಳಗಾಗಿ ಸದಸ್ಯತ್ವ ಪಡೆಯ ಬೇಕಾಗುತ್ತದೆ. ಉದಾ :- ೧೯೮೩ ರಲ್ಲಿ ಕರ್ನಾಟಕದ ಮುಖ್ಯ ಮಂತ್ರಿಯಾಗಿ ನೇಮಕ ಗೊಂಡಾಗ ರಾಮಕೃಷ್ಣ ಹೆಗಡೆ ವಿಧಾನ ಮಂಡಲದ ಸದಸ್ಯರಾಗಿರಲಿಲ್ಲ. ನಂತರ ಉಪ ಚುನಾವಣೆಯಲ್ಲಿ ಕನಕಪುರ ಮತ ಕ್ಷೇತ್ರದಿಂದ ವಿಧಾನ ಸಭೆಗೆ ಆಯ್ಕೆಗೊಂಡರು. ೧೯೯೯ ರಲ್ಲಿ ಮುಖ್ಯ ಮಂತ್ರಿಯಾಗಿ ನೇಮಕಗೊಂಡ ಎಸ್. ಎಂ. ಕೃಷ್ಣ ನಂತರ ಮದ್ದೂರಿನಿಂದ ವಿಧಾನ ಸಭೆಗೆ ಆಯ್ಕೆಯಾದರು.

## ಅಧಿಕಾರದ ಅವಧಿ

ಮುಖ್ಯ ಮಂತ್ರಿಯ ಕಾರ್ಯಾವಧಿ ೫ ವರ್ಷಗಳು. ಮುಖ್ಯ ಮಂತ್ರಿಯನ್ನು ಬದಲಾಯಿಸುವ ಪಕ್ಷದ ನೀತಿಯಿಂದ ಅಥವಾ ಬೇರೆ ಕಾರಣಗಳಿಂದ ಆ ಅವಧಿ ಕಡಿಮೆ ಯಾಗಬಹುದು. ಉದಾ :- ೧೯೮೯ ರಲ್ಲಿ ಕರ್ನಾಟಕದಲ್ಲಿ ವಿರೇಂದ್ರ ಪಾಟೀಲರ ಸರಕಾರ ಸ್ಥಾಪನೆಯಾಗಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿ ಖಾಲಿಯಾಗಿದ್ದ ಖಜಾನೆಯನ್ನು ಒಂದೇ ವರ್ಷದಲ್ಲಿ ತುಂಬಿಸಿತು. ೧೯೯೦ ರಲ್ಲಿ ಅನಾರೋಗ್ಯದ ಕಾರಣ ನೀಡಿ ಅವರನ್ನು ಒಮ್ಮಿಂದೊಮ್ಮೆಲೇ ಬದಲಾಯಿಸಿ ಎಸ್. ಬಂಗಾರಪ್ಪನವರನ್ನು ಮುಖ್ಯ ಮಂತ್ರಿ ಯನ್ನಾಗಿ ಸಲಾಯಿತು. ೧೯೯೨ ರಲ್ಲಿ ಕ್ಲಾಸಿಕ್ ಕಂಪ್ಯೂಂಟರ್ ಹಗರಣದ ನೆಪದಿಂದ ಬಂಗಾರಪ್ಪನವರನ್ನು ಅಧಿಕಾರದಿಂದ ಇಳಿಸಿ ವೀರಪ್ಪ ಮೊಯ್ಲಿಯವರನ್ನು ಮುಖ್ಯ ಮಂತ್ರಿಯನ್ನಾಗಿ ನೇಮಕ ಮಾಡಲಾಯಿತು. ಕಾಂಗ್ರೆಸ್ ಹೈಕಮಾಂಡಿನ ಇಚ್ಛೆಯ ಮೇರೆಗೆ ಐದು ವರ್ಷಗಳ ಅವಧಿಯಲ್ಲಿ ಮೂರು ಜನ ಮುಖ್ಯ ಮಂತ್ರಿಗಳಾಗಿ ಕಾರ್ಯ ನಿರ್ವಹಿಸುವಂತಾಯಿತು.

## ಪದಚ್ಯುತಿ

ವಿಧಾನ ಸಭೆಯಲ್ಲಿ ಬಹುಮತದ ಬೆಂಬಲ ಕಳೆದುಕೊಂಡರೆ ಮುಖ್ಯ ಮಂತ್ರಿ ಅಧಿಕಾರ ಕಳೆದು ಕೊಳ್ಳುತ್ತಾನೆ. ವಿಧಾನ ಸಭೆಯ ಅಧಿವೇಶನ ಕರೆದು ಬಹುಮತ ಸಾಬೀತು ಪಡಿಸಲು ತಯಾರಿಲ್ಲದ ಮುಖ್ಯ ಮಂತ್ರಿಯನ್ನು ರಾಜ್ಯ ಪಾಲರು ವಜಾ ಮಾಡಬಹುದು. ಕೆಲವು ಸಲ ವಿಧಾನ ಸಭೆಯಲ್ಲಿ ಬಹುಮತ ಸಾಬೀತು ಪಡಿಸಲು ಅವಕಾಶ ನೀಡದೇ ಮುಖ್ಯ ಮಂತ್ರಿಯನ್ನು ವಜಾ ಮಾಡಲಾಗಿದೆ. ಉದಾ :- ೧೯೮೪ ರಲ್ಲಿ ಆಂಧ್ರದ ರಾಜ್ಯ ಪಾಲ ರಾಮಲಾಲ್, ಮುಖ್ಯ ಮಂತ್ರಿ ಎನ್. ಟಿ. ರಾಮರಾವ್‌ಗೆ ವಿಧಾನ ಸಭೆಯಲ್ಲಿ ಬಹುಮತ ಸಾಬೀತು ಪಡಿಸಲು ಅವಕಾಶ ನೀಡದೇ ವಜಾ ಮಾಡಿದರು. ೧೯೮೯ ರಲ್ಲಿ ಕರ್ನಾಟಕದ ರಾಜ್ಯ ಪಾಲರಾಗಿದ್ದ ವೆಂಕಟ ಸುಬ್ಬಯ್ಯ ಮುಖ್ಯ ಮಂತ್ರಿ ಎಸ್. ಆರ್. ಬೊಮ್ಮಾಯಿಯವರಿಗೆ ಬಹುಮತ ಸಾಬೀತು ಪಡಿಸುವ ಅವಕಾಶ ನೀಡದೇ ಪದಚ್ಯುತ ಗೊಳಿಸಿದರು.

## ✸ಮುಖ್ಯ ಮಂತ್ರಿಯ ಕಾರ್ಯಗಳು

ಮುಖ್ಯ ಮಂತ್ರಿಯವರು ಕೆಳಗೆ ವಿವರಿಸಿದ ಕಾರ್ಯಗಳನ್ನು ನಿರ್ವಹಿಸುತ್ತಾರೆ.

### ಮಂತ್ರಿ ಮಂಡಲ ರಚನೆ

ಮುಖ್ಯ ಮಂತ್ರಿಯಾಗಿ ಆಯ್ಕೆಯಾದ ಕೂಡಲೇ ಮಾಡುವ ಮೊದಲ ಕೆಲಸವೆಂದರೆ ಮಂತ್ರಿಮಂಡಲ ರಚನೆ. ಆಡಳಿತ ಪಕ್ಷದ ಪ್ರಮುಖ ನಾಯಕರನ್ನು ಮಂತ್ರಿಗಳನ್ನಾಗಿ ಆಯ್ಕೆ ಮಾಡಲಾಗುತ್ತದೆ. ಸಂಮಿಶ್ರ ಸರಕಾರವಾಗಿದ್ದರೆ ಬೆಂಬಲ ನೀಡಿದ ಪಕ್ಷಗಳ ನಾಯಕರನ್ನು ಮಂತ್ರಿ ಮಂಡಲಕ್ಕೆ ಸೇರಿಸಿಕೊಳ್ಳಲಾಗುತ್ತದೆ. ಸರಕಾರದ ಆಗು ಹೋಗುಗಳಿಗೆ, ಸಾಧನೆ ವೈಫಲ್ಯಗಳಿಗೆ ಮುಖ್ಯ ಮಂತ್ರಿಯೇ ಜವಾಬ್ದಾರನಾಗಿರುವದರಿಂದ ತಾತ್ವಿಕವಾಗಿ ಮಂತ್ರಿಗಳ ಆಯ್ಕೆಯ ಸ್ವಾತಂತ್ರ್ಯ ಅವನಿಗಿರುತ್ತದೆ. ಆದರೆ ಆಚರಣೆಯಲ್ಲಿ ಹಲವಾರು ಒತ್ತಡಗಳಿಗೆ ಮಣಿದು ಯೋಗ್ಯತೆ ಇಲ್ಲದವರನ್ನು ಅಥವಾ ತಮ್ಮ ವಿರೋಧಿಗಳನ್ನು ಮಂತ್ರಿಗಳಾಗಿ ತೆಗೆದುಕೊಳ್ಳಬೇಕಾಗುತ್ತದೆ. ಉದಾ:-೧೯೬೨ ರಲ್ಲಿ ಕರ್ನಾಟಕದ ಮುಖ್ಯ ಮಂತ್ರಿಯಾಗಿದ್ದ ಎಸ್. ನಿಜಲಿಂಗಪ್ಪನವರು ಕಾಂಗ್ರೆಸ್‌ನಲ್ಲಿ ತಮ್ಮ ವಿರೋಧಿ ಬಣದ ನಾಯಕರಾಗಿದ್ದ ಮಾಜಿ ಮುಖ್ಯ ಮಂತ್ರಿ ಬಿ. ಡಿ. ಜತ್ತಿಯವರನ್ನು ಮಂತ್ರಿಯಾಗಿ ನೇಮಕ ಮಾಡಿಕೊಳ್ಳಲೇ ಬೇಕಾಯಿತು. ೧೯೮೯ರಲ್ಲಿ ವೀರೇಂದ್ರ ಪಾಟೀಲರು ಹೈಕಮಾಂಡಿನ ಒತ್ತಡಕ್ಕೆ ಮಣಿದು ಕೆ. ಎಚ್. ಪಾಟೀಲ ಹಾಗೂ ಎಸ್. ಬಂಗಾರಪ್ಪನವರನ್ನು ಮಂತ್ರಿ ಮಂಡಲಕ್ಕೆ ಸೇರಿಸಿಕೊಳ್ಳಬೇಕಾಯಿತು. ಮಂತ್ರಿ ಮಂಡಲದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ, ಅಲ್ಪ ಸಂಖ್ಯಾತರು ಹಾಗೂ ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯ ನೀಡಬೇಕಾಗುತ್ತದೆ.

### ಖಾತೆ ಹಂಚಿಕೆ

ಮಂತ್ರಿ ಮಂಡಲದ ಸಹೋದ್ಯೋಗಿಗಳಿಗೆ ಅವರವರ ಅರ್ಹತೆ, ಅನುಭವ, ಆಸಕ್ತಿಗಳಿಗೆ ಅನುಗುಣವಾಗಿ ಖಾತೆಗಳನ್ನು ಹಂಚಿಕೆ ಮಾಡುವ ಜವಾಬ್ದಾರಿ ಮುಖ್ಯಮಂತ್ರಿಯದಾಗಿರುತ್ತದೆ. ಖಾತೆ ಹಂಚುವ ಈ ಅಧಿಕಾರ ಅನಿರ್ಬಂಧಿತವಲ್ಲ. ಪ್ರಭಾವಶಾಲಿ ಮಂತ್ರಿಗಳಿಗೆ ಅವರು ಬಯಸಿದ ಖಾತೆ ನೀಡಬೇಕಾಗುತ್ತದೆ. ಕೆಲ ಮಂತ್ರಿಗಳನ್ನು ಸಮಾಧಾನ ಪಡಿಸುವ ಸಲುವಾಗಿ ಅವರು ಬಯಸುವ ಖಾತೆಗಳನ್ನು ನಿಡಬೇಕಾಗುತ್ತದೆ. ಆಡಳಿತದ ಹಿತ ದೃಷ್ಟಿಯಿಂದ ಖಾತೆಗಳನ್ನು ಮರುಹೊಂದಾಣಿಕೆ ಮಾಡುವ ಅಗತ್ಯ ಕೂಡ ಇರುತ್ತದೆ. ಅದಕ್ಷ ಮಂತ್ರಿಗಳಿಗೆ ಅವರು ಹೊಂದಿರುವ ಖಾತೆಗಳಿಗಿಂತ ಕಡಿಮೆ ಮಹತ್ವದ ಖಾತೆ ನೀಡಬಹುದು. ತಮಗೆ ಬೇಡವಾದವರಿಗೆ ಕಡಿಮೆ ಮಹತ್ವದ ಖಾತೆ ನೀಡಬಹುದು. ಎಸ್. ಎಂ. ಕೃಷ್ಣರ ಮಂತ್ರಿ ಮಂಡಲದಲ್ಲಿ ಆರೋಗ್ಯ ಮಂತ್ರಿಯಾಗಿದ್ದ ಡಾ. ಮಲ್ಕಾರೆಡ್ಡಿ ಯವರನ್ನು ಆರೋಗ್ಯ ಶಿಕ್ಷಣ ಇಲಾಖೆಗೆ ಮಂತ್ರಿಯನ್ನಾಗಿ ನೇಮಿಸಲಾಯಿತು.

## ಸಂಪುಟ ಸಭೆಗಳ ಅಧ್ಯಕ್ಷ

ಸಚಿವ ಸಂಪುಟ ಸಭೆಗಳು ಮುಖ್ಯ ಮಂತ್ರಿಯ ಅಧ್ಯಕ್ಷತೆಯಲ್ಲಿ ನಡೆಯುತ್ತವೆ. ಸಭೆಯಲ್ಲಿ ಚರ್ಚಿಸಬೇಕಾದ ವಿಷಯುಗಳ ಪಟ್ಟಿಯನ್ನು ಮುಖ್ಯಮಂತ್ರಿಯವರು ಸಿದ್ಧಗೊಳಿಸುತ್ತಾರೆ. ಸಭೆಯಲ್ಲಿ ಮಂತ್ರಿಗಳು ಪ್ರಸ್ತಾಪಿಸುವ ವಿಷಯಗಳನ್ನು ಒಪ್ಪುವದು ಅಥವಾ ಬಿಡುವದು ಮುಖ್ಯಮಂತ್ರಿಗೆ ಬಿಟ್ಟಿದ್ದು.ಸಭೆಯಲ್ಲಿ ವಾದ ವಿವಾದಗಳು ನಡೆದಾಗ ಮುಖ್ಯ ಮಂತ್ರಿ ಮಧ್ಯಸ್ತಿಕೆ ವಹಿಸಿ ಸಮಾಧಾನ ಪಡಿಸುತ್ತಾರೆ. ಚರ್ಚೆಯ ಸಂದರ್ಭದಲ್ಲಿ ಭಿನ್ನಾಭಿಪ್ರಾಯ ವ್ಯಕ್ತಗೊಳಿಸುವ ಅಧಿಕಾರ ಮಂತ್ರಿಗಳಿಗಿದೆ. ತೀರ್ಮಾನ ತಗೆದುಕೊಂಡ ನಂತರ ಯಾರೂ ಅದನ್ನು ಮಂತ್ರಿಗಳಾಗಿದ್ದುಕೊಂಡು ವಿರೋಧಿಸುವಂತಿಲ್ಲ.

ಮಂತ್ರಿ ಮಂಡಲದಲ್ಲಿ ಮುಖ್ಯ ಮಂತ್ರಿಯ ಪಾತ್ರ ವಿಶಿಷ್ಟವಾಗಿದೆ. ವಿಭಿನ್ನ ಧ್ಯೇಯ ಧೋರಣೆ ಹಾಗೂ ವಿಚಾರ ಧಾರೆಗಳನ್ನು ಹೊಂದಿದ ಮಂತ್ರಿಗಳ ನಡುವೆ ಹೊಂದಾಣಿಕೆ ತರಲು ಅವರು ಪ್ರಯತ್ನಿಸಬೇಕಾಗುತ್ತದೆ. ಆಡಳಿತ ನಿರ್ವಹಣೆಯಲ್ಲಿ ಮಂತ್ರಿಗಳು ತಪ್ಪು ಮಾಡಿದಾಗ ಅದನ್ನು ತಿದ್ದಿ ಸರಿಪಡಿಸುವ ಜವಾಬ್ದಾರಿ ಮುಖ್ಯ ಮಂತ್ರಿಯದಾಗಿದೆ.

## ವಿಧಾನ ಸಭಾ ನಾಯಕ

ವಿಧಾನ ಸಭೆಯ ಬಹುಮತ ಪಕ್ಷದ ನಾಯಕನಾದ ಮುಖ್ಯ ಮಂತ್ರಿ ವಿಧಾನ ಸಭಾ ನಾಯಕನಾಗಿರುತ್ತಾನೆ. ಸರಕಾರದ ಆಡಳಿತ ನಿರ್ವಹಣೆಗೆ ಅಗತ್ಯವಾದ ಶಾಸನಗಳನ್ನು ವಿಧಾನ ಮಂಡಲದಿಂದ ಪಾಸು ಮಾಡಿಸಿಕೊಳ್ಳುವ ಜವಾಬ್ದಾರಿ ಅವನದೇ ಆಗಿದೆ. ಶಾಸನಾಂಗದಲ್ಲಿ ಸರಕಾರದ ವಿರುದ್ಧ ಬರುವ ಟೀಕೆಗಳನ್ನು ಸಮರ್ಥವಾಗಿ ಎದುರಿಸುತ್ತಾನೆ. ಇತರ ಮಂತ್ರಿಗಳು ತಮ್ಮ ಖಾತೆಗಳ ಬಗೆಗಿನ ಪ್ರಶ್ನೆಗಳಿಗೆ ಉತ್ತರಿಸುವಾಗ ಮಧ್ಯ ಪ್ರವೇಶಿಸಿ ಮಾತನಾಡುವ ಅಧಿಕಾರ ಅವನಿಗಿದೆ. ಶಾಸನಾಂಗದಲ್ಲಿ ತನ್ನ ಸರಕಾರದ ಕಾರ್ಯ ವೈಖರಿಯನ್ನು ಸಮರ್ಥಿಸಿಕೊಳ್ಳುವ ಜವಾಬ್ದಾರಿ ಮುಖ್ಯ ಮಂತ್ರಿಯದಾಗಿದೆ.

## ಸರಕಾರದ ಮುಖ್ಯಸ್ಥ

ಸಚಿವ ಸಂಪುಟದ ಸದಸ್ಯರ ನಡುವೆ ಸಮನ್ವಯ, ಸಹಕಾರ ತರುವ ಕಾರ್ಯವನ್ನು ಮುಖ್ಯ ಮಂತ್ರಿ ನಿರ್ವಹಿಸುತ್ತಾನೆ. ಮಂತ್ರಿ ಮಂಡಲ ಒಂದು ತಂಡದಂತೆ ಕೆಲಸ ಮಾಡಲು ಮುಖ್ಯ ಮಂತ್ರಿ ಪ್ರೇರೇಪಿಸುತ್ತಾನೆ. ಮಂತ್ರಿಗಳಿಗೆ ಆಡಳಿತ ನಿರ್ವಹಣೆಯ ವಿಷಯದಲ್ಲಿ ಮಾರ್ಗದರ್ಶನ ಹಾಗೂ ಸೂಕ್ತ ಸಲಹೆ ಸೂಚನೆ ನೀಡುತ್ತಾನೆ. ಸರಕಾರದ ನಿರ್ಣಯಗಳನ್ನು ಶಾಸಕಾಂಗದ ಒಳಗೆ ಹಾಗೂ ಹೊರಗೆ ಸಮರ್ಥಿಸಿಕೊಳ್ಳುತ್ತಾನೆ. ಉದಾ :- ೨೦೦೩ ರಲ್ಲಿ ಕರ್ನಾಟಕ ಭೀಕರ ಬರಗಾಲ

ಎದುರಿಸುತ್ತಿದಾಗ ತಮಿಳುನಾಡಿಗೆ ಕಾವೇರಿ ನದಿ ನೀರು ಬಿಟ್ಟ ಎಸ್. ಎಂ. ಕೃಷ್ಣ, ತಮ್ಮ ನಿರ್ಧಾರ ಸರಿ ಎಂದು ಮನವರಿಕೆ ಮಾಡಿ ಕೊಡಲು ಪಾದಯಾತ್ರೆ ಕೈಗೊಂಡರು.

## ಸಂಪರ್ಕ ಸೇತುವೆ

ಮುಖ್ಯ ಮಂತ್ರಿಯವರು ೧. ರಾಜ್ಯ ಪಾಲರು ಹಾಗೂ ಮಂತ್ರಿ ಮಂಡಲದ ನಡುವೆ ಮತ್ತು ೨. ವಿಧಾನ ಮಂಡಲ ಹಾಗೂ ಮಂತ್ರಿ ಮಂಡಲಗಳ ನಡುವೆ ಸಂಪರ್ಕ ಸೇತುವೆಯಾಗಿರುತ್ತಾರೆ. ಮಂತ್ರಿ ಮಂಡಲದ ನಿರ್ಣಯಗಳನ್ನು ರಾಜ್ಯ ಪಾಲರಿಗೆ ತಿಳಿಸುವದು, ರಾಜ್ಯ ಪಾಲರ ಸಲಹೆ ಸೂಚನೆಗಳನ್ನು ಮಂತ್ರಿ ಮಂಡಲದೆದುರು ಮಂಡಿಸುವದು ಹಾಗೂ ರಾಜ್ಯ ಪಾಲರು ಆಡಳಿತದ ಬಗ್ಗೆ ಬಯಸುವ ಮಾಹಿತಿ ಪೂರೈಸುವದು ಮುಖ್ಯ ಮಂತ್ರಿಯಕೆಲಸ.

ಮಂತ್ರಿ ಮಂಡಲ ತಗೆದುಕೊಂಡ ನಿರ್ಧಾರಗಳನ್ನು ವಿಧಾನ ಮಂಡಲದಲ್ಲಿ ಮುಖ್ಯ ಮಂತ್ರಿ ಸಮರ್ಥಿಸಿಕೊಳ್ಳುತ್ತಾರೆ. ಸರಕಾರದ ನೀತಿ ನಿರ್ಧಾರಗಳನ್ನು ಶಾಸನಾಂಗದಲ್ಲಿ ಪ್ರಕಟ ಪಡಿಸುತ್ತಾರೆ. ವಿರೋಧಿ ಪಕ್ಷದವರ ಟೀಕೆಗಳಿಗೆ ಮಂತ್ರಿಗಳು ಉತ್ತರ ನೀಡುವಾಗ ಮಧ್ಯ ಪ್ರವೇಶಿಸಿ ಸರಕಾರದ ಆಡಳಿತವನ್ನು ಸಮರ್ಥಿಸಿಕೊಳ್ಳುತ್ತಾರೆ.

## ನೇಮಕಾಧಿಕಾರ

ಸರಕಾರದ ಉನ್ನತ ಹುದ್ದೆಗಳಿಗೆ ಅಭ್ಯರ್ಥಿಗಳ ನೇಮಕ ಮಾಡುವಲ್ಲಿ ಮುಖ್ಯ ಮಂತ್ರಿಯ ಪಾತ್ರ ಮಹತ್ವದ್ದಾಗಿದೆ. ಮುಖ್ಯ ಮಂತ್ರಿಯ ಸಲಹೆಯ ಮೇರೆಗೆ ನೇಮಕಗಳು ನಡೆಯುತ್ತವೆ. ಉದಾ :- ಅಡ್ವೊಕೇಟ್ ಜನರಲ್, ರಾಜ್ಯ ಲೋಕ ಸೇವಾ ಆಯೋಗದ ಅಧ್ಯಕ್ಷ ಹಾಗೂ ಸದಸ್ಯರು, ಜಿಲ್ಲಾ ನ್ಯಾಯಾಧೀಶರುಗಳು ಮುಂತಾದ ಹುದ್ದೆಗಳಿಗೆ ರಾಜ್ಯ ಪಾಲರು ಮುಖ್ಯ ಮಂತ್ರಿಯ ಸಲಹೆಯ ಮೇರೆಗೆ ಮಾಡುತ್ತಾರೆ.

## ಮಂತ್ರಿಮಂಡಲ (ಸಚಿವ ಸಂಪುಟ)

ರಾಜ್ಯಪಾಲರಿಗೆ ರಾಜ್ಯ ಸರಕಾರದ ಆಡಳಿತ ನಿರ್ವಹಣೆಯಲ್ಲಿ ಸಲಹೆ ನೀಡುವದಕ್ಕಾಗಿ ಮುಖ್ಯಮಂತ್ರಿಯ ನೇತೃತ್ವದ ಮಂತ್ರಿ ಮಂಡಲವಿರುತ್ತದೆ. ಮುಖ್ಯಮಂತ್ರಿಯ ಸಲಹೆಯ ಮೇರೆಗೆ ಮಂತ್ರಿ ಮಂಡಲದ ಸದಸ್ಯರನ್ನು ರಾಜ್ಯಪಾಲರು ನೇಮಕ ಮಾಡುತ್ತಾರೆ. ಮಂತ್ರಿಮಂಡಲದ ಸದಸ್ಯರು ಶಾಸನಾಂಗದ ಸದಸ್ಯರಾಗಿರಬೇಕು. ಒಂದು ವೇಳೆ ಸದಸ್ಯನಲ್ಲದ ವ್ಯಕ್ತಿ ಮಂತ್ರಿಯಾಗಿ ನೇಮಕಗೊಂಡರೆ ಆರು ತಿಂಗಳ ಅವಧಿಯ ಒಳಗಾಗಿ ಸದಸ್ಯತ್ವ ಪಡೆಯಬೇಕು. ಅದು ಸಾಧ್ಯವಾಗದಿದ್ದಲ್ಲಿ ಮಂತ್ರಿಪದವಿ ಕಳೆದುಕೊಳ್ಳುತ್ತಾನೆ.

ಮಂತ್ರಿಗಳು ಶಾಸನಾಂಗಕ್ಕೆ ಎರಡು ಬಗೆಯ ಜವಾಬ್ದಾರಿ ಹೊಂದಿರುತ್ತಾರೆ. ಇಲಾಖಾ ಆಡಳಿತ ಮುಖ್ಯಸ್ಥರಾಗಿ ವೈಯಕ್ತಿಕ ಜವಾಬ್ದಾರಿ ಹೊಂದಿದ್ದರೆ

ಮಂತ್ರಿಮಂಡಲದ ಸದಸ್ಯರಾಗಿ ಸಾಮುಹಿಕ ಜವಾಬ್ದಾರಿ ಹೊಂದಿರುತ್ತಾರೆ. ಶಾಸನಾಂಗದಲ್ಲಿ ಬಹುಮತದ ಬೆಂಬಲ ಇರುವವರೆಗೆ ಮಂತ್ರಿಮಂಡಲ ಅಧಿಕಾರದಲ್ಲಿರುತ್ತದೆ. ಅವಿಸ್ವಾಸ ಗೊತ್ತುವಳಿ ಪಾಸುಮಾಡುವ ಮೂಲಕ ಮಂತ್ರಿಗಳನ್ನುಶಾಸನಾಂಗ ಪದಚ್ಯುತಗೊಳಿಸಬಹುದು. ಮುಖ್ಯಮಂತ್ರಿ ರಾಜೀನಾಮೆ ನೀಡಿದರೆ ಅವರೊಂದಿಗೆ ಮಂತ್ರಿಮಂಡಲದ ಸದಸ್ಯರೆಲ್ಲರೂ ಅಧಿಕಾರ ಕಳೆದುಕೊಳ್ಳುತ್ತಾರೆ.

ಕೇಂದ್ರದಲ್ಲಿರುವಂತೆ ರಾಜ್ಯಗಳಲ್ಲೂ ವಿವಿಧ ದರ್ಜೆಯ ಮಂತ್ರಿಗಳನ್ನು ಮಂತ್ರಿಮಂಡಲ ಒಳಗೊಂಡಿರುತ್ತದೆ. ೧. ಸಂಪುಟ ದರ್ಜೆಯ ಸಚಿವರು ೨. ರಾಜ್ಯಮಟ್ಟದ ಸಚಿವರು ೩. ಉಪ ಸಚಿವರು ಹಾಗೂ ೪. ಸಂಸದೀಯ ಕಾರ್ಯದರ್ಶಿಗಳು. ಇತ್ತಿತ್ತಲಾಗಿ ಮೊದಲಿನ ಎರಡು ಬಗೆಯ ಮಂತ್ರಿಗಳನ್ನು ಮಾತ್ರ ನೇಮಕ ಮಾಡುವದು ಸಾಮಾನ್ಯವಾಗಿದೆ.

## ಕಾರ್ಯಗಳು

ಮಂತ್ರಿಮಂಡಲ ದ ಉನ್ನತ ವಿಭಾಗವಾದ ಸಂಪುಟ ದರ್ಜೆ ಸಚಿವ ಮಂಡಳಿ ಮುಖ್ಯಮಂತ್ರಿಯ ಅಧ್ಯಕ್ಷತೆಯಲ್ಲಿ ಆಗಾಗ ಸಭೆ ಸೇರುತ್ತದೆ. ಸಭೆಯ ನಿರ್ಣಯಗಳನ್ನು ಮಂತ್ರಿಮಂಡಲದ ಸದಸ್ಯರು ತಮ್ಮ ತಮ್ಮ ಇಲಾಖೆಗಳ ಮೂಲಕ ಕಾರ್ಯಗತ-ಗೊಳಿಸುತ್ತಾರೆ. ಸಚಿವ ಸಂಪುಟದ ಕೆಲಸ ಕಾರ್ಯಗಳು ಅಪಾರವಾಗಿರುತ್ತವೆ. ಸಂಪುಟ ಸಭೆಯಲ್ಲಿ ಚರ್ಚೆಗೆ ಬರುವ ಎಲ್ಲ ವಿಷಯಗಳನ್ನೂ ಪೂರ್ಣವಾಗಿ ಅಧ್ಯಯನ ಮಾಡಿಕೊಂಡು ಬರಲು ಸಾಧ್ಯವಾಗುವದಿಲ್ಲ. ಆದ್ದರಿಂದ ಸಂಪುಟದ ಉಪಸಮಿತಿಗಳನ್ನು ರಚಿಸಲಾಗುತ್ತದೆ.ಉಪಸಮಿತಿಗಳು ಅಧ್ಯಯನ ನಡೆಸಿ ನೀಡುವ ವರದಿಯ ಆಧಾರದ ಮೇಲೆ ಸಚಿವ ಸಂಪುಟದ ಸಭೆಗಳಲ್ಲಿ ತೀರ್ಮಾನ ತೆಗೆದುಕೊಳ್ಳಲಾಗುತ್ತದೆ. ಮಂತ್ರಿಮಂಡಲದ ಪ್ರಮುಖ ಕಾರ್ಯಗಳು ಕೆಳಗಿನಂತಿವೆ.

**ನೀತಿ ನಿರೂಪಣೆ :-** ಸಂಪುಟದ ಸಭೆಯಲ್ಲಿ ಸರಕಾರದ ನೀತಿ ನಿರ್ಧಾರಗಳು ಹಾಗೂ ಧ್ಯೇಯ ಧೋರಣೆಗಳ ಬಗ್ಗೆ ನಿರ್ಣಯ ತೆಗೆದುಕೊಳ್ಳಲಾಗುತ್ತದೆ. ಈ ನಿರ್ಧಾರಗಳು ಸರ್ವಾನುಮತದ್ದಾಗಿರುತ್ತವೆ. ನಿರ್ಣಯ ತೆಗೆದುಕೊಳ್ಳುವ ಪೂರ್ವದಲ್ಲಿ ಸಚಿವರು ಭಿನ್ನಾಭಿಪ್ರಾಯ ವ್ಯಕ್ತ ಪಡಿಸ ಬಹುದು. ನಿರ್ಣಯವಾದನಂತರ ವಿರೋಧಿಸುವಂತಿದ್ದರೆ ರಾಜಿನಾಮೇ ನೀಡಬೇಕಾಗುತ್ತದೆ. ಉದಾ :- ನಿಜಲಿಂಗಪ್ಪನವರ ಮಂತ್ರಿಮಂಡಲ ಪಾನನಿರೋಧ ರದ್ದುಗೊಳಿಸುವ ನಿರ್ಣಯ ತೆಗೆದುಕೊಂಡಾಗ ಅದನ್ನು ವಿರೋಧಿಸಿ ಯಶೋಧರಮ್ಮಾ ದಾಸಪ್ಪಾ ಮಂತ್ರಿ ಪದವಿಗೆ ರಾಜೀನಾಮೆ ನೀಡಿದರು.

ಶಾಸನೀಯ ಕಾರ್ಯ :- ಶಾಸನಾಂಗದಲ್ಲಿ ಮಂಡಿಸಬೇಕಾದ ಸರಕಾರಿ ಮಸೂದೆಗಳ ಬಗ್ಗೆ ಸಂಪುಟ ಸಭೆಯಲ್ಲಿ ಚರ್ಚಿಸಿ ತೀರ್ಮಾನ ತಗೆದುಕೊಳ್ಳಲಾಗುತ್ತದೆ. ಮಸೂದೆಗಳನ್ನು ಸಂಬಂಧಪಟ್ಟ ಖಾತೆಯ ಉನ್ನತ ದರ್ಜೆಯ ಅಧಿಕಾರಿಗಳು ಕಾನೂನು ಇಲಾಖೆಯ ಅಧಿಕಾರಿಗಳೊಂದಿಗೆ ಸಮಾಲೋಚನೆ ನಡೆಸಿ ತಯಾರಿಸುತ್ತಾರೆ. ಸರಕಾರಿ ಮಸೂದೆಗಳನ್ನು ಸಂಬಂಧಪಟ್ಟ ಇಲಾಖಾ ಮಂತ್ರಿಗಳು ವಿಧಾನ ಮಂಡಲದಲ್ಲಿ ಮಂಡಿಸುತ್ತಾರೆ. ಶಾಸನಾಂಗದಲ್ಲಿ ಮಂಡಿಸಲ್ಪಟ್ಟ ಮಸೂದೆಯ ಚರ್ಚೆಯಲ್ಲಿ ಭಾಗವಹಿಸಿ, ಟೀಕೆಗಳಿಗೆ ಉತ್ತರಿಸಿ ಸಮರ್ಥಿಸಿಕೊಳ್ಳುವ ಜವಾಬ್ದಾರಿ ಮಂತ್ರಿ-ಮಂಡಲದ್ದಾಗಿದೆ.

ಆಡಳಿತ ಕಾರ್ಯ :- ಮಂತ್ರಿಮಂಡಲದ ಮುಖ್ಯ ಕೆಲಸ ಸರಕಾರದ ಆಡಳಿತ ನಿರ್ವಹಿಸುವದಾಗಿದೆ. ಪ್ರತಿಯೊಬ್ಬ ಮಂತ್ರಿ ಒಂದು ಇಲಾಖೆಯ ಮುಖ್ಯಸ್ಥನಾಗಿ ಅದರ ಆಡಳಿತ ಜವಾಬ್ದಾರಿ ಹೊಂದಿರುತ್ತಾನೆ. ತಮ್ಮ ತಮ್ಮ ಖಾತೆಗಳ ಆಗುಹೋಗುಗಳಿಗೆ ಮಂತ್ರಿಗಳು ನೈತಿಕ ಜವಾಬ್ದಾರಿ ಹೊಂದಿರುತ್ತಾರೆ. ಉದಾ : ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಎಂ.ವಿ.ರಾಮರಾವ್ ಗೃಹಸಚಿವರಾಗಿದ್ದಾಗ ಮಧುಗಿರಿಯಲ್ಲಿ ಪೋಲಿಸರಿಂದ ರೈತರ ಮೇಲೆ ದೌರ್ಜನ್ಯ ನಡೆಯಿತು. ಅದರ ನೈತಿಕ ಹೊಣೆ ಹೊತ್ತ ರಾಮರಾವ್ ಮಂತ್ರಿ ಮಂಡಲಕ್ಕೆ ರಾಜೀನಾಮೆ ನೀಡಿದರು. ರೇವಜಿತು, ಫೋನ್ ಕದ್ದಾಲಿಕೆ, ಹಾಗೂ ಬಾಟ್ಲಿಂಗ್ ಹಗರಣಗಳು ಬಯಲಿಗೆ ಬಂದಾಗ ರಾಮಕೃಷ್ಣ ಹೆಗಡೆ ರಾಜೀನಾಮೆ ನೀಡಿದರು.

ಹಣಕಾಸಿನ ಕಾರ್ಯ :- ರಾಜ್ಯ ಮುಂಗಡ ಪತ್ರದ ಜವಾಬ್ದಾರಿ ಮಂತ್ರಿ ಮಂಡಲದ್ದಾಗಿದೆ. ಇಲಾಖೆಯ ಮುಖ್ಯಸ್ಥರಾದ ಮಂತ್ರಿಗಳು ತಮ್ಮ ತಮ್ಮ ಖಾತೆಗಳ ಅಂದಾಜುಗಳನ್ನು ತಯಾರಿಸಿ ಹಣಕಾಸಿನ ಮಂತ್ರಿಗೆ ಕಳಿಸುತ್ತಾರೆ. ಹಣಕಾಸಿನ ಮಂತ್ರಿಯವರು ಎಲ್ಲ ಅಂದಾಜುಗಳನ್ನು ಒಟ್ಟುಗೂಡಿಸಿ ಮುಂಗಡ ಪತ್ರ ತಯಾರಿಸುತ್ತಾರೆ . ಮಾರ್ಚ ೩೧ ರೊಳಗಾಗಿ ಮುಂಗಡ ಪತ್ರವನ್ನು ಶಾಸಕಾಂಗಲ್ಲಿ ಮಂಡಿಸಿ ಮಂಜೂರಿ ಪಡೆಯಬೇಕಾಗುತ್ತದೆ.

ಮುಂಗಡ ಪತ್ರ ಕುರಿತು ಮುಖ್ಯ ಮಂತ್ರಿಯೊಂದಿಗೆ ಹಣಕಾಸಿನ ಮಂತ್ರಿ ಸಮಾಲೋಚನೆ ನಡೆಸುತ್ತಾರೆ. ಇತರ ಮಂತ್ರಿಗಳಿಗೆ ಮುಂಗಡ ಪತ್ರ ಮಂಡನೆಯ ನಂತರ ವೇ ಮಾಹಿತಿದೊರೆಯುತ್ತದೆ. ಮಂಡನೆಯಾದ ಬಜೆಟ್ ಕುರಿತು ಮಂತ್ರಿಮಂಡಲದಲ್ಲಿ ಚರ್ಚಿಸಿ ಸೂಕ್ತ ಬದಲಾವಣೆ ಸೂಚಿಸಬಹುದು.

ಸಮನ್ವಯ :- ಸರಕಾರದ ವಿವಿಧ ಇಲಾಖೆಗಳ ನಡುವೆ ಹೊಂದಾಣಿಕೆ ಹಾಗೂ ಸಹಕಾರವಿದ್ದರೆ ಮಾತ್ರ ದಕ್ಷ ಆಡಳಿತ ಸಾಧ್ಯವಾಗುತ್ತದೆ. ವಿವಿಧ ಖಾತೆಗಳ ಮಧ್ಯದಲ್ಲಿ ಬರಬಹುದಾದ ಸಮಸ್ಯೆಗಳನ್ನು ಪರಿಹರಿಸಿ ಸಮನ್ವಯ ತರುವ ಜವಾಬ್ದಾರಿ ಸಚಿವ ಸಂಪುಟದ್ದಾಗಿದೆ.

## ಪ್ರಶ್ನೆಗಳು

ಅ. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ. ಒಂದು ಅಂಕದ ಪ್ರಶ್ನೆಗಳು

೧. ಭಾರತದ ರಕ್ಷಣಾ ಬಲಗಳ ಮಹಾದಂಡನಾಯಕನಾರು ?

೨. ಉಪರಾಷ್ಟ್ರಪತಿಯ ಅಧಿಕಾರದ ಅವಧಿ ಎಷ್ಟು ?

೩. ಪ್ರಧಾನ ಮಂತ್ರಿಯನ್ನು ಯಾರು ನೇಮಕ ಮಾಡುತ್ತಾರೆ ?

೪. ರಾಜ್ಯ ಕಾರ್ಯಾಂಗದ ಮುಖ್ಯಸ್ಥನಾರು ?

೫. ತನ್ನದೇ ಆದ ಸಂವಿಧಾನ ಹೊಂದುವ ಅವಕಾಶವಿರುವ ರಾಜ್ಯ ಯಾವುದು ?

ಆ. ಕೆಳಗಿನ ಪ್ರಶ್ನೆಗಳಿಗೆ ೨- ೩ ವಾಕ್ಯದಲ್ಲಿ ಉತ್ತರ ಬರೆಯಿರಿ. ಎರಡು ಅಂಕದ ಪ್ರಶ್ನೆಗಳು

೬. ರಾಷ್ಟ್ರಪತಿಯವರ ತುರ್ತುಪರಿಸ್ಥಿತಿಯ ಅಧಿಕಾರಗಳನ್ನು ಹೆಸರಿಸಿರಿ ?

೭.ಉಪರಾಷ್ಟ್ರಪತಿಯ ಅರ್ಹತೆಗಳನ್ನು ತಿಳಿಸಿರಿ .

೮. ಕೇಂದ್ರ ಮಂತ್ರಿಮಂಡಲದ ಸದಸ್ಯರನ್ನು ಯಾರು ನೇಮಕ ಮಾಡುತ್ತಾರೆ ?

೯. ಮಂತ್ರಿಮಂಡಲದ ವರ್ಗೀಕರಣ (ಪ್ರಕಾರಗಳನ್ನು) ಹೇಳಿರಿ ?

೧೦. ರಾಜ್ಯಪಾಲರ ಅರ್ಹತೆಗಳನ್ನು ವಿವರಿಸಿರಿ ?

ಇ. ಕೆಳಗಿನ ಪ್ರಶ್ನೆಗಳಿಗೆ ೮ -೧೦ವಾಕ್ಯದಲ್ಲಿ ಉತ್ತರ ಬರೆಯಿರಿ. ಐದು ಅಂಕದ ಪ್ರಶ್ನೆಗಳು

೧೧. ರಾಷ್ಟ್ರಪತಿಯವರ ತುರ್ತುಪರಿಸ್ಥಿತಿಯ ಅಧಿಕಾರಗಳನ್ನು ವಿವರಿಸಿರಿ ?

೧೨. ಸುಗ್ರೀವಾಜ್ಞೆ ಕುರಿತು ಟಿಪ್ಪಣಿ ಬರೆಯಿರಿ ?

೧೩. ವೈಯಕ್ತಿಕ ಹಾಗೂ ಸಾಮೂಹಿಕ ಜವಾಬ್ದಾರಿ ಎಂದರೇನು ?

೧೪. ರಾಷ್ಟ್ರಪತಿಯ ವಿವೇಚನಾಧಿಕಾರ ಕುರಿತು ವಿವರಿಸಿರಿ ?

೧೫. ಸಂಪುಟ ದರ್ಜೆಯ ಮಂತ್ರಿಗಳ ಸ್ಥಾನ ಹಾಗೂ ಅಧಿಕಾರ ತಿಳಿಸಿರಿ.

ಈ. ಕೆಳಗಿನ ಪ್ರಶ್ನೆಗಳಿಗೆ ೩೦ - ೪೦ ವಾಕ್ಯದಲ್ಲಿ ಉತ್ತರ ಬರೆಯಿರಿ. ಹತ್ತು ಅಂಕದ ಪ್ರಶ್ನೆಗಳು

೧೬. ಪ್ರಧಾನ ಮಂತ್ರಿಯ ಕಾರ್ಯಗಳನ್ನು (ಅಧಿಕಾರಗಳನ್ನು) ವಿವರಿಸಿರಿ.

೧೭. ರಾಜ್ಯ ಮಂತ್ರಿಮಂಡಲದ ಕಾರ್ಯಗಳನ್ನು ತಿಳಿಸಿರಿ.

೧೮. ರಾಜ್ಯಪಾಲರ ಪಾತ್ರದ ವಿಮರ್ಶೆ ಮಾಡಿರಿ ?

೧೯.ಮುಖ್ಯ ಮಂತ್ರಿಯ ಅಧಿಕಾರಗಳನ್ನು ವಿವರಿಸಿರಿ.

❑ ❑

# ಅಧ್ಯಾಯ ೮

# ನ್ಯಾಯಾಂಗ

## ✸ ಅರ್ಥ ಮತ್ತು ಮಹತ್ವ

ಸರಕಾರದ ಮೂರುಅಂಗಗಳ ಪೈಕಿ ಕೊನೆಯ ಅಂಗ ನ್ಯಾಯಾಂಗ. ಪ್ರಜಾಪ್ರಭುತ್ವದಲ್ಲಿ ನ್ಯಾಯಾಂಗಕ್ಕೆ ಅತ್ಯಂತ ಮಹತ್ವದ ಸ್ಥಾನವಿದೆ. ಪ್ರಜಾಸತ್ತಾತ್ಮಕ ಸರಕಾರದ ತಳಹದಿಯಾದ ಸಂವಿಧಾನದ ರಕ್ಷಣೆಯ ಜವಾಬ್ದಾರಿ ನ್ಯಾಯಾಂಗದ್ದಾಗಿದೆ. ಸಂವಿಧಾನದ ಚೌಕಟ್ಟಿನಲ್ಲಿ ಸರಕಾರ ಕಾರ್ಯನಿರ್ವಹಿಸುವಂತೆ ನೋಡಿಕೊಂಡು ಹೋಗುವ ಹಾಗೂ ಅದಕ್ಕೆ ವಿರುದ್ಧವಾಗಿ ವರ್ತಿಸಿದಾಗ ಅದನ್ನು ತಡೆಗಟ್ಟುವ ಮೂಲಕ ಸಂವಿಧಾನದ ರಕ್ಷಣೆಮಾಡುವ ಹೊಣೆ ನ್ಯಾಯಾಂಗದ್ದು. ಸಂವಿಧಾನ ನೀಡಿದ ಮೂಲ ಭೂತ ಹಕ್ಕುಗಳನ್ನು ರಕ್ಷಿಸುವ ಜವಾಬ್ದಾರಿ ಕೂಡ ನ್ಯಾಯಾಂಗದ್ದಾಗಿದೆ.ಶಾಸನಾಂಗ ಸಂವಿಧಾನ ಬದ್ಧವಾಗಿ ಕಾನೂನು ರಚಿಸಿದೆಯೋ ಹೇಗೆ? ಎಂಬುದನ್ನು ಪರೀಕ್ಷಿಸುವದರೊಂದಿಗೆ ಸಂವಿಧಾನದ ಹಾಗೂ ಶಾಸನಾಂಗ ರಚಿಸಿದ ಕಾನೂನಿಗೆ ನ್ಯಾಯಾಂಗ ಅರ್ಥ ವಿವರಣೆ ನೀಡುತ್ತದೆ. ಸಂವಿಧಾನಕ್ಕೆ ಹಾಗೂ ಶಾಸನಾಂಗ ರಚಿಸಿದ ಕಾನೂನಿಗೆ ಅನುಗುಣವಾಗಿ ಕಾರ್ಯಾಂಗ ಕಾರ್ಯನಿರ್ವಹಿಸಿದೆಯೋ ಹೇಗೆ? ಎಂಬುದನ್ನು ಪರಿಸೀಲಿಸಿ ಅದಕ್ಕೆ ವ್ಯತಿರಿಕ್ತವಾದ ಕಾರ್ಯಗಳನ್ನು ರದ್ದುಗೊಳಿಸುತ್ತದೆ.

ಸ್ವತಂತ್ರ ಹಾಗೂ ನಿಷ್ಪಕ್ಷಪಾತ ನ್ಯಾಯಾಂಗವು ನಾಗರಿಕ ಸಮಾಜದ ಮುನ್ನಡೆಗೆ ಪೂರಕವಾಗಿದೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಮೇಲೆ ಮಾಡಬಹುದಾದ ದಬ್ಬಾಳಿಕೆ, ಅತಿಕ್ರಮಣ, ಕ್ರೌರ್ಯ ಮುಂತಾದ ಚಟುವಟಿಕೆಗಳನ್ನು ತಡೆಗಟ್ಟಿ ನಾಗರಿಕ ಸ್ವಾತಂತ್ರ್ಯವನ್ನು ಅದು ರಕ್ಷಿಸುತ್ತದೆ. ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಗೆ ಅಗತ್ಯವಾದ ಹಕ್ಕುಗಳ ರಕ್ಷಣೆಯ ಜವಾಬ್ದಾರಿ ನ್ಯಾಯಾಂಗದ್ದು. ಸಂವಿಧಾನದ ಚೌಕಟ್ಟನ್ನು ಮೀರಿ ರಚಿಸಲಾದ ಕಾನೂನು ಅಥವಾ ನಿರ್ವಹಿಸಲಾದ ಆಡಳಿತ ಕಾರ್ಯವನ್ನು ನ್ಯಾಯಾಂಗ ರದ್ದುಪಡಿಸುತ್ತದೆ. ಆ ಮೂಲಕ ಎಲ್ಲ ಜನರಿಗೂ ಕಾನೂನಿನ ಸಮಾನ ರಕ್ಷಣೆಯನ್ನುದೊರಕಿಸಿ ಕೊಡುತ್ತದೆ.''ಒಂದು ಸರಕಾರದ ಶ್ರೇಷ್ಠತೆಯನ್ನು ಅಳೆಯಲು ಅದರ ದಕ್ಷ ನ್ಯಾಯ ವ್ಯವಸ್ಥೆಗಿಂತ ಉತ್ತಮವಾದ ಬೇರಾವ ಒರೆಗಲ್ಲು ಇಲ್ಲ'' ಎಂಬ ಲಾರ್ಡ್ ಬ್ರೈಸ್ ಹೇಳಿಕೆ ಆಧುನಿಕ ಪ್ರಜಾರಾಜ್ಯದಲ್ಲಿ ನ್ಯಾಯಾಂಗ ಹೊಂದಿರುವ ಪ್ರಾಧಾನ್ಯತೆಯನ್ನು ಬಿಂಬಿಸುತ್ತದೆ.

ಪ್ರಾಚೀನ ಭಾರತದಲ್ಲಿ ''ರಾಜಾ ಪ್ರತ್ಯಕ್ಷ ದೇವತಾ'' ಎಂಬ ನಂಬಿಕೆ ವ್ಯಾಪಕವಾಗಿ ಜಾರಿಯಲ್ಲಿತ್ತು. ಪ್ರಜೆಗಳಿಗೆ ನ್ಯಾಯದಾನ ಮಾಡುವ ಹೊಣೆ ರಾಜನದಾಗಿತ್ತು. ಗ್ರಾಮಮಟ್ಟದಲ್ಲಿ ಊರಿನ ಪ್ರಮುಖರು (ಹಿರಿಯರು) ಕೂಡಿ ವಿವಾದಗಳನ್ನು ತೀರ್ಮಾನಿಸುತ್ತಿದ್ದರು. ಪಂಚರು (ಪ್ರಮುಖರು) ನೀಡಿದ ತೀರ್ಮಾನಕ್ಕೆ ಊರ ಸಮಸ್ತರು ಬದ್ಧರಾಗಿರುತ್ತಿದ್ದರು .ಹಿರಿಯರ ಮಾತು ಮೀರಿ ನಡೆದವರಿಗೆ ಸಾಮೂಹಿಕ ಬಹಿಷ್ಕಾರ ಹಾಕಲಾಗುತ್ತಿತ್ತು. ಬಹಿಷ್ಕಾರಕ್ಕೊಳಗಾದವರೊಂದಿಗೆ ಎಲ್ಲಬಗೆಯ ಸಂಬಂಧಗಳನ್ನೂ ಊರವರೆಲ್ಲ ಕಡಿದುಕೊಳ್ಳಬೇಕಾಗುತ್ತಿತ್ತು. ಬ್ರಿಟೀಶರು ಈ ದೇಶದ ಆಡಳಿತವನ್ನು ವಹಿಸಿಕೊಂಡ ನಂತರ ಈ ಪದ್ಧತಿ ಬದಲಾಯಿಸಿ ತಮ್ಮ ದೇಶದ ನ್ಯಾಯಾಂಗ ವ್ಯವಸ್ಥೆಯನ್ನು ಈ ದೇಶದಲ್ಲಿ ಜಾರಿಗೆ ತಂದರು. ಇಂದಿಗೂ ಬಹುತೇಕವಾಗಿ ಬ್ರಿಟೀಶರು ಜಾರಿಯಲ್ಲಿ ತಂದ ನ್ಯಾಯಾಂಗದ ಕಾರ್ಯ ವಿಧಾನಗಳೆಲ್ಲ ಈ ದೇಶದಲ್ಲಿ ಜಾರಿಯಲ್ಲಿವೆ.

ಒಕ್ಕೂಟ ಪದ್ಧತಿ ಅಥವಾ ಸಂಯುಕ್ತ ಪದ್ಧತಿ ಇರುವ ರಾಷ್ಟ್ರದಲ್ಲಿ ದ್ವಿನ್ಯಾಯಾಂಗ ವ್ಯವಸ್ಥೆಯನ್ನು ಅಳವಡಿಸಿ ಕೊಳ್ಳಲಾಗಿರುತ್ತವೆ. ಕೇಂದ್ರ ಹಾಗೂ ರಾಜ್ಯಗಳು ತಮ್ಮದೇ ಆದ ನ್ಯಾಯಾಂಗ ವ್ಯವಸ್ಥೆಯನ್ನು ಹೊಂದಿರುತ್ತವೆ. ಭಾರತದಲ್ಲಿ ಒಕ್ಕೂಟ ಪದ್ಧತಿಗೆ ವ್ಯತಿರಿಕ್ತವಾಗಿ ಏಕ ನ್ಯಾಯಾಂಗ ವ್ಯವಸ್ಥೆ ಜಾರಿಯಲ್ಲಿದೆ.ರಾಷ್ಟ್ರ ಮಟ್ಟದಲ್ಲಿ ಸರ್ವೋನ್ನತ ನ್ಯಾಯಾಲಯದ ನಿಯಂತ್ರಣ ಹಾಗೂ ಮೇಲ್ವಿಚಾರಣೆಗೊಳಪಟ್ಟು ಈದೇಶದ ಇಡೀನ್ಯಾಯಾಂಗ ವ್ಯವಸ್ಥೆ ಕಾರ್ಯ ನಿರ್ವಹಿಸುತ್ತದೆ.

## ನ್ಯಾಯಾಂಗದ ಮಹತ್ವ

''ಶಾಸನಾಂಗವಿಲ್ಲದ ಸರಕಾರವನ್ನು ಕಲ್ಪಿಸಬಹುದು. ಆದರೆ ನ್ಯಾಯಾಂಗವಿಲ್ಲದ ನಾಗರಿಕ ಸಮಾಜವನ್ನು ಊಹಿಸಲು ಸಾಧ್ಯವಿಲ್ಲ'' ಎಂಬ **ಜೆ. ಡಬ್ಲ್ಯು. ಗಾರ್ನರ್** ಮಾತುಗಳು ಆಧುನಿಕ ಸಮಾಜ ವ್ಯವಸ್ಥೆಯಲ್ಲಿ ನ್ಯಾಯಾಂಗ ಹೊಂದಿರುವ ಮಹತ್ವವನ್ನು ಪ್ರತಿಬಿಂಬಿಸುತ್ತವೆ. **ಜಾನ್‌ಲಾಕ್** ಪ್ರಕಾರ ''ಕಾನೂನು ಕೊನೆಯಾದಲ್ಲಿಂದ ಅರಾಜಕತೆ ಪ್ರಾರಂಭವಾಗುತ್ತದೆ.'' ಕಾನೂನಿನ ಆಡಳಿತವಿರುವಲ್ಲಿ ಅಂದರೆ ಕಾನೂನನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ವ್ಯವಸ್ಥೆ ಇರುವಲ್ಲಿ ಜನತೆ ಸುಖ,ಶಾಂತಿ ಹಾಗೂ ನೆಮ್ಮದಿಯಿಂದ ಜೀವನ ನಡೆಸಲು ಸಾಧ್ಯವಾಗುತ್ತದೆ.'' ಕೆಳಗೆ ವಿವರಿಸಲಾದ ಅಂಶಗಳ ಮೂಲಕ ನ್ಯಾಯಾಂಗದ ಪ್ರಾಧಾನ್ಯತೆಯನ್ನು ಅರಿತುಕೊಳ್ಳಬಹುದು.

**೧.ಹಕ್ಕುಗಳ ರಕ್ಷಣೆ :-** ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಗೆ ಮೂಲಭೂತ ಹಕ್ಕುಗಳು ಹಾಗೂ ಸ್ವಾತಂತ್ರ್ಯ ತಳಹದಿಯಾಗಿವೆ. ಪ್ರತಿಯೊಬ್ಬ ವ್ಯಕ್ತಿಗೆ ಹಕ್ಕುಗಳು ದೊರೆಯುವಂತೆ ನ್ಯಾಯಾಂಗ ನೋಡಿಕೊಳ್ಳುತ್ತದೆ.ವ್ಯಕ್ತಿಯ ಹಕ್ಕುಗಳಿಗೆ ಸರಕಾರ ಅಥವಾ ಇತರ ವ್ಯಕ್ತಿಗಳಿಂದ ಚ್ಯುತಿ ಉಂಟಾದರೆ ನ್ಯಾಯಾಲಯದ ಮೊರೆ ಹೊಕ್ಕು

ಪರಿಹಾರ ಪಡೆದುಕೊಳ್ಳಬಹುದು.ಸರಕಾರ ತಪ್ಪು ಮಾಡಿದರೆ ಅದನ್ನು ದಂಡಿಸುವ ಅಧಿಕಾರ ನ್ಯಾಯಾಂಗಕ್ಕಿದೆ. ತಪ್ಪು ಮಾಡಿದವರಿಗೆ ಶಿಕ್ಷೆ ವಿಧಿಸುವ ಮೂಲಕ ನ್ಯಾಯಾಂಗ ವ್ಯಕ್ತಿಯ ಹಕ್ಕುಗಳನ್ನು ರಕ್ಷಿಸುತ್ತದೆ.

೨. ಕಾನೂನು ಪಾಲನೆ :- ಕೆಲವು ಜನರು ಸ್ವಭಾವತಃ ಕಾನೂನಿಗೆ ವಿಧೇಯರಾಗಿರುತ್ತಾರೆ. ಬಹಳಷ್ಟು ಜನ ಶಿಕ್ಷೆಯ ಹೆದರಿಕೆಯಿಂದ ಕಾನೂನು ಪಾಲಿಸುತ್ತಾರೆ. ಕಾನೂನುಗಳಿಗೆ ವಿರೋಧವಾಗಿ ವರ್ತಿಸಿದಾಗ ನ್ಯಾಯಾಂಗ ನೀಡಬಹುದಾದ ಶಿಕ್ಷೆಯ ಹೆದರಿಕೆ ಅಂಥವರನ್ನು ಕಾನೂನಿಗೆ ವಿಧೇಯರಾಗಿ ವರ್ತಿಸುವಂತೆ ಮಾಡುತ್ತದೆ.

೩. ವಿಶ್ವಾಸಾರ್ಹತೆ :- ನ್ಯಾಯಾಂಗದಿಂದ ಅನ್ಯಾಯಕ್ಕೆ ಪ್ರತಿಯಾಗಿ ರಕ್ಷಣೆ ದೊರೆಯುತ್ತದೆ. ತಪ್ಪು ಮಾಡಿದವರು ಯಾರೇ ಆಗಿರಲಿ ಶಿಕ್ಷೆಯನು ಅನುಭವಿಸ-ಬೇಕಾಗುತ್ತದೆ. ನ್ಯಾಯಾಂಗದ ನಿಷ್ಪಕ್ಷಪಾತ ಕಾರ್ಯನಿರ್ವಹಣೆ ಹಾಗೂ ತಪ್ಪಿತಸ್ಥರಿಗೆ ಅದು ನೀಡುವ ಶಿಕ್ಷೆಯಿಂದಾಗಿ ಜನರು ನ್ಯಾಯಾಂಗದಲ್ಲಿ ವಿಶ್ವಾಸವಿಡುತ್ತಾರೆ. ಅನ್ಯಾಯವಾದಾಗ ನ್ಯಾಯಾಂಗದ ಮೊರೆ ಹೋಗುತ್ತಾರೆ.

೪. ಒಕ್ಕೂಟ ವ್ಯವಸ್ಥೆಯ ರಕ್ಷಣೆ :- ಒಕ್ಕೂಟ ಅಥವಾ ಸಂಯುಕ್ತ ಪದ್ಧತಿಯಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಪ್ರತ್ಯೇಕ ಅಸ್ತಿತ್ವ ಹೊಂದಿರುತ್ತವೆ. ಸಂವಿಧಾನ ನೀಡಿದ ಅಧಿಕಾರಗಳನ್ನು ಚಲಾಯಿಸಿ ಅವು ಕಾರ್ಯನಿರ್ವಹಿಸಬೇಕಾಗುತ್ತದೆ. ಪರಸ್ಪರರ ಅಧಿಕಾರಗಳಲ್ಲಿ ಹಸ್ತಕ್ಷೇಪ ಮಾಡುವಂತಿಲ್ಲ. ಒಂದು ವೇಳೆ ಹಸ್ತಕ್ಷೇಪ ನಡೆದರೆ ಅಂಥ ಕಾರ್ಯಗಳನ್ನು ರದ್ದುಪಡಿಸುವ ಮೂಲಕ ನ್ಯಾಯಂಗ ಒಕ್ಕೂಟ ವ್ಯವಸ್ಥೆಯನ್ನು ರಕ್ಷಿಸುತ್ತದೆ.

೫. ಪ್ರಜಾಪ್ರಭುತ್ವದ ರಕ್ಷಣೆ :- ಸಂವಿಧಾನದ ಚೌಕಟ್ಟಿನಲ್ಲಿ ಸರಕಾರಗಳು ಕಾರ್ಯನಿರ್ವಹಿಸುವದರೊಂದಿಗೆ ವ್ಯಕ್ತಿ ಸ್ವಾತಂತ್ರ್ಯ ರಕ್ಷಣೆ ಪ್ರಜಾಪ್ರಭುತ್ವದ ವೈಶಿಷ್ಟ್ಯವಾಗಿರುತ್ತದೆ. ಸಂವಿಧಾನ ನೀಡಿದ ಅಧಿಕಾರಗಳನ್ನು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಚಲಾಯಿಸಿ ಕಾರ್ಯನಿರ್ವಹಿಸಬೇಕು. ಅದಕ್ಕೆ ವ್ಯತಿರಿಕ್ತವಾಗಿ ಸರ್ವಾಧಿಕಾರಿಯಂತೆ ವರ್ತಿಸಿದರೆ ಸರಕಾರದ ಅಂಥ ಕಾರ್ಯಗಳನ್ನು ರದ್ದುಗೊಳಿಸುವ ಮೂಲಕ ನ್ಯಾಯಾಂಗವು ಸಂವಿಧಾನ ಹಾಗೂ ಪ್ರಜಾಪ್ರಭುತ್ವಗಳನ್ನು ರಕ್ಷಿಸುತ್ತದೆ. ಪ್ರಜಾಪ್ರಭುತ್ವದ ತಳಹದಿಯಾದ ವ್ಯಕ್ತಿ ಸ್ವಾತಂತ್ರವನ್ನು ಕೂಡ ಅದು ರಕ್ಷಿಸುತ್ತದೆ.

೬. ನ್ಯಾಯಿಕ ವಿಮರ್ಶೆ :- ಸಂವಿಧಾನದ ಅರ್ಥವಿವರಣೆ ನೀಡಿ ಅದಕ್ಕೆ ಅನುಗುಣವಾಗಿ ಸರಕಾರದ ಕಾರ್ಯಗಳನ್ನು ವಿಮರ್ಶಿಸುವ ನ್ಯಾಯಾಂಗದ ಕಾರ್ಯಕ್ಕೆ ನ್ಯಾಯಿಕ ವಿಮರ್ಶೆ ಎನ್ನುತ್ತಾರೆ. ಕೇಂದ್ರ ಹಾಗೂ ರಾಜ್ಯಗಳ ಸಂವಿಧಾನ ಬದ್ಧತೆಗೆ ನ್ಯಾಯಿಕ ವಿಮರ್ಶೆ ದಾರಿಮಾಡಿಕೊಡುತ್ತದೆ.

## * ಸರ್ವೋಚ್ಚ ನ್ಯಾಯಾಲಯ

ಸರ್ವೋನ್ನತ ನ್ಯಾಯಾಲಯ ನಮ್ಮ ದೇಶದ ಏಕೀಕೃತ ನ್ಯಾಯಾಂಗ ವ್ಯವಸ್ಥೆಯ ತುತ್ತ ತುದಿಯಲ್ಲಿದೆ. ನ್ಯಾಯಾಂಗ ವ್ಯವಸ್ಥೆಯ ವಿವಿಧ ಹಂತಗಳಲ್ಲಿರುವ ನ್ಯಾಯಾಲಯಗಳ ಮೇಲ್ವಿಚಾರಣೆ ಹಾಗೂ ನಿಯಂತ್ರಣಾಧಿಕಾರಗಳನ್ನು ಅದು ಹೊಂದಿದೆ. ಸಂವಿಧಾನದ ೧೨೪ನೇ ಕಲಮಿನ ಮೇರೆಗೆ ೧೯೫೦ರಲ್ಲಿ ಸರ್ವೋನ್ನತ ನ್ಯಾಯಾಲಯ ಸ್ಥಾಪನೆಗೊಂಡಿದೆ. ಮುಖ್ಯ ನ್ಯಾಯಾಧೀಶರನ್ನೊಳಗೊಂಡ ೮ ಜನ ನ್ಯಾಯಾಧಿಶರೊಂದಿಗೆ ರಚಿತವಾದ ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರ ಈಗಿನ ಸಂಖ್ಯೆ ೨೬.

**ಅರ್ಹತೆ :-** ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರು ಕೆಳಗೆ ವಿವರಿಸಲಾದ ಅರ್ಹತೆಗಳನ್ನು ಹೊಂದಿರಬೇಕು.

೧. ಭಾರತದ ನಾಗರಿಕನಾಗಿರಬೇಕು.

೨. ಒಂದು ಅಥವಾ ಒಂದಕ್ಕಿಂತ ಹೆಚ್ಚು ಉಚ್ಚ ನ್ಯಾಯಾಲಯಗಳಲ್ಲಿ ೫ ವರ್ಷಗಳ ವರೆಗೆ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸಿರಬೇಕು. ಇಲ್ಲವೇ ೧೦ ವರ್ಷಗಳವರೆಗೆ ನ್ಯಾಯವಾದಿ (ವಕೀಲ) ಯಾಗಿ ಕಾರ್ಯ ನಿರ್ವಹಿಸಿರಬೇಕು. ಅಥವಾ

೩. ರಾಷ್ಟ್ರಪತಿಯವರ ದೃಷ್ಟಿಯಲ್ಲಿ ವಿಶೇಷ ಕಾನೂನು ಪರಿಣಿತನಾಗಿರಬೇಕು.

## ನೇಮಕಾತಿ

ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರನ್ನು ರಾಷ್ಟ್ರಪತಿಯವರು ನೇಮಕ ಮಾಡುತ್ತಾರೆ. ಮುಖ್ಯ ನ್ಯಾಯಾಧೀಶರ ನೇಮಕ ಸಂದರ್ಭದಲ್ಲಿ ರಾಷ್ಟ್ರಪತಿಯವರು ತಮಗೆ ಸೂಕ್ತವೆಂದು ಕಂಡುಬಂದ ಸರ್ವೋನ್ನತ ನ್ಯಾಯಾಲಯದ ಹಿರಿಯ ನ್ಯಾಯಾಧೀಶರೊಂದಿಗೆ ಸಮಾಲೋಚನೆ ನಡೆಸುತ್ತಾರೆ. ಸಾಮಾನ್ಯವಾಗಿ ಸೇವಾ ಜೇಷ್ಠತೆಯ ಆಧಾರದ ಮೇಲೆ ಮುಖ್ಯ ನ್ಯಾಯಾಧೀಶರ ನೇಮಕ ನಡೆಯುತ್ತದೆ. ಇದಕ್ಕೆ ಅಪವಾದವೆಂಬಂತೆ ೧೯೭೩ ರಲ್ಲಿ ಇಂದಿರಾಗಾಂಧಿಯವರು ನ್ಯಾ. ಗ್ರೋವರ್, ನ್ಯಾ. ಶೆಲಾತೆ ಹಾಗೂ ನ್ಯಾ. ಸದಾನಂದ ಹೆಗಡೆಯವರ ಸೇವಾಜೇಷ್ಠತೆ ಕಡೆಗಣಿಸಿ ನಾಲ್ಕನೇಯ ಸ್ಥಾನದಲ್ಲಿದ್ದ ನ್ಯಾ. ಅಜೀತನಾಥರೇ ಅವರನ್ನು ಸರ್ವೋನ್ನತ ನ್ಯಾಯಾಲಯದ ಮುಖ್ಯನ್ಯಾಯಮೂರ್ತಿಯಾಗಿ ನೇಮಿಸಿದರು. ಮುಖ್ಯ ನ್ಯಾಯಮೂರ್ತಿಯವರೊಂದಿಗೆ ಸಮಾಲೋಚನೆ ನಡೆಸಿ ಇತರ ನ್ಯಾಯಾಧೀಶರನ್ನು ನೇಮಿಸಲಾಗುತ್ತದೆ.

## ಅಧಿಕಾರದ ಅವಧಿ

ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರ ನಿವೃತ್ತಿ ವಯಸ್ಸು ೬೫. ಅದಕ್ಕಿಂತ ಮೊದಲೇ ನಿವೃತ್ತಿ ಹೊಂದ ಬಯಸುವ ನ್ಯಾಯಾಧೀಶರು ರಾಷ್ಟ್ರಪತಿಯವರಿಗೆ ರಾಜೀನಾಮೆ ಪತ್ರ ನೀಡಬೇಕು.

## ಪ್ರಮಾಣ ವಚನ

ಅಧಿಕಾರ ವಹಿಸಿಕೊಳ್ಳುವ ಮೊದಲು ರಾಷ್ಟ್ರಪತಿಯವರೆದುರು ಸಂವಿಧಾನ ರಕ್ಷಣೆ ಹಾಗೂ ಪಾಲನೆ ಕುರಿತು ಪ್ರಮಾಣ ವಚನ ಸ್ವೀಕರಿಸುತ್ತಾರೆ.

## ವೇತನ ಹಾಗೂ ಭತ್ಯೆಗಳು

ಸರ್ವೋನ್ನತ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ವೇತನ ತಿಂಗಳಿಗೆ ರೂ.೩೩,೦೦೦ ಹಾಗೂ ಇತರ ನ್ಯಾಯಾಧೀಶರ ವೇತನ ತಿಂಗಳಿಗೆ ರೂ.೩೦,೦೦೦ ಇರುತ್ತದೆ. ನ್ಯಾಯಾಧೀಶರ ಅಧಿಕಾರದ ಅವಧಿಯಲ್ಲಿ ಅವರ ವೇತನ ಕಡಿಮೆ ಮಾಡಲು ಬರುವದಿಲ್ಲ. ನ್ಯಾಯಾಧೀಶರ ವೇತನ ಹಾಗೂ ಭತ್ಯೆಯ ಬಗ್ಗೆ ಸಂಸತ್ತು ಮತದಾನ ಮಾಡುವಂತಿಲ್ಲ. ಭಾರತದ ಸಂಚಿತ ನಿಧಿಯಿಂದ ನ್ಯಾಯಾಧೀಶರ ವೇತನ, ಭತ್ಯೆಹಾಗೂ ಆಡಳಿತ ವೆಚ್ಚವನ್ನು ಭರಿಸಲಾಗುತ್ತದೆ. ವೇತನದ ಜೊತೆಗೆ ಬಾಡಿಗೆ ರಹಿತ ಮನೆ, ಉಚಿತ ಸಾರಿಗೆ, ವಿದ್ಯುತ್ತು, ನೀರು, ಟೆಲಿಫೋನ್ ಸೌಲಭ್ಯಗಳನ್ನು ನೀಡಲಾಗುತ್ತದೆ. ನಿವೃತ್ತಿಯ ನಂತರ ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರು ತಮ್ಮ ವೇತನದ ೬೦% ನಿವೃತ್ತಿ ವೇತನ ಪಡೆಯುತ್ತಾರೆ.

## ಪದಚ್ಯುತಿ

ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರನ್ನು ಅಸಮರ್ಥತೆ ಅಥವಾ ಅಸಭ್ಯವರ್ತನೆಗಳಿಗಾಗಿ ವಾಗ್ದಂಡನೆಯ ಮೂಲಕ ವಜಾಮಾಡಬಹುದು. ವಾಗ್ದಂಡನೆಯ ಪ್ರಸ್ತಾವನೆ ಸಂಸತ್ತಿನ ಒಂದು ಸದನದಲ್ಲಿ ಮಂಡಿತವಾದರೆ ಇನ್ನೊಂದು ಸದನ ನ್ಯಾಯಾಧೀಶನಾಗಿ ಕಾರ್ಯ ನಿರ್ವಹಿಸುತ್ತದೆ. ೧೦೦ ಲೋಕಸಭಾ ಸದಸ್ಯರು ಅಥವಾ ೫೦ ರಾಜ್ಯಸಭಾ ಸದಸ್ಯರು ರಾಷ್ಟ್ರಪತಿಯವರ ಹೆಸರಿನಲ್ಲಿ ಪ್ರಸ್ತಾವನೆ ತಯಾರಿಸಿ ಸಂಬಂಧಪಟ್ಟ ಸದನದ ಅಧ್ಯಕ್ಷರಿಗೆ ಸಲ್ಲಿಸುತ್ತಾರೆ. ಸರ್ವೋನ್ನತ ನ್ಯಾಯಾಲಯದ ಇಬ್ಬರು ನ್ಯಾಯಾಧೀಶರು ಹಾಗೂ ಒಬ್ಬ ನ್ಯಾಯಶಾಸ್ತ್ರ ಪರಿಣತರನ್ನೊಳಗೊಂಡ ಸಮಿತಿಯನ್ನು ಪರಿಶೀಲನೆಗಾಗಿ ರಚಿಸಲಾಗುತ್ತದೆ. ಸಮಿತಿಯು ಆಪಾದಿತ ನ್ಯಾಯಾಧೀಶನು ದೋಷಿಯೆಂದು ಪರಿಗಣಿಸಿದರೆ ಪ್ರಸ್ತಾವನೆ ಸಲ್ಲಿಸಲ್ಪಟ್ಟ ಸದನದಲ್ಲಿ ನಿರ್ಣಯ ಕೈಗೆತ್ತಿಕೊಳ್ಳಲಾಗುವದು. ಎರಡೂ ಸದನಗಳಲ್ಲಿ ಹಾಜರಿದ್ದು ಮತ ನೀಡುವವರ ಪೈಕಿ ೨/೩ ಬಹುಮತದ ಮೂಲಕ ಪ್ರಸ್ತಾವನೆ ಅಂಗೀಕರಿಸಲ್ಪಟ್ಟರೆ ರಾಷ್ಟ್ರಪತಿಯವರು ಸಂಬಂಧಿಸಿದ ನ್ಯಾಯಾಧೀಶನನ್ನು ವಜಾಮಾಡುತ್ತಾರೆ. ಇದುವರೆಗೆ ವಾಗ್ದಾಂಡನೆಯ ಮೂಲಕ ನ್ಯಾಯಾಧೀಶರಾರೂ ವಜಾಗೊಂಡಿಲ್ಲ. ಒಂದು ಸಲ ವಜಾಪ್ರಸ್ತಾವನೆ ಮಂಡಿತವಾಯಿತಾದರು ಕೊನೆಯ ಹಂತದಲ್ಲಿ ನಿರ್ಣಯವನ್ನು ಕೈಬಿಡಲಾಯಿತು.

## ರಕ್ಷಣೆ

ನ್ಯಾಯಾಧೀಶರ ಸ್ವತಂತ್ರ ಹಾಗೂ ನಿಷ್ಪಕ್ಷಪಾತ ಕಾರ್ಯ ನಿರ್ವಹಣೆಗಾಗಿ ನ್ಯಾಯಾಲಯ ನಿಂದನೆಯನ್ನು ನಿಷೇಧಿಲಾಗಿದೆ. ನ್ಯಾಯಾಲಯ ನಿಂದನೆ ಶಿಕ್ಷಾರ್ಹ ಅಪರಾಧವಾಗಿದೆ. ಸಂಸತ್ತು ಕೂಡ ನ್ಯಾಯಾಲಯದ ಅಥವಾ ನ್ಯಾಯಾಧೀಶರ ತೀರ್ಪು ಅಥವಾ ವರ್ತನೆ ಕುರಿತು ಚರ್ಚಿಸುವಂತಿಲ್ಲ. ವಿಚಾರ ಸಂಕಿರಣಗಳಲ್ಲಿ ಮಾತ್ರ ನ್ಯಾಯ ಪರಿಣತರು ತೀರ್ಪುಗಳ ವಿಶ್ಲೇಷಣೆ ಮಾಡಲು ಅವಕಾಶವಿದೆ.

## ನಿವೃತ್ತಿಯ ನಂತರದ ನಿರ್ಬಂಧಗಳು

ನಿವೃತ್ತಿ ಅಥವಾ ರಾಜೀನಾಮೆಯ ನಂತರ (ಮುಖ್ಯ ನ್ಯಾಯಾಧೀಶರನ್ನೊಳಗೊಂಡು) ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರು ಭಾರತದ ಯಾವುದೇ ನ್ಯಾಯಾಲಯಗಳಲ್ಲಿ ವಕೀಲ ವೃತ್ತಿಯನ್ನು ಕೈಗೊಳ್ಳುವಂತಿಲ್ಲ. ನ್ಯಾಯಾಂಗದ ಘನತೆ, ಗೌರವ ಹಾಗೂ ಸ್ವಾತಂತ್ರ್ಯ ಕಾಪಾಡುವ ದೃಷ್ಟಿಯಿಂದ ಈ ನಿಷೇಧ ಹೇರಲಾಗಿದೆ. ಸರಕಾರ ರಚಿಸುವ ನ್ಯಾಯಮಂಡಲಿಗಳು ಅಥವಾ ವಿಚಾರಣಾ ಆಯೋಗಗಳ ಸದಸ್ಯರನ್ನಾಗಿ ಮಾಡುವ ನೇಮಕಕ್ಕೆ ಈ ನಿರ್ಬಂಧಗಳು ಅನ್ವಯಿಸುವದಿಲ್ಲ.

## ಅಧಿಕಾರಗಳು

ಸರ್ವೋನ್ನತ ನ್ಯಾಯಾಲಯ (೧) ಪ್ರಾರಂಭಿಕ ಅಧಿಕಾರ ವ್ಯಾಪ್ತಿ (೨) ಮೇಲ್ಮನವಿ ಅಧಿಕಾರ ವ್ಯಾಪ್ತಿ ಹಾಗೂ (೩) ಸಲಹಾತ್ಮಕ ಅಧಿಕಾರ ವ್ಯಾಪ್ತಿ ಹೀಗೆ ಮೂರು ಬಗೆಯ ಅಧಿಕಾರ ವ್ಯಾಪ್ತಿ ಹೊಂದಿದೆ.

## ಪ್ರಾರಂಭಿಕ ಅಧಿಕಾರ ವ್ಯಾಪ್ತಿ

ನಮ್ಮ ದೇಶದ ಸಂವಿಧಾನ ಹಾಗೂ ಒಕ್ಕೂಟ ವ್ಯವಸ್ಥೆಯ ರಕ್ಷಣೆಯ ಜವಾಬ್ದಾರಿ ಸರ್ವೋನ್ನತ ನ್ಯಾಯಾಲಯದ್ದಾಗಿದೆ. ಸಂವಿಧಾನದಿಂದ ನಿರ್ಮಿಸಲ್ಪಟ್ಟ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಸಂವಿಧಾನದ ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳ ನಡುವೆ ಅಧಿಕಾರ ವ್ಯಾಪ್ತಿ ಕುರಿತು ಉಂಟಾಗುವ ವಿವಾದಗಳನ್ನು ಸರ್ವೋನ್ನತ ನ್ಯಾಯಾಲಯ ತೀರ್ಮಾನಿಸುತ್ತದೆ. ಅಧಿಕಾರ ವ್ಯಾಪ್ತಿಯ ವಿವಾದಗಳು ೧) ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರಗಳ ನಡುವೆ ೨) ಕೇಂದ್ರ ಹಾಗೂ ಒಂದು ಅಥವಾ ಕೆಲವು ರಾಜ್ಯಗಳಿಗೆ ವಿರುದ್ಧವಾಗಿ ಇನ್ನು ಕೆಲವು ರಾಜ್ಯಗಳ ನಡುವೆ ಇಲ್ಲವೇ ೩) ಒಂದು ಅಥವಾ ಹಲವು ರಾಜ್ಯಸರಕಾರಗಳಿಗೆ ವಿರುದ್ಧವಾಗಿ ಮತ್ತೆ ಕೆಲವು ರಾಜ್ಯ ಸರಕಾರಗಳು ಹೀಗೆ ಮೂರು ಬಗೆಯವಾಗಿರಬಹುದು.

ಜನರ ಮೂಲಭೂತ ಹಕ್ಕುಗಳ ರಕ್ಷಣೆಯ ವಿಷಯದಲ್ಲೂ ಸರ್ವೋನ್ನತ ನ್ಯಾಯಾಲಯಕ್ಕೆ ಪ್ರಾರಂಭಿಕ ಅಧಿಕಾರವಿದೆ. ಮೂಲಭೂತ ಹಕ್ಕಿಗೆ ಚ್ಯುತಿ ಬಂದಾಗ

ಸಂಬಂಧಪಟ್ಟ ವ್ಯಕ್ತಿ ಅವುಗಳ ರಕ್ಷಣೆಗಾಗಿ ನೇರವಾಗಿ ಸರ್ವೋನ್ನತ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬಹುದು. ಆಸಾಮಿ ಹಾಜರು ಆಜ್ಞೆ, ಪರಮಾದೇಶ, ಪ್ರತಿಷೇಧಲೇಖ ಉತ್ಪ್ರೇಷಣಲೇಖ,ಹಾಗೂ ಅಧಿಕಾರ ಪ್ರಶ್ನೆ ಈ ಎಲ್ಲ ರಿಟ್‌ಗಳ ಮೂಲಕ ಸರ್ವೋನ್ನತ ನ್ಯಾಯಾಲಯ ಹಕ್ಕುಗಳ ರಕ್ಷಣೆ ಮಾಡುತ್ತದೆ.

ಮೂಲಭೂತ ಹಕ್ಕುಗಳಿಗೆ ಸಂಬಂಧಿಸಿದಂತೆ ಉಚ್ಚ ನ್ಯಾಯಾಲಯಗಳಿಗೂ ಪ್ರಾರಂಭಿಕ ಅಧಿಕಾರವಿದೆ.

ಸರಕಾರ ಸರಕಾರಗಳ ನಡುವಿನ ವ್ಯಾಜ್ಯಗಳ ವಿಚಾರಣೆ ಅಥವಾ ಮೂಲಭೂತ ಹಕ್ಕುಗಳಿಗೆ ರಕ್ಷಣೆ ನೀಡುವ ಸಂದರ್ಭದಲ್ಲಿ ಸಂವಿಧಾನದ ಅರ್ಥವಿವರಣೆ ನೀಡಬೇಕಾಗಬಹುದು. ಸರ್ವೋನ್ನತ ನ್ಯಾಯಾಲಯ ಅಂಥ ಸಂದರ್ಭದಲ್ಲಿ ಸಂವಿಧಾನದ ಅರ್ಥ ವಿವರಣೆ ನೀಡಿ ವಿವಾದಗಳನ್ನು ತೀರ್ಮಾನಿಸುತ್ತದೆ. ಸಂವಿಧಾನದ ಅರ್ಥ ವಿವರಣೆ ನೀಡುವ ಪ್ರಾರಂಭಿಕ ಅಧಿಕಾರ ಉಚ್ಚ ನ್ಯಾಯಾಲಯಗಳಿಗೂ ಇದೆ.

ರಾಷ್ಟ್ರಪತಿ ಹಾಗೂ ಉಪರಾಷ್ಟ್ರಪತಿ ಚುನಾವಣೆಗೆ ಸಂಬಂಧಿಸಿದ ವಿವಾದಗಳ ವಿಚಾರಣೆಯ ಪ್ರಾರಂಭಿಕ ಅಧಿಕಾರ ಸರ್ವೋನ್ನತ ನ್ಯಾಯಾಲಯಕ್ಕೆ ಮಾತ್ರ ಇದೆ.

## ಮೇಲ್ಮನವಿ ಅಧಿಕಾರ ವ್ಯಾಪ್ತಿ

ಸರ್ವೋನ್ನತ ನ್ಯಾಯಾಲಯ ಭಾರತದ ನ್ಯಾಯಾಂಗ ವ್ಯವಸ್ಥೆಯಲ್ಲಿ ಉನ್ನತ ಸ್ಥಾನ ಹೊಂದಿದೆ. ಮಿಲಿಟರಿ ನ್ಯಾಯಾಲಯಗಳನ್ನು ಹೊರತುಪಡಿಸಿ ಭಾರತದ ಇತರ ಎಲ್ಲ ನ್ಯಾಯಾಲಯಗಳ ತೀರ್ಪಿನ ವಿರುದ್ಧ ಮೇಲ್ಮನವಿ ಸ್ವೀಕರಿಸುವ ಅಧಿಕಾರ ಅದಕ್ಕಿದೆ. ದೇಶದಲ್ಲಿ ಉದ್ಭವಿಸುವ ಎಲ್ಲ ನಾಗರಿಕ (ಸಿವಿಲ್), ಅಪರಾಧಿ (ಕ್ರಿಮಿನಲ್) ಹಾಗೂ ಇತರ ವಿವಾದಗಳ ವಿಷಯದಲ್ಲಿ ಸರ್ವೋನ್ನತ ನ್ಯಾಯಾಲಯದ ತೀರ್ಪು ಅಂತಿಮವಾದದ್ದು.

ಸರ್ವೋನ್ನತ ನ್ಯಾಯಾಲಯದ ಮೇಲ್ಮನವಿ ಅಧಿಕಾರ ವ್ಯಾಪ್ತಿಯನ್ನು ಕೆಳಗಿನಂತೆ ವರ್ಗೀಕರಿಸಬಹುದು.

### ೧. ಸಂವಿಧಾನಾತ್ಮಕ ಪ್ರಕರಣಗಳು

ಸಿವಿಲ್ ಅಥವಾ ಕ್ರಿಮಿನಲ್ ಮೊಕದ್ದಮೆಗಳಿಗೆ ಸಂಬಂಧಿಸಿದಂತೆ ಸಂವಿಧಾನಕ್ಕೆ ಅರ್ಥ ವಿವರಣೆ ನೀಡುವ ಅಗತ್ಯವಿದ್ದರೆ ಸರ್ವೋನ್ನತ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು. ಉಚ್ಚನ್ಯಾಯಾಲಯವು ಸಂವಿಧಾನದ ಅರ್ಥ ವಿವರಣೆ ಅಗತ್ಯವಿದೆಯೆಂದು ಪ್ರಮಾಣ ಪತ್ರ ನೀಡಿದರೆ ಅಥವಾ ಉಚ್ಚನ್ಯಾಯಾಲಯ ಪ್ರಮಾಣ ಪತ್ರ ನೀಡದಿದ್ದರೂ ಸರ್ವೋನ್ನತ ನ್ಯಾಯಾಲಯವೇ ಮೊಕದ್ದಮೆಯ ವಿಷಯದಲ್ಲಿ ಸಂವಿಧಾನದ ಅರ್ಥವಿವರಣೆ ಅಗತ್ಯವೆಂದು ಭಾವಿಸಿದರೆ ಮೇಲ್ಮನವಿಗೆ ಅವಕಾಶ ದೊರೆಯುತ್ತದೆ.

## ೨. ನಾಗರಿಕ (ಸಿವಿಲ್) ಪ್ರಕರಣಗಳು

ಸಿವಿಲ್ ಮೊಕದ್ದಮೆಯು ನಿರ್ದಿಷ್ಟ ಪಡಿಸಿದ ಮೌಲ್ಯದ್ದಾಗಿದ್ದರೆ ಅಥವಾ ಮೇಲ್ಮನವಿಗೆ ಯೋಗ್ಯ ಪ್ರಕರಣವೆಂದು ಉಚ್ಚ ನ್ಯಾಯಾಲಯ ತೀರ್ಮಾನಿಸಿದರೆ ಮೇಲ್ಮನವಿ ಸಲ್ಲಿಸಲು ಅದು ಪ್ರಮಾಣ ಪತ್ರ ನೀಡುತ್ತದೆ. ಉಚ್ಚನ್ಯಾಯಾಲಯದಿಂದ ಪ್ರಮಾಣ ಪತ್ರ ದೊರೆಯದಿದ್ದಾಗಲೂ ಕೂಡ ಸಂವಿಧಾನದ ಅರ್ಥ ವಿವರಣೆಯ ಅಗತ್ಯ ವಿದೆಯೆಂದು ಕಂಡುಬಂದರೆ ಸರ್ವೋನ್ನತ ನ್ಯಾಯಾಲಯವೇ ಮೇಲ್ಮವಿಗೆ ಅವಕಾಶ ನೀಡಬಹುದು.

## ೩. ಅಪರಾಧಿ (ಕ್ರಿಮಿನಲ್) ಪ್ರಕರಣಗಳು

ಮುಂದೆ ವಿವರಿಸಲಾದ ಸಂದರ್ಭಗಳಲ್ಲಿ ಸರ್ವೋನ್ನತ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಿಕೊಳ್ಳಬಹುದು. ೧) ಜಿಲ್ಲಾ ನ್ಯಾಯಾಲಯ ನಿರ್ದೋಷಿಯೆಂದು ತೀರ್ಮಾನಿಸಿದ ಪ್ರಕರಣದಲ್ಲಿ ಉಚ್ಚನ್ಯಾಯಾಲಯ ಮರಣ ದಂಡನೆ ವಿಧಿಸಿದ್ದರೆ, ೨) ಕೆಳಗಿನ ನ್ಯಾಯಾಲಯದಲ್ಲಿ ನಡೆಯುತ್ತಿದ್ದ ವಿಚಾರಣೆಯನ್ನು ನಿಲ್ಲಿಸಿ ಉಚ್ಚ ನ್ಯಾಯಾಲಯ ತಾನೇ ವಿಚಾರಣೆ ನಡೆಸಿ ಮರಣ ದಂಡನೆ ವಿಧಿಸಿದ್ದರೆ ಅಥವಾ ೩) ಮೊಕದ್ದಮೆಯು ಮೇಲ್ಮನವಿಗೆ ಯೋಗ್ಯವಾಗಿದೆಯೆಂದು ಉಚ್ಚನ್ಯಾಯಾಲಯ ನಿರ್ಣಯಿಸಿದರೆ ಮೇಲ್ಮನವಿ ಸಲ್ಲಿಸಬಹುದು. ಮೇಲೆ ವಿವರಿಸಿದ ಸಂದರ್ಭಗಳನ್ನು ಹೊರತುಪಡಿಸಿ ಇತರ ಎಲ್ಲ ಪ್ರಸಂಗಗಳಲ್ಲಿ ಉಚ್ಚನ್ಯಾಯಾಲಯದ ತೀರ್ಪು ಅಂತಿಮವಾದದ್ದು. ಸಂವಿಧಾನದ ೧೩೪ ನೇ ಕಲಮಿನ ಪ್ರಕಾರ ಸಂಸತ್ತಿಗೆ ಸರ್ವೋನ್ನತ ನ್ಯಾಯಾಲಯದ ಅಧಿಕಾರ ಹೆಚ್ಚಿಸುವ ಅವಕಾಶವಿದೆ.

ಸಂವಿಧಾನದ ೧೩೬ ನೇ ಕಲಮಿನ ಪ್ರಕಾರ ಕೆಳ ನ್ಯಾಯಾಲಯಗಳ ತೀರ್ಪು ಅಸಮಂಜಸವೆಂದು ಕಂಡು ಬಂದರೆ ಅವುಗಳ ವಿರುದ್ಧ ಮೇಲ್ಮನವಿಗೆ ಅವಕಾಶ ನೀಡುವ ಅಧಿಕಾರ ಸರ್ವೋನ್ನತ ನ್ಯಾಯಾಲಯಕ್ಕಿದೆ.

## ಸಲಹಾ ಕಾರ್ಯಗಳು

ಕಾನೂನಿಗೆ ಸಂಬಂಧಿಸಿದ ಮಹತ್ವದ ವಿಷಯಗಳ ಬಗ್ಗೆ ರಾಷ್ಟ್ರ ಪತಿಯವರು ಸರ್ವೋನ್ನತ ನ್ಯಾಯಾಲಯದ ಸಲಹೆ ಪಡೆಯುವ ಅಧಿಕಾರ ಹೊಂದಿದ್ದಾರೆ. ರಾಷ್ಟ್ರ ಪತಿಯವರು ಕೋರಿದಾಗ ಸರ್ವೋನ್ನತ ನ್ಯಾಯಾಲಯ ಸಲಹೆ ನೀಡುವದು ಕಡ್ಡಾಯದ್ದಾಗಿದೆ. ಆದರೆ ರಾಷ್ಟ್ರ ಪತಿಯರಿಗೆ ಈ ಸಲಹೆ ಬಂಧನಕಾರಿಯಲ್ಲ.

## ಇತರ ಕಾರ್ಯಗಳು(ಅಧಿಕಾರಗಳು)

ತೀರ್ಪು ಪುನರ್‌ಪರಿಶೀಲಿಸುವ ಅಧಿಕಾರ : ಸರ್ವೋನ್ನತ ನ್ಯಾಯಾಲಯವು ಭಾರತದ ನ್ಯಾಯಂಗ ವ್ಯವಸ್ಥೆಯಲ್ಲಿ ಉಚ್ಚ ಸ್ಥಾನದಲ್ಲಿದೆ. ಅದರ ತೀರ್ಪಿನ ವಿರುದ್ಧ ಮೇಲ್ಮನವಿ

ಸ್ವೀಕರಿಸುವ ಬೇರೆ ನ್ಯಾಯಾಲಯವಿಲ್ಲ. ಆದ್ದರಿಂದ ಸಂವಿಧಾನದ ೧೩೭ ನೇ ಕಲಮಿನ ಪ್ರಕಾರ ಸರ್ವೋನ್ನತ ನ್ಯಾಯಾಲಯಕ್ಕೆ ತನ್ನ ತೀರ್ಪನ್ನು ಕಾಲಕಾಲಕ್ಕೆ ಪುನರ್‌ಪರಿಶೀಲಿಸುವ ಅಧಿಕಾವಿದೆ.

ಸರ್ವೋನ್ನತ ನ್ಯಾಯಾಲಯದ ತೀರ್ಪನ್ನು ಇತರ ನ್ಯಾಯಾಲಯಗಳು ಮೊಕದ್ದಮೆಗಳ ವಿಚಾರಣೆಯ ಸಂದರ್ಭದಲ್ಲಿ ದಾಖಲೆ ಅಥವಾ ಪೂರ್ವ ನಿದರ್ಶನವಾಗಿ ಉಪಯೋಗಿಸಿಕೊಳ್ಳಲು ಅವಕಾಶವಿದೆ. ಸರ್ವೋನ್ನತ ನ್ಯಾಯಾಲಯದ ತೀರ್ಪನ್ನು ಆಧಾರವಾಗಿಟ್ಟುಕೊಂಡು ಉಚ್ಚ ನ್ಯಾಯಾಲಯಗಳು ಹಾಗೂ ಇತರ ನ್ಯಾಯಾಲಯಗಳು ವಿವಾದ ತೀರ್ಮಾನಿಸುತ್ತವೆ.

## ನ್ಯಾಯಿಕ ವಿಮರ್ಶಾಧಿಕಾರ

ಸರ್ವೋನ್ನತ ನ್ಯಾಯಾಲಯ ಸಂವಿಧಾನದ ರಕ್ಷಕನಾಗಿದೆ. ಸಂವಿಧಾನದ ಅರ್ಥ ವಿವರಣೆ ನೀಡುವದರೊಂದಿಗೆ ರಾಜ್ಯ ಹಾಗೂ ಕೇಂದ್ರ ಸರಕಾರಗಳು ರಚಿಸುವ ಕಾನೂನುಗಳ ಸಂವಿಧಾನ ಬದ್ಧತೆಯನ್ನು ತೀರ್ಮಾನಿಸುತ್ತದೆ. ಅಧಿಕಾರದ ಮೀತಿ ಮೀರಿ ರಚಿಸಲಾದ ಕಾನೂನುಗಳನ್ನು ಅದು ರದ್ದುಗೊಳಿಸುತ್ತದೆ. ಉದಾ :- ೧೯೭೦ರಲ್ಲಿ ಸಂಸತ್ತು ರಚಿಸಿದ್ದ (೧) ರಾಜಧನ ರದ್ದು ಪಡಿಸುವ ಕಾನೂನು ಹಾಗೂ (೨) ಹದಿನಾಲ್ಕು ಬ್ಯಾಂಕುಗಳ ರಾಷ್ಟ್ರೀಕರಣದ ಕಾನೂನುಗಳನ್ನು ಸರ್ವೋನ್ನತ ನ್ಯಾಯಾಲಯ ಸಂವಿಧಾನ ವಿರೋಧಿಯೆಂದು ಘೋಷಿಸಿ ರದ್ದು ಪಡಿಸಿತು. ಯಾರಾದರು ಅರ್ಜಿ ಸಲ್ಲಿಸಿದರೆ ಮಾತ್ರ ಸರ್ವೋನ್ನತ ನ್ಯಾಯಾಲಯ ನ್ಯಾಯಿಕ ವಿಮರ್ಶಾಧಿಕಾರ ಚಲಾಯಿಸುತ್ತದೆ.

## ನ್ಯಾಯಾಂಗ ನಿರ್ಮಿತ ಕಾನೂನು

ಸರ್ವೋನ್ನತ ನ್ಯಾಯಲಯ ವಿಚಾರಣೆಗೆ ಕೈಗೆತ್ತಿಕೊಂಡ ವಿವಾದಕ್ಕೆ ಸಂಬಂಧ ಪಟ್ಟಂತೆ ಕಾನೂನುಗಳು ಅಸ್ತಿತ್ವದಲ್ಲಿರದಿದ್ದರೆ ನ್ಯಾಯಾದೀಶರು ತಮ್ಮ ಸದಸದ್ವಿವೇಕವನ್ನು ಉಪಯೋಗಿಸಿ ಕಾನೂನು ನಿರ್ಮಿಸಿ ವಿಚಾರಣೆ ನಡೆಸುವದ-ರೊಂದಿಗೆ ತೀರ್ಪು ನೀಡುತ್ತಾರೆ. ಸರ್ವೋನ್ನತ ನ್ಯಾಯಾಲಯ ಇಂಥ ಸಂದರ್ಭದಲ್ಲಿ ನಿರ್ಮಿಸಿದ ಕಾನೂನಿಗೆ ನ್ಯಾಯಾಂಗ (ನ್ಯಾಯಾಧೀಶ) ನಿರ್ಮಿತ ಕಾನೂನು ಎಂದು ಕರೆಯಲಾಗುತ್ತದೆ. ಸಂಸತ್ತು ರಚಿಸಿದ ಕಾನೂನಿಗೆ ಸಮಾನವಾದ ಸ್ಥಾನ ಅಂಥ ಕಾನೂನಿಗಿದೆ.

## ರಾಜ್ಯ ನ್ಯಾಯಾಂಗ

ಇತರ ಸಂಯುಕ್ತ (ಒಕ್ಕೂಟ) ಪದ್ಧತಿಯ ದೇಶಗಳಲ್ಲಿರುವಂತೆ ಭಾರತದಲ್ಲಿ ರಾಜ್ಯಗಳು ತಮ್ಮದೇ ಆದ ಸ್ವತಂತ್ರ ನ್ಯಾಯಿಕ ವ್ಯವಸ್ಥೆ ಹೊಂದಿರುವದಿಲ್ಲ. ರಾಜ್ಯ ನ್ಯಾಯಾಂಗವು ಸರ್ವೋನ್ನತ ನ್ಯಾಯಾಲಯದ ಅಧೀನತೆಯಲ್ಲಿ ಕಾರ್ಯ

ನಿರ್ವಹಿಸುತ್ತದೆ. ರಾಜ್ಯಗಳಲ್ಲಿ ಉಚ್ಚನ್ಯಾಯಾಲಯ (ಹೈಕೋರ್ಟ್), ಜಿಲ್ಲಾ ಹಾಗೂ ಶೆಶನ್ಸ್(ಸತ್ರ) ನ್ಯಾಯಾಲಯಗಳು ಹಾಗೂ ಅಧೀನ ನ್ಯಾಯಾಲಯಗಳು ಕಾರ್ಯ ನಿರ್ವಹಿಸುತ್ತವೆ.

### ✸ ಉಚ್ಚನ್ಯಾಯಾಲಯ

ಸಾಮಾನ್ಯವಾಗಿ ಪ್ರತಿಯೊಂದು ರಾಜ್ಯದಲ್ಲಿ ಒಂದು ಉಚ್ಚನ್ಯಾಯಾಲಯ ಇರುತ್ತದೆ. ಸಣ್ಣ ಪುಟ್ಟ ರಾಜ್ಯಗಳಿಗೆ ಪ್ರತ್ಯೇಕ ಉಚ್ಚ ನ್ಯಾಯಾಲಯವಿರುವದಿಲ್ಲ. ಉದಾ:- ಗೋವಾದಲ್ಲಿ ಮುಂಬಯಿ ಉಚ್ಚ ನ್ಯಾಯಾಲಯದ ಒಂದು ಪೀಠ ಕಾರ್ಯ ನಿರ್ವಹಿಸುತ್ತದೆ. ಪಂಜಾಬ್ ಮತ್ತು ಹರಿಯಾಣ ರಾಜ್ಯಗಳಿಗೆ ಒಂದೇ ಉಚ್ಚ ನ್ಯಾಯಾಲಯವಿದೆ. ಅಸ್ಸಾಂ, ಮಣಿಪುರ, ಮೇಘಾಲಯ, ತ್ರಿಪುರ, ನ್ಯಾಗಾಲ್ಯಾಂಡ್, ಮಿಜೋರಾಂ ಹಾಗೂ ಅರುಣಾಚಲ ಪ್ರದೇಶ ಈ ಸಪ್ತ ಸೋದರಿ ರಾಜ್ಯಗಳಿಗೆ ಒಂದೇ ಉಚ್ಚ ನ್ಯಾಯಾಲಯವಿದೆ.

### ರಚನೆ

ಉಚ್ಚನ್ಯಾಯಾಲಯವು ಒಬ್ಬ ಮುಖ್ಯ ನ್ಯಾಯಾಧೀಶ ಹಾಗೂ ಹಲವು ನ್ಯಾಯಾಧೀಶರನ್ನು ಒಳಗೊಂಡಿರುತ್ತದೆ. ಪ್ರಕರಣಗಳ ಸಂಖ್ಯೆಯ ಆಧಾರದ ಮೇಲೆ ನ್ಯಾಯಾಧೀಶರ ಸಂಖ್ಯೆಯನ್ನು ನಿಗದಿ ಗೊಳಿಸಲಾಗುತ್ತದೆ.ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿಗೆ ಹೆಚ್ಚುವರಿ ನ್ಯಾಯಾಧೀಶರನ್ನು ನೇಮಿಸಲಾಗುತ್ತದೆ. ಸಂವಿಧಾನದ ೨೧೬ ನೇ ಕಲಮಿನ ಪ್ರಕಾರ ರಾಷ್ಟ್ರಪತಿಯವರು ಉಚ್ಚನ್ಯಾಯಾಲಯದ ನ್ಯಾಯಾಧೀಶರನ್ನು ನೇಮಕ ಮಾಡುತ್ತಾರೆ.

### ಅರ್ಹತೆಗಳು

ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಕೆಳಗೆ ವಿವರಿಸಲಾದ ಅರ್ಹತೆಗಳನ್ನು ಹೊಂದಿರಬೇಕು.

೧. ಭಾರತದ ಪ್ರಜೆಯಾಗಿರಬೇಕು.

೨. ಅಧೀನ ನ್ಯಾಯಾಲಯಗಳಲ್ಲಿ 5 ವರ್ಷಗಳವರೆಗೆ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿರಬೇಕು. ಅಥವಾ

೩. ಒಂದು ಅಥವಾ ಹೆಚ್ಚು ಉಚ್ಚ ನ್ಯಾಯಾಲಯಗಳಲ್ಲಿ ಕನಿಷ್ಟ ಹತ್ತು ವರ್ಷಗಳವರೆಗೆ ವಕೀಲರಾಗಿ ಕಾರ್ಯ ನಿರ್ವಹಿಸಿರಬೇಕು. ಅಥವಾ

೪. ರಾಷ್ಟ್ರ ಪತಿಯವರ ದೃಷ್ಟಿಯಲ್ಲಿ ಕಾನೂನಿನ ಪರಿಣತನಾಗಿರಬೇಕು.

## ನೇಮಕಾತಿ

ಸಂಬಂಧಿಸಿದ ರಾಜ್ಯದ ರಾಜ್ಯಪಾಲರು ಹಾಗೂ ಸರ್ವೋನ್ನತ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರೊಂದಿಗೆ ಸಮಾಲೋಚಿಸಿ ರಾಷ್ಟ್ರಪತಿಯವರು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರನ್ನು ನೇಮಕ ಮಾಡುತ್ತಾರೆ. ಇತರ ನ್ಯಾಯಾಧೀಶರನ್ನು ಸರ್ವೋನ್ನತ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿ ಹಾಗೂ ಸಂಬಂಧಿಸಿದ ರಾಜ್ಯದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರೊಡನೆ ಸಮಾಲೋಚನೆ ನಡೆಸಿದ ನಂತರ ರಾಷ್ಟ್ರಪತಿಯವರು ನೇಮಕ ಮಾಡುತ್ತಾರೆ.

## ಪ್ರಮಾಣ ವಚನ

ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸಲು ಪಾರಂಭಿಸುವ ಮೊದಲು ನಿಯೋಜಿತ ನ್ಯಾಯಾಧೀಶರು ರಾಜ್ಯಪಾಲರೆದುರು ಸಂವಿಧಾನದನ್ವಯ ಕಾರ್ಯ ನಿರ್ವಹಿಸುವದಾಗಿ ಹಾಗೂ ಸಂವಿಧಾನವನ್ನು ರಕ್ಷಿಸುವದಾಗಿ ಪ್ರಮಾಣ ವಚನ ಸ್ವೀಕರಿಸಬೇಕಾಗುತ್ತದೆ.

## ಅಧಿಕಾರದ ಅವಧಿ

ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ೬೨ ವರ್ಷ ವಯಸ್ಸಾಗುವವರೆಗೆ ಅಧಿಕಾರದಲ್ಲಿ ಮುಂದುವರೆಯುತ್ತಾರೆ. ನಿವೃತ್ತಿ ವಯಸ್ಸಿಗೆ ಮೊದಲೇ ರಾಷ್ಟ್ರಪತಿಯವರಿಗೆ ರಾಜೀನಾಮೆ ಪತ್ರ ಸಲ್ಲಿಸಿ ಬಿಡುಗಡೆ ಹೊಂದುವ ಅವಕಾಶವಿದೆ.

## ವರ್ಗಾವಣೆ

ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಹಾಗೂ ಇತರ ನ್ಯಾಯಾಧೀಶರನ್ನು ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ವರ್ಗಾವಣೆ ಮಾಡುವ ಅಧಿಕಾರ ರಾಷ್ಟ್ರಪತಿಯವರಿಗಿದೆ.

## ವೇತನ

ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಹಾಗೂ ಇತರ ನ್ಯಾಯಾಧೀಶರ ವೇತನವನ್ನು ಸಂಸತ್ತು ನಿಗದಿಪಡಿಸುತ್ತದೆ. ನ್ಯಾಯಾಧೀಶರ ವೇತನವನ್ನು ಅವರ ಅಧಿಕಾರದ ಅವಧಿಯಲ್ಲಿ ಕಡಿಮೆ ಮಾಡಲು ಅವಕಾಶವಿಲ್ಲ. ಸದ್ಯ ಮುಖ್ಯ ನ್ಯಾಯಮೂರ್ತಿಯವರು ರೂ. ೩೦,೦೦೦ ಹಾಗೂ ಇತರ ನ್ಯಾಯ ಮೂರ್ತಿಗಳು ರೂ.೨೬,೦೦೦ ವೇತನ ಪಡೆಯುತ್ತಾರೆ. ವೇತನದೊಂದಿಗೆ ಬಾಡಿಗೆ ರಹಿತ ಮನೆ, ಉಚಿತ ಸಾರಿಗೆ, ವಿದ್ಯುತ್ತು,ನೀರು, ಟೆಲಿಫೋನ್ ಮುಂತಾದ ಸೌಲಭ್ಯಗಳನ್ನು ಹೊಂದಿರುತ್ತಾರೆ.

## ಪದಚ್ಯುತಿ

ಉಚ್ಚ ನ್ಯಾಯಾಲಯ ಹಾಗೂ ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರ ವಜಾವಿಧಾನ ಒಂದೇ ಆಗಿದೆ. ಅಸಭ್ಯ ನಡವಳಿಕೆ ಅಥವಾ ಅದಕ್ಷ ಕಾರ್ಯನಿರ್ವಹಣೆಗಾಗಿ ಅವರನ್ನು ವಜಾ ಮಾಡಬಹುದು. ಲೋಕಸಭೆಯ ೧೦೦ ಸದಸ್ಯರ ಅಥವಾ ರಾಜ್ಯಸಭೆಯ ೫೦ ಸದಸ್ಯರ ಸಹಿ ಹೊಂದಿದ ನಿರ್ಣಯವನ್ನು ರಾಷ್ಟ್ರಪತಿಯವರ ಹೆಸರಿನಲ್ಲಿ ತಯಾರಿಸಿ ಸದನದ ಅಧ್ಯಕ್ಷರಿಗೆ ಸಲ್ಲಿಸಬೇಕು. ವಜಾ ನಿರ್ಣಯಕ್ಕೆ ಎರಡೂ ಸದನಗಳಲ್ಲಿ ೨/೩ ಬಹುಮತದ ಬೆಂಬಲ ದೊರೆತರೆ ರಾಷ್ಟ್ರಪತಿಯವರು ಅಂಥ ನ್ಯಾಯಾಧೀಶರನ್ನು ವಜಾಮಾಡುತ್ತಾರೆ.

## ನ್ಯಾಯಾಂಗದ (ನ್ಯಾಯಾಧೀಶರ) ಸ್ವಾತಂತ್ರ್ಯ

ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಯಾರದೇ ಭಿಡೆ ಮುರವತ್ತುಗಳಿಗೆ ಒಳಗಾಗದೇ ಸ್ವತಂತ್ರ ಹಾಗೂ ನಿಷ್ಪಕ್ಷಪಾತವಾಗಿ ಕಾರ್ಯ ನಿರ್ವಹಿಸಲೆಂದು ಸಂವಿಧಾನ ನಿರ್ಮಾಪಕರು ಕೆಳಕಂಡ ಅಂಶಗಳನ್ನು ನಿರ್ದಿಷ್ಟಪಡಿಸಿದ್ದಾರೆ.

೧. ನಿಷ್ಪಕ್ಷಪಾತ ನೇಮಕಕ್ಕೆ ಅವಕಾಶ ನೀಡುವ ನ್ಯಾಯಾಧೀಶರ ಹುದ್ದೆಯ ಅರ್ಹತೆಗಳು.

೨. ರಾಜ್ಯಪಾಲರು, ಸರ್ವೋನ್ನತ ನ್ಯಾಯಾಲಯ ಹಾಗೂ ಸಂಬಂಧಿಸಿದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರೊಂದಿಗೆ ಸಮಾಲೋಚನೆಯ ನಂತರ ನೇಮಕ ಮಾಡುವದು.

೩. ಕ್ಲಿಷ್ಟಕರ ಪದಚ್ಯುತಿ ವಿಧಾನ.

೪. ನ್ಯಾಯಾಧೀಶರಿಗೆ ಅನನುಕೂಲವಾಗುವಂತೆ ವೇತನ ನಿಗದಿಗೊಳಿಸದಂತೆ ನಿರ್ಬಂಧ.

೫. ನ್ಯಾಯಾಧೀಶರ ವೇತನ ಹಾಗೂ ಆಡಳಿತ ವೆಚ್ಚಕ್ಕೆ ಸಂಸತ್ತಿನ /ಶಾಸನಾಂಗದ ಅನುಮತಿ ಅವಶ್ಯವಿಲ್ಲದಿರುವದು. ಸಂಚಿತ ನಿಧಿಯಿಂದ ವೇತನ ಹಾಗೂ ಆಡಳಿತ ವೆಚ್ಚ ಭರಿಸುವ ಅವಕಾಶ.

೬. ನ್ಯಾಯಾಧೀಶರ ಕಾರ್ಯನಿರ್ವಹಣೆಯ ಬಗ್ಗೆ ಶಾಸನಾಂಗ ಚರ್ಚಿಸುವಂತಿಲ್ಲ. ಪದಚ್ಯುತಿಯ ಸಂದರ್ಭದಲ್ಲಿ ಮಾತ್ರ ಅಂಥ ಅವಕಾಶವಿರುತ್ತದೆ.

೭. ನಿವೃತ್ತಿಯ ನಂತರ ವಕೀಲವೃತ್ತಿ ಮಾಡುವ ಬಗ್ಗೆ ನಿರ್ಬಂಧ ವಿಧಿಸಲಾಗಿದೆ. ತಾವು ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸಿದ ಉಚ್ಚನ್ಯಾಯಾಲಯಗಳನ್ನು ಹೊರತುಪಡಿಸಿ ಇತರ ಉಚ್ಚನ್ಯಾಯಾಲಯಗಳಲ್ಲಿ ಅಥವಾ ಸರ್ವೋನ್ನತ ನ್ಯಾಯಾಲಯದಲ್ಲಿ ಮಾತ್ರ ವಕೀಲರಾಗಿ ಕೆಲಸ ಮಾಡಬಹುದು. ನ್ಯಾಯಾಂಗ ವಿಚಾರಣಾ ಆಯೋಗದ ಅಧ್ಯಕ್ಷ ಅಥವಾ ಸದಸ್ಯರಾಗಿ ನೇಮಕ ಹೊಂದುವದಕ್ಕೆ ನಿರ್ಬಂಧವಿಲ್ಲ.

## ಕಾರ್ಯವ್ಯಾಪ್ತಿ

ಸಾಮಾನ್ಯವಾಗಿ ಉಚ್ಚನ್ಯಾಯಾಲಯದ ಅಧಿಕಾರ ವ್ಯಾಪ್ತಿ ಅದು ಕಾರ್ಯ ನಿರ್ವಹಿಸುವ ರಾಜ್ಯದ ಕಾರ್ಯವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಉಚ್ಚನ್ಯಾಯಾಲಯಗಳು (೧) ಪ್ರಾರಂಭಿಕ ಅಧಿಕಾರ ವ್ಯಾಪ್ತಿ, (೨)ಮೇಲ್ಮನವಿ ಅಧಿಕಾರ ವ್ಯಾಪ್ತಿ ಹೊಂದಿರುತ್ತವೆ.

## ೧. ಪ್ರಾರಂಭಿಕ ಅಧಿಕಾರ ವ್ಯಾಪ್ತಿ

ಕೆಳಕಂಡ ಕಾರ್ಯಗಳು ಉಚ್ಚ ನ್ಯಾಯಾಲಯದ ಪ್ರಾರಂಭಿಕ ಅಧಿಕಾರ ವ್ಯಾಪ್ತಿಗೆ ಒಳಪಡುತ್ತವೆ.

**i. ಮೂಲಭೂತ ಹಕ್ಕುಗಳ ರಕ್ಷಣೆ :-** ಸಂವಿಧಾನದ ಮೂರನೇ ಅಧ್ಯಾಯದಲ್ಲಿರುವ ಮೂಲಭೂತ ಹಕ್ಕುಗಳ ರಕ್ಷಣೆಯ ಜವಾಬ್ದಾರಿ ಸರ್ವೋನ್ನತ ನ್ಯಾಯಾಲಯದೊಂದಿಗೆ ಉಚ್ಚ ನ್ಯಾಯಾಲಯಗಳಿಗೂ ಇದೆ. ಕೇಂದ್ರ ಅಥವಾ ರಾಜ್ಯಸರಕಾರಗಳಿಂದ ಅಥವಾ ಇತರ ವ್ಯಕ್ತಿಗಳಿಂದ ಹಕ್ಕುಗಳಿಗೆ ಚ್ಯುತಿಯಾದಾಗ ಸಂಬಂಧಪಟ್ಟ ವ್ಯಕ್ತಿ ಉಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆ ದಾಖಲು ಮಾಡಬಹುದು. ಸಂವಿಧಾನದ 226ನೇ ಕಲಮಿನ ಪ್ರಕಾರ ಉಚ್ಚ ನ್ಯಾಯಾಲಯ (೧) ಆಸಾಮಿ ಹಾಜರು (ಹೇಬಿಯಸ್ ಕಾರ್ಪಸ್) ಆಜ್ಞೆ, (೨)ಪರಮಾದೇಶ (ಮ್ಯಾಂಡಮಸ್), (೩) ಪ್ರತಿಷೇಧ ಲೇಖ(ಪ್ರಾಹಿಬಿಷನ್), (೪) ಉತ್ಪ್ರೇಷಣಲೇಖ(ಸರ್ಟಿಯೋರಿರಿ) ಹಾಗೂ ಅಧಿಕಾರ ಪ್ರಶ್ನೆ (ಕೋವಾರಂಟೋ) ರಿಟ್‌ಗಳ ಅಧಾರದ ಮೇಲೆ ಮೂಲಭೂತ ಹಕ್ಕುಗಳನ್ನು ರಕ್ಷಿಸುತ್ತದೆ.

**ii. ಸಂವಿಧಾನದ ಅರ್ಥ ವಿವರಣೆ :-** ಸರ್ವೋನ್ನತ ನ್ಯಾಯಾಲಯಕ್ಕಿರುವಂತೆ ಉಚ್ಚ ನ್ಯಾಯಾಲಯಗಳಿಗೂ ಸಂವಿಧಾನದ ಅರ್ಥವಿವರಣೆ ನೀಡುವ ಅಧಿಕಾರವಿದೆ.ಈ ವಿಷಯದಲ್ಲಿ ಕೊನೆಯ ಅಧಿಕಾರ ಸರ್ವೋನ್ನತ ನ್ಯಾಯಾಲಯದ್ದು. ವಿವಾದಗಳ ವಿಚಾರಣೆ ನಡೆಸುವಾಗ ಅಗತ್ಯವಾದರೆ ಸಂವಿಧಾನದ ಅರ್ಥವಿವರಣೆ ನೀಡಿ ತೀರ್ಮಾನಿಸಬೇಕಾಗುತ್ತದೆ. ಅಧೀನ ನ್ಯಾಯಾಲಯಗಳಲ್ಲಿ ವಿಚಾರಣೆ ನಡೆಯುತ್ತಿರುವ ಪ್ರಕರಣದ ಇತ್ಯರ್ಥಕ್ಕಾಗಿ ಸಂವಿಧಾನದ ಅರ್ಥವಿವರಣೆಯ ಅಗತ್ಯತೆ ಕಂಡು ಬಂದರೆ ಆ ಪ್ರಕರಣವನ್ನು ಉಚ್ಚ ನ್ಯಾಯಾಲಯ ತನ್ನೆಡೆಗೆ ವರ್ಗಾಯಿಸಿಕೊಂಡು ಮುಂದಿನ ಕ್ರಮ ಜರುಗಿಸುತ್ತದೆ.

## ಮೇಲ್ಮನವಿ ಅಧಿಕಾರ ವ್ಯಾಪ್ತಿ

ಅಧೀನ ನ್ಯಾಯಾಲಯಗಳು ಹಾಗೂ ಉಚ್ಚನ್ಯಾಯಾಲಯದ ಏಕ ವ್ಯಕ್ತಿ ನ್ಯಾಯ ಪೀಠದ ನಿರ್ಣಯದ ವಿರುದ್ಧ ಮೇಲ್ಮನವಿ ಸ್ವೀಕರಿಸುವ ಅಧಿಕಾರ ಉಚ್ಚ-ನ್ಯಾಯಾಲಯಗಳಿಗಿದೆ. ಉಚ್ಚನ್ಯಾಯಾಲಯದ ಮೇಲ್ಮನವಿ ಅಧಿಕಾರ ವ್ಯಾಪ್ತಿ ಕೆಳಗಿನಂತಿದೆ.

## 1. ನಾಗರಿಕ (ಸಿವಿಲ್) ವಿವಾದಗಳು

ನಾಗರಿಕ ವಿವಾದಗಳಿಗೆ ಸಂಬಂಧಿಸಿದಂತೆ ಜಿಲ್ಲಾ ನ್ಯಾಯಾಲಯಗಳು ಮತ್ತು ಅಧೀನ ನ್ಯಾಯಾಲಯಗಳು ನೀಡುವ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು. ಆದರೆ ಮೊಕದ್ದಮೆಗೆ ಸಂಬಂಧಿಸಿದಂತೆ ಕಾನೂನಿನ ವಿಶ್ಲೇಷಣೆ ಅಗತ್ಯವಾಗಿರಬೇಕು.

## ii. ಅಪರಾಧಿ (ಕ್ರಿಮಿನಲ್) ವಿವಾದಗಳು

ಜಿಲ್ಲಾ ಮತ್ತು ಸಷೆನ್ಸ್ (ಸತ್ರ) ನ್ಯಾಯಾಲಯ ೭ ವರ್ಷಗಳಿಗೆ ಮೇಲ್ಪಟ್ಟು ಶಿಕ್ಷೆ ವಿಧಿಸಿದರೆ ಆದರ ವಿರುದ್ಧ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು. ನ್ಯಾಯಿಕ ದಂಡಾಧಿಕಾರಿ (ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್) ಅಥವಾ ಸಹಾಯಕ ಸಷೆನ್ಸ್ ನ್ಯಾಯಾಧೀಶರ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಬಹುದು.

**ದಾಖಲೆಗಳ ನ್ಯಾಯಾಲಯ :** ಸರ್ವೋನ್ನತ ನ್ಯಾಯಾಲಯದಂತೆ ಉಚ್ಚನ್ಯಾಯಾಲಯ ಕೂಡ ದಾಖಲೆಗಳ ನ್ಯಾಯಾಲಯವಾಗಿದೆ. ಉಚ್ಚನ್ಯಾಯಾಲಯದ ತೀರ್ಪುಗಳು ಪ್ರಜ್ಞಾಪೂರ್ವಕ ದಾಖಲೆಗಳೆಂದು ಪರಿಗಣಿಸಲ್ಪಡುತ್ತವೆ. ಅವುಗಳನ್ನು ಅಧೀನ ನ್ಯಾಯಾಲಯಗಳಲ್ಲಿ ಹಾಜರು ಪಡಿಸಬಹುದು. ಉಚ್ಚನ್ಯಾಯಾಲಯದ ತೀರ್ಪುಗಳನ್ನು ಆದಾರವಾಗಿಟ್ಟುಕೊಂಡು ಅಧೀನ ನ್ಯಾಯಾಲಯಗಳು ವಿವಾದ ತೀರ್ಮಾನಿಸುತ್ತವೆ.

**ಮೇಲ್ವಿಚಾರಣಾ ನ್ಯಾಯಾಲಯ :** ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಎಲ್ಲ ತೀರ್ಪು ನ್ಯಾಯಾಲಯಗಳ ಹಾಗೂ ನ್ಯಾಯ ಮಂಡಳಿಗಳ (ಮಿಲಿಟರಿ ನ್ಯಾಯಾಲಯಗಳನ್ನು ಹೊರತುಪಡಿಸಿ) ಕಾರ್ಯ ನಿರ್ವಹಣೆಯನ್ನು ಪರಿಶೀಲಿಸುವ, ಅವುಗಳಿಂದ ಅಗತ್ಯವಾದ ವಿವರಣೆ ಪಡೆಯುವ ಲೆಖ್ಖ ಪತ್ರ ನಿರ್ವಹಣೆ ಬಗ್ಗೆ ನಿರ್ದೇಶನ ನೀಡುವ ಅಧಿಕಾರ ಉಚ್ಚ ನ್ಯಾಯಾಲಯಕ್ಕಿದೆ. ಅಧಿಕಾರ ವ್ಯಾಪ್ತಿ ಮೀರಿದ ಅಧೀನ ನ್ಯಾಯಾಲಯಗಳ (ವಿಷಯದಲ್ಲಿ) ಕಾರ್ಯದಲ್ಲಿ ಮಧ್ಯ ಪ್ರವೇಶಿಸಿ ಸರಿಪಡಿಸುವ ಅಧಿಕಾರ ಉಚ್ಚನ್ಯಾಯಾಲಯಕ್ಕಿದೆ.

**ಅಧೀನ ನ್ಯಾಯಾಧೀಶರ ನೇಮಕ ಹಾಗೂ ನಿಯಂತ್ರಣ :-** ಜಿಲ್ಲಾ ನ್ಯಾಯಾಧೀಶರನ್ನು ಹೊರತುಪಡಿಸಿ ಇತರ ಅಧೀನ ನ್ಯಾಯಾಲಯಗಳ ನ್ಯಾಯಾಧೀಶರಿಗೆ ಬಡ್ತಿ ಮತ್ತು ರಜೆ ನೀಡುವ ಅಧಿಕಾರ ಉಚ್ಚನ್ಯಾಯಾಲಯಕ್ಕಿದೆ. ಜಿಲ್ಲಾ ನ್ಯಾಯಾಧೀಶರ ನೇಮಕ, ವರ್ಗಾವಣೆ ಹಾಗೂ ಬಡ್ತಿ ಸಂಬಂಧದಲ್ಲಿ ರಾಜ್ಯಪಾಲರು ಉಚ್ಚ ನ್ಯಾಯಾಲಯದೊಡನೆ ಸಮಾಲೋಚನೆ ನಡೆಸುತ್ತಾರೆ.

ಸಿಬ್ಬಂದಿ ನೇಮಕಾತಿ :- ಉಚ್ಚ ನ್ಯಾಯಾಲಯದ ಕಾರ್ಯನಿರ್ವಹಣೆಗೆ ಅಗತ್ಯವಾದ ಸಿಬ್ಬಂದಿಯನ್ನು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ನೇಮಕ ಮಾಡುತ್ತಾರೆ. ಸಿಬ್ಬಂದಿ ನೇಮಕಾತಿಗಾಗಿ ಅಗತ್ಯವಿರುವ ನಿಯಮಗಳನ್ನು ರಾಜ್ಯಪಾಲರು ರಾಜ್ಯ ಲೋಕಸೇವಾ ಆಯೋಗದೊಂದಿಗೆ ಸಮಾಲೋಚನೆ ನಡೆಸಿ ರಚಿಸುತ್ತಾರೆ. ನ್ಯಾಯಾಲಯದ ನಿಯಮಾವಳಿಗಳನ್ನು ಪಾಲಿಸದ ಅಧಿಕಾರಿಗಳು ಹಾಗೂ ಸಿಬ್ಬಂದಿಯನ್ನು ಮುಖ್ಯ ನ್ಯಾಯಧೀಶರು ವಜಾ ಮಾಡುತ್ತಾರೆ.

## ✸ ಅಧೀನ ನ್ಯಾಯಾಲಯಗಳು

ಮೂಲಭೂತ ಶಾಸನವಾದ ಸಂವಿಧಾನವು ಸಾಮಾನ್ಯವಾಗಿ ಅಧೀನ ನ್ಯಾಯಾಲಯಗಳ ಬಗೆಗೆ ವಿವರಣೆ ನೀಡುವದಿಲ್ಲ. ಬ್ರಿಟೀಶ್ ಭಾರತದಲ್ಲಿ ಜಾರಿಯಲ್ಲಿದ್ದ ಕೆಲ ವಿಶಿಷ್ಟ ಪದ್ಧತಿಗಳಿಂದಾಗಿ ನಮ್ಮ ಸಂವಿಧಾನವು ಅಧೀನ ನ್ಯಾಯಾಲಯಗಳ ಬಗೆಗೆ ವಿವರಣೆ ನೀಡುವದು ಅಗತ್ಯವಾಯಿತು.

ಬ್ರಿಟಿಶ್ ಆಡಳಿತಲ್ಲಿ ಜಿಲ್ಲಾ ಮಟ್ಟದವರೆಗೆ ಕಾರ್ಯಾಂಗ ಹಾಗೂ ನ್ಯಾಯಂಗದ ಅಧಿಕಾರಗಳನ್ನು ಒಬ್ಬನಿಗೇ ನೀಡಲಾಗಿತ್ತು. ಜಿಲ್ಲಾಧಿಕಾರಿ (ಕಲೆಕ್ಟರ್) ಜಿಲ್ಲಾ ನ್ಯಾಯಾಧೀಶನಾಗಿದ್ದ, ಸಹಾಯಕ ಕಮೀಶನರ್ ಉಪ ವಿಭಾಗೀಯ ನ್ಯಾಯಾಧೀಶನಾಗಿದ್ದ, ಹಾಗೂ ಮಾಮಲೇದಾರ (ತಹಶಿಲ್ದಾರ) ತಾಲೂಕಾ ನ್ಯಾಯಾಧೀಶನಾಗಿದ್ದ, ಆಯಾ ಹಂತಗಳಲ್ಲಿ ಈ ಅಧಿಕಾರಿಗಳ ಸರ್ವಾಧಿಕಾರಿಗಳಾಗಿ- ದ್ದರು. ಸ್ವಾತಂತ್ರ್ಯ ಹೋರಾಟದ ಸಂಧರ್ಭದಲ್ಲಿ ಈ ವ್ಯವಸ್ಥೆಯ ದುಷ್ಪರಿಣಾಮ ಗಳನ್ನು ಸ್ವಾತಂತ್ರ್ಯ ಹೋರಾಟಗಾರರು ಅನುಭವಿಸಿದ್ದರು. ಜಿಲ್ಲಾ ಆಡಳಿತ (ಕಾರ್ಯಾಂಗ)ದ ಮುಖ್ಯಸ್ಥನಾಗಿ ಕಲೆಕ್ಟರ್ ಸ್ವಾತಂತ್ರ್ಯ ಹೋರಾಟಗಾರರನ್ನು ಕಾನೂನಿಗೆ ವಿರುದ್ಧವಾಗಿ ಬಂಧಿಸಿ ಚಿತ್ರಹಿಂಸೆಗೆ ಗುರಿಪಡಿಸುತ್ತಿದ್ದ. ಜಿಲ್ಲಾ ನ್ಯಾಯಧೀಶನಾಗಿ ವಿಚಾರಣೆ ನಡೆಸಿ ನಿರಪರಾಧಿಗಳಾದ ಸ್ವಾತಂತ್ರ್ಯ ಹೋರಾಟಗಾರರಿಗೆ ಕಠಿಣ ಶಿಕ್ಷೆ ವಿಧಿಸುತ್ತಿದ್ದ. ಅಪರಾಧಿಯೇ ನ್ಯಾಯಾಧೀಶನಾಗಿ ನಿರಪರಾಧಿಗಳನ್ನು ಶಿಕ್ಷಿಸುವ ವಿಚಿತ್ರ ವ್ಯವಸ್ಥೆ ಬ್ರಿಟಿಶ್ ಆಳ್ವಿಕೆಯಲ್ಲಿ ಜಾರಿಯಲ್ಲಿಯಲ್ಲಿತ್ತು. ಈ ವ್ಯವಸ್ಥೆಯ ದುಷ್ಪರಿಣಾಮ ಅನುಭವಿಸಿದವರು ಬಹುತೇಕವಾಗಿ ಸಂವಿಧಾನ ರಚನಾ ಸಭೆಯ ಸದಸ್ಯರಾಗಿದ್ದರು. ಆದ್ದರಿಂದ ನ್ಯಾಯಾಂಗವನ್ನು ಕಾರ್ಯಾಂಗದಿಂದ ಬೇರ್ಪಡಿಸುವ ಅಂಶವನ್ನು ನೀತಿ ನಿರ್ದೇಶಕ ತತ್ವಗಳಲ್ಲಿ ಅಳವಡಿಸಲಾಗಿದೆ.

ಅಧೀನ ನ್ಯಾಯಲಯಗಳ ವ್ಯವಸ್ಥೆ ಕುರಿತ ಎರಡು ಬಗೆಯ ಉದ್ದೇಶಗಳನ್ನು ಸಂವಿಧಾನ ಈಡೇರಿಸಿದೆ. ಮೊದಲನೆಯದಾಗಿ ಜಿಲ್ಲಾ ಮತ್ತು ಅಧೀನ ನ್ಯಾಯಾಲಯ-ಗಳ ನ್ಯಾಯಾಧೀಶರ ಅರ್ಹತೆ ಮತ್ತು ನೇಮಕ ವಿಧಾನಗಳನ್ನು ನಿರ್ದಿಷ್ಟ ಪಡಿಸುವದು

ಎರಡನೆಯದಾಗಿ ಇಡೀ ನಾಗರಿಕ ನ್ಯಾಯಾಂಗ ವ್ಯವಸ್ಥೆಯನ್ನು ಉಚ್ಚ ನ್ಯಾಯಾಲಯದ ಉಸ್ತುವಾರಿ ಮತ್ತು ನಿಯಂತ್ರಣಕ್ಕೆ ಒಳಪಡಿಸುವದು, ಅಧೀನ ನ್ಯಾಯಾಲಯಗಳು ಹೆಚ್ಚಿನ ಪ್ರಮಾಣದಲ್ಲಿ ಜನ ಸಂಪರ್ಕಕ್ಕೆ ಬರುವದರಿಂದ ಅವುಗಳು ಸ್ವತಂತ್ರ ಹಾಗು ನಿಷ್ಪಕ್ಷಪಾತವಾಗಿ ಕಾರ್ಯ ನಿರ್ವಹಿಸುವಂತೆ ಮಾಡುವದು ಮತ್ತು ಆ ಮೂಲಕ ಜನರಲ್ಲಿ ನ್ಯಾಯಾಂಗದ ಬಗ್ಗೆ ಸದಭಿಪ್ರಾಯ ಹಾಗೂ ವಿಶ್ವಾಸ ಹುಟ್ಟುವಂತೆ ಮಾಡುವದು ಆಗತ್ಯವಾಗಿತ್ತು. ಆದ್ದರಿಂದ ಅಧೀನ ನ್ಯಾಯಾಲಯಗಳ ಬಗೆಗಿನ ವಿವರಗಳನ್ನು ಸಂವಿಧಾನದಲ್ಲಿ ಅಳವಡಿಸಲಾಗಿದೆ.

ಸಂವಿಧಾನವು ಆಧೀನ ನ್ಯಾಯಾಲಯಗಳಲ್ಲಿ ಎರಡು ಹಂತಗಳನ್ನು ಕಲ್ಪಿಸಿದೆ. ಅವುಗಳೆಂದರೆ ಜಿಲ್ಲಾ ನ್ಯಾಯಾಲಯಗಳು ಮತ್ತು ಕೆಳಹಂತದ ನ್ಯಾಯಾಲಯಗಳು. ಜಿಲ್ಲಾ ನ್ಯಾಯಾಲಯಗಳ ನ್ಯಾಯಾಧೀಶರನ್ನು ರಾಜ್ಯಪಾಲರು ಉಚ್ಚ ನ್ಯಾಯಾಲಯ-ದೊಂದಿಗೆ ಸಮಾಲೋಚನೆ ನಡೆಸಿ ನೇಮಕ ಮಾಡುತ್ತಾರೆ. ಜಿಲ್ಲಾ ನ್ಯಾಯಾಧೀಶರ ಕನಿಷ್ಠ ಅರ್ಹತೆಯೆಂದರೆ ೭ ವರ್ಷಗಳವರೆಗೆ ವಕೀಲನಾಗಿ ಕಾರ್ಯ ನಿರ್ವಹಿಸಿರಬೇಕು ಅಥವಾ ಕೇಂದ್ರ ಇಲ್ಲವೇ ರಾಜ್ಯ ಸರಕಾರದ ಉದ್ಯೋಗಿ ಯಾಗಿರಬೇಕು. ನ್ಯಾಯವಾದಿಗಳು (ವಕೀಲರು) ನ್ಯಾಯಾಧೀಶರಾಗಿ ನೇಮಕಗೊಳ್ಳ ಬೇಕಾದರೆ ಉಚ್ಚ ನ್ಯಾಯಾಲಯದ ಶಿಫಾರಸು ಕಡ್ಡಾಯದ್ದಾಗಿದೆ.

ಜಿಲ್ಲಾ ನ್ಯಾಯಾಧೀಶರನ್ನು ಹೊರತು ಪಡಿಸಿ ಇತರ ನ್ಯಾಯಾಧೀಶರು ರಾಜ್ಯ ಪಾಲರಿಂದ ನೇಮಕಗೊಳ್ಳುತ್ತಾರೆ. ಉಚ್ಚ ನ್ಯಾಯಾಲಯ ಹಾಗೂ ರಾಜ್ಯ ಲೋಕ ಸೇವಾ ಆಯೋಗದೊಂದಿಗೆ ಸಮಾಲೋಚನೆ ನಡೆಸಿ ರೂಪಿಸಿಸುವ ನಿಯಮಗಳ ಮೇರೆಗೆ ಅವರ ಆಯ್ಕೆ ನಡೆಯುತ್ತದೆ. ಕರ್ನಾಟಕವನ್ನೊಳಗೊಂಡು ಬಹುತೇಕ ರಾಜ್ಯಗಳಲ್ಲಿ ರಾಜ್ಯ ಲೋಕಸೇವಾ ಆಯೋಗ ಸ್ಪರ್ಧಾತ್ಮಕ ಪರೀಕ್ಷೆ ನಡೆಸುತ್ತದೆ. ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಹಾಜರಾಗುವವರಿಗಾಗಿ ಲೋಕಸೇವಾ ಆಯೋಗ ಕೆಲವು ಕನಿಷ್ಠ ಶೈಕ್ಷಣಿಕ ಹಾಗೂ ವೃತ್ತಿ ನೈಪುಣ್ಯತೆಯ ಅರ್ಹತೆಗಳನ್ನು ನಿಗದಿಪಡಿಸುತ್ತದೆ. ಕನಿಷ್ಠ ಮೂರು ವರ್ಷಗಳವರೆಗೆ ನ್ಯಾಯವಾದಿ (ವಕೀಲ) ಯಾಗಿ ಕೆಲಸ ಮಾಡಿರಬೇಕೆಂಬುದು ಅಂಥ ಒಂದು ನಿಯಮವಾಗಿದೆ. ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನಿರ್ದಿಷ್ಟ ಅವಧಿಯ ತರಬೇತಿ ನೀಡಲಾಗುತ್ತದೆ. ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ ನಂತರ ನ್ಯಾಯಾಧೀಶರಾಗಿ ನೇಮಕ ಮಾಡಲಾಗುತ್ತದೆ.

೨೩೫ನೇ ಕಲಮು ಜಿಲ್ಲಾ ಹಾಗೂ ಅಧೀನ ನ್ಯಾಯಾಲಯಗಳ ಮೇಲೆ ಉಚ್ಚನ್ಯಾಯಾಲಯಕ್ಕೆ ನಿಯಂತ್ರಣಾಧಿಕಾರ ನೀಡುತ್ತದೆ. ಈ ನಿಯಂತ್ರಣವು ಹುದ್ದೆ ನೀಡುವದು, ಪದೋನ್ನತಿ ನೀಡುವದು ಮತ್ತು ರಜೆ ನೀಡುವ ಬಗೆಗಿನದಾಗಿದೆ. ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಆದರೆ ಕ್ರಮಬದ್ಧ ನ್ಯಾಯಾಂಗ ವ್ಯವಸ್ಥೆಯ

ಅಡಿಯಲ್ಲಿ ಬರದ ಇತರ ದಂಡಾಧಿಕಾರಿಗಳಿಗೂ ಈ ನಿಯಮಗಳನ್ನು ಅನ್ವಯಿಸುವಂತೆ ರಾಜ್ಯಪಾಲರು ಆದೇಶ ಮಾಡಬಹುದು.

ಸಣ್ಣಪುಟ್ಟ ಸ್ಥಳೀಯ ವ್ಯತ್ಯಾಸಗಳನ್ನು ಹೊರತುಪಡಿಸಿ ಇಡೀ ದೇಶದಲ್ಲಿ ಅಧೀನ ನ್ಯಾಯಾಲಯಗಳ ರಚನೆ ಹಾಗೂ ಕಾರ್ಯಗಳು ಒಂದೇ ರೀತಿಯಲ್ಲಿವೆ. ನ್ಯಾಯಾಂಗೀಯ ಆಡಳಿತ ವ್ಯವಸ್ಥೆಗಾಗಿ ಪ್ರತಿಯೊಂದು ರಾಜ್ಯವು ಅನೇಕ ಜಿಲ್ಲೆಗಳಾಗಿ ವಿಭಜಿಸಲ್ಪಡುತ್ತದೆ. ಪ್ರತಿ ಜಿಲ್ಲೆಗೆ ಒಬ್ಬ ಜಿಲ್ಲಾ ನ್ಯಾಯಾಧೀಶನಿರುತ್ತಾನೆ. ಅವನ ಅಧೀನತೆಯಲ್ಲಿ ವಿವಿಧ ಹಂತದ ನ್ಯಾಯಾಧೀಶರಿರುತ್ತಾರೆ. ಅಧೀನ ನ್ಯಾಯಾಲಯಗಳನ್ನು (೧)ನಾಗರಿಕ(ಸಿವಿಲ್)ನ್ಯಾಯಾಲಯಗಳುಹಾಗೂ (೨)ಅಪರಾಧೀ (ಕ್ರಿಮಿನಲ್) ನ್ಯಾಯಾಲಯಗಳು ಎಂದು ವರ್ಗೀಕರಿಸಲಾಗುತ್ತದೆ.

### ೧. ನಾಗರಿಕ (ಸಿವಿಲ್) ನ್ಯಾಯಾಲಯಗಳು

ಜಿಲ್ಲಾ ನ್ಯಾಯಾಲಯವು ಜಿಲ್ಲೆಯ ಉನ್ನತ ಸಿವಿಲ್ ನ್ಯಾಯಾಲಯವಾಗಿರುತ್ತದೆ. ಇದು ನ್ಯಾಯ ವಿಚಾರಣೆ ಹಾಗೂ ಆಡಳಿತ ನಿರ್ವಹಣೆ ಹೀಗೆ ಎರಡು ಬಗೆಯ ಕಾರ್ಯ ಗಳನ್ನು ನಿರ್ವಹಿಸುತ್ತದೆ.ನ್ಯಾಯವಿಚಾರಣೆಯ ವಿಷಯದಲ್ಲಿ ಪ್ರಾರಂಭಿಕ ಹಾಗೂ ಮೇಲ್ಮನವಿ ಅಧಿಕಾರಗಳನ್ನು ಹೊಂದಿದೆ. ಜಿಲ್ಲಾ ನ್ಯಾಯಾಲಯದ ಅಧೀನತೆಯಲ್ಲಿ ಸಿವಿಲ್ ಹಾಗೂ ಮುನ್ಸಿಫ್ ನ್ಯಾಯಾಲಯಗಳು ಕಾರ್ಯ ನಿರ್ವಹಿಸುತ್ತವೆ. ನಗರ ಪ್ರದೇಶಗಳಲ್ಲಿ ''ಸಣ್ಣ ಕಾರಣಗಳ ನ್ಯಾಯಾಲಯ''ಗಳಿರುತ್ತವೆ.

### ೨. ಅಪರಾಧೀ (ಕ್ರಿಮಿನಲ್) ನ್ಯಾಯಾಲಯಗಳು

ಪ್ರತಿ ಜಿಲ್ಲೆಗೆ ಒಂದರಂತೆ ಸತ್ರ (ಸೆಷನ್ಸ್) ನ್ಯಾಯಾಲಯವಿರುತ್ತದೆ. ಇದು ಜಿಲ್ಲೆಯಲ್ಲಿ ಅಪರಾಧೀ ಪ್ರಕರಣಗಳ ವಿಚಾರಣೆ ನಡೆಸುತ್ತದೆ.ಸೆಷೆನ್ಸ್ ನ್ಯಾಯಾಲಯ ಅಪರಾಧಿಗಳಿಗೆ ವಿಧಿಸಿದ ಮರಣದಂಡನೆ ನ್ಯಾಯಾಲಯದಿಂದ ದೃಢೀಕರಿಸಲ್ಪಟ್ಟರೆ ಮಾತ್ರ ಜಾರಿಗೆ ಬರುತ್ತದೆ. ಸೆಷೆನ್ಸ್ (ಸತ್ರ) ನ್ಯಾಯಾಲಯದ ಅಧೀನತೆಯಲ್ಲಿ ಪ್ರಥಮದರ್ಜೆ ನ್ಯಾಯಿಕ ದಂಡಾಧೀಕಾರಿಯ (Judicial Magistrate First Class Court) ನ್ಯಾಯಾಲಯವಿರುತ್ತದೆ.ಅದು ಸಣ್ಣ ಪುಟ್ಟ ಅಪರಾಧಗಳ ವಿಚಾರಣೆ ನಡೆಸಿ ತೀರ್ಮಾನ ನೀಡುತ್ತದೆ. ಕೊಲೆಯ ಪ್ರಕರಣವನ್ನು ಸತ್ರ (ಸೆಷೆನ್ಸ್) ನ್ಯಾಯಾಲಯಕ್ಕೆ ವರ್ಗಾಯಿಸುತ್ತದೆ.

### * ಜನತಾ ನ್ಯಾಯಾಲಯ - ಲೋಕ ಅದಾಲತ್

ನ್ಯಾಯದಾನ ವಿಲಂಬಿತ ಹಾಗೂ ವೆಚ್ಚದಾಯಕವಾಗಿರಬಾರದು. ಅದು ಸ್ವಲ್ಪೇ ಸಮಯದಲ್ಲಿಹಾಗೂ ಕಡಿಮೆ ಖರ್ಚಿನಲ್ಲಿ ದೊರಕುವಂತಿರಬೇಕು ಮತ್ತು ಜನ

ಸಾಮಾನ್ಯರಿಗೆ ಕೈಗೆಟಕುವಂತಿರಬೇಕು. ಪ್ರಾಚೀನ ಭಾರತದ ಪಂಚಾಯಿತಿ ವ್ಯವಸ್ಥೆಯಲ್ಲಿ ಮಧ್ಯಸ್ತಿಕೆದಾರರು ಸಂಧಾನದ ಮೂಲಕ ವಿವಾದಗಳನ್ನು ತೀರ್ಮಾನಿಸುತ್ತಿದ್ದರು. ಇಂದು ಜಾರಿಯಲ್ಲಿರುವ ಬ್ರಿಟೀಶ್ ಪದ್ಧತಿಯ ನ್ಯಾಯ ವ್ಯವಸ್ಥೆ ಅತ್ಯಂತ ವೆಚ್ಚದಾಯಕವಾಗಿದೆ ಹಾಗೂ ಅಪಾರ ಸಮಯ ವ್ಯಯ ಮಾಡುವಂಥದಾಗಿದೆ. ಜನಸಾಮಾನ್ಯರಲಿ, ಮಧ್ಯಮ ವರ್ಗದವರು ಕೂಡ ನ್ಯಾಯಾಲಯದ ಖರ್ಚು ಭರಿಸಲು ಸಾಧ್ಯವಾಗದಂಥ ಪರಿಸ್ಥಿತಿ ಇದೆ. ತಂದೆಯ ಕಾಲದಲ್ಲಿ ಪ್ರಾರಂಭವಾದ ವಿಚಾರಣೆ ಮಕ್ಕಳು ಹಾಗೂ ಮೊಮ್ಮಕ್ಕಳ ಕಾಲದಲ್ಲಿ ಮುಕ್ತಾಯಗೊಂಡ ಅನೇಕ ಉದಾಹಣೆಗಳು ನಮ್ಮ ಮುಂದೆ ಇವೆ. ವಿಲಂಬಿತ ನ್ಯಾಯ ನಿರಾಕೃತ ನ್ಯಾಯವಾಗಿದೆ ಎಂಬಂತೆ ಇಂದಿನ ನ್ಯಾಯಾಂಗ ವ್ಯವಸ್ಥೆಯ ಕಾರ್ಯನಿರ್ವಹಣೆ ಇದೆ.

ನ್ಯಾಯದೊರಕಿಸಿಕೊಳ್ಳಬಯಸುವವರು ಹಾಗೂ ನ್ಯಾಯದಾನ ಮಾಡುವವರ ನಡುವೆ ಇಂದು ಅತಿಯಾದ ಅಂತರ ಬೆಳದಿದೆ. ಕಾನೂನಿನ ಕಗ್ಗಂಟಿನಿಂದಾಗಿ ನ್ಯಾಯದಾನದಲ್ಲಿ ವಿಲಂಬ ಉಂಟಾಗುತ್ತಿದೆ. ನ್ಯಾಯಾಲಯಗಳ ಕೆಲಸದ ಪ್ರಮಾಣ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಬಾಕಿ ಉಳಿಯುವ ಪ್ರಕರಣಗಳ ಸಂಖ್ಯೆ ಹನುಮಂತನ ಬಾಲದಂತೆ ಬೆಳೆಯುತ್ತಿದೆ. ಅದರ ಪರಿಣಾಮವಾಗಿ ಲೋಕಅದಾಲತ್(ಜನತಾ ನ್ಯಾಯಾಲಯ)ಗಳ ರಚನೆಯ ವಿಚಾರ ಮೂಡಿಬಂದಿದೆ.

ಜನತಾ ನ್ಯಾಯಾಲಯಗಳ ಹುಟ್ಟು ಹಾಗೂ ಬೆಳವಣಿಗೆ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಪ್ರಯತ್ನದೊಂದಿಗೆ ಕೆಲವು ಸರಕಾರೇತರ ಸಂಘಟನೆಗಳು ನ್ಯಾಯಾಂಗ ಆಡಳಿತ ಸುಧಾರಣೆಗಾಗಿ ನಡೆಸಿದ ಸತತ ಪ್ರಯತ್ನದ ಫಲವಾಗಿದೆ. ೧೯೫೮ ರಲ್ಲಿ ಕಾನೂನು ಆಯೋಗದ ಅಧ್ಯಕ್ಷರಾಗಿದ್ದ ನ್ಯಾ. ಡಿ. ಎ. ದೇಸಾಯಿಯವರು ಮೊಟ್ಟಮೊದಲಿಗೆ ಜನಪರ ನ್ಯಾಯವ್ಯವಸ್ಥೆಯ ಅಗತ್ಯವನ್ನು ಎತ್ತಿ ಹೇಳಿದ್ದಾರೆ. ೧೯೭೦ ರಲ್ಲಿ ಗುಜರಾತ್ ಹಾಗೂ ಕೇಂದ್ರ ಸರಕಾರಗಳು ಈ ಸಂಬಂಧವಾಗಿ ನ್ಯಾಯ ಪರಿಣತರ ಸಮಿತಿಗಳನ್ನು ನೇಮಕ ಮಾಡುವದರೊಂದಿಗೆ ಜನತಾ ನ್ಯಾಯಾಲಯ ರಚನೆಗೆ ಚಾಲನೆ ದೊರೆಯಿತು. ಈ ದಿಸೆಯಲ್ಲಿ ಗಮನಿಸಬೇಕಾದ ಘಟನೆಯೆಂದರೆ ೧೯೫೭ ರಲ್ಲಿ ರಚಿಸಲಾದ ಕಾನೂನು ಸೇವಾ ಪ್ರಾಧಿಕಾರಗಳ ವಿಧೇಯಕ. ಈ ಕಾನೂನು ದುರ್ಬಲ ವರ್ಗದವರಿಗೆ ಉಚಿತ ಕಾನೂನಿನ ಸಹಾಯ ಒದಗಿಸಿಕೊಡುವ ಮೂಲಕ ನ್ಯಾಯ ಪಡೆದುಕೊಳ್ಳುವ ಸಮಾನ ಅವಕಾಶ ದೊರಕಿಸಿ ಕೊಡಲು ಮತ್ತು ಸಮಾನ ಅವಕಾಶದ ಆಧಾರದ ಮೇಲೆ ಕಾರ್ಯ ನಿರ್ವಹಿಸುವಂತೆ ಕಾನೂನು ವ್ಯವಸ್ಥೆಯನ್ನು ಚಾಲನೆಗೂಳಿಸಲು ಲೋಕಅದಾಲತ್ ಸ್ಥಾಪನೆಗೆ ಅವಕಾಶ ಮಾಡಿಕೊಟ್ಟಿತು.

## ವ್ಯಾಪ್ತಿ ಮತ್ತು ಕಾರ್ಯಾಚರಣೆ

ಜನತಾ ನ್ಯಾಯಾಲಯವು (ಲೋಕ ಅದಾಲತ್) ಜಿಲ್ಲಾ ನ್ಯಾಯಾಧೀಶರಿಂದ ರಚಿಸಲ್ಪಡುತ್ತದೆ. ಅಧೀನ ನ್ಯಾಯಾಲಯದ ನ್ಯಾಯಾಧೀಶರು ಅಥವಾ ನ್ಯಾಯಿಕ

ದಂಡಾಧಿಕಾರಿಯವರನ್ನು ಈ ಕಾರ್ಯಕ್ಕಾಗಿ ಅವರು ನೇಮಿಸುತ್ತಾರೆ. ಸದರಿ ನ್ಯಾಯಾಧೀಶ ಅಥವಾ ನ್ಯಾಯಿಕ ದಂಡಾಧಿಕಾರಿಯವರ ನ್ಯಾಯಾಲಯದಲ್ಲಿ ಬಾಕಿ ಉಳಿದಿರುವ ಮೊಕದ್ದಮೆಗಳನ್ನು ಸಂಬಂಧಿಸಿದ ಪಕ್ಷಗಳ ಒಪ್ಪಿಗೆಯೊಂದಿಗೆ ತೀರ್ಮಾನಿಸಲು ಜನತಾ ನ್ಯಾಯಾಲಯ ನಡೆಸಲಾಗುತ್ತದೆ. ನ್ಯಾಯಾಧೀಶರಿಗೆ ಅನುಕೂಲವಾಗುವ ಜಿಲ್ಲೆಯ ಯಾವುದೇ ಸ್ಥಳದಲ್ಲಿ ಜನತಾ ನ್ಯಾಯಾಲಯ ನಡೆಸಲು ದಿನಾಂಕ ಗೊತ್ತುಪಡಿಸಲಾಗುತ್ತದೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ನ್ಯಾಯಾಲಯವು ವಾದಿ,ಹಾಗೂ ಪ್ರತಿವಾದಿಗಳ ಮಿತ್ರ ಹಾಗೂ ಮಾರ್ಗದರ್ಶಿಯಾಗಿ ಕಾರ್ಯ ನಿರ್ವಹಿಸುತ್ತದೆ. ವಕೀಲರು ಕೂಡ ಒಪ್ಪಂದ ಏರ್ಪಡಿಸುವದಕ್ಕಾಗಿ ಜನತಾ ನ್ಯಾಯಾಲಯದಲ್ಲಿ ಭಾಗವಹಿಸಬಹುದು. ಒಪ್ಪಂದ ಏರ್ಪಡುವದಕ್ಕಾಗಿ ವಾದಿ, ಪ್ರತಿವಾದಿಗಳು ತಾವು ನ್ಯಾಯಾಲಯದಲ್ಲಿ ಹೂಡಿದ ದಾವೆಯನ್ನು ಇಬ್ಬರ ಒಪ್ಪಿಗೆಯ ಮೇರೆಗೆ ಹಿಂದಕ್ಕೆ ತೆಗೆದುಕೊಂಡು ಜನತಾ ನ್ಯಾಯಾಲಯಕ್ಕೆ ಒಪ್ಪಿಸಬೇಕು. ಜನತಾ ನ್ಯಾಯಾಲಯದ ತೀರ್ಪು ಉಭಯ ಪಕ್ಷಗಳಿಗೆ ಬಂಧನಕಾರಿಯಾಗಿದ್ದು ಅದರ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸುವಂತಿಲ್ಲ.

ಕೆಳಗೆ ವಿವರಿಸಲಾದ ಅಂಶಗಳ ಆಧಾರದ ಮೇಲೆ ಲೋಕಅದಾಲತ್ ಕಾರ್ಯನಿರ್ವಹಿಸುತ್ತದೆ.

೧. ತೀರ್ಮಾನ ಬಯಸಿದ ವಾದಿ, ಪ್ರತಿವಾದಿಗಳಿಗೆ ನಿರ್ದಿಷ್ಟಪಡಿಸಿದ ದಿನ ಹಾಗೂ ಸ್ಥಳಗಳಲ್ಲಿ ಹಾಜರಾಗುವಂತೆ ನ್ಯಾಯಾಧೀಶರು ತಿಳಿಸುತ್ತಾರೆ.

೨. ವಿವಾದದ ಅಂಶಗಳನ್ನು ವಿವರಿಸಿ ತೀರ್ಮಾನ ನೀಡಲು ಅನುಕೂಲವಾಗುವಂತೆ ಎರಡೂ ಪಕ್ಷಗಳಿಗೆ ಕೇಳಲಾಗುತ್ತದೆ.

೩. ವಿಷಯದ ಸತ್ಯವನ್ನು ಮನವರಿಕೆ ಮಾಡಿಕೊಳ್ಳುವ ಸಲುವಾಗಿ ನ್ಯಾಯಾಧೀಶ ಹಾಗೂ ಇತರ ಲೋಕಅದಾಲತ್ ಸದಸ್ಯರು ಉಭಯಪಕ್ಷಗಳಿಗೆ ನಿರ್ದಿಷ್ಟ ಮಾರ್ಗದರ್ಶನ ಮಾಡಲು ಪ್ರಯತ್ನಿಸುತ್ತಾರೆ.

೪. ಸಂಬಂಧಿಸಿದ ಪಕ್ಷಗಳು ಒಪ್ಪಂದಕ್ಕೆ ಬರಲು ಸಾಧ್ಯವಾಗದಿದ್ದಲ್ಲಿ ವಿವಾದ ಪರಿಹಾರಕ್ಕಾಗಿ ಲೋಕಅದಾಲತ್ ತಾನೇ ಒಂದು ಪರಿಹಾರ ಸೂಚಿಸಬಹುದು.

೫. ಇಂಥ ಪ್ರಯತ್ನಗಳ ಪರಿಣಾಮವಾಗಿ ಆ ಎರಡೂ ಪಕ್ಷಗಳಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ಒಂದು ಒಪ್ಪಂದಕ್ಕೆ ಬರಲಾಗುತ್ತದೆ. ಅದಕ್ಕೆ ಸಂಬಂಧಿಸಿದವರ ಸಹಿ ಪಡೆದು ಅದರ ಒಂದು ಪ್ರತಿಯನ್ನು ನಿಯಮಿತ ನ್ಯಾಯಾಲಯಕ್ಕೆ ಕಳಿಸಲಾಗುತ್ತದೆ.

೬. ಲೋಕಅದಾಲತ್ ತೀರ್ಪು ನೀಡಿದರೆ ಅದನ್ನು ನಾಗರಿಕ ಪ್ರಕ್ರಿಯಾಸಂಹಿತೆಯ ಪ್ರಕಾರ ನಿಗದಿತ ನ್ಯಾಯಲಯವು ಜಾರಿಗೆ ತರುತ್ತದೆ.

೭. ನ್ಯಾಯ ತೀರ್ಮಾನದ ನಂತರ ಉಭಯ ಪಕ್ಷಗಳು ನೀಡಿದ್ದ ನ್ಯಾಯಾಲಯ ಶುಲ್ಕವನ್ನು ಮರಳಿಸಲಾಗುತ್ತದೆ.

## ✸ ಬಳಕೆದಾರರ ನ್ಯಾಯಾಲಯಗಳು

ಬಳಕೆದಾರರರನ್ನು ವ್ಯಾಪಾರಿಗಳು ಮೋಸಗೋಳಿಸುವದು, ಶೋಷಿಸುವದು ದಿನನಿತ್ಯ ನಡೆಯುವ ಘಟನೆಗಳಾಗಿವೆ.ತೂಕ,ಅಳತೆಗಳಲ್ಲಿ ಮೋಸ, ಆಹಾರ ಪದಾರ್ಥಗಳ ಕಲಬೆರಕೆ, ಅಪಾಯಕಾರಿ ಸರಕುಗಳ ಮಾರಾಟ, ಕಳ್ಳಸಂತೆ ವ್ಯವಹಾರ, ಹೀಗೆ ಅನೇಕ ಬಗೆಯಲ್ಲಿ ಬಳಕೆದಾರ ಅನ್ಯಾಯಕ್ಕೆ ತುತ್ತಾಗುತ್ತಾನೆ. ಮಾರುಕಟ್ಟೆ ವ್ಯವಹಾರದಲ್ಲಿ ಬಳಕೆದಾರ ಅಲಕ್ಷಕ್ಕೆ ಗುರಿಯಾಗುತ್ತಿದ್ದಾನೆ.ಅಸಹಾಯಕನಾದ ಬಳಕೆದಾರನ ರಕ್ಷಣೆಗಾಗಿ ಭಾರತದಲ್ಲಿ ಇದುವರೆಗೆ ಸುಮಾರು ೩೦ ಕಾನೂನುಗಳ ರಚನೆಯಾಗಿದೆ. ಕಾನೂನುಗಳ ಸಮರ್ಪಕ ಜಾರಿಗೊಳಿಸುವಿಕೆಯ ಮೂಲಕ ಮಾತ್ರ ಬಳಕೆದಾರನಿಗೆ ನ್ಯಾಯ ದೊರಕಿಸಿಕೊಡಲು ಸಾಧ್ಯವಾಗುತ್ತದೆಯೇ ಹೊರತು ಕೇವಲ ಅವುಗಳ ರಚನೆಯಿಂದಲ್ಲ . ಇಂದಿನ ನ್ಯಾಯಾಂಗ ವ್ಯವಸ್ಥೆಯ ಲೋಪದೋಷಗಳಿಂದಾಗಿ ಬಳಕೆದಾರರಿಗೆ ಕಾನೂನುನಿನ ನೆರವು ಪಡೆದುಕೊಳ್ಳುವದು ಅಸಾಧ್ಯವಾಗಿದೆ.

ಬಳಕೆದಾರರಿಗಾಗುವ ಅನ್ಯಾಯವನ್ನು ಹೋಗಲಾಡಿಸುವ ಸಲುವಾಗಿ ವಿಶ್ವಸಂಸ್ಥೆ ಗ್ರಾಹಕ ಸಂರಕ್ಷಣಾ ಮಾರ್ಗ ಸೂಚಿಯನ್ನು ರಚಿಸಿದೆ. ಭಾರತವನ್ನೊಳಗೊಂಡು ಅನೇಕ ರಾಷ್ಟ್ರಗಳು ಈ ಮಾರ್ಗಸೂಚಿಯನ್ನು ಜಾರಿಗೋಳಿಸಲು ಒಪ್ಪಿಕೊಂಡಿವೆ. ಭಾರತಸರಕಾರ ೧೯೮೬ ರಲ್ಲಿ ಬಳಕೆದಾರರ ಸಂರಕ್ಷಣಾ ಕಾನೂನನ್ನು ರಚಿಸಿತು. ನ್ಯಾಯದಾನದ ವ್ಯವಸ್ಥೆಯಲ್ಲಿನ ದೋಷಗಳನ್ನು ಪರಿಹರಿಸುವದರೊಂದಿಗೆ ಮಾರುಕಟ್ಟೆಯಲ್ಲಿ ನಡೆಯುವ ಅವ್ಯವಹಾರಗಳನ್ನು ಈ ಕಾನೂನು ತಡೆಗಟ್ಟುತ್ತದೆ. ಪರಿಣತರ ಸಹಾಯವಿಲ್ಲದೇ ಕಡಿಮೆ ಖರ್ಚಿನಲ್ಲಿ ಹಾಗೂ ಸ್ವಲ್ಪೇ ಅವಧಿಯಲ್ಲಿ ಪರಿಹಾರ ನೀಡಲು ಅದು ಅನುಕೂಲ ಮಾಡಿಕೊಟ್ಟಿದೆ.

## ಕಾಯ್ದೆಯ ಉದ್ದೇಶಗಳು

೧. ತಾನು ಖರೀದಿಸುವ ವಸ್ತುಗಳಿಂದ ಬಳಕೆದಾರನ ಜೀವ ಅಥವಾ ಆಸ್ತಿಗೆ ಹಾನಿ ಆಗುವದನ್ನು ತಪ್ಪಿಸುವದು.

೨. ಮಾರುಕಟ್ಟೆಯಲ್ಲಿ ನಡೆಯುವ ಅವ್ಯವಹಾರಗಳನ್ನು ತಡೆಗಟ್ಟುವದು.

೩. ಬಳಕೆದಾರ ಖರೀದಿಸಿದ ದೋಷಪೂರಿತ ವಸ್ತುಗಳಿಗೆ ಸುಲಭ ಪರಿಹಾರ ನೀಡುವದು.

೪. ಸೂಕ್ತ ಶಿಕ್ಷಣ ನೀಡಿ ಬಳಕೆದಾರರನ್ನು ಜಾಗೃತಗೊಳಿಸುವದು.

೫. ಬಳಕೆದಾರನಿಗೆ ಸುಲಭವಾಗಿ ಹಾಗೂ ಕಡಿಮೆ ಅವಧಿಯಲ್ಲಿ ನ್ಯಾಯ ಒದಗಿಸಿ ಕೊಡುವದು.

## ಗ್ರಾಹಕರ ವೇದಿಕೆಗಳು

ಬಳಕೆದಾರನಿಗಾಗುವ ಅನ್ಯಾಯವನ್ನು ತಡೆಗಟ್ಟಿ, ಆದ ಅನ್ಯಾಯಕ್ಕೆ ಪರಿಹಾರ ದೊರಕಿಸಿಕೊಡುವದಕ್ಕಾಗಿ ಗ್ರಾಹಕರ ವೇದಿಕೆಗಳ ರಚನೆಯಾಗಿದೆ. ಅವುಗಳಲ್ಲಿ ಮುಂದೆ ವಿವರಿಸಲಾದ ಮೂರು ಹಂತಗಳಿವೆ. ೧) ಪ್ರತಿಯೊಂದು ಜಿಲ್ಲೆಗೆ ಒಂದರಂತೆ ಜಿಲ್ಲಾ ವೇದಿಕೆ ೨) ರಾಜ್ಯ ಕ್ಕೊಂದರಂತೆ ರಾಜ್ಯ ಆಯೋಗ ಹಾಗೂ ೩) ರಾಷ್ಟ್ರ ಮಟ್ಟದಲ್ಲಿ ಒಂದು ರಾಷ್ಟ್ರೀಯ ಆಯೋಗ.

ಬಳಕೆದಾರನು ಕೇಳುವ ಪರಿಹಾರದ ಮೊತ್ತ ವನ್ನು ಆಧರಿಸಿ ವೇದಿಕೆಯ ವ್ಯಾಪ್ತಿ ನಿರ್ಧರಿಸಲಾಗಿದೆ. ಬಳಕೆದಾರ ಕೇಳುವ ಪರಿಹಾರ ಮೊತ್ತ ರೂ ೨೦ ಲಕ್ಷದ ವರೆಗೆ ಇದ್ದರೆ ಅದು ಜಿಲ್ಲಾ ವೇದಿಕೆಯ ವ್ಯಾಪ್ತಿಗೆ ಬರುತ್ತದೆ.೨ ೦ ಲಕ್ಷದಿಂದ ೧ ಕೋಟಿ ಹಣದ ವರೆಗಿನ ಪರಿಹಾರದ ಬೇಡಿಕೆ ರಾಜ್ಯ ಆಯೋಗದ ವ್ಯಾಪ್ತಿಗೆ ಒಳಪಡುತ್ತದೆ. ರೂ. ೧ ಕೋಟಿಗಿಂತ ಹೆಚ್ಚು ಪರಿಹಾರ ಬೇಡಿದರೆ ರಾಷ್ಟ್ರೀಯ ಆಯೋಗಕ್ಕೆ ದೂರು ಸಲ್ಲಿಸಬೇಕು.

**ರಚನೆ :** ಜಿಲ್ಲಾ ವೇದಿಕೆ ಹಾಗೂ ರಾಜ್ಯ ಆಯೋಗಗಳಲ್ಲಿ ಮೂರು ಜನ ಸದಸ್ಯರಿರುತ್ತಾರೆ. ನಿವೃತ್ತ ಜಿಲ್ಲಾ ನ್ಯಾಯಾಧೀಶನ ಅಧ್ಯಕ್ಷತೆಯಲ್ಲಿ ಒಬ್ಬ ಮಹಿಳೆಯನ್ನೊಳಗೊಂಡ ಇಬ್ಬರು ಸದಸ್ಯರು ಜಿಲ್ಲಾ ವೇದಿಕೆಯಲ್ಲಿರುತ್ತಾರೆ. ಸಮಾಜ ಸೇವೆ, ಶಿಕ್ಷಣ ಮುಂತಾದ ರಂಗಗಳಲ್ಲಿ ಪರಿಣತರಾದವರು ಸದಸ್ಯರಾಗಿರುತ್ತಾರೆ. ರಾಜ್ಯ ಆಯೋಗ ಉಚ್ಚನ್ಯಾಯಾಲಯದ ನಿವೃತ್ತ ನ್ಯಾಯಾಧೀಶನ ಅಧ್ಯಕ್ಷತೆಯಲ್ಲಿ ರಚಿಸಲ್ಪಟ್ಟಿರುತ್ತದೆ. ಅಧ್ಯಕ್ಷನಲ್ಲದೇ ಒಬ್ಬ ಮಹಿಳೆಯನ್ನೊಳಗೊಂಡು ಎರಡು ಜನ ಸದಸ್ಯರಿರುತ್ತಾರೆ. ಸರ್ವೋನ್ನತ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶನ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಆಯೋಗ ರಚಿಸಲ್ಪಡುತ್ತದೆ. ಅದರಲ್ಲಿ ಅಧ್ಯಕ್ಷನಲ್ಲದೇ ಇತರ ನಾಲ್ಕು ಜನ ಸದಸ್ಯರಿರುತ್ತಾರೆ. ಮೂರೂ ಹಂತಗಳ ವೇದಿಕಗಳ ಸದಸ್ಯರ ಅಧಿಕಾರದ ಅವಧಿ 5 ವರ್ಷ.

**ದೂರು ಸಲ್ಲಿಕೆ :** ಬಳಕೆದಾರರು ತಾವು ಖರೀದಿಸಿದ ವಸ್ತುವಿನಿಂದ ನೋವು ಅಥವಾ ನಷ್ಟ ಅನುಭವಿಸಿದ್ದರೆ ಮಾತ್ರ ದೂರು ಸಲ್ಲಿಸಬಹುದು.ತಯಾರಕರ ಅಥವಾ ಮಾರಾಟಗಾರರ ತಪ್ಪುಗಳಿದ್ದಲ್ಲಿ ಮಾತ್ರ ಪರಿಹಾರ ದೊರೆಯುತ್ತದೆ. ಬಳಕೆದಾರನ ಅಲಕ್ಷದಿಂದಾದ ನಷ್ಟಕ್ಕೆ ಪರಿಹಾರ ದೊರಕಲಾರದು. ದೂರು ನೀಡಲು ಕಾರಣವಾದ ಘಟನೆ ನಡೆದ ಊರು ಯಾವ ವೇದಿಕೆಯ ವ್ಯಾಪ್ತಿಯಲ್ಲಿ ಬರುತ್ತದೆಯೋ ಅಲ್ಲಿ ಅಥವಾ ಸಂಬಂಧಿಸಿದ ವ್ಯಕ್ತಿ ವಾಸಿಸುವ ಊರಿಗೆ ಸಂಬಂಧ ಪಟ್ಟ ವೇದಿಕೆಗೆ ದೂರು ಸಲ್ಲಿಸಬಹುದು. ಕಾನೂನಿನ ಮೇರೆಗೆ ಸರಕು ಅಥವಾ ಸೇವೆ ಪಡೆದ ವ್ಯಕ್ತಿ ಅಥವಾ ವ್ಯಕ್ತಿಗಳು ಮರಣ ಹೊಂದಿದ್ದರೆ ಅವನ ಅಥವಾ ಅವರ ವಾರಸುದಾರ ದೂರು ಸಲ್ಲಿಸಬಹುದು. ದೂರು ಸಲ್ಲಿಸಲು ಸಾಮಾನ್ಯವಾಗಿ ಸಮಸ್ಯೆ ಉಂಟಾದ ಎರಡು ವರ್ಷಗಳ ವರೆಗೆ

ಅವಕಾಶವಿರುತ್ತದೆ. ಯಾರ ವಿರುದ್ಧ ದೂರು ಸಲ್ಲಿಸಲಾಗಿದೆಯೋ ಅವರೊಡನೆ ನಡೆಸಿದ ವ್ಯವಹಾರ ಕಾನೂನಿನ ವ್ಯಾಪ್ತಿಗೊಳಪಟ್ಟಿರಬೇಕು. ದೂರು ಕೈಬರಹದಲ್ಲಿರಬಹುದು ಅಥವಾ ಟೈಪು ಮಾಡಿದ್ದಾಗಿರಬಹುದು. ಬಳಕೆದಾರ ಹಾಗೂ ಮಾರಾಟ ಮಾಡಿದ ವ್ಯಕ್ತಿಯ ಪೂರ್ಣ ವಿಳಾಸವನ್ನು ಅರ್ಜಿ ಒಳಗೊಂಡಿರಬೇಕು. ದೂರು ನೀಡಲಾದ ವಿಷಯದ ಬಗ್ಗೆ ಪೂರ್ಣ ಮಾಹಿತಿ ಹಾಗೂ ಅಗತ್ಯ ದಾಖಲೆಗಳನ್ನು ನೀಡಬೇಕು. ತಾನು ಬಯಸುವ ಪರಿಹಾರದ ಮೊತ್ತವನ್ನು ದೂರಿನಲ್ಲಿ ನಮೂದಿಸಬೇಕು.

ನಷ್ಟ ಅನುಭವಿಸಿದ ವ್ಯಕ್ತಿ ಮೊದಲು ಮಾರಾಟಗಾರನಿಗೆ ದೂರು ನೀಡಬೇಕು. ವೈಯಕ್ತಿಕವಾಗಿ ಅಥವಾ ಪತ್ರದ ಮೂಲಕ ದೂರು ಸಲ್ಲಿಸಬೇಕು. ಮಾರಾಟಗಾರ ಬದಲಿ ವಸ್ತುವನ್ನು ನೀಡಿದರೆ ತೆಗೆದು ಕೊಳ್ಳಬೇಕು. ಅದಕ್ಕೆ ಒಪ್ಪದಿದ್ದಲ್ಲಿ ಪರಿಹಾರದ ಮೊತ್ತವನ್ನು ದೂರಿನಲ್ಲಿ ನಮೂದಿಸಬೇಕು. ದೂರಿನ ಬಗ್ಗೆ ಕ್ರಮ ಕೈಗೊಳ್ಳಲು ಸಮಯ ನಿಗದಿಪಡಿಸಬೇಕು. ದೂರಿನಲ್ಲಿ ಸೂಚಿಸಿದ ಗಡುವು ಮುಗಿದ ನಂತರ ನೆನಪೋಲೆ ಬರೆಯಬೇಕು. ಅದರ ಒಂದು ಪ್ರತಿಯನ್ನು ಸರಕು ತಯಾರಕರಿಗೆ ನೀಡಬೇಕು. ಅದಕ್ಕೂ ಪರಿಹಾರ ದೊರೆಯದಿದ್ದಾಗ ಸಂಬಂಧ ಪಟ್ಟ ಸರಕಾರಿ ಅಧಿಕಾರಿಗಳಿಗೆ ದೂರು ಸಲ್ಲಿಸಬೇಕು. ಆಗಲೂ ಕೂಡಾ ಸಮಸ್ಯೆಗೆ ಪರಿಹಾರ ದೊರೆಯದಿದ್ದರೆ ಪತ್ರಿಕೆಗಳಿಗೆ ತಿಳಿಸಬೇಕು. ಈ ಯಾವ ಹಂತದಲ್ಲೂ ಪರಿಹಾರ ದೊರೆಯದಿದ್ದಾಗ ಗ್ರಾಹಕರ ವೇದಿಕೆಗೆ ದೂರು ಸಲ್ಲಿಸಬೇಕು.

**ದೂರು ವಿಚಾರಣೆ :** ವಾದಿ ಹಾಗೂ ಪ್ರತಿ ವಾದಿಗಳು ತಮ್ಮ ವಾದವನ್ನು ತಾವೇ ಆಗಲಿ ಅಥವಾ ತಮ್ಮ ವಕೀಲರ ಮೂಲಕವಾಗಲಿ ಮಂಡಿಸಬಹುದು. ಮಂಡಿತವಾದ ವಾದ ಪ್ರತಿವಾದಗಳನ್ನು ಕೂಲಂಕುಶವಾಗಿ ವಿಚಾರಿಸಿದ ನಂತರ ವೇದಿಕೆ/ಆಯೋಗ ಬಹುಮತದ ಮೂಲಕ ತೀರ್ಮಾನ ನೀಡುತ್ತದೆ.

**ಪರಿಹಾರಗಳು :** ವೇದಿಕೆ/ಆಯೋಗಗಳು ಕೆಳಗಿನ ಪರಿಹಾರಗಳಲ್ಲಿ ಒಂದನ್ನು ಸೂಚಿಸಬಹುದು.

೧. ಖರೀದಿಸಿದ ವಸ್ತುವಿನಲ್ಲಿರುವ ದೋಷ ಸರಿ ಪಡಿಸುವಂತೆ ಆದೇಶ ಮಾಡಬಹುದು.

೨. ದೋಷಪೂರ್ಣ ಸರಕನ್ನು ಬದಲಿಸಿ ಕೊಡುವಂತೆ ಆದೇಶ ನೀಡಬಹುದು.

೩. ದೋಷಕ್ಕೆ ತಕ್ಕ ಪರಿಹಾರ ನೀಡುವಂತೆ ಆಜ್ಞೆ ಮಾಡಬಹುದು.

೪. ಬಳಕೆದಾರನಿಂದ ಹಣ ಪಡೆದ ನಂತರವೂ ಸರಕು ಪೂರೈಸದಿದ್ದಲ್ಲಿ ಹಣ ಮರಳಿಸಲು ಸೂಚಿಸಬಹುದು.

೫. ಸುಳ್ಳು ಜಾಹೀರಾತು ನೀಡದಂತೆ ನಿರ್ಬಂಧಿಸಬಹುದು.

೬. ಅಪಾಯಕಾರಿ ವಸ್ತುಗಳನ್ನು ಮಾರುಕಟ್ಟೆಯಿಂದ ಹಿಂದಕ್ಕೆ ಪಡೆಯುವಂತೆ ಸೂಚಿಸಬಹುದು.

೭. ಬಳಕೆದಾರನ ಜೀವ ಅಥವಾ ಆಸ್ತಿಗೆ ಹಾನಿಮಾಡುವ ಸರಕು ಮಾರದಂತೆ ತಡೆಗಟ್ಟಬಹುದು. ಹಾನಿಗೆ ಅನುಗುಣವಾಗಿ ಪರಿಹಾರಧನ ನೀಡಲು ಸೂಚಿಸಬಹುದು. ಗ್ರಾಹಕ ಸಂರಕ್ಷಣಾ ನಿಯಮಗಳ ಪ್ರಕಾರ ಮಾತ್ರ ವೇದಿಕೆಗಳು ಪರಿಹಾರ ನೀಡುತ್ತವೆ.

**ಮೇಲ್ಮನವಿ ಅವಕಾಶ :-** ವೇದಿಕೆ/ಆಯೋಗದ ತೀರ್ಪು ಬಳಕೆದಾರ ಅಥವಾ ಎದುರುಗಾರನಿಗೆ ಒಪ್ಪಿಗೆಯಾಗದಿರಬಹುದು. ಪರಿಹಾರದ ಮೊತ್ತದ ವಿಷಯದಲ್ಲಿ ಅಸಮಾಧಾನ ಉಂಟಾಗಬಹುದು. ಆದ್ದರಿಂದ ವೇದಿಕೆ / ಆಯೋಗದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅವಕಾಶವಿದೆ. ತೀರ್ಪು ಕೈಸೇರಿದ ೩೦ ದಿನಗಳವರೆಗೆ ಮಾತ್ರ ಮೇಲ್ಮನವಿ ಸಲ್ಲಿಸಬಹುದು. ಮೇಲ್ಮನವಿ ಸಲ್ಲಿಸುವಾಗ ಹೊಸ ದೂರು ಸಲ್ಲಿಸಲು ಬರುವುದಿಲ್ಲ. ಅಲ್ಲದೇ ಹೊಸ ಪರಿಹಾರ ಬೇಡಿಕೆಗೂ ಅವಕಾಶ ಇರುವದಿಲ್ಲ.

ಜಿಲ್ಲಾ ವೇದಿಕೆಯ ತೀರ್ಪನ್ನು ಪ್ರಶ್ನಿಸಿ ರಾಜ್ಯ ಆಯೋಗಕ್ಕೆ, ರಾಜ್ಯ ಆಯೋಗದ ತೀರ್ಪನ್ನು ಪ್ರಶ್ನಿಸಿ ರಾಷ್ಟ್ರೀಯ ಆಯೋಗಕ್ಕೆ ಹಾಗೂ ರಾಷ್ಟ್ರೀಯ ಆಯೋಗದ ತೀರ್ಪಿನ ವಿರುದ್ಧ ಸರ್ವೋನ್ನತ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು.

## ಪ್ರಶ್ನೆಗಳು

**ಅ. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ. ಒಂದು ಅಂಕದ ಪ್ರಶ್ನೆಗಳು**

೧. ಸಂವಿಧಾನದ ಅರ್ಥ ವಿವರಣೆ ನೀಡುವ ಅಂಗವಾವುದು ?

೨. ಸರ್ವೋನ್ನತ ನ್ಯಾಯಾಲಯ ಎಂದು ಸ್ಥಾಪಿತವಾಯಿತು ?

೩. ರಾಜ್ಯ ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ನಿವೃತ್ತಿ ವಯಸ್ಸನ್ನು ತಿಳಿಸಿರಿ ?

೪. ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರನ್ನು ಯಾರು ನೇಮಕ ಮಾಡುತ್ತಾರೆ ?

೫. ರಾಜ್ಯ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ವೇತನವೆಷ್ಟು?

**ಆ. ಕೆಳಗಿನ ಪ್ರಶ್ನೆಗಳಿಗೆ ೨-೩ ವಾಕ್ಯಗಳಲ್ಲಿ ಉತ್ತರ ಬರೆಯಿರಿ ಎರಡು ಅಂಕದ ಪ್ರಶ್ನೆಗಳು**

೬. ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರ ಅರ್ಹತೆಗಳನ್ನು ವಿವರಿಸಿರಿ ?

೭. ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರ ನಿವೃತ್ತಿ ನಂತರದ ನಿರ್ಬಂಧಗಳನ್ನು ಹೇಳಿರಿ ?

೮. ನ್ಯಾಯಿಕ ವಿಮರ್ಶೆ ಎಂದರೇನು?

೯. ನ್ಯಾಯಾಧೀಶ ನಿರ್ಮಿತ ಕಾನೂನು ಎಂದರೇನು?

೧೦. ಬಳಕೆದಾರರ ನ್ಯಾಯಾಲಯ ಎಂದರೇನು ?

**ಇ. ಕೆಳಗಿನ ಪ್ರಶ್ನೆಗಳಿಗೆ ೮-೧೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಐದು ಅಂಕದ ಪ್ರಶ್ನೆಗಳು**

೧೧. ದಾಖಲೆಗಳ ನ್ಯಾಯಾಲಯ ಎಂದರೇನು ?

೧೨. ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಪದಚ್ಯುತಿ ವಿಧಾನ ವಿವರಿಸಿರಿ .

೧೩. ಸರ್ವೋನ್ನತ ನ್ಯಾಯಾಲಯದ ಪ್ರಾರಂಭಿಕ ಅಧಿಕಾರ ವ್ಯಾಪ್ತಿ ವಿವರಿಸಿರಿ .

೧೪. ನ್ಯಾಯಾಂಗದ ಮಹತ್ವವನ್ನು? ವಿವರಿಸಿರಿ .

೧೫. ಜನತಾ ನ್ಯಾಯಾಲಯ (ಲೋಕ ಅದಾಲತ್) ಗಳ ಅಗತ್ಯತೆ ಕುರಿತು ಬರೆಯಿರಿ

**ಈ . ಕೆಳಗಿನ ಪ್ರಶ್ನೆಗಳಿಗೆ ೩೦-೪೦ ವಾಕ್ಯಗಳಲ್ಲಿ ಉತ್ತರಿಸಿರಿ. ಹತ್ತು ಅಂಕದ ಪ್ರಶ್ನೆಗಳು**

೧೬. ಸರ್ವೋನ್ನತ ನ್ಯಾಯಾಲಯದ ಅಧಿಕಾರಗಳನ್ನು ವಿವರಿಸಿರಿ .

೧೭. ಉಚ್ಚ ನ್ಯಾಯಾಲಯದ ರಚನೆ ಹಾಗೂ ಅಧಿಕಾರಗಳನ್ನು ವಿವರಿಸಿರಿ.

೧೮. ಆಧೀನ ನ್ಯಾಯಾಲಯಗಳ ಬಗ್ಗೆ ಪ್ರಬಂಧ ಬರೆಯಿರಿ.

೧೯. ಬಳಕೆದಾರರ ನ್ಯಾಯಾಲಯದ ರಚನೆ ಹಾಗೂ ಕಾರ್ಯನಿರ್ವಹಣೆ ಕುರಿತು ವಿವರಿಸಿರಿ.

❑❑

## ಅಧ್ಯಾಯ ೬

# ಭಾರತದಲ್ಲಿ ಸ್ಥಳೀಯ ಸರ್ಕಾರ

### ✷ಸ್ಥಳೀಯ ಸರ್ಕಾರಗಳ ಸ್ವರೂಪ ಮತ್ತು ಮಹತ್ವ

ಆಧುನಿಕ ರಾಜ್ಯಗಳು ರಾಷ್ಟ್ರರಾಜ್ಯಗಳಾಗಿದ್ದು ಬೃಹತ್ ಪ್ರಮಾಣದ ಜನಸಂಖ್ಯೆ ಹಾಗೂ ಭೂವಿಸ್ತಾರ ಹೊಂದಿರುತ್ತವೆ. ಕೇವಲ ಕೇಂದ್ರ ಸರಕಾರ ಅಥವಾ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಮಾತ್ರ ದಿಲ್ಲಿಯಿಂದ ಹಳ್ಳಿಯವರೆಗಿನ ಆಡಳಿತವನ್ನು ಸಮರ್ಪಕವಾಗಿ ಹಾಗೂ ದಕ್ಷತೆಯಿಂದ ನಡೆಸಿಕೊಂಡು ಹೋಗಲು ಸಾಧ್ಯವಿಲ್ಲ. ಆಧುನಿಕ ರಾಜ್ಯ ಕಲ್ಯಾಣ ರಾಜ್ಯವಾಗಿರುವುದರಿಂದ ಜನಕಲ್ಯಾಣ ಸಾಧನೆಗಾಗಿ ಸರಕಾರಗಳು ಅಪಾರ ಪ್ರಮಾಣದ ಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಆದ್ದರಿಂದ ಕೇಂದ್ರ, ರಾಜ್ಯ ಹಾಗೂ ಸ್ಥಳೀಯ ಹಂತಗಳಲ್ಲಿ ಸರಕಾರ ರಚನೆ ಮಾಡಿ ಅವುಗಳ ಮೂಲಕ ವಿಕೇಂದ್ರಿಕೃತ ಆಡಳಿತ ನಡೆಸಲಾಗುತ್ತದೆ.

ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಹತ್ವದ ವಿಷಯಗಳನ್ನು ಕೇಂದ್ರಕ್ಕೆ, ಪ್ರಾದೇಶಿಕ ಮಹತ್ವದ ವಿಷಯಗಳನ್ನು ರಾಜ್ಯಗಳಿಗೆ ಹಾಗೂ ಸ್ಥಳೀಯ ಮಹತ್ವದ ವಿಷಯಗಳನ್ನು ಸ್ಥಳೀಯ ಸಂಸ್ಥೆಗಳಿಗೆ ವಹಿಸಿಕೊಡಲಾಗುತ್ತದೆ. ಸ್ಥಳೀಯ ಸಂಸ್ಥೆಗಳನ್ನು ೧. ಗ್ರಾಮೀಣ ಪ್ರದೇಶದ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳು ಹಾಗೂ ೨. ನಗರ ಪ್ರದೇಶದ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳು ಎಂದು ವಿಭಜಿಸಲಾಗುತ್ತದೆ.

ಸ್ಥಳೀಯ ಸಮಸ್ಯೆಗಳ ಬಗ್ಗೆ ಗಮನ ಹರಿಸಲು ಕೇಂದ್ರ ಹಾಗೂ ರಾಜ್ಯ ಸರಕಾರಗಳಿಗೆ ಸಾಧ್ಯವಾಗುವುದಿಲ್ಲ. ಸಮಸ್ಯೆಗಳ ಮಾಹಿತಿ ಹಾಗೂ ಅವುಗಳ ಪರಿಹಾರಕ್ಕೆ ಸಮಯ ಎರಡೂ ಇರುವುದಿಲ್ಲ. ಗ್ರಾಮೀಣ ಪ್ರದೇಶದ ಅಥವಾ ನಗರಗಳ ಸಮಸ್ಯೆಗಳನ್ನು ಅಲ್ಲಿಯ ಜನರೇ ಪರಿಹರಿಸುವ ಅವಕಾಶವನ್ನು ಸ್ಥಳೀಯ ಸಂಸ್ಥೆಗಳು ಒದಗಿಸಿಕೊಡುತ್ತವೆ. ಪ್ರಾರಂಭಿಕ ಆಡಳಿತ ಹಂತದ ಸ್ಥಳೀಯ ಸಂಸ್ಥೆಗಳಲ್ಲಿ ಭಾಗವಹಿಸುವ ಮೂಲಕ ಜನರು ಆಡಳಿತ ತರಬೇತಿ, ಸಾರ್ವಜನಿಕ ಜೀವನದಲ್ಲಿ ಆಸಕ್ತಿ, ಹೊಂದಾಣಿಕೆ ಹಾಗೂ ಸಹಕಾರದ ಪ್ರವೃತ್ತಿ, ನಾಯಕತ್ವದ ಗುಣ ಮುಂತಾದವುಗಳನ್ನು ಬೆಳೆಸಿಕೊಳ್ಳಲು ಅವಕಾಶವಾಗುತ್ತದೆ. ಆ ದೃಷ್ಟಿಯಿಂದ ಸ್ಥಳೀಯ ಸಂಸ್ಥೆಗಳನ್ನು ಪ್ರಜಾಪ್ರಭುತ್ವದ ತಳಹದಿ ಅಥವಾ ತರಬೇತಿ ಕೇಂದ್ರಗಳೆಂದು ಕರೆಯಲಾಗುತ್ತದೆ.

ಸ್ಥಳೀಯ ಸರಕಾರಗಳು ಭಾರತಕ್ಕೆ ಹೊಸದೇನೂ ಅಲ್ಲ. ಸಾವಿರಾರು ವರ್ಷಗಳಿಂದಲೂ ಅವು ಅಸ್ತಿತ್ವಲ್ಲಿದ್ದ ಬಗ್ಗೆ ಮಾಹಿತಿ ದೊರೆಯುತ್ತದೆ. ಆರ್ಯರು ಈ

ದೇಶಕ್ಕೆ ಬರುವ ಪೂರ್ವದಲ್ಲೇ ಸಿಂಧು ನದಿ ತೀರದ ಹರಪ್ಪಾ, ಮೊಹಂಜೋದಾರೋಗಳಲ್ಲಿ ಸ್ಥಳೀಯ ಆಡಳಿತ ವ್ಯವಸ್ಥೆ ಜಾರಿಯಲ್ಲಿದ್ದ ಬಗ್ಗೆ ಪುರಾವೆಗಳು ದೊರೆತಿವೆ. ವೇದ ಪೂರ್ವಯುಗದಲ್ಲಿ ಗಂಗಾ-ಯಮುನಾ ನದಿ ಮಧ್ಯದ ದೋಆಬ್ ಪ್ರದೇಶದಲ್ಲಿ ಪಂಚಾಯತ ವ್ಯವಸ್ಥೆ ಜಾರಿಯಲ್ಲಿದ್ದ ಬಗ್ಗೆ ಸಾಕ್ಷಿಗಳು ದೊರೆತಿವೆ. ರಾಮಾಯಣ ಮಹಾಭಾರತ ಕಾಲದಲ್ಲೂ ಈ ವ್ಯವಸ್ಥೆ ಜಾರಿಯಲ್ಲಿತ್ತೆಂದು ಹೇಳಲಾಗುತ್ತದೆ. ಮೆಗಾಸ್ಥನೀಸನ 'ಇಂಡಿಕಾ' ಹಾಗೂ ಕೌಟಿಲ್ಯನ 'ಅರ್ಥಶಾಸ್ತ್ರ' ಗ್ರಂಥಗಳಲ್ಲೂ ಸ್ಥಳೀಯ ಆಡಳಿತದ ಬಗ್ಗೆ ವಿವರಗಳಿವೆ. ಚೀನಿ ಪ್ರವಾಸಿಗರಾದ ಹೂಯೆನ್‌ತ್ಸಾಂಗ್ ಹಾಗೂ ಫಾಹಿಯಾನ್ ತಮ್ಮ ಪ್ರವಾಸಕಥನಗಳಲ್ಲಿ ಭಾರತದಲ್ಲಿ ಜಾರಿಯಲ್ಲಿದ್ದ ಪಂಚಾಯತ ವ್ಯವಸ್ಥೆಯ ಬಗ್ಗೆ ಉಲ್ಲೇಖಿಸಿದ್ದಾರೆ. ಬುದ್ಧನ ಜಾತಕ ಕಥೆಗಳಲ್ಲಿ ಗ್ರಾಮ ಸಭೆಗಳ ಉಲ್ಲೇಖವಿದೆ. ಮೌರ್ಯರ ರಾಜಧಾನಿ ಪಾಟಲಿಪುತ್ರ (ಪಾಟ್ನಾ) ದಲ್ಲಿ ಸ್ಥಳೀಯ ಆಡಳಿತ ವ್ಯವಸ್ಥೆ ಜಾರಿಯಲ್ಲಿತ್ತೆಂದು ಹೇಳಲಾಗುತ್ತದೆ. ಮೊಘಲರ ಕಾಲದಲ್ಲಿ ಪಂಚಾಯತ ವ್ಯವಸ್ಥೆ ಜಾರಿಯಲ್ಲಿದ್ದ ಬಗ್ಗೆ ಉಲ್ಲೇಖಗಳಿವೆ.

ಬ್ರಿಟೀಶ್ ಆಡಳಿತ ವ್ಯವಸ್ಥೆ ಪ್ರಾರಂಭವಾದ ನಂತರ ಭಾರತದಲ್ಲಿ ಸ್ಥಳೀಯ ಸರಕಾರಗಳ ಪ್ರಾಮುಖ್ಯತೆ ಕಡಿಮೆ ಆಯಿತು. ಮುಂದೆ ಲಾರ್ಡ್ ರಿಪ್ಪನ್ ೧೮೮೨ ರಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಪುನರ್ ಜನ್ಮ ನೀಡಿದರು. ೧೯೧೯ ಹಾಗೂ ೧೯೩೫ ರ ಭಾರತ ಸರಕಾರದ ಕಾನೂನುಗಳಲ್ಲಿ ಸ್ಥಳೀಯ ಸಂಸ್ಥೆಗಳ ಬಗ್ಗೆ ಪ್ರಸ್ತಾಪಿಸಲಾಗಿದೆ. ಗ್ರಾಮ ಸ್ವರಾಜ್ಯ ಸ್ಥಾಪನೆ ಮಾಡಬೇಕೆಂಬುದು ಗಾಂಧೀ ಚಳುವಳಿಯ ಮುಖ್ಯ ಗುರಿಗಳಲ್ಲೊಂದಾಗಿತ್ತು. ಗಾಂಧೀ ಕನಸಿನ ಸ್ವಯಂ ಸಂಪೂರ್ಣತೆ ಹೊಂದಿದ ಗ್ರಾಮಗಳ ನಿರ್ಮಾಣಕ್ಕೆ ಅಥವಾ ಗ್ರಾಮ ಸ್ವರಾಜ್ಯ ಸ್ಥಾಪನೆಗಾಗಿ ಸಂವಿಧಾನ ಕೂಡ ಅವಕಾಶ ಮಾಡಿಕೊಟ್ಟಿದೆ. ನೀತಿ ನಿರ್ದೇಶಕ ತತ್ವಗಳ ಅಧ್ಯಾಯದಲ್ಲಿ ಬರುವ ೪೦ ನೇ ಕಲಮು ಸ್ವಯಂ ಆಡಳಿತ ಮೂಲವಾಗಿ ಗ್ರಾಮಪಂಚಾಯತಿಗಳ ಸ್ಥಾಪನೆಯಾಗಬೇಕೆಂದು ತಿಳಿಸುತ್ತದೆ.

## ಮಹತ್ವ

ಕೆಳಗಿನ ಅಂಶಗಳು ಸ್ಥಳೀಯ ಸರಕಾರಗಳ ಮಹತ್ವವನ್ನು ಸ್ಪಷ್ಟಗೊಳಿಸುತ್ತವೆ.

**೧. ಪ್ರಜಾಪ್ರಭುತ್ವದ ತಳಹದಿ :-** ಸ್ಥಳೀಯ ಸಂಸ್ಥೆಗಳು ಪ್ರಜಾಪ್ರಭುತ್ವದ ಆಡಳಿತ ವ್ಯವಸ್ಥೆಯ ಮೊದಲ ಹಂತದಲ್ಲಿವೆ. ಇವುಗಳಲ್ಲಿ ಭಾಗವಹಿಸುವ ಮೂಲಕ ಪ್ರಜಾಪ್ರಭುತ್ವದ ಆಡಳಿತ ವ್ಯವಸ್ಥೆಯ ಬಗ್ಗೆ ತರಬೇತಿ ಪಡೆಯಬಹುದು. ಸರಕಾರದ ಆಡಳಿತದಲ್ಲಿ ಹಂತ ಹಂತವಾಗಿ ಭಾಗವಹಿಸಲು ಮತ್ತು ಆ ಮೂಲಕ ಆಡಳಿತದ ಅನುಭವಗಳಿಸಿಕೊಳ್ಳಲು ಸ್ಥಳೀಯ ಸಂಸ್ಥೆಗಳು ಅನುಕೂಲ ಮಾಡಿಕೊಡುತ್ತವೆ. ಸ್ಥಳೀಯ ಸಂಸ್ಥೆಗಳು, ನಂತರ ರಾಜ್ಯ ಸರಕಾರ ಹಾಗೂ ಕೊನೆಗೆ ಕೇಂದ್ರ ಸರಕಾರ ಹೀಗೆ ಆಡಳಿತ ವ್ಯವಸ್ಥೆಯಲ್ಲಿ ಹಂತಹಂತವಾಗಿ ಭಾಗವಹಿಸುವ ಮೂಲಕ ದಕ್ಷತೆ, ಆಸಕ್ತಿ ಹಾಗೂ ಹೊಣೆಗಾರಿಕೆಯಿಂದ ಸರಕಾರ ನಡೆಸಲು ಸಾಧ್ಯವಾಗುತ್ತದೆ.

೨. ಸಮಸ್ಯೆಗಳಿಗೆ ಸುಲಭ ಪರಿಹಾರ :- ಸ್ಥಳೀಯ ಸಂಸ್ಥೆಗಳಲ್ಲಿ ಸ್ಥಳೀಯರೇ ಅಧಿಕಾರ ಪಡೆಯುತ್ತಾರೆ. ಸಮಸ್ಯೆಗಳನ್ನು ಸ್ವತಃ ಅನುಭವಿಸುವುದರಿಂದ ಆಡಳಿತಗಾರರು ಕೂಡಲೇ ಪರಿಹಾರ ಒದಗಿಸಲು ಪ್ರಯತ್ನಿಸುತ್ತಾರೆ. ಆಸಕ್ತಿಯಿಂದ ಕಾರ್ಯನಿರ್ವಹಿಸುವುದರಿಂದಾಗಿ ಆಡಳಿತದಲ್ಲಿ ದಕ್ಷತೆ ಬರುತ್ತದೆ.

೩. ಕಡಿಮೆಯಾದ ಕೇಂದ್ರ, ಹಾಗೂ ರಾಜ್ಯಗಳ ಕೆಲಸದ ಹೊರೆ :- ಸ್ಥಳೀಯ ಆಡಳಿತ ವ್ಯವಸ್ಥೆ ಇಲ್ಲದಿದ್ದರೆ ವಿವಿಧ ಪ್ರದೇಶಗಳ ಸ್ಥಳೀಯ ಕಾರ್ಯಗಳನ್ನು ಹಾಗೂ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳುವ ಜವಾಬ್ದಾರಿಯನ್ನು ರಾಜ್ಯಸರಕಾರ ಅಥವಾ ಕೇಂದ್ರ ಸರಕಾರ ನಿರ್ವಹಿಸಬೇಕಾಗುತ್ತದೆ. ಇದರಿಂದಾಗಿ ಕಾರ್ಯಬಾಹುಲ್ಯದಿಂದ ತೊಳಲಾಡುತ್ತಿರುವ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಮೇಲೆ ಕೆಲಸದ ಒತ್ತಡ ಹೆಚ್ಚುತ್ತದೆ, ಪರಿಣಾಮವಾಗಿ ದಕ್ಷತೆ ಕಡಿಮೆಯಾಗುತ್ತದೆ. ಸ್ಥಳೀಯ ಸಂಸ್ಥೆಗಳು ತಮ್ಮ ತಮ್ಮ ಕಾರ್ಯನಿರ್ವಹಿಸುವುದರಿಂದ ಕೇಂದ್ರ, ಹಾಗೂ ರಾಜ್ಯಗಳ ಹೊಣೆಗಾರಿಕೆ ಕಡಿಮೆಯಾಗುತ್ತದೆ, ಕಾರ್ಯಕ್ಷಮತೆ ಹೆಚ್ಚಲು ಸಾಧ್ಯವಾಗುತ್ತದೆ.

೪. ಆಡಳಿತದಲ್ಲಿ ಭಾಗವಹಿಸುವ ಹೆಚ್ಚಿನ ಅವಕಾಶ :- ಸ್ಥಳೀಯ ಸಂಸ್ಥೆಗಳ ಸ್ಥಾಪನೆಯಿಂದಾಗಿ ನಾಗರಿಕರು ಸರಕಾರದ ವ್ಯವಸ್ಥೆಯಲ್ಲಿ ಭಾಗತೆಗೆದುಕೊಳ್ಳುವ ಅವಕಾಶ ಹೆಚ್ಚಾಗುತ್ತದೆ. ಅಲ್ಲದೇ ಹೆಚ್ಚಿನ ಸಂಖ್ಯೆಯಲ್ಲಿ ಜನರು ಆಡಳಿತ ವ್ಯವಸ್ಥೆಯಲ್ಲಿ ಭಾಗವಹಿಸಲು ಅವಕಾಶ ದೊರೆಯುತ್ತದೆ. ಆ ಮೂಲಕ ಆಡಳಿತ ವ್ಯವಸ್ಥೆ ಅಥವಾ ಸರಕಾರ ತಮ್ಮದೆಂಬ ಭಾವನೆ ಜನರಲ್ಲಿ ಬೆಳೆಯಲು ಸಾಧ್ಯವಾಗುತ್ತದೆ.

೫. ಕಲ್ಯಾಣ ರಾಜ್ಯದ ಸಾಕಾರ :- ೨೦ ನೇ ಶತಮಾನದಲ್ಲಿ ಕಲ್ಯಾಣರಾಜ್ಯ ಸ್ಥಾಪನೆಯ ಗುರಿಯೊಂದಿಗೆ ಸರಕಾರದ ಜನಪರ ಕಾರ್ಯಗಳಲ್ಲಿ ಮಗ್ನವಾಯಿತು. ಸರಕಾರ ಜನರ ಸಮೀಪ ಹೋದರೆ ಮಾತ್ರ ಜನಪರ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸಲು ಸಾಧ್ಯ. ಸ್ಥಾನಿಕ ಸಂಸ್ಥೆಗಳ ಮೂಲಕ ಸರಕಾರದ ಜನರ ಮನೆ ಬಾಗಿಲಿಗೆ ಬಂದಂತಾಗುತ್ತದೆ. ಕಲ್ಯಾಣ ರಾಜ್ಯದ ಕಾರ್ಯ ನಿರ್ವಹಣೆಗೆ ಪೂರಕವಾಗಿ ವಿವಿಧ ಹಂತಗಳಲ್ಲಿ ಸರಕಾರ ಕೆಲಸ ಮಾಡುತ್ತದೆ.

### * ಸ್ಥಳೀಯ ಸರಕಾರಗಳ ವಿಧಗಳು

ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳನ್ನು ೧) ಗ್ರಾಮೀಣ ಸ್ಥಾನಿಕ ಸಂಸ್ಥೆಗಳು ಅಥವಾ ಪಂಚಾಯತ ರಾಜ್ ವ್ಯವಸ್ಥೆ ಹಾಗೂ ೨) ನಗರ ಪ್ರದೇಶದ ಸ್ಥಾನಿಕ ಸಂಸ್ಥೆಗಳು ಎಂದು ವರ್ಗೀಕರಿಸಲಾಗುತ್ತದೆ.

### * ಗ್ರಾಮೀಣ ಸ್ಥಳೀಯ ಸರಕಾರಗಳು

ನಮ್ಮ ಸಂವಿಧಾನದ ನಾಲ್ಕನೇ ಅಧ್ಯಾಯದಲ್ಲಿರುವ ನಿರ್ದೇಶಕ ತತ್ವಗಳಲ್ಲಿ

ಗಾಂಧೀಜಿಯವರಿಗೆ ಅತ್ಯಂತ ಪ್ರಿಯವಾಗಿದ್ದ ಗ್ರಾಮ ಸ್ವರಾಜ್ಯ ಸ್ಥಾಪನೆ ಒಂದಾಗಿದೆ. ಸಂವಿಧಾನದ ೪೦ ನೇ ಕಲಮಿನಲ್ಲಿ ಅಡಕವಾಗಿರುವ ಈ ತತ್ವವನ್ನು ಜಾರಿಗೊಳಿಸುವ ಸಲುವಾಗಿ ೧೯೫೭ ರಲ್ಲಿ ಬಲವಂತರಾಯ್ ಮೆಹತಾ ಸಮಿತಿಯ ರಚನೆಯಾಯಿತು. ಮೂರು ಹಂತಗಳಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಸ್ಥಾಪಿಸುವಂತೆ ಸಮಿತಿ ಶಿಫಾರಸು ಮಾಡಿತು. ೧) ಗ್ರಾಮ ಮಟ್ಟದಲ್ಲಿ ಗ್ರಾಮಪಂಚಾಯತಿ ೨) ತಾಲೂಕು ಮಟ್ಟದಲ್ಲಿ ತಾಲೂಕಾ ಪಂಚಾಯತಿ ಹಾಗೂ ೩) ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತಿ ಸ್ಥಾಪಿಸಬೇಕೆಬುಂದು ಬಲವಂತರಾಯ್ ಮೆಹತಾ ಕಮಿಟಿಯ ಆಶಯವಾಗಿತ್ತು. ಅಧಿಕಾರ ವಿಭಜನೆ ಮತ್ತು ನಾಗರಿಕರ ಹೆಚ್ಚಿನ ಪ್ರಮಾಣದ ಭಾಗವಹಿಸುವಿಕೆ ಅದರ ಮುಖ್ಯ ಗುರಿಯಾಗಿತ್ತು.

ಬಲವಂತರಾಯ್ ಮೆಹತಾ ಸಮೀತಿಯ ಶಿಫಾರಸಿನ ಆಧಾರದ ಮೇಲೆ ಪಂಚಾಯತ ರಾಜ್ ವ್ಯವಸ್ಥೆ ರೂಪಿಸುವ ಬಗ್ಗೆ ರಾಜ್ಯಗಳು ಸಮಿತಿಗಳನ್ನು ರಚಿಸಿದವು. ಈ ಸಮಿತಿಗಳ ವರದಿಗಳ ಆಧಾರದ ಮೇಲೆ ವಿವಿಧ ರಾಜ್ಯಗಳಲ್ಲಿ ಮೂರು, ಎರಡು ಅಥವಾ ಒಂದು ಹಂತದ ಪಂಚಾಯತ ರಾಜ್ ವ್ಯವಸ್ಥೆಯನ್ನು ಸ್ಥಾಪಿಸಲಾಯಿತು. ಈ ವ್ಯವಸ್ಥೆಯನ್ನು ಮೊಟ್ಟ ಮೊದಲಿಗೆ ಜಾರಿಗೊಳಿಸಿದ ರಾಜ್ಯಗಳೆಂದರೆ ರಾಜಸ್ಥಾನ ಹಾಗೂ ಆಂಧ್ರಪ್ರದೇಶ.

ಅತಿಯಾದ ಅಧಿಕಾರದ ಕೇಂದ್ರೀಕರಣದಿಂದಾಗಿ ಪಂಚಾಯತ ರಾಜ್ ವ್ಯವಸ್ಥೆ ಯಶಸ್ವಿಯಾಗಲಿಲ್ಲ. ಆದ್ದರಿಂದ ಸ್ಥಳೀಯ ಸರಕಾರದ ವ್ಯವಸ್ಥೆಯನ್ನು ಸಮರ್ಪಕವಾಗಿ ಜಾರಿಗೆ ತರುವ ಬಗ್ಗೆ ಶಿಫಾರಸು ಮಾಡಲು ೧೯೭೭ ರಲ್ಲಿ ಅಶೋಕ್ ಮೆಹತಾ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಲಾಯಿತು. ೧೯೭೮ ರಲ್ಲಿ ಸಮಿತಿ ತನ್ನ ವರದಿ ನೀಡಿತು. ಅಶೋಕ್ ಮೆಹತಾ ವರದಿಯ ಪ್ರಮುಖ ಅಂಶಗಳೆಂದರೆ ಆಡಳಿತದ ವಿಕೇಂದ್ರಿಕರಣ, ಪಂಚಾಯತ ಸಂಸ್ಥೆಗಳಿಗೆ ತೆರಿಗೆ ವಿಧಿಸುವ ಅಧಿಕಾರ, ಚುನಾವಣೆಗಳಲ್ಲಿ ರಾಜಕೀಯ ಪಕ್ಷಗಳಿಗೆ ಭಾಗವಹಿಸುವ ಅವಕಾಶ, ದುರ್ಬಲ ವರ್ಗಗಳ ರಕ್ಷಣೆ ಮತ್ತು ಜಿಲ್ಲೆಗೊಂದು ಯೋಜನಾ ಸಮಿತಿ ರಚನೆ.

ಪಂಚಾಯತ ರಾಜ್ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಸ್ಥಾನ ದೊರಕಿಸಿ ಕೊಡಲು ಪ್ರಧಾನಿಗಳಾಗಿದ್ದ ರಾಜೀವ ಗಾಂಧಿ, ವಿ.ಪಿ.ಸಿಂಗ್, ಹಾಗೂ ಪಿ.ವಿ.ನರಸಿಂಹರಾವ್ ಆಸಕ್ತಿ ವಹಿಸಿದ ಪರಿಣಾಮವಾಗಿ೧೯೯೩ ನೇ ಎಪ್ರಿಲ್‌ನಲ್ಲಿ ಸಂವಿಧಾನದ ೭೩ ನೇ ತಿದ್ದುಪಡಿಯ ಮೂಲಕ ಪಂಚಾಯತ ರಾಜ್ ಶಾಸನ ಜಾರಿಗೆ ಬಂತು.

ಸಂವಿಧಾನದ ೭೩ ನೇ ತಿದ್ದುಪಡಿಯ ಮುಖ್ಯಾಂಶಗಳು ಕೆಳಗಿನಂತಿವೆ.

೧. ಪಂಚಾಯತ ರಾಜ್ ವ್ಯವಸ್ಥೆಯಲ್ಲಿ ಗ್ರಾಮ, ತಾಲೂಕು ಹಾಗೂ ಜಿಲ್ಲೆ ಹೀಗೆ ಮೂರು ಹಂತಗಳಿರಬೇಕು.

೨. ಮೂರೂ ಹಂತಗಳಿಗೆ ನೇರ ಚುನಾವಣೆ ಮೂಲಕ ಸದಸ್ಯರ ಆಯ್ಕೆ ನಡೆಯಬೇಕು.
೩. ಜನಸಂಖ್ಯೆಯ ಆಧಾರದ ಮೇಲೆ ಅನುಸೂಚಿತ ಜಾತಿ ಅನುಸೂಚಿತ ಪಂಗಡಗಳಿಗೆ ಮೀಸಲಾತಿ ಇರಬೇಕು. ಮಹಿಳೆಯರಿಗೆ ಹಾಗೂ ಹಿಂದುಳಿದ ವರ್ಗಗಳಿಗೆ ೧/೩ ಮೀಸಲಾತಿ ನೀಡಬಹುದು.
೪. ರಾಜ್ಯ ವಿಧಾನಸಭೆಯ ಸದಸ್ಯರ ಅರ್ಹತೆ, ಅನರ್ಹತೆಗಳು ಪಂಚಾಯತ ರಾಜ್ ಚುನಾವಣೆಗೂ ಅನ್ವಯಿಸಲ್ಪಡಬೇಕು. ರಾಜ್ಯ ಶಾಸನಾಂಗ ಕೂಡ ಅರ್ಹತೆಯ ನಿಯಮಗಳನ್ನು ರೂಪಿಸಬಹುದು.
೫. ರಾಜ್ಯ ಚುನಾವಣಾ ಆಯೋಗ ಚುನಾವಣೆ ನಡೆಸಬೇಕು.
೬. ಪಂಚಾಯತ ರಾಜ್ ಸಂಸ್ಥೆಗಳಿಗೆ ಅನುದಾನ ನೀಡಿಕೆಗಾಗಿ ಹಣಕಾಸು ಆಯೋಗವಿರಬೇಕು.

## ✸ಕರ್ನಾಟಕದಲ್ಲಿ ಪಂಚಾಯತ ರಾಜ್ ವ್ಯವಸ್ಥೆ

೧೯೮೪ ರಲ್ಲಿ ರಾಮಕೃಷ್ಣ ಹೆಗಡೆ ಸರಕಾರ ಅಬ್ದುಲ್ ನಜೀರ್ ಸಾಬರ ಕನಸಿನ ಪಂಚಾಯತ ರಾಜ್ (ಗ್ರಾಮಸ್ವರಾಜ್ಯ) ವ್ಯವಸ್ಥೆಯನ್ನು ಕರ್ನಾಟಕದಲ್ಲಿ ಜಾರಿಗೊಳಿಸಲು ವಿಧೇಯಕ ರಚಿಸಿತು. ನಜೀರ್ ಸಾಬರ ಸತತ ಪ್ರಯತ್ನದ ಫಲವಾಗಿ ೧೯೮೬ ರಲ್ಲಿ ರಾಷ್ಟ್ರಪತಿಯವರ ಅನುಮೋದನೆಯೊಂದಿಗೆ ಪಂಚಾಯತ ರಾಜ್ ಶಾಸನ ಜಾರಿಗೆ ಬಂತು. ವಿನೂತನ ಹಾಗೂ ಪ್ರಜಾಪ್ರಭುತ್ವದ ತಳಹದಿಯನ್ನು ಗಟ್ಟಿಗೊಳಿಸುವ ರೀತಿಯಲ್ಲಿದ್ದ ಈ ವ್ಯವಸ್ಥೆಯು ಮೊದಲಿದ್ದ ಮೂರು ಹಂತಗಳಿಗೆ ಬದಲಾಗಿ ೧) ಮಂಡಲ ಪಂಚಾಯತಿ ಹಾಗೂ ೨) ಜಿಲ್ಲಾ ಪರಿಷತ್ತು ಹೀಗೆ ಎರಡು ಹಂತಗಳನ್ನು ಹೊಂದಿತ್ತು. ಆಗಿನ ಪ್ರಧಾನಿ ರಾಜೀವ ಗಾಂಧಿ ಕರ್ನಾಟಕದಲ್ಲಿ ಯಶಸ್ವಿಯಾಗಿ ಜಾರಿಯಲ್ಲಿದ್ದ ಈ ವ್ಯವಸ್ಥೆಯನ್ನು ಸ್ವತಃ ಪರಿಶೀಲಿಸಿ ಇಡೀ ದೇಶದಲ್ಲೇ ಗ್ರಾಮ ಸ್ವರಾಜ್ಯ ಸಂಸ್ಥೆಗಳನ್ನು ಇದೇ ಮಾದರಿಯಲ್ಲಿ ಪುನರ್ ರೂಪಿಸುವುದಕ್ಕಾಗಿ ಸಂವಿಧಾನಕ್ಕೆ ತಿದ್ದುಪಡಿ ಮಾಡಲು ಮುಂದಾದರೆಂಬುದನ್ನು ಇಲ್ಲಿ ನೆನೆಯಬಹುದು.

೧೯೮೪ ರಲ್ಲಿ ರಚಿತವಾದ ಕರ್ನಾಟಕ ಪಂಚಾಯತ ರಾಜ್ ಕಾನೂನಿನ ಮಹತ್ವದ ಅಂಶಗಳು ಕೆಳಗಿನಂತಿವೆ.
೧. ಪಂಚಾಯತ ರಾಜ್ ವ್ಯವಸ್ಥೆಯ ತಳಹದಿಯಾಗಿ ಗ್ರಾಮಕ್ಕೊಂದು ಗ್ರಾಮ ಸಭೆ ರಚನೆ.
೨. ೧೦ ರಿಂದ ೧೫ ಸಾವಿರ ಜನಸಂಖ್ಯೆಗೆ ಒಂದರಂತೆ ಮಂಡಲ ಪಂಚಾಯತಿ ಹಾಗೂ ಜಿಲ್ಲೆಗೊಂದು ಜಿಲ್ಲಾ ಪರಿಷತ್ ಸ್ಥಾಪನೆ.
೩. ಮಂಡಲ ಪಂಚಾಯತಿ ಹಾಗೂ ಜಿಲ್ಲಾ ಪರಿಷತ್ತುಗಳಿಗೆ ನೇರ ಚುನಾವಣೆಯ ಮೂಲಕ ಸದಸ್ಯರ ಆಯ್ಕೆ.
೪. ಹಣಕಾಸಿನ ಹಂಚಿಕೆಗೆ ೫ ವರ್ಷಗಳಿಗೊಮ್ಮೆ ಹಣಕಾಸು ಆಯೋಗದ ರಚನೆ.

೧೯೮೪ ರ ಪಂಚಾಯತ ರಾಜ್ ವ್ಯವಸ್ಥೆಯ ಮೇರೆಗೆ ಸ್ಥಳೀಯ ಸಂಸ್ಥೆಗಳ ಸದಸ್ಯರು ಸ್ವತಂತ್ರ ಅಸ್ತಿತ್ವ ಹೊಂದಿ ಆಸಕ್ತಿಯೊಂದಿಗೆ ಕಾರ್ಯ ನಿರ್ವಹಣೆ ಮಾಡ ತೊಡಗಿದರು. ವಿಧಾನ ಸಭಾ ಸದಸ್ಯರು ತಮ್ಮ ಮಹತ್ವ ಕಡಿಮೆಯಾಯಿತೆಂದು ಭಾವಿಸಲು ಅವಕಾಶವಾಗುವ ರೀತಿಯಲ್ಲಿ ವ್ಯವಸ್ಥೆ ಜನಪ್ರಿಯವಾಯಿತು. ಆ ಪರಿಣಾಮವಾಗಿ ೧೯೯೦ ರಲ್ಲಿ ಅಧಿಕಾರಕ್ಕೆ ಬಂದ ಬಂಗಾರಪ್ಪ ಮತ್ತು ೧೯೯೨ ರಲ್ಲಿ ಮುಖ್ಯಮಂತ್ರಿಯಾದ ವೀರಪ್ಪ ಮೊಯ್ಲಿಯವರ ಪ್ರಯತ್ನದ ಫಲವಾಗಿ ೧೯೯೩ರ ಪಂಚಾಯತರಾಜ್ ತಿದ್ದುಪಡಿ ಕಾನೂನಿನ ಮೂಲಕ ಸ್ಥಳೀಯ ಸಂಸ್ಥೆಗಳನ್ನು ರಾಜ್ಯಸರಕಾರದ ಬಿಗಿ ಮುಷ್ಟಿಗೆ ಒಳಪಡಿಸಲಾಯಿತು.

೧೯೯೩ ರ ತಿದ್ದುಪಡಿ ವಿಧೇಯರದ ಪ್ರಮುಖ ಅಂಶಗಳು ಕೆಳಗಿನಂತಿವೆ.

೧. ಮೂರು ಹಂತಗಳಲ್ಲಿ ಪಂಚಾಯತರಾಜ್ ವ್ಯವಸ್ಥೆ ಸ್ಥಾಪನೆ.

i) ಗ್ರಾಮ ಪಂಚಾಯತಿ ii) ತಾಲೂಕಾ ಪಂಚಾಯತಿ iii) ಜಿಲ್ಲಾ ಪಂಚಾಯತಿ

೨. ಪ್ರತಿ ಐದು ಸಾವಿರ ಜನಸಂಖ್ಯೆಗೆ ಒಂದರಂತೆ ಗ್ರಾಮ ಪಂಚಾಯತಿ ಸ್ಥಾಪನೆ.

೩. ಮೂರೂ ಹಂತದ ಪ್ರತಿನಿಧಿಗಳ ಆಯ್ಕೆ (ಬಹುತೇಕ) ಪ್ರತ್ಯಕ್ಷ ಚುನಾವಣೆಯ ಮೂಲಕ.

೪. ಗ್ರಾಮ ಪಂಚಾಯತಿಗೆ ಪಕ್ಷ ರಹಿತ ಚುನಾವಣೆ

೫. ಪರಿಶಿಷ್ಟ (ಅನುಸೂಚಿತ) ಜಾತಿಗೆ ಶೇ.೧೮ ಹಾಗೂ ಪರಿಶಿಷ್ಟ (ಅನುಸೂಚಿತ) ಪಂಗಡಗಳಿಗೆ ೩ರಷ್ಟು ಮೀಸಲಾತಿ, ಹಿಂದುಳಿದ ವರ್ಗದವರಿಗೆ ೧/೩ ಹಾಗೂ ಮಹಿಳೆಯರಿಗೆ ೧/೩ ಮೀಸಲಾತಿ.

೬. ರಾಜ್ಯ ಚುನಾವಣಾ ಆಯೋಗದಿಂದ ಚುನಾವಣೆ.

೭. ಸಂಸತ್ತು ಹಾಗೂ ವಿಧಾನ ಮಂಡಲ ಸದಸ್ಯರಿಗೆ ಜಿಲ್ಲಾ ಪಂಚಾಯತಿ ಹಾಗೂ ತಾಲೂಕಾ ಪಂಚಾಯತಿಗಳಲ್ಲಿ ಪದನಿಮಿತ್ತ ಸದಸ್ಯತ್ವ ಹಾಗೂ ಮತದಾನದ ಅಧಿಕಾರ.

೮. ಜಿಲ್ಲೆಗೊಂದು ಯೋಜನಾ ಸಮಿತಿ ರಚನೆ.

೯. ಪಂಚಾಯತ ರಾಜ್ ಸಂಸ್ಥೆಗಳಿಗೆ ಹೆಚ್ಚಿನ ಹಣಕಾಸಿನ ಅಧಿಕಾರ ನೀಡಿಕೆ.

## ಪಂಚಾಯತಿಗಳ ರಚನೆ ಮತ್ತು ಕಾರ್ಯನಿರ್ವಹಣೆ

### ಗ್ರಾಮಸಭೆ

ಗ್ರಾಮಕ್ಕೊಂದು ಗ್ರಾಮಸಭೆ ಇರುತ್ತದೆ. ಗ್ರಾಮದ ಮತದಾರ ಯಾದಿಯಲ್ಲಿರುವವರೆಲ್ಲರೂ ಗ್ರಾಮಸಭೆಯ ಸದಸ್ಯರಾಗಿರುತ್ತಾರೆ. ಗ್ರಾಮ ಪಂಚಾಯತಿಯ ಅಧ್ಯಕ್ಷನ ಅಧ್ಯಕ್ಷತೆಯಲ್ಲಿ ವರ್ಷಕ್ಕೆ ಎರಡು ಬಾರಿ ಗ್ರಾಮಸಭೆ ಸೇರುತ್ತದೆ. ಗ್ರಾಮದ ಅಭಿವೃದ್ಧಿಯ ಸಲುವಾಗಿ ಮಾಡಬೇಕಾದ ಕೆಲಸಗಳ ಬಗ್ಗೆ ಚರ್ಚಿಸಿ ನಿರ್ಣಯಿಸಲಾಗುತ್ತದೆ. ವಿವಿಧ ಯೋಜನೆಗಳ ಫಲಾನುಭವಿಗಳ ಆಯ್ಕೆ, ಸಾಮೂಹಿಕ

ಚಟುವಟಿಕೆಗಳನ್ನು ಜಾರಿಗೆ ತರುವದು ಮುಂತಾದ ಕಾರ್ಯಗಳನ್ನು ಗ್ರಾಮಸಭೆ ನಿರ್ವಹಿಸುತ್ತದೆ. ಪ್ರತ್ಯಕ್ಷ ಪ್ರಜಾಪ್ರಭುತ್ವದ ಉದಾಹರಣೆಯಾಗಿ ಗ್ರಾಮಸಭೆ ಕಾರ್ಯನಿರ್ವಹಿಸುತ್ತದೆ.

## ಗ್ರಾಮ ಪಂಚಾಯತಿ

ರಚನೆ :- ೫ ರಿಂದ ೭ ಸಾವಿರ ಜನವಸತಿಯ ಗ್ರಾಮ ಅಥವಾ ಗ್ರಾಮ ಸಮೂಹಕ್ಕೆ ಒಂದು ಪಂಚಾಯತಿ ರಚಿಸಲಾಗುತ್ತದೆ. ಮಲೆನಾಡಿನಂಥ ವಿರಳ ಜನವಸತಿ ಪ್ರದೇಶದಲ್ಲಿ ಮೂರು ಸಾವಿರ ಅಥವಾ ಅದಕ್ಕಿಂತ ಕಡಿಮೆ ಜನವಸತಿಗೆ ಒಂದು ಪಂಚಾಯತಿ ಸ್ಥಾಪಿಸಬಹುದು. ೪೦೦ ಜನಸಂಖ್ಯೆ ಅಥವಾ ಅದರ ಭಾಗಕ್ಕೆ ಒಬ್ಬನಂತೆ ಸದಸ್ಯರನ್ನು ಆಯ್ಕೆ ಮಾಡಲಾಗುತ್ತದೆ. ೧೮ ವರ್ಷ ವಯಸ್ಸಾದವರು ಮತಾಧಿಕಾರ ಹೊಂದಿರುತ್ತಾರೆ. ಪಂಚಾಯತಿಯ ಸದಸ್ಯರ ಸಂಖ್ಯೆಯಷ್ಟು ಚುನಾವಣಾ ಕ್ಷೇತ್ರಗಳಿರುತ್ತವೆ. ಒಂದು ಕ್ಷೇತ್ರದಿಂದ ಒಬ್ಬ ಪ್ರತಿನಿಧಿಯನ್ನು ಆಯ್ಕೆಮಾಡಲಾಗುತ್ತದೆ. ಅನುಸೂಚಿತ ಜಾತಿ, ಅನುಸೂಚಿತ ಪಂಗಡಗಳಿಗೆ ಜನಸಂಖ್ಯೆಯ ಆಧಾರದ ಮೇಲೆ ಮೀಸಲಾತಿ ಇರುತ್ತದೆ. ಹಿಂದುಳಿದ ವರ್ಗಗಳಿಗೆ ೧/೩ ಹಾಗೂ ಮಹಿಳೆಯರಿಗೆ ೧/೩ ಮೀಸಲಾತಿ ಇರುತ್ತದೆ.

**ಅರ್ಹತೆ**

೧. ಗ್ರಾಮ ಪಂಚಾಯತಿಯ ಮತದಾರ ಯಾದಿಯಲ್ಲಿ ಹೆಸರಿರಬೇಕು.

೨. ೨೧ ವರ್ಷ ವಯಸ್ಸಾಗಿರಬೇಕು.

೩. ರಾಜ್ಯ ವಿಧಾನಮಂಡಲದ ಸದಸ್ಯರಿಗಿರುವ ಅನರ್ಹತೆಯ ನಿಯಮಗಳು ಗ್ರಾಮ ಪಂಚಾಯತಿ ಸದಸ್ಯರಿಗೂ ಅನ್ವಯಿಸುತ್ತವೆ.

**ಅಧಿಕಾರದ ಅವಧಿ**

ಗ್ರಾಮ ಪಂಚಾಯತಿಯ ಸದಸ್ಯರ ಅವಧಿ ಪಂಚಾಯತಿಯ ಮೊದಲ ಸಭೆ ನಡೆದಂದಿನಿಂದ ೫ ವರ್ಷಗಳು.

**ಸಭೆಗಳು**

ಗ್ರಾಮ ಪಂಚಾಯತಿಯ ಸಭೆ ಕನಿಷ್ಠ ಎರಡು ತಿಂಗಳಿಗೊಮ್ಮೆ ನಡೆಯುತ್ತದೆ. ಒಟ್ಟು ಸದಸ್ಯರ ಪೈಕಿ ೧/೩ ಸದಸ್ಯರು ಹಾಜರಿದ್ದರೆ (ಕೋರಂ) ಸಭೆಯ ಕಲಾಪಗಳು ನಡೆಯುತ್ತವೆ.

**ಸ್ಥಾನ ತೆರವು**

ಮೂರಕ್ಕಿಂತ ಹೆಚ್ಚು ಸಭೆಗಳಿಗೆ ಸತತವಾಗಿ ಗೈರು ಹಾಜರಾದರೆ ಅಥವಾ ಸತತ ನಾಲ್ಕು ತಿಂಗಳವರೆಗೆ ಪಂಚಾಯತ ಪ್ರದೇಶದ ಹೊರಗಿದ್ದರೆ ಅಂಥವರ ಸದಸ್ಯತ್ವ ರದ್ದಾಗುತ್ತದೆ.

## ಪದಾಧಿಕಾರಿಗಳು

ಗ್ರಾಮ ಪಂಚಾಯತಿಯ ಸದಸ್ಯರು ತಮ್ಮಲ್ಲೇ ಒಬ್ಬರನ್ನು ಅಧ್ಯಕ್ಷರನ್ನುಹಾಗೂ ಇನ್ನೊಬ್ಬನ್ನು ಉಪಾಧ್ಯಕ್ಷನನ್ನಾಗಿ ಆಯ್ಕೆ ಮಾಡುತ್ತಾರೆ. ಸದಸ್ಯರ ಆಯ್ಕೆಗಿರುವ ಮೀಸಲಾತಿ ಪದಾಧಿಕಾರಿಗಳ ಆಯ್ಕೆಗೂ ಇರುತ್ತದೆ. ಅಧ್ಯಕ್ಷರ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷ ಅಧ್ಯಕ್ಷರು ಕಾರ್ಯ ನಿರ್ವಹಿಸುತ್ತಾನೆ. ಅಧ್ಯಕ್ಷನು ಅಧಿಕಾರ ಬಿಟ್ಟು ಕೊಡಬೇಕೆಂದರೆ ಸಹಾಯಕ ಆಯುಕ್ತ (ಅಸಿಸ್ಟಂಟ್ ಕಮೀಶನರ್) ರ ಹೆಸರಿನಲ್ಲಿ ರಾಜೀನಾಮೆ ಪತ್ರ ನೀಡಬೇಕು.

**ವಜಾ :-** ಅಧ್ಯಕ್ಷ ಅಥವಾ ಉಪಾಧ್ಯಕ್ಷನನ್ನು ಅವಿಶ್ವಾಸ ಗೊತ್ತುವಳಿ ಮಂಡನೆಗಾಗಿ ಕರೆದ ಸಭೆಯಲ್ಲಿ ಸಾದಾ ಬಹುಮತದ ಮೂಲಕ ವಜಾಮಾಡಬಹುದು.

## ಅಧ್ಯಕ್ಷನ ಅಧಿಕಾರಗಳು

೧. ಗ್ರಾಮ ಪಂಚಾಯತಿಯ ಸಭೆ ಕರೆಯುವದು. ಹಾಗೂ ಅಧ್ಯಕ್ಷತೆ ವಹಿಸಿ ಸಭೆಯ ಕಲಾಪ ನಡೆಸುವದು.

೨. ಸಭೆ ತಗೆದುಕೊಂಡ ನಿರ್ಣಯಗಳ ಜಾರಿಯ ಮೇಲ್ವಿಚಾರಣೆ ನಡೆಸುವದು.

೩. ಗ್ರಾಮ ಪಂಚಾಯತಿಯ ದಾಖಲೆಗಳ ಪರಿಶೀಲನೆ ನಡೆಸುವದು.

**ಪಂಚಾಯತಿಯ ಹಣಕಾಸಿನ ವ್ಯವಸ್ಥೆ :** ಗ್ರಾಮ ಪಂಚಾಯತಿಯ ಅಭಿವೃದ್ಧಿ ಚಟುವಟಿಕೆಗಳಿಗೆ ಹಾಗೂ ಸಿಬ್ಬಂದಿಯ ವೇತನಕ್ಕೆ ಬೇಕಾಗುವ ಹಣವನ್ನು ಕೆಳಗೆ ವಿವರಿಸಲಾದ ರೀತಿಯಲ್ಲಿ ಪಡೆದುಕೊಳ್ಳಲಾಗುತ್ತದೆ.

೧. ರಾಜ್ಯ ಸರಕಾರ, ಜಿಲ್ಲಾ ಪಂಚಾಯತಿ ಹಾಗೂ ತಾಲೂಕು ಪಂಚಾಯತಿಗಳಿಂದ ಬರುವ ಅನುದಾನ.

೨. ತೆರಿಗೆ ಶುಲ್ಕ ಹಾಗೂ ದಂಡದ ಮೂಲಕ ವಸೂಲಾಗುವ ಹಣ.

೩. ಪಂಚಾಯತಿಯ ಆಸ್ತಿ ಮಾರಾಟದಿಂದ ಬರುವ ಹಣ.

**ಸ್ಥಾಯಿ ಸಮಿತಿಗಳು :** ಮುಂದೆ ನಮೊದಿಸಲಾದ ಮೂರು ಸ್ಥಾಯಿ ಸಮಿತಿಗಳ ಮೂಲಕ ಗ್ರಾಮ ಪಂಚಾಯತಿಗಳು ಕಾರ್ಯನಿರ್ವಹಿಸುತ್ತವೆ. ೧) ಉತ್ಪಾದನಾ ಸಮಿತಿ ೨) ಸಾಮಾಜಿಕ ನ್ಯಾಯ ಸಮಿತಿ ಹಾಗೂ ೩) ಸೌಕರ್ಯಗಳ ಸಮಿತಿ.

## ಕಾರ್ಯದರ್ಶಿ ಹಾಗೂ ಸಿಬ್ಬಂದಿ

ಗ್ರಾಮ ಪಂಚಾಯತಿಯ ಆಡಳಿತ ಮುಖ್ಯಸ್ಥನಾಗಿ ರಾಜ್ಯಸರಕಾರದಿಂದ ನೇಮಕಗೊಂಡ ಕಾರ್ಯದರ್ಶಿ ಇರುತ್ತಾನೆ. ಪಂಚಾಯತಿಯ ಆಡಳಿತ ನಿರ್ವಹಣೆಗೆ ಅಗತ್ಯವಾದ ಸಿಬ್ಬಂದಿಯನ್ನು ಜಿಲ್ಲಾ ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಯ ಅನುಮತಿ ಪಡೆದು ಕಾರ್ಯದರ್ಶಿಯೇ ನೇಮಕ ಮಾಡುತ್ತಾನೆ.

## ಗ್ರಾಮ ಪಂಚಾಯತಿಯ ಕಾರ್ಯಗಳು.

೧. ಪಂಚಾಯತಿ ಪ್ರದೇಶದ ಅಭಿವೃದ್ಧಿಗಾಗಿ ಯೋಜನೆಗಳನ್ನು ತಯಾರಿಸುವದು.

೨. ವಾರ್ಷಿಕ ಮುಂಗಡ ಪತ್ರ ತಯಾರಿಸುವದು.

೩. ನೈಸರ್ಗಿಕ ಪ್ರಕೋಪಗಳಿಗೆ ಪರಿಹಾರ ಕಾರ್ಯ ಕೈಗೊಳ್ಳುವದು.

೪. ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ಸಂಬಂಧಿಸಿದ ಮಾಹಿತಿ ಹಾಗೂ ಅಂಕಿ ಅಂಶ ತಯಾರಿಸಿ ಸಂರಕ್ಷಿಸುವದು.

೫. ವ್ಯವಸಾಯ ಹಾಗೂ ತೋಟಗಾರಿಕೆಗೆ ಉತ್ತೇಜನ ನೀಡುವದು.

೬. ಹೈನುಗಾರಿಕೆ, ಕೋಳಿಸಾಕಣೆ ಹಾಗೂ ಅಗತ್ಯವಿದ್ದಲ್ಲಿ ಮೀನುಗಾರಿಕೆ ಅಭಿವೃದ್ಧಿಪಡಿಸುವುದು.

೭. ಖಾದಿ ಮತ್ತು ಗ್ರಾಮೋದ್ಯೋಗಗಳಿಗೆ ಪ್ರೋತ್ಸಾಹ ನೀಡುವದು.

೮. ಗ್ರಾಮೀಣ ಗೃಹ ನಿರ್ಮಾಣ ಹಾಗೂ ದುರ್ಬಲ ವರ್ಗಗಳಿಗೆ ವಸತಿ ನಿವೇಶನ ನೀಡುವುದು.

೯. ಸಾರ್ವಜನಿಕ ಆರೋಗ್ಯ, ಕುಟುಂಬ ಕಲ್ಯಾಣ, ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿಗೆ ಕಾರ್ಯಕ್ರಮ ಹಾಕಿಕೊಳ್ಳುವುದು.

೧೦. ಕುಡಿಯುವ ನೀರಿನ ಪೂರೈಕೆ ಹಾಗೂ ಜಲಮಾಲಿನ್ಯ ತಡೆಗಟ್ಟುವದು.

೧೧. ಗ್ರಾಮೀಣ ವಿದ್ಯುದೀಕರಣ.

೧೨. ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣಕ್ಕೆ ಪ್ರೋತ್ಸಾಹ ನೀಡುವದು.

೧೩. ಬಡತನ ನಿರ್ಮೂಲನಾ ಕಾರ್ಯಕ್ರಮ ಅನುಷ್ಠಾನ.

೧೪. ರಸ್ತೆ, ಕಟ್ಟಡ ಹಾಗೂ ಸೇತುವೆ ನಿರ್ಮಾಣ ಮತ್ತು ನಿರ್ವಹಣೆ.

೧೫. ದುರ್ಬಲ ವರ್ಗಗಳ ಕಲ್ಯಾಣ ಕಾರ್ಯಕ್ರಮ ಜಾರಿಗೊಳಿಸುವದು.

೧೬. ಜಾತ್ರೆ ಮತ್ತು ಮಾರುಕಟ್ಟೆ ನಿಯಂತ್ರಣ.

೧೭. ಸಾರ್ವಜನಿಕ ಉದ್ಯಾನ ಹಾಗೂ ಕ್ರೀಡಾಂಗಣ ರಕ್ಷಣೆ.

೧೮. ಸಾರ್ವಜನಿಕ ವಿತರಣಾ ವ್ಯವಸ್ಥೆ ಬಲಪಡಿಸುವದು.

೧೯. ಅಂಗವಿಕಲರ ಹಾಗೂ ಬುದ್ಧಿಮಾಂದ್ಯರ ಕಲ್ಯಾಣ ಕಾರ್ಯಕ್ರಮ ಜಾರಿಗಾಗಿ ಪ್ರಯತ್ನ.

೨೦. ಯಾತ್ರಾ ಸ್ಥಳ ನಿರ್ವಹಣೆ.

೨೧. ಅಂಗಡಿ ಪ್ರಾರಂಭಿಸಲು, ಕಾರ್ಖಾನೆ ನಿರ್ಮಿಸಲು ಅನುಮತಿ ನೀಡುವದು.

## ತಾಲೂಕು ಪಂಚಾಯತಿ

ಪಂಚಾಯತ ರಾಜ್ ವ್ಯವಸ್ಥೆಯ ಎರಡನೇ ಹಂತವಾಗಿ ತಾಲೂಕು ಪಂಚಾಯತಿ ಕಾರ್ಯನಿರ್ವಹಿಸುತ್ತದೆ. ತಾಲೂಕಿಗೊಂದರಂತೆ ತಾಲೂಕಾ ಪಂಚಾಯತಿಯ ರಚನೆಯಾಗಿರುತ್ತದೆ.

## ರಚನೆ

೧೦ ಸಾವಿರ ಜನಸಂಖ್ಯೆ ಅಥವಾ ಅದರ ಭಾಗಕ್ಕೆ ಒಬ್ಬ ಸದಸ್ಯನನ್ನು ವಯಸ್ಕ ಮತದಾನ ಪದ್ಧತಿಯ ಮೂಲಕ ತಾಲೂಕಾ ಪಂಚಾಯತಿಗೆ ಆಯ್ಕೆ ಮಾಡಲಾಗುತ್ತದೆ. ಕಡಿಮೆ ಎಂದರೆ ೧೧ ಜನ ಸದಸ್ಯರನ್ನು ತಾಲೂಕಾ ಪಂಚಾಯತಿ ಹೊಂದಿರುತ್ತದೆ. ಚುನಾಯಿತ ಸದಸ್ಯರಲ್ಲದೇ ತಾಲೂಕನ್ನು ಪ್ರತಿನಿಧಿಸುವ ಸಂಸತ್ ಹಾಗೂ ವಿಧಾನ ಮಂಡಲದ ಸದಸ್ಯರು ತಾಲೂಕಾ ಪಂಚಾಯತಿಯ ಪದನಿಮಿತ್ತ ಸದಸ್ಯರಾಗಿರುತ್ತಾರೆ. ತಾಲೂಕಿನ ಗ್ರಾಮ ಪಂಚಾಯತಿಗಳ ಅಧ್ಯಕ್ಷರ ಪೈಕಿ೧/೫ ಸದಸ್ಯರು ಸರತಿಯ ಮೇರೆಗೆ ಒಂದು ವರ್ಷದ ಅವಧಿಗೆ ಸದಸ್ಯರಾಗಿರುತ್ತಾರೆ.

**ಅರ್ಹತೆ :** ತಾಲೂಕಾ ಪಂಚಾಯತಿಯ ಮತದಾರ ಯಾದಿಯಲ್ಲಿರುವವರು ಹಾಗೂ ೨೧ ವರ್ಷ ವಯಸ್ಸಾದವರು ಸ್ಪರ್ಧಿಸುವ ಅರ್ಹತೆ ಹೊಂದಿರುತ್ತಾರೆ.

**ಅನರ್ಹತೆ :** ರಾಜ್ಯ ವಿಧಾನ ಮಂಡಲದ ಸದಸ್ಯರಾಗುವವರಿಗೆ ಸಂಬಂಧಿಸಿದ ಅನರ್ಹತೆಯ ನಿಯಮಗಳು ತಾಲೂಕಾ ಪಂಚಾಯತಿಯ ಸದಸ್ಯರಾಗಬಯಸುವವರಿಗೆ ಅನ್ವಯಿಸುತ್ತವೆ.

## ಅಧಿಕಾರದ ಅವಧಿ

ತಾಲೂಕಾ ಪಂಚಾಯತಿಯ ಸದಸ್ಯರ ಅಧಿಕಾರದ ಅವಧಿ ಮೊದಲ ಸಭೆ ನಡೆದ ದಿನದಿಂದ ೫ ವರ್ಷಗಳು ಅವಧಿ ಮುಗಿಯುವ ಪೂರ್ವದಲ್ಲಿ ಅಧ್ಯಕ್ಷರಿಗೆ ರಾಜೀನಾಮೆ ಪತ್ರ ನೀಡುವ ಮೂಲಕ ಸದಸ್ಯರು ಸ್ಥಾನತ್ಯಾಗ ಮಾಡಬಹುದು. ಅಸಮರ್ಥತೆ ಅಥವಾ ದುರ್ನಡತೆಯ ಕಾರಣಕ್ಕಾಗಿ ತಾಲೂಕಾ ಪಂಚಾಯತಿಯ ಶಿಫಾರಸಿನ ಮೇರೆಗೆ ಸರಕಾರ ಸದಸ್ಯರನ್ನು ವಜಾ ಮಾಡಬಹುದು.

## ಸಭೆ ಹಾಗೂ ಕೋರಂ

ತಾಲೂಕಾ ಪಂಚಾಯತಿಯ ಸಭೆ ಕನಿಷ್ಠ ಎರಡು ತಿಂಗಳಿಗೊಮ್ಮೆ ಸೇರುತ್ತದೆ. ಒಟ್ಟು ಸದಸ್ಯರ ಪೈಕಿ ೧/೩ ಸದಸ್ಯರ ಹಾಜರಾತಿ (ಕೋರಂ) ಇದ್ದರೆ ಮಾತ್ರ ಸಭೆಯ ಕಲಾಪಗಳು ನಡೆಯುತ್ತವೆ.

## ಪದಾಧಿಕಾರಿಗಳು

ತಾಲೂಕಾ ಪಂಚಾಯತಿಯ ಚುನಾಯಿತ ಸದಸ್ಯರು ತಮ್ಮಲ್ಲಿ ಒಬ್ಬರನ್ನು ಅಧ್ಯಕ್ಷನನ್ನಾಗಿ ಹಾಗೂ ಇನ್ನೊಬ್ಬರನ್ನು ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ಅವರ ಅಧಿಕಾರದ ಅವಧಿ ೨೦ ತಿಂಗಳು. ಸದಸ್ಯರ ಆಯ್ಕೆಗೆ ಅನ್ವಯಿಸುವ ಮೀಸಲಾತಿ ನಿಯಮಗಳು ಅಧ್ಯಕ್ಷ, ಉಪಾಧ್ಯಕ್ಷರ ಆಯ್ಕೆಯ ವಿಷಯದಲ್ಲೂ ಅನ್ವಯವಾಗುತ್ತದೆ. ಸರತಿಯ ಮೇಲೆ ಮೀಸಲಾತಿ ಜಾರಿಗೊಳಿಸಲಾಗುತ್ತದೆ. ತಾಲೂಕಾ ಪಂಚಾಯತಿಯ

ಸದಸ್ಯರು ಬಹುಮತದ ಗೊತ್ತುವಳಿಯ ಮೂಲಕ ಅಧ್ಯಕ್ಷ ಉಪಾಧ್ಯಕ್ಷರನ್ನು ವಜಾ ಮಾಡಬಹುದು. ಅಧ್ಯಕ್ಷನು ಸಹಾಯಕ ಆಯುಕ್ತ (ಅಸಿಸ್ಟಂಟ್ ಕಮೀಶನರ್)ರ ಹೆಸರಿನಲ್ಲಿ ಪತ್ರ ಸಲ್ಲಿಸುವ ಮೂಲಕ ರಾಜೀನಾಮೆ ನೀಡಬಹುದು. ಉಪಾಧ್ಯಕ್ಷನು ಅಧ್ಯಕ್ಷರಿಗೆ ರಾಜೀನಾಮೆ ಪತ್ರ ಸಲ್ಲಿಸಬಹುದು.

### ಅಧ್ಯಕ್ಷನ ಕಾರ್ಯಗಳು

೧. ತಾಲೂಕಾ ಪಂಚಾಯತಿಯ ಸಭೆ ಕರೆದು ಅದರ ಅಧ್ಯಕ್ಷತೆ ವಹಿಸುವುದು.

೨. ತಾಲೂಕಾ ಪಂಚಾಯತಿಯ ಸಭೆಯಲ್ಲಿ ತಗೆದುಕೊಂಡ ನಿರ್ಣಯಗಳ ಜಾರಿಯ ಮೇಲ್ವಿಚಾರಣೆ ಮಾಡುವುದು.

೩. ತಾಲೂಕಾ ಪಂಚಾಯತಿಯ ಆಡಳಿತದ ಮೇಲ್ವಿಚಾರಣೆ ನಡೆಸುವುದು.

೪. ನೈಸರ್ಗಿಕ ವಿಕೋಪಗಳ ಸಂದರ್ಭದಲ್ಲಿ ತಾಲೂಕಾ ಪಂಚಾಯತಿಯ ಅನುಮೋದನೆ ಗೊಳಪಟ್ಟು ರೂ. ೨೫,೦೦೦ ಪರಿಹಾರವನ್ನು ತಕ್ಷಣ ಮಂಜೂರು ಮಾಡುವುದು.

ಅಧ್ಯಕ್ಷನ ಗೈರು ಹಾಜರಿಯಲ್ಲಿ ಉಪಾಧ್ಯಕ್ಷನು ಅಧ್ಯಕ್ಷನ ಕಾರ್ಯ ನಿರ್ವಹಿಸುವನು.

### ಸ್ಥಾಯಿ ಸಮಿತಿಗಳು

ತಾಲೂಕಾ ಪಂಚಾಯತಿ ಮೂರು ಸ್ಥಾಯಿ ಸಮಿತಿಗಳ ಮೂಲಕ ಕಾರ್ಯನಿರ್ವಹಿಸುತ್ತದೆ. ಅವು ಯಾವುವೆಂದರೆ ೧) ಸಾಮಾನ್ಯ ಸ್ಥಾಯಿ ಸಮಿತಿ ೨) ಹಣಕಾಸು ಲೆಕ್ಕ ಪತ್ರ ಹಾಗೂ ಯೋಜನಾ ಸ್ಥಾಯಿ ಸಮಿತಿ ಹಾಗೂ ೩) ಸಾಮಾಜಿಕ ನ್ಯಾಯ ಸಮಿತಿ. ಸಾಮಾನ್ಯವಾಗಿ ಪ್ರತಿಯೊಂದು ಸ್ಥಾಯಿ ಸಮಿತಿಯಲ್ಲೂ ೫ ಜನ ಸದಸ್ಯರಿರುತ್ತಾರೆ. ಒಬ್ಬ ಸದಸ್ಯ ಒಂದಕ್ಕಿಂತ ಹೆಚ್ಚು ಸ್ಥಾಯಿ ಸಮಿತಿಗಳ ಸದಸ್ಯನಾಗುವಂತಿಲ್ಲ. ತಾಲೂಕಾ ಪಂಚಾಯತಿ ಅಧ್ಯಕ್ಷರು ಹಣಕಾಸು, ಲೆಕ್ಕ ಹಾಗೂ ಯೋಜನಾ ಸಮಿತಿಯ ಅಧ್ಯಕ್ಷರಾಗಿರುತ್ತಾರೆ. ಉಪಾಧ್ಯಕ್ಷನು ಸಾಮಾಜಿಕ ನ್ಯಾಯ ಸಮಿತಿಯ ಅಧ್ಯಕ್ಷನಾಗಿರುತ್ತಾನೆ.

### ಕಾರ್ಯ ನಿರ್ವಾಹಕ ಅಧಿಕಾರಿ

ತಾಲೂಕಾ ಪಂಚಾಯತಿಯ ಆಡಳಿತದ ಮುಖ್ಯಸ್ಥರಾಗಿ ಕಾರ್ಯನಿರ್ವಾಹಕ ಅಧಿಕಾರಿ ಇರುತ್ತಾರೆ. ಸಹಾಯಕ ಆಯುಕ್ತ (ಅಸಿಸ್ಟಂಟ್ ಕಮೀಷನರ್) ದರ್ಜೆಯ ಅಧಿಕಾರಿಯಾದ ಇವರು ಸರಕಾರದಿಂದ ನೇಮಕ ಹೊಂದಿರುತ್ತಾರೆ. ತಾಲೂಕಾ ಪಂಚಾಯತಿಯ ಆಡಳಿತ ನಿರ್ವಹಣೆಯ ಜವಾಬ್ದಾರಿ ಅವರದಾಗಿದೆ. ಅವರ ಕೈ ಕೆಳಗೆ ಅನೇಕ ಅಧಿಕಾರಿಗಳು ಹಾಗೂ ಸಿಬ್ಬಂದಿ ಕಾರ್ಯನಿರ್ವಹಿಸುತ್ತಾರೆ. ಇವರೆಲ್ಲ ರಾಜ್ಯದ ಯಾವುದೇ ತಾಲುಕಾ ಪಂಚಾಯತಿಗೆ ವರ್ಗಾವಣೆ ಹೊಂದಬಹುದು. ಕಾರ್ಯನಿರ್ವಾಹಕ

ಅಧಿಕಾರಿಗೆ ತಾಲೂಕಾ ಪಂಚಾಯತಿಯ ಅಧೀನದಲ್ಲಿ ಬರುವ ಗ್ರಾಮ ಪಂಚಾಯತಿಗಳ ದಾಖಲೆ ಪರಿಶೀಲಿಸುವ ಅಧಿಕಾರವಿದೆ. ತಾಲೂಕಾ ಪಂಚಾಯತಿಯ ಬಹುಮತ ನಿರ್ಣಯದ ವಿರುದ್ಧ ಟಿಪ್ಪಣಿ ಬರೆಯುವ ಅಧಿಕಾರ ಅವರಿಗಿದೆ. ಪಂಚಾಯತಿಯ ಸಭೆಗಳಲ್ಲಿ ನಡೆಯುವ ಚರ್ಚೆಯಲ್ಲಿ ಅವರು ಭಾಗವಹಿಸಬಹುದು, ಆದರೆ ಮತಾಧಿಕಾರ ಹೊಂದಿಲ್ಲ.

## ತಾಲೂಕಾ ಪಂಚಾಯತಿಯ ಕಾರ್ಯಗಳು :

೧. ಸಾಮಾನ್ಯ ಕಾರ್ಯಗಳು

i) ಜಿಲ್ಲಾ ಯೋಜನೆಗೆ ಹೊಂದಿಕೆಯಾಗುವಂತೆ ವಾರ್ಷಿಕ ಯೋಜನೆ ತಯಾರಿಸುವದು.

ii) ಗ್ರಾಮ ಪಂಚಾಯತಿಗಳ ವಾರ್ಷಿಕ ಯೋಜನೆ ಪರಿಸೀಲಿಸಿ ಕ್ರೋಢಿಕೃತ ವಾರ್ಷಿಕ ಯೋಜನೆಗಳನ್ನು ಜಿಲ್ಲಾ ಪಂಚಾಯತಿಗೆ ಸಲ್ಲಿಸುವದು.

iii) ತಾಲೂಕಿನ ವಾರ್ಷಿಕ ಮುಂಗಡ ಪತ್ರ ತಯಾರಿಸುವದು.

vi) ನೈಸರ್ಗಿಕ ವಿಕೋಪಗಳಿಗೆ ಪರಿಹಾರ ದೊರಕಿಸಿಕೊಡುವದು.

v) ರಾಜ್ಯ ಸರಕಾರದ ಅಥವಾ ಜಿಲ್ಲಾ ಪಂಚಾಯತಿಯ ಆದೇಶ ಪಾಲಿಸುವದು.

೨. ವೈಜ್ಞಾನಿಕ ಕೃಷಿ ಜಾರಿ, ಭೂ ಸಾಗುವಳಿ ಹಾಗೂ ತೋಟಗಾರಿಕೆ ಅಭಿವೃದ್ಧಿ ಮತ್ತು ರೈತರಿಗೆ ತರಬೇತಿ ನೀಡುವದು.

೩. ಭೂಮಿಯ ನಿರ್ವಹಣೆ ಹಾಗೂ ಭೂಸಾರ ಸಂರಕ್ಷಣೆ.

೪. ಪಶುಸಂಗೋಪನೆ, ಹೈನುಗಾರಿಕೆ, ಕೋಳಿಸಾಕಾಣಿಕೆ, ಮೀನುಗಾರಿಕೆ ಮುಂತಾದವುಗಳ ನಿರ್ವಹಣೆ.

೫. ಸಣ್ಣ ನೀರಾವರಿ ಹಾಗೂ ನೀರು ನಿರ್ವಹಣೆಗೆ ಉತ್ತೇಜನ ನೀಡುವದು.

೬. ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುವದು.

೭. ಗ್ರಾಮೀಣ ಗೃಹ ನಿರ್ಮಾಣ ಮತ್ತು ವಿದ್ಯುದೀಕರಣ.

೮. ಖಾದಿ ಮತ್ತು ಗೃಹ ಕೈಗಾರಿಕೆಗಳಿಗೆ ಉತ್ತೇಜನ ನೀಡುವದು.

೯. ಅರಣ್ಯ ಸಂರಕ್ಷಣೆ, ಅರಣ್ಯ ಉತ್ಪನ್ನ (ಸೌದೆ, ಮೇವು)ಗಳ ರಕ್ಷಣೆ ಮತ್ತು ಮರ ಬೆಳೆಸುವದು.

೧೦. ಕುಡಿಯುವ ನೀರು ಪೂರೈಕೆ ಮತ್ತು ಜಲಮಾಲಿನ್ಯ ನಿಯಂತ್ರಣ .

೧೧. ಸಮಾಜ ಕಲ್ಯಾಣ ಮತ್ತು ಬಡತನ ನಿರ್ಮೂಲನ ಕಾರ್ಯಕ್ರಮಗಳ ಅನುಷ್ಠಾನ .

೧೨. ಸಾಮಾಜಿಕ ವಿತರಣಾ ವ್ಯವಸ್ಥೆ ಜಾರಿಗೊಳಿಸುವದು.

೧೩. ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣಕ್ಕೆ ಪ್ರೋತ್ಸಾಹ, ವಯಸ್ಕ ಶಿಕ್ಷಣಕ್ಕೆ ಬೆಂಬಲ ನೀಡುವದು.

೧೪. ತಾಂತ್ರಿಕ ತರಬೇತಿ ಹಾಗೂ ವೃತ್ತಿ ಶಿಕ್ಷಣ ನೀಡುವದು.
೧೫. ದುರ್ಬಲ ವರ್ಗಗಳ ಅಭಿವೃದ್ಧಿಗೆ ಪ್ರೋತ್ಸಾಹ ನೀಡುವದು.
೧೬. ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ ಜಾರಿಗೊಳಿಸುವದು.
೧೭. ತಾಂತ್ರಿಕ ತರಬೇತಿ ಮತ್ತು ವೃತ್ತಿ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವದು.
೧೮. ಅಂಗವಿಕಲರ ಹಾಗೂ ಬುದ್ಧಿಮಾಂದ್ಯರ ಅಭಿವೃದ್ಧಿ ಸಾಧಿಸುವದು.
೧೯. ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಯೋಜನೆ ಜಾರಿಗೊಳಿಸುವದು.
೨೦. ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುವದು.
೨೧. ರಾಜ್ಯ ಸರಕಾರ ಹಾಗೂ ಜಿಲ್ಲಾ ಪಂಚಾಯತಿಗಳು ವಹಿಸಿಕೊಡುವ ಕಾರ್ಯಗಳ ನಿರ್ವಹಣೆ.

## ಜಿಲ್ಲಾ ಪಂಚಾಯತಿ

ಪಂಚಾಯತ ರಾಜ್ ವ್ಯವಸ್ಥೆಯ ಮೂರನೇ ಹಾಗೂ ಕೊನೆಯ ಹಂತದಲ್ಲಿ ಜಿಲ್ಲಾ ಪಂಚಾಯತಿ ಇದೆ. ಜಿಲ್ಲೆಗೊಂದರಂತೆ ಜಿಲ್ಲಾ ಪಂಚಾಯತಿಯನ್ನು ಸ್ಥಾಪಿಸಲಾಗುತ್ತದೆ. ಜಿಲ್ಲಾ ಪಂಚಾಯತಿಯ ಚುನಾಯಿತ ಸದಸ್ಯರ ಸಂಖ್ಯೆಯನ್ನು ಜಿಲ್ಲೆಯ ಜನಸಂಖ್ಯೆಯ ಆಧಾರದ ಮೇಲೆ ನಿರ್ಧರಿಸಲಾಗುತ್ತದೆ. ೪೦ ಸಾವಿರ ಜನಸಂಖ್ಯೆಗೆ ಒಬ್ಬ ಸದಸ್ಯನೀರಬೇಕೆಂದಿದ್ದರೂ ಕೆಲಸಂದರ್ಭಗಳಲ್ಲಿ ೩೦ ಸಾವಿರ ಜನರಿಗೆ ಒಬ್ಬರಂತೆ ಸದಸ್ಯರನ್ನು ಆಯ್ಕೆಮಾಡುವ ಅವಕಾಶ ನೀಡಬಹುದು. ಚಿಕ್ಕಮಗಳೂರು ಹಾಗೂ ಕೊಡಗು ಜಿಲ್ಲೆಗಳಲ್ಲಿ ೧೮ ಸಾವಿರ ಜನರಿಗೆ ಒಬ್ಬರಂತೆ ಸದಸ್ಯ ಸಂಖ್ಯೆ ನಿರ್ಧರಿಸಲಾಗಿದೆ.

### ರಚನೆ

ಜಿಲ್ಲಾಪಂಚಾಯತಿ ಕೆಳಕಾಣಿಸಿದ ವರ್ಗಗಳ ಸದಸ್ಯರನ್ನು ಒಳಗೊಂಡಿರುತ್ತದೆ.

೧. ಜನತೆಯಿಂದ ನೇರ ಚುನಾವಣೆಯ ಮೂಲಕ ಆಯ್ಕೆಯಾದ ಸದಸ್ಯರು.
೨. ಜಿಲ್ಲೆಯನ್ನು ಪ್ರತಿನಿಧಿಸುವ ಸಂಸತ್ (ಲೋಕಸಭೆ ಹಾಗೂ ರಾಜ್ಯ ಸಭೆ) ಸದಸ್ಯರು.
೩. ಜಿಲ್ಲೆಯನ್ನು ಪ್ರತಿನಿಧಿಸುವ ವಿಧಾನ ಮಂಡಲ, (ವಿಧಾನ ಸಭೆ ಹಾಗೂ ವಿಧಾನ ಪರಿಷತ್) ಸದಸ್ಯರು.
೪. ತಾಲೂಕಾ ಪಂಚಾಯತಿಗಳ ಅಧ್ಯಕ್ಷರು.

### ಅರ್ಹತೆಗಳು

ಜಿಲ್ಲಾ ಪಂಚಾಯತಿಯ ಸದಸ್ಯನಾಗಬಯಸುವ ವ್ಯಕ್ತಿ ಜಿಲ್ಲೆಯ ಮತದಾರರ ಪಟ್ಟಿಯಲ್ಲಿ ಹೆಸರು ನೊಂದಾಯಿಸಿದವನಾಗಿರಬೇಕು, ಹಾಗೂ ಅವನಿಗೆ ೨೧ ವರ್ಷ ವಯಸ್ಸಾಗಿರಬೇಕು.

### ಅನರ್ಹತೆಗಳು

ರಾಜ್ಯ ವಿಧಾನಮಂಡಲ ಚುನಾವಣೆಗಾಗಿ ಇರುವ ಅನರ್ಹತೆಯ ನಿಯಮಗಳು ಜಿಲ್ಲಾ ಪಂಚಾಯತಿ ಸದಸ್ಯರಿಗೂ ಅನ್ವಯಿಸುತ್ತವೆ.

### ಆಯ್ಕೆ

ನಿರ್ದಿಷ್ಠ ಜನಸಂಖ್ಯೆಯನ್ನೊಳಗೊಂಡ ಕ್ಷೇತ್ರದಿಂದ, ವಯಸ್ಕ ಮತದಾನದ ಆಧಾರದ ಮೇಲೆ ಜಿಲ್ಲಾ ಪಂಚಾಯತಿಯ ಸದಸ್ಯರ ಆಯ್ಕೆ ನಡೆಯುತ್ತದೆ. ೧೮ ವರ್ಷ ವಯಸ್ಸಾದ ಹಾಗೂ ಮತದಾರ ಯಾದಿಯಲ್ಲಿರುವ ಮತದಾರರದಿಂದ ಸದಸ್ಯರು ಆಯ್ಕೆಯಾಗುತ್ತಾರೆ.

### ಅಧಿಕಾರದ ಅವಧಿ

ಜಿಲ್ಲಾ ಪಂಚಾಯತಿಯ ಸದಸ್ಯರ ಅಧಿಕಾರದ ಅವಧಿ ಮೊದಲ ಸಭೆ ನಡೆದ ದಿನದಿಂದ ೫ ವರ್ಷಗಳು. ಸದಸ್ಯರು ಸ್ವಇಚ್ಚೆಯ ಮೂಲಕ ಅಧ್ಯಕ್ಷರ ಹೆಸರಿನಲ್ಲಿ ರಾಜೀನಾಮೆ ಪತ್ರ ನೀಡಬಹುದು. ಅಸಮರ್ಥತೆ ಅಥವಾ ದುರ್ನಡತೆಯ ಆಧಾರದ ಮೇಲೆ ಜಿಲ್ಲಾ ಪಂಚಾಯತಿಯ ಶಿಫಾರಸಿನ ಮೇಲೆ ರಾಜ್ಯ ಸರಕಾರ ಸದಸ್ಯರ ವಜಾ ಮಾಡಬಹುದು.

**ಸಭೆ :-** ಎರಡು ತಿಂಗಳಿಗೊಮ್ಮೆಯಾದರೂ ಜಿಲ್ಲಾ ಪಂಚಾಯತಿಯ ಸಭೆ ನಡೆಯಬೇಕೆಂಬ ನಿಯಮವಿದೆ. ೧/೩ ಸದಸ್ಯರ ಹಾಜರಾತಿ (ಕೋರಂ) ಇದ್ದಾಗ ಕಲಾಪಗಳು ನಡೆಯುತ್ತವೆ ಹಾಗೂ ನಿರ್ಣಯ ಕೈಗೊಳ್ಳಲಾಗುತ್ತದೆ.

### ಪದಾಧಿಕಾರಿಗಳು

ಜಿಲ್ಲಾ ಪಂಚಾಯತಿಯ ಚುನಾಯಿತ ಸದಸ್ಯರ ಪೈಕಿ ಒಬ್ಬರನ್ನು ಅಧ್ಯಕ್ಷರನ್ನಾಗಿ ಹಾಗೂ ಇನ್ನೊಬ್ಬರನ್ನೂ ಉಪಾಧ್ಯಕ್ಷರನ್ನಾಗಿ ಆಯ್ಕೆಮಾಡಲಾಗುತ್ತದೆ. ಮೀಸಲಾತಿ ನಿಯಮಗಳಿಗೆ ಅನುಗುಣವಾಗಿ ಆಯ್ಕೆ ನಡೆಯುತ್ತದೆ. ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ಅಧಿಕಾರದ ಅವಧಿ ೨೦ ತಿಂಗಳುಗಳು.

**ಪದಚ್ಯುತಿ :-** ಅವಿಶ್ವಾಸ ನಿರ್ಣಯ ಸ್ವೀಕರಿಸುವ ಮೂಲಕ ಚುನಾಯಿತ ಸದಸ್ಯರು, ಅಧ್ಯಕ್ಷ, ಉಪಾಧ್ಯಕ್ಷರನ್ನು ವಜಾ ಮಾಡಬಹುದು.

### ಅಧ್ಯಕ್ಷರ ಕಾರ್ಯಗಳು

೧. ಜಿಲ್ಲಾ ಪಂಚಾಯತಿಯ ಸಭೆ ಕರೆಯುವದು, ಸಭೆಯ ಅಧ್ಯಕ್ಷತೆ ವಹಿಸಿಕೊಂಡು ಕಲಾಪ ನಡೆಸುವದು.

೨. ಜಿಲ್ಲಾ ಪಂಚಾಯತಿಯ ಹಾಗೂ ಅದರ ಸ್ಥಾಯಿ ಸಮಿತಿಗಳ ನಿರ್ಣಯಗಳ ಜಾರಿಯ ಮೇಲ್ವಿಚಾರಣೆ ನಡೆಸುವದು.

೩. ನೈಸರ್ಗಿಕ ದುರಂತಗಳು ಸಂಭವಿಸಿದಾಗ ಜಿಲ್ಲಾ ಪಂಚಾಯತಿಯ ಅನುಮತಿ ನಿರೀಕ್ಷಿಸಿ ರೂ. ೧ ಲಕ್ಷ ಮಂಜೂರು ಮಾಡುವದು.

೪. ಜಿಲ್ಲಾ ಪಂಚಾಯತಿ ಆಡಳಿತದ ನಿಯಂತ್ರಣ ಹಾಗೂ ಮೇಲ್ವಿಚಾರಣೆ ನಡೆಸುವದು.

ಸ್ಥಾಯಿ ಸಮಿತಿಗಳು

ಜಿಲ್ಲಾ ಪಂಚಾಯತಿಯ ಸುಗಮ ಕಾರ್ಯ ನಿರ್ವಹಣೆಗಾಗಿ ಕೆಳಗೆ ನಮೂದಿಸಲಾದ ೫ ಸ್ಥಾಯಿ ಸಮಿತಿಗಳಿರುತ್ತವೆ.

೧. ಸಾಮಾನ್ಯ ಸ್ಥಾಯಿ ಸಮಿತಿ.

೨. ಸಾಮಾಜಿಕ ನ್ಯಾಯ ಸಮಿತಿ.

೩. ಹಣಕಾಸು, ಲೆಕ್ಕ ಮತ್ತು ಯೋಜನಾ ಸಮಿತಿ .

೪. ಶಿಕ್ಷಣ ಹಾಗೂ ಆರೋಗ್ಯ ಸಮಿತಿ.

೫. ಬೇಸಾಯ ಹಾಗೂ ಕೈಗಾರಿಕಾ ಸಮಿತಿ.

ಪ್ರತಿಯೊಂದು ಸ್ಥಾಯಿ ಸಮಿತಿಯಲ್ಲಿ ಜಿಲ್ಲಾ ಪಂಚಾಯತಿಯಿಂದ ಆಯ್ಕೆಯಾದ ೫ ಜನ ಸದಸ್ಯರಿರುತ್ತಾರೆ. ಒಬ್ಬ ಸದಸ್ಯ ಒಂದಕ್ಕಿಂತ ಹೆಚ್ಚು ಸ್ಥಾಯಿ ಸಮಿತಿಗಳ ಸದಸ್ಯನಾಗಲು ಅವಕಾಶವಿರುವದಿಲ್ಲ. ಸಾಮಾನ್ಯ ಸಮಿತಿ ಮತ್ತು ಹಣಕಾಸು, ಲೆಕ್ಕ ಹಾಗೂ ಯೋಜನಾ ಸಮಿತಿಯ ಅಧ್ಯಕ್ಷತೆ ಜಿಲ್ಲಾ ಪಂಚಾಯತಿಯ ಅಧ್ಯಕ್ಷನಿಗೆ ದೊರೆಯುತ್ತದೆ. ಇತರ ಸಮಿತಿಗಳ ಸದಸ್ಯರು ತಮ್ಮಲ್ಲೇ ಒಬ್ಬರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ.

## ಮುಖ್ಯ ಕಾರ್ಯನಿರ್ವಾಹಕ ಅದಿಕಾರಿ

ಜಿಲ್ಲಾ ಪಂಚಾಯತಿಯ ಆಡಳಿತ ಮುಖ್ಯಸ್ಥರಿಗೆ ಮುಖ್ಯಕಾರ್ಯ ನಿರ್ವಾಹಕ ಅಧಿಕಾರಿ ಎನ್ನುತ್ತಾರೆ. ಜಿಲ್ಲಾಧಿಕಾರಿಯ ಸಮಾನ ಅಧಿಕಾರಿಯನ್ನು ಸರಕಾರ ಈ ಹುದ್ದೆಗೆ ಮೂರು ವರ್ಷಗಳ ಅವಧಿಗಾಗಿ ನೇಮಕ ಮಾಡುತ್ತದೆ. ಆಡಳಿತ ನಿರ್ವಹಣೆಯಲ್ಲಿ ಅವನಿಗೆ ನೆರವಾಗಲು ಮುಖ್ಯ ಲೆಕ್ಕಾಧಿಕಾರಿ, ಇತರ ಅಧೀನ ಅಧಿಕಾರಿಗಳು ಹಾಗೂ ಸಿಬ್ಬಂದಿ ಇರುತ್ತಾರೆ. ಜಿಲ್ಲಾ ಪಂಚಾಯತಿ ಸಭೆಯ ಚರ್ಚೆಯಲ್ಲಿ ಮುಖ್ಯಕಾರ್ಯ ನಿರ್ವಾಹಕ ಅದಿಕಾರಿ ಭಾಗವಹಿಸುತ್ತಾನೆ, ಆದರೆ ಮತದಾನದ ಅಧಿಕಾರ ಅವನಿಗಿಲ್ಲ.

ಕಾರ್ಯಗಳು

ಮುಖ್ಯ ಕಾರ್ಯ ನಿರ್ವಾಹಕ ಅದಿಕಾರಿ ಯ ಕಾರ್ಯಗಳು ಈ ಕೆಳಗಿನಂತಿವೆ.

೧. ಜಿಲ್ಲಾ ಪಂಚಾಯತಿಯ ಅಧಿಕಾರಿಗಳು ಹಾಗೂ ಸಿಬ್ಬಂದಿಯ ಮೇಲ್ವಿಚಾರಣೆ ಹಾಗೂ ನಿಯಂತ್ರಣ.

೨. ಜಿಲ್ಲಾ ಪಂಚಾಯತಿಯ ಕಾರ್ಯ ನಿರ್ವಹಣೆ ಕುರಿತು ಅಗತ್ಯ ಸಂದರ್ಭಗಳಲ್ಲಿ ಸರಕಾರಕ್ಕೆ ವರದಿ ಸಲ್ಲಿಸುವದು.

೩. ಜಿಲ್ಲಾ ಪಂಚಾಯತಿಗೆ ಬರಬೇಕಾದ ಕಂದಾಯ ವಸೂಲಿ ಮಾಡುವದು.

೪. ತಾಲೂಕಾ ಪಂಚಾಯತಿಗಳ ದಾಖಲೆ ಪರಿಶೀಲನೆ ಮಾಡುವದು.

## ಜಿಲ್ಲಾ ಪಂಚಾಯತಿಯ ಕಾರ್ಯಗಳು

೧. ಜಿಲ್ಲಾ ಮಟ್ಟದ ಅಭಿವೃದ್ಧಿ ಕಾರ್ಯಗಳ ನಿರ್ದೇಶನ , ಮೇಲ್ವಿಚಾರಣೆ ಹಾಗೂ ಸಮನ್ವಯ .

೨. ಬೇಸಾಯ ಹಾಗೂ ತೋಟಗಾರಿಕೆ ಅಭಿವೃದ್ಧಿ.

೩. ಭೂಸಾರ ಸಂರಕ್ಷಣೆ ಮತ್ತು ಅಭಿವೃದ್ಧಿ.

೪. ಗೃಹ ಕೈಗಾರಿಕೆಗೆ ಪ್ರೋತ್ಸಾಹ ನೀಡುವದು.

೫. ಗ್ರಾಮೀಣ ಗೃಹ ನಿರ್ಮಾಣಕ್ಕೆ ಉತ್ತೇಜನ ನೀಡುವದು.

೬. ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ನಿರ್ವಹಣೆ .

೭. ವಯಸ್ಕ ಶಿಕ್ಷಣ ನಿರ್ವಹಣೆ.

೮. ದುರ್ಬಲ ವರ್ಗಗಳ ಕಲ್ಯಾಣ ಕಾರ್ಯಕ್ರಮ ಜಾರಿಗೊಳಿಸುವದು.

೯. ಪಶುಸಂಗೋಪನೆ, ಹೈನುಗಾರಿಕೆ, ಕೋಳಿ ಸಾಕಾಣಿಕೆಗೆ ಪ್ರೋತ್ಸಾಹ ನೀಡುವದು.

೧೦. ಜಿಲ್ಲಾ ಮಟ್ಟದ ರಸ್ತೆ, ಕಟ್ಟಡ ಮುಂತಾದವುಗಳ ನಿರ್ಮಾಣ ಹಾಗೂ ನಿರ್ವಹಣೆ.

೧೧. ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಕಾರ್ಯಕ್ರಮ ಜಾರಿ.

## ಪಂಚಾಯತ ರಾಜ್ ವ್ಯವಸ್ಥೆ- ವಿಮರ್ಶೆ

ಕಳೆದ ೪೭ ವರ್ಷಗಳಿಂದ ಈ ದೇಶದಲ್ಲಿ ಪಂಚಾಯತ ರಾಜ್ ವ್ಯವಸ್ಥೆ ಜಾರಿಯಲ್ಲಿದೆ. ಆದರೆ ಅದು ತನ್ನ ಮೂಲ ಉದ್ದೇಶವಾದ ಸ್ವತಂತ್ರ ಗ್ರಾಮೀಣ ಆಡಳಿತವ್ಯವಸ್ಥೆಯನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಲು ಸಾಧ್ಯವಾಗಿಲ್ಲ. ಗಾಂಧೀಜಿಯವರ ಗ್ರಾಮ ಸ್ವರಾಜ್ಯ ಕಲ್ಪನೆಯನ್ನು ಸಾಕಾರಗೊಳಿಸಲಾಗಿಲ್ಲ. ಸದ್ಯೋಭವಿಷ್ಯದಲ್ಲಿ ಪೂರ್ಣಪ್ರಮಾಣದಲ್ಲಿ ಸಾಕಾರಗೊಳಿಸುವ ಲಕ್ಷಣಗಳಿಲ್ಲ. ಪಂಚಾಯತ ರಾಜ್ ಕಾರ್ಯಾಚರಣೆಯ ವೈಫಲ್ಯಕ್ಕೆ ಕೆಳಗಿನ ಕಾರಣಗಳನ್ನು ನೀಡಬಹುದು.

೧. ಶಿಕ್ಷಣ ಹಾಗೂ ಅನುಭವದ ಕೊರತೆ :- ಇಂದಿಗೂ ಗ್ರಾಮೀಣ ಭಾರತದಲ್ಲಿ ಸಂಪೂರ್ಣಸಾಕ್ಷರತೆ ಸಾಧಿಸಲಾಗಿಲ್ಲ. ಅನಕ್ಷರಸ್ಥ , ಅನನುಭವಿಗಳು ಆಡಳಿತದ ಚುಕ್ಕಾಣಿ ಹಿಡಿಯುತ್ತಾರೆ. ಅಂಥವರು ಸ್ವತಂತ್ರವಾಗಿ ಆಲೋಚಿಸಿ ಕೆಲಸ ಮಾಡುವ ಬದಲು ಕೆಲ ಪ್ರಬಲ ವ್ಯಕ್ತಿಗಳ ಪ್ರಭಾವಕ್ಕೊಳಗಾಗಿ ಅವರ ಆದೇಶದ ಮೇರೆಗೆ ಅಧಿಕಾರ

ಚಲಾಯಿಸುತ್ತಾರೆ. ಮೀಸಲಾತಿಯ ಪರಿಣಾಮವಾಗಿ ಅಧಿಕಾರಕ್ಕೆ ಬರುವ ಮಹಿಳೆಯ ಗಂಡ, ಅಣ್ಣ, ತಮ್ಮಂದಿರು ಅಥವಾ ತಂದೆ ಆಡಳಿತದಲ್ಲಿ ಹಸ್ತಕ್ಷೇಪ ನಡೆಸುತ್ತಾರೆ.

೨. **ಅಧಿಕಾರಶಾಹಿಯ ಅನಾದರ :-** ಪಂಚಾಯತ ರಾಜ್‌ವ್ಯವಸ್ಥೆಯಲ್ಲಿ ಅಧಿಕಾರಿ ವರ್ಗದವರು ಜನಪ್ರತಿನಿಧಿಗಳೊಂದಿಗೆ ಸಹಕರಿಸಿಕೊಂಡು ಹೋಗುವ ಪ್ರವೃತ್ತಿ ಅಷ್ಟಾಗಿ ಕಂಡು ಬರುತ್ತಿಲ್ಲ. ಆಡಳಿತ ವ್ಯವಸ್ಥೆ ಅಧಿಕಾರಿಗಳ ಸಾಮ್ರಾಜ್ಯವಾಗಿದೆ. ಅಧಿಕಾರಿಗಳು ಜನಪ್ರತಿನಿಧಿಗಳನ್ನು ಧಡ್ಡರು, ಅನನುಭವಿಗಳೆಂದು ಭಾವಿಸಿ ಅವರೊಂದಿಗೆ ಅಸಡ್ಡೆಯಿಂದ ವರ್ತಿಸುತ್ತಾರೆ. ಸರಕಾರ ಕೂಡ ಜನಪ್ರತಿನಿಧಿಗಳಿಗಿಂತ ಅಧಿಕಾರಗಳಿಗೆ ಹೆಚ್ಚಿನ ಮಹತ್ವ ನೀಡುತ್ತದೆ.

**ಅಧಿಕಾರ ಹಂಚಿಕೆಯ ಬಗ್ಗೆ ನಿರಾಸಕ್ತಿ :-** ಪಂಚಾಯತ ರಾಜ್ ಸಂಸ್ಥೆಗಳು ಬೆಳವಣಿಗೆ ಹೊಂದಿ ಯಶಸ್ವಿಯಾಗಿ ಕಾರ್ಯನಿರ್ವಹಿಸುವುದಕ್ಕೆ ಶಾಸಕರು ಕೂಡ ಅವಕಾಶ ಕೊಡುವದಿಲ್ಲ. ಗ್ರಾಮೀಣ ಆಡಳಿತ ವ್ಯವಸ್ಥೆ ಬಲಿಷ್ಠವಾದರೆ ತಮ್ಮ ಮಹತ್ವ ಕಡಿಮೆಯಾಗುವದೆಂಬ ಕಲ್ಪನೆ ಅವರಲ್ಲಿರುತ್ತದೆ. ಆ ಕಾರಣದಿಂದಲೇ ರಾಜ್ಯ ಸರಕಾರ ನಜೀರ್ ಸಾಬರು ಜಾರಿಗೊಳಿಸಿದ್ದ ಪಂಚಾಯತ ರಾಜ್ ವ್ಯವಸ್ಥೆಗೆ ತಿದ್ದುಪಡಿಮಾಡಲು ಪ್ರಯತ್ನಿಸಿ ೧೯೯೩ ರಲ್ಲಿ ಯಶಸ್ವಿಯಾಯಿತು.

**ಹಣಕಾಸಿನ ಕೊರತೆ :-** ಆದಾಯ ಮೂಲಗಳ ಕೊರತೆ ಪಂಚಾಯತ ರಾಜ್‌ಸಂಸ್ಥೆಗಳ ವಿಫಲತೆಗೆ ಇನ್ನೊಂದು ಪ್ರಮುಖ ಕಾರಣವಾಗಿದೆ. ಸ್ವಂತ ಆದಾಯ ಮೂಲಗಳು ಮಿತ 'ಪ್ರಮಾಣದಲ್ಲಿರುವದರಿಂದ ಈ ಸಂಸ್ಥೆಗಳು ರಾಜ್ಯ ಸರಕಾರದ ಅನುದಾನವನ್ನು ಅವಲಂಬಿಸಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಇದರಿಂದಾಗಿ ಅಭಿವೃದ್ಧಿ ಚಟುವಟಿಕೆ-ಗಳನ್ನು ಸ್ವತಂತ್ರವಾಗಿ ನಡೆಸಲು ಸ್ಥಳೀಯ ಸಂಸ್ಥೆಗಳಿಗೆ ಸಾಧ್ಯವಾಗುತ್ತಿಲ್ಲ.

**ಪ್ರತಿಭಾ ಪಲಾಯನ :-** ವಿದ್ಯಾವಂತರು ಕಾರಣಾಂತರದಿಂದ ಹಳ್ಳಿಗಳನ್ನು ತ್ಯಜಿಸಿ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಪ್ರತಿಭಾವಂತರು ಪಟ್ಟಣ ಸೇರುವದರಿಂದಾಗಿ ಹಾಳೂರಿಗೆ ಉಳಿದವನೇಗೌಡನೆಂಬಂಥ ಪರಿಸ್ಥಿತಿ ಉದ್ಭವವಾಗುತ್ತದೆ. ಆಡಳಿತ ಚುಕ್ಕಾಣಿ ಅಶಿಕ್ಷಿತ,ಅನನುಭವಿ ಹಾಗೂ ಅಸಮರ್ಥರ ಕೈವಶವಾಗುತ್ತದೆ.

**ಪರಿಹಾರ :-** ಮೊದಲನೆಯದಾಗಿ ಗ್ರಾಮೀಣ ಪ್ರದೇಶದ ಸಾಕ್ಷರತಾ ಪ್ರಮಾಣ ಹೆಚ್ಚಾಗಬೇಕು.ಸುಶಿಕ್ಷಿತರು ಹಾಗೂ ತಿಳಿವಳಿಕೆಯುಳ್ಳವರು ಅಧಿಕಾರಕ್ಕೆ ಬರಲು ಸಾಧ್ಯವಾಗಬೇಕು. ಸೂಕ್ತ ತರಬೇತಿಯ ಮೂಲಕ ಯುವ ಜನಾಂಗವನ್ನು ಸ್ಥಳೀಯ ಆಡಳಿತದಲ್ಲಿ ಪಳಗಿಸಬೇಕು. ಸ್ಥಳೀಯ ಸಂಸ್ಥೆಗಳು ಆಡಳಿತ ಹಾಗೂ ಹಣಕಾಸಿನ ವಿಷಯದಲ್ಲಿ ಸ್ವಾತಂತ್ರ್ಯ ಹೊಂದಬೇಕು. ಅಧಿಕಾರಿ ವರ್ಗ ನಿರಾಸಕ್ತಿ ತೊರೆದು ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗಾಗಿ ಜನಪ್ರತಿನಿಧಿಗಳೊಂದಿಗೆ ಸಹಕರಿಸಿ ದುಡಿಯಬೇಕು.

ಶಾಸಕರು ಪಂಚಾಯತ ರಾಜ್ ಸಂಸ್ಥೆಗಳ ಕಾರ್ಯ ನಿರ್ವಹಣೆಗೆ ಅಗತ್ಯ ಸಹಾಯ ಸಹಕಾರ ನೀಡಬೇಕು. ಪ್ರಜಾಪ್ರಭುತ್ವದ ತಳಹದಿಯಾದ ಸ್ಥಳೀಯ ಆಡಳಿತ ಸಂಸ್ಥೆಗಳ ಯಶಸ್ವಿಕಾರ್ಯಾಚರಣೆಗಾಗಿ ಜನತೆ, ರಾಜಕಾರಣಿಗಳು ಹಾಗೂ ಅಧಿಕಾರಿ ವರ್ಗ ಹೊಂದಾಣಿಕೆಯಿಂದ ಕಾರ್ಯ ನಿರ್ವಹಿಸಬೇಕು.

## ✸ ನಗರ ಸ್ಥಳೀಯ ಸರಕಾರಗಳು

ನಮ್ಮ ಸಂವಿಧಾನದ ೭೪ನೇ ತಿದ್ದುಪಡಿ ನಗರ ಪ್ರದೇಶದ ಸ್ಥಳೀಯ ಸಂಸ್ಥೆಗಳನ್ನು ಕುರಿತು ವಿವರಣೆ ನೀಡುತ್ತದೆ. ಸ್ಥಳೀಯ ಸಂಸ್ಥೆಗಳು ರಾಜ್ಯಸರಕಾರದ ನಿಯಂತ್ರಣಕ್ಕೊಳಪಡುತ್ತವೆ. ರಾಜ್ಯಸರಕಾರಗಳು ತಾವು ರಚಿಸಿದ ನಿಯಮಾವಳಿಗಳ ಮೇರೆಗೆ ನಗರ ಪ್ರದೇಶದ ಸ್ಥಳೀಯ ಸಂಸ್ಥೆಗಳನ್ನು ವರ್ಗೀಕರಿಸುತ್ತವೆ. ಈ ವರ್ಗಿಕರಣದ ಮುಖ್ಯ ಆಧಾರ ಜನಸಂಖ್ಯೆಯಾಗಿರುತ್ತದೆ.

ನಗರ ಪ್ರದೇಶದ ಸ್ಥಳೀಯ ಸಂಸ್ಥೆಗಳನ್ನು ಸಾಮಾನ್ಯವಾಗಿ ಮುಂದೆ ವಿವರಿಸಿದ ಮೂರು ಪ್ರಕಾರಗಳಲ್ಲಿ ವಿಂಗಡಿಸಲಾಗುತ್ತದೆ.

೧. ಮಹಾನಗರ ಪಾಲಿಕೆ.
೨. ನಗರಸಭೆ ಹಾಗೂ ಪುರಸಭೆ.
೩. ಪಟ್ಟಣ ಪಂಚಾಯತಿ.

### ಮಹಾನಗರ ಪಾಲಿಕೆ

ಕರ್ನಾಟಕದಲ್ಲಿ ೧೯೭೬ ರ ಕಾನೂನಿನ ಮೇರೆಗೆ ಮಹಾನಗರ ಪಾಲಿಕೆಗಳನ್ನು ಸ್ಥಾಪಿಸಲಾಗುತ್ತದೆ. ಸಂವಿಧಾನದ ೨೪೩ ನೇ ಕಲಮಿಗೆ ೧೯೯೩ ರಲ್ಲಿ ಮಾಡಲಾದ ತಿದ್ದುಪಡಿಯ ಮೇರೆಗೆ ೧೯೭೬ ರ ಕಾನೂನಲ್ಲಿ ಸೂಕ್ತ ಬದಲಾವಣೆ ಮಾಡಲಾಗಿದೆ. ನಗರ ಪ್ರದೇಶಗಳು ರಾಜ್ಯ ಸರಕಾರದ ನಿಯಂತ್ರಣಕ್ಕೊಳಪಟ್ಟರೂ ಅವುಗಳಿಗೆ ಹೆಚ್ಚಿನ ಪ್ರಮಾಣದ ಸ್ವಾಯತ್ತತೆ ನೀಡಲಾಗಿದೆ.

**ರಚನೆ :-** ಜನಸಂಖ್ಯೆಯ ಆಧಾರದ ಮೇಲೆ ಮಹಾನಗರ ಪಾಲಿಕೆಯಲ್ಲಿ ೩೫ ರಿಂದ ೧೦೦ ಜನ ಚುನಾಯಿತ ಪುರಪಿತೃಗಳು (ಕೌನ್ಸಿಲರುಗಳು) ಪ್ರೌಢ ಮತದಾನ ಪದ್ಧತಿಯ ಮೂಲಕ ಆಯ್ಕೆಗೊಳ್ಳುತ್ತಾರೆ. ಅನುಸೂಚಿತ ಜಾತಿ,ಅನುಸೂಚಿತ ಪಂಗಡಗಳಿಗೆ ಜನಸಂಖ್ಯೆಯ ಆಧಾರದ ಮೇಲೆ ಮೀಸಲಾತಿ ನೀಡಲಾಗುತ್ತದೆ. ಒಟ್ಟು ಸದಸ್ಯರ ಪೈಕಿ ಮಹಿಳೆಯರಿಗೆ ೧/೩ ಹಾಗೂ ಹಿಂದುಳಿದ ವರ್ಗದವರಿಗೆ ೧/೩ ಮೀಸಲಾತಿ ಇರುತ್ತದೆ. ಚುನಾಯಿತ ಪುರಪಿತೃಗಳಲ್ಲದೇ ೧) ನಗರ ಪಾಲಿಕೆಯನ್ನು ಭಾಗಶಃ ಅಥವಾ ಸಂಪೂರ್ಣವಾಗಿ ಪ್ರತಿನಿಧಿಸುವ ಸಂಸತ್ (ಲೋಕಸಭೆ ಹಾಗೂ ರಾಜ್ಯಸಭೆ) ಸದಸ್ಯರು ಹಾಗೂ ವಿಧಾನಮಂಡಲದ (ವಿಧಾನಸಭೆ ಮತ್ತು ವಿಧಾನಪರಿಷತ್ತುಗಳ) ಸದಸ್ಯರು

ಹಾಗೂ ೨) ನಗರ ಪಾಲಿಕೆಯ ಆಡಳಿತದ ಅನುಭವ ಅಥವಾ ಮಾಹಿತಿ ಹೊಂದಿರುವ ಇಲ್ಲವೇ ಶಿಕ್ಷಣ, ಆರೋಗ್ಯ ಅಥವಾ ನಗರ ಯೋಜನೆಯಲ್ಲಿ ಪರಿಣತಿ ಹೊಂದಿದ 5 ಜನ ಸರಕಾರದಿಂದ ನಾಮಕರಣ ಹೊಂದಿದ ಸದಸ್ಯರಿರುತ್ತಾರೆ. ನಾಮಕರಣ ಹೊಂದಿದ ಸದಸ್ಯರಿಗೆ ಮತಾಧಿಕಾರವಿರುವುದಿಲ್ಲ.

**ಆಯ್ಕೆ :-** ನಗರಪಾಲಿಕೆಯ ಚುನಾಯಿತ ಸದಸ್ಯರು ಪ್ರೌಢ ಮತದಾನ ಪದ್ಧತಿಯಿಂದ ನೇರ ಚುನಾವಣೆಯ ಮೂಲಕ ಆಯ್ಕೆಯಾಗುತ್ತಾರೆ. ಚುನಾಯಿತ ಸದಸ್ಯರ ಸಂಖ್ಯೆಯಷ್ಟು ಮತಕ್ಷೇತ್ರಗಳನ್ನು ನಿರ್ಮಿಸಲಾಗುತ್ತದೆ. ಪ್ರತಿಯೊಂದು ಮತಕ್ಷೇತ್ರದಿಂದ ಒಬ್ಬ ಪುರಪಿತೃವನ್ನು ಆಯ್ಕೆಮಾಡಲಾಗುತ್ತದೆ. ೧೮ ವರ್ಷ ವಯಸ್ಸಾದ ನಾಗರಿಕರಿಗೆ ಮತಾಧಿಕಾರವಿರುತ್ತದೆ.

**ಅಧಿಕಾರದ ಅವಧಿ :-** ನಗರ ಪಾಲಿಕೆಯ ಸದಸ್ಯರ ಅಧಿಕಾರದ ಅವಧಿ ೫ ವರ್ಷಗಳು. ಅಗತ್ಯವಿದ್ದಲ್ಲಿ ರಾಜ್ಯಸರಕಾರವು ವಿಶೇಷ ಆದೇಶದ ಮೂಲಕ ಒಂದು ವರ್ಷದ ಮಟ್ಟಿಗೆ ಅವಧಿಯನ್ನು ವಿಸ್ತರಿಸಬಹುದು.

**ಪದಾಧಿಕಾರಿಗಳು :-** ಮಹಾಪೌರ ಹಾಗೂ ಉಪಮಹಾಪೌರರು ನಗರ ಪಾಲಿಕೆಯ ಪದಾಧಿಕಾರಿಗಳಾಗಿರುತ್ತಾರೆ. ಮೀಸಲಾತಿ ವ್ಯವಸ್ಥೆಯ ಆಧಾರದ ಮೇಲೆ ಇವರಿಬ್ಬರನ್ನು ಒಂದು ವರ್ಷದ ಅವಧಿಗಾಗಿ ಆಯ್ಕೆ ಮಾಡಲಾಗುತ್ತದೆ. ಮಹಾಪೌರನ ಅನುಪಸ್ಥಿತಿಯಲ್ಲಿ ಉಪಮಹಾಪೌರನು ಮಹಪೌರನ ಅಧಿಕಾರ ಚಲಾಯಿಸುತ್ತಾನೆ.

## ಮಹಾಪೌರನ ಅಧಿಕಾರಿಗಳು

೧. ಸಾಮಾನ್ಯ ಸಭೆಯ ಅಧಿವೇಶನ ಕರೆದು ಅಧ್ಯಕ್ಷತೆ ವಹಿಸಿ ಕಲಾಪಗಳನ್ನು ಜರುಗಿಸುವದು.

೨. ಅಗತ್ಯ ಸಂಖ್ಯೆಯ ಪುರಪಿತೃಗಳು ಕೋರಿದರೆ ವಿಶೇಷ ಸಭೆ ಕರೆಯುವದು.

೩. ಪಾಲಿಕೆಯ ನಿರ್ಣಯಗಳ ಜಾರಿಯ ಉಸ್ತುವಾರಿ ನಡೆಸುವದು.

೪. ಅಗತ್ಯ ಕಂಡರೆ ಆಡಳಿತಕ್ಕೆ ಸಂಬಂಧಿಸಿದ ದಾಖಲೆ ಪರಿಶೀಲನೆ ಮಾಡುವದು.

## ಸ್ಥಾಯಿ ಸಮಿತಿಗಳು

೧. ತೆರಿಗೆ ಮತ್ತು ಹಣಕಾಸಿನ ಸಮಿತಿ.

೨. ಸಾರ್ವಜನಿಕ ಆರೋಗ್ಯ ಸಮಿತಿ.

೩. ನಗರ ಯೋಜನೆ ಮತ್ತು ಅಭಿವೃದ್ಧಿ ಸಮಿತಿ.

೪. ಲೆಕ್ಕ ಪತ್ರ ಸಮಿತಿ.

ಪ್ರತಿಯೊಂದು ಸ್ಥಾಯಿ ಸಮಿತಿಗೆ ೭ ಜನ ಸದಸ್ಯರು ಪ್ರಮಾಣಾನುಸಾರ ಪ್ರಾತಿನಿಧ್ಯದ ಆಧಾರದ ಮೇಲೆ ಪಾಲಿಕೆಯ ಸದಸ್ಯರಿಂದ ಆಯ್ಕೆಯಾಗುತ್ತಾರೆ. ಸ್ಥಾಯಿ ಸಮಿತಿಯ ಸದಸ್ಯರು ತಮ್ಮಲ್ಲೇ ಒಬ್ಬರನ್ನು ಅಧ್ಯಕ್ಷರನ್ನಾಗಿ ಆಯ್ಕೆಮಾಡಿ ಕೊಳ್ಳುತ್ತಾರೆ. ಸ್ಥಾಯಿ ಸಮಿತಿಯ ಸದಸ್ಯತ್ವದ ಅವಧಿ ೧ ವರ್ಷ. ಒಂದಕ್ಕಿಂತ ಹೆಚ್ಚು ಸ್ಥಾಯಿ ಸಮಿತಿಗಳ ಸದಸ್ಯತ್ವ ಹೊಂದಲು ಸದಸ್ಯರಿಗೆ ಅವಕಾಶವಿರುವುದಿಲ್ಲ.

## ಪಾಲಿಕೆಯ ಆಯುಕ್ತ (ಕಮೀಶನರ್)

ಸಾಮಾನ್ಯವಾಗಿ ಐ.ಎ.ಎಸ್. ಅಧಿಕಾರಿಯನ್ನು ಮೂರು ವರ್ಷಗಳ ಅವಧಿಗೆ ಮಹಾನಗರ ಪಾಲಿಕೆಯ ಆಯುಕ್ತರನ್ನಾಗಿ ರಾಜ್ಯಸರ್ಕಾರ ನೇಮಕ ಮಾಡುತ್ತದೆ. ಮಹಾನಗರ ಪಾಲಿಕೆಯ ಆಡಳಿತದ ಮುಖ್ಯಸ್ಥರಾದ ಆಯುಕ್ತ ಪಾಲಿಕೆಯ ನಿರ್ಣಯಗಳನ್ನು ಕಾರ್ಯಗತಗೊಳಿಸುತ್ತಾರೆ. ಆಯುಕ್ತರ ಕೈಕೆಳಗೆ ವಿವಿಧ ಹಂತದ ಅಧಿಕಾರಿಗಳು ಹಾಗೂ ಸಿಬ್ಬಂದಿ ಕಾರ್ಯ ನಿರ್ವಹಿಸುತ್ತಾರೆ. ಆಯುಕ್ತನ ಕೆಲಸ ತೃಪ್ತಿದಾಯಕವಾಗಿರದಿದ್ದರೆ ಅವರನ್ನು ವರ್ಗಾಯಿಸುವಂತೆ ಸರಕಾರವನ್ನು ಕೋರಬಹುದು.

### ಆಯುಕ್ತರ ಕಾರ್ಯಗಳು

೧. ಮಹಾನಗರ ಪಾಲಿಕೆಯ ತೀರ್ಮಾನಗಳನ್ನು ಜಾರಿಗೊಳಿಸುವದು.
೨. ಪಾಲಿಕೆಯ ಸಭೆಗಳಲ್ಲಿ ಭಾಗವಹಿಸುವದು (ಮತಾಧಿಕಾರವಿರುವದಿಲ್ಲ)
೩. ಪಾಲಿಕೆಯ ಆಡಳಿತ ನಿರ್ವಹಿಸುವದು.
೪. ಮುಂಗಡ ಪತ್ರ ತಯಾರಿಸುವದು.
೫. ಪಾಲಿಕೆಯ ದಾಖಲೆಗಳನ್ನು ರಕ್ಷಿಸುವದು.

**ಪಾಲಿಕೆಯ ಹಣಕಾಸಿನ ಮೂಲಗಳು :-** ಕೆಳಗೆ ವಿವರಿಸಲಾದ ಮೂಲಗಳಿಂದ ಪಾಲಿಕೆಗೆ ಅಗತ್ಯವಾದ ಹಣ ಪಡೆಯಲಾಗುತ್ತದೆ.

೧. ವ್ಯಾಪಾರ, ವೃತ್ತಿ, ಜಾಹೀರಾತುಗಳ ಮೇಲಿನ ಕರ ಮತ್ತು ಆಸ್ತಿ ಹಾಗೂ ನೀರಿನ ತೆರಿಗೆ.
೨. ಪಾಲಿಕೆಯ ಮಾಲಿಕತ್ವದ ಮಾರುಕಟ್ಟೆ ಕಟ್ಟಡಗಳು, ತರಕಾರಿ ಮಳಿಗೆಗಳು ಮುಂತಾದವುಗಳಿಂದ ಬರುವ ಆದಾಯ.
೩. ರಾಜ್ಯ ಸರಕಾರದ ಅನುಮತಿ ಪಡೆದು ಜನರಿಂದ ಎತ್ತುವ ಸಾಲ.
೪. ಪಾಲಿಕೆ ವಿಧಿಸುವ ಶುಲ್ಕ ಹಾಗೂ ದಂಡದ ಹಣ.
೫. ರಾಜ್ಯ ಸರಕಾರ ನೀಡುವ ಸಹಾಯಧನ.

## II) ಮಹಾನಗರ ಪಾಲಿಕೆಯ ಕಾರ್ಯಗಳು

ಮಹಾನಗರ ಪಾಲಿಕೆಗಳು ಮೂರು ಬಗೆಯ ಕಾರ್ಯಗಳನ್ನು ನಿರ್ವಹಿಸುತ್ತವೆ.

೧. ಸಾಮಾನ್ಯ ಕಾರ್ಯಗಳು :- ಮಹಾನಗರ ಪಾಲಿಕೆಯ ಆಡಳಿತ ನಿರ್ವಸುವದು ಹಾಗೂ ಮುಂಗಡ ಪತ್ರ ತಯಾರಿಸಿ ಪಾಲಿಕೆಯ ಸಭೆಯಲ್ಲಿ ಮಂಡಿಸಿ ಅಂಗೀಕಾರ ಪಡೆಯುವದು ಪಾಲಿಕೆಯ ಪ್ರಮುಖ ಕಾರ್ಯಗಳಾಗಿವೆ.

೨. ಕಡ್ಡಾಯದ ಕಾರ್ಯಗಳು :

೧. ರಸ್ತೆಗಳ ನಿರ್ಮಾಣ ಹಾಗೂ ರಕ್ಷಣೆ ಮತ್ತು ಸಾರ್ವಜನಿಕ ಸ್ಥಳ ನಿರ್ವಹಣೆ.
೨. ಬೀದಿ ದೀಪಗಳ ವ್ಯವಸ್ಥೆ.
೩. ನೀರು ಪೂರೈಕೆ.
೪. ಜನನ ಮರಣ ನೋಂದಣಿ.
೫. ಸಾರ್ವಜನಿಕ ಆರೋಗ್ಯ ಹಾಗೂ ನೈರ್ಮಲ್ಯ ರಕ್ಷಣೆ, ಸಾರ್ವಜನಿಕ ಆಸ್ಪತ್ರೆಗಳ ಮೂಲಕ ರೋಗ ನಿರೋಧಕ ಕಾರ್ಯ ಹಾಗೂ ರೋಗ ಉಪಶಮನ ಕಾರ್ಯ ನಿರ್ವಹಣೆ.
೬. ಕಟ್ಟಡ ನಿರ್ಮಾಣಕ್ಕೆ ಅನುಮತಿ ನೀಡುವದು.
೭. ಆಹಾರ ಪದಾರ್ಥಗಳ ಕಲಬೆರೆಕೆ ತಡೆಗಟ್ಟುವದು.
೮. ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಣ ಸೌಲಭ್ಯ ನೀಡಿಕೆ.
೯. ಅಗ್ನಿಶಾಮಕ ದಳದ ವ್ಯವಸ್ಥೆ .
೧೦. ಸಾರ್ವಜನಿಕ ಮಾರುಕಟ್ಟೆ ನಿರ್ಮಾಣ ಹಾಗೂ ನಿರ್ವಹಣೆ.
೧೧. ಸಾರ್ವಜನಿಕ ಸ್ವತ್ತು ಹಾಗೂ ಸ್ಮಾರಕಗಳ ರಕ್ಷಣೆ.
೧೨. ಸಾರ್ವಜನಿಕ ಉದ್ಯಾನ ಹಾಗೂ ಕ್ರೀಡಾಂಗಣ ನಿರ್ಮಾಣ .
೧೩. ಒಳ ಚರಂಡಿ ವ್ಯವಸ್ಥೆ ರೂಪಿಸುವದು.
೧೪. ಪರಿಸರ ಸಂರಕ್ಷಣೆ.

೩. ಐಚ್ಚಿಕ ಕಾರ್ಯಗಳು :

೧. ಸಾರ್ವಜನಿಕ ಉದ್ಯಾನ ಸ್ಥಾಪನೆ ಹಾಗೂ ನಿರ್ವಹಣೆ.
೨. ವಸ್ತು ಸಂಗ್ರಹಾಲಯ ಹಾಗೂ ಕಲಾ ಗ್ಯಾಲರಿ ಸ್ಥಾಪನೆ.
೩. ಶಿಸು ಕಲ್ಯಾಣ ಕೇಂದ್ರಗಳ ನಿರ್ವಹಣೆ.
೪. ಪಶು ಆಸ್ಪತ್ರೆ ಸ್ಥಾಪನೆ.
೫. ನೈಸರ್ಗಿಕ ಪ್ರಕೋಪ ಎದುರಿಸಲು ಹಣಕಾಸಿನ ವ್ಯವಸ್ಥೆ ಮಾಡುವದು.

೭. ಸಾರ್ವಜನಿಕ ಸಾರಿಗೆ ವ್ಯವಸ್ಥೆ ರೂಪಿಸುವದು.
೭. ಈಜುಗೊಳ ಸ್ಥಾಪಿಸುವದು.
೮. ಅನಾಥರ/ನಿಸ್ಸಹಾಯಕರ ರಕ್ಷಣೆಗಾಗಿ ಸಂಸ್ಥೆ ಸ್ಥಾಪನೆ.
೯. ಅನುಕೂಲತೆ ಇದ್ದಲ್ಲೆಲ್ಲ ಗಿಡನೆಟ್ಟು ಬೆಳೆಸುವದು.
೧೦. ಬಡವರಿಗೆ ಹಾಗೂ ದುರ್ಬಲ ವರ್ಗದವರಿಗೆ ಮನೆಕಟ್ಟಿ ಕೊಡುವದು.
೧೧. ಕೊಳಚೆ ಪ್ರದೇಶಗಳನ್ನು ಅಭಿವೃದ್ಧಿ ಪಡಿಸುವದು.
೧೨. ಸಂತೆ ಹಾಗೂ ವಸ್ತು ಪ್ರದರ್ಶನ ಏರ್ಪಡಿಸುವದು.

## ನಗರ ಸಭೆ /ಪಟ್ಟಣ ಪಂಚಾಯತಿ

ಜನಸಂಖ್ಯೆಯ ಆಧಾರದ ಮೇಲೆ ನಗರಸಭೆ ಅಥವಾ ಪಟ್ಟಣ ಪಂಚಾಯತಿಗಳನ್ನು ರಚಿಸಲಾಗುತ್ತದೆ. ೫ ಸಾವಿರದಿಂದ ೩ ಲಕ್ಷ ಜನಸಂಖ್ಯೆ ಇದ್ದಲ್ಲಿ ನಗರಸಭೆ ಸ್ಥಾಪಿಸಲಾಗುತ್ತದೆ. ೨೦ ರಿಂದ ೫೦ ಸಾವಿರದವರೆಗೆ ಜನಸಂಖ್ಯೆ ಇದ್ದಲ್ಲಿ ಪಟ್ಟಣ ಪಂಚಾಯತಿ ಸ್ಥಾಪಿಸಲಾಗುತ್ತದೆ. ಜನಸಂಖ್ಯೆಯನ್ನು ಆಧರಿಸಿ ಸದಸ್ಯರ ಸಂಖ್ಯೆ ನಿರ್ಧರಿಸಲಾಗುತ್ತದೆ. ಪಟ್ಟಣ ಪಂಚಾಯತಿಯಲ್ಲಿ ಕನಿಷ್ಠ ೧೭ ಸದಸ್ಯರು ಹಾಗೂ ಗರಿಷ್ಠ ೨೭ ಸದಸ್ಯರಿರುತ್ತಾರೆ. ನಗರ ಸಭೆಯಲ್ಲಿ ೩೦ ರಿಂದ ೩೫ ರವರೆಗೆ ಸದಸ್ಯರಿರುತ್ತಾರೆ.

**ರಚನೆ :-** ನಗರ ಸಭೆ ಅಥವಾ ಪಟ್ಟಣ ಪಂಚಾಯತಿಯಲ್ಲಿ ಕೆಳಕಾಣಿಸಿದ ಪ್ರಕಾರ ಸದಸ್ಯರಿರುತ್ತಾರೆ.

೧. ಚುನಾಯಿತ ಸದಸ್ಯರು.
೨. ನಗರ ಸಭೆ ಅಥವಾ ಪಟ್ಟಣ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಸಂಸತ್ (ಲೋಕಸಭೆ, ರಾಜ್ಯಸಭೆ) ಸದಸ್ಯರು ಹಾಗೂ ವಿಧಾನ ಮಂಡಲ (ವಿಧಾನ ಸಭೆ, ವಿಧಾನ ಪರಿಷತ್) ಸದಸ್ಯರು
೩. ಸರಕಾರದಿಂದ ನಾಮಕರಣ ಹೊಂದಿದ ೫ ಜನ ಸದಸ್ಯರು (ಇವರಿಗೆ ಮತಾಧಿಕಾರವಿಲ್ಲ).

ಸ್ಥಳೀಯ ಸಂಸ್ಥೆಗಳ ಮೀಸಲಾತಿ ಪದ್ಧತಿ ನಗರಸಭೆ ಹಾಗೂ ಪಟ್ಟಣ ಪಂಚಾಯತಿಯ ಸದಸ್ಯರ ಆಯ್ಕೆಗೂ ಅನ್ವಯಿಸುತ್ತದೆ.

**ಆಯ್ಕೆ:-** ಸದಸ್ಯರು ಪ್ರೌಢ ಮತದಾನ ಪದ್ಧತಿಯ ಮೂಲಕ ಆಯ್ಕೆಯಾಗುತ್ತಾರೆ. ೨೧ ವರ್ಷ ವಯಸ್ಸಾದ ಸ್ಥಳೀಯ ನಾಗರಿಕರು ಚುನಾವಣೆಗೆ ಸ್ಪರ್ಧಿಸಬಹುದು. ೧೮ ವರ್ಷ ವಯಸ್ಸಾದ ಸ್ಥಳೀಯ ನಾಗರಿಕರಿಗೆ ಮತಾಧಿಕಾರವಿರುತ್ತದೆ.

**ಅಧಿಕಾರದ ಅವಧಿ :-** ನಗರ ಸಭೆ ಮತ್ತು ಪಟ್ಟಣ ಪಂಚಾಯತಿಯ ಚುನಾಯಿತ ಹಾಗೂ ನಾಮಕರಣ ಹೊಂದಿದ ಸದಸ್ಯರ ಅವಧಿ ೫ ವರ್ಷಗಳು. ಸಂಸದರು ಹಾಗೂ

ವಿಧಾನಮಂಡಲದ ಸದಸ್ಯರು ತಮ್ಮ ಅಧಿಕಾರದ ಅವಧಿ ಮುಗಿಯುವವರೆಗೆ ಸದಸ್ಯರಾಗಿರುತ್ತಾರೆ.

### ಪದಾಧಿಕಾರಿಗಳು

ನಗರಸಭೆ ಹಾಗೂ ಪಟ್ಟಣ ಪಂಚಾಯತಿಯ ಸದಸ್ಯರು ತಮ್ಮಲ್ಲೇ ಒಬ್ಬರನ್ನು ಅಧ್ಯಕ್ಷರನ್ನಾಗಿ ಹಾಗೂ ಇನ್ನೊಬ್ಬರನ್ನು ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ಅಧ್ಯಕ್ಷ ಉಪಾಧ್ಯಕ್ಷರ ಕಾರ್ಯಾವಧಿ ೩೦ ತಿಂಗಳುಗಳು. ಮೀಸಲಾತಿಯ ಆಧಾರದಿಂದ ಸರತಿಯ ಮೇಲೆ ಈ ಆಯ್ಕೆಗಳು ನಡೆಯುತ್ತವೆ. ಸಭೆಯ ಅಧ್ಯಕ್ಷತೆ ವಹಿಸಿಕೊಂಡು ಕಲಾಪಗಳನ್ನು ಸುಗಮವಾಗಿ ನಡೆಸುವದು ಅಧ್ಯಕರ ಕರ್ತವ್ಯವಾಗಿದೆ. ಮುಖ್ಯಾಧಿಕಾರಿಯ ಮೂಲಕ ಜಾರಿಗೊಳಿಸಲಾಗುವ ನಿರ್ಣಯಗಳ ಉಸ್ತುವಾರಿಯನ್ನು ಕೂಡ ಅಧ್ಯಕ್ಷನು ನಿರ್ವಹಿಸುತ್ತಾನೆ. ಅಧ್ಯಕ್ಷರ ಗೈರುಹಾಜರಿಯಲ್ಲಿ ಉಪಾಧ್ಯಕ್ಷರು ಅಧ್ಯಕ್ಷರ ಕಾರ್ಯಗಳನ್ನು ನಿರ್ವಹಿಸುತ್ತಾರೆ.

### ಸ್ಥಾಯಿ ಸಮಿತಿಗಳು

ಮಹಾನಗರ ಸಭೆಗಳಲ್ಲಿರುವಂತೆ ನಗರಸಭೆ ಹಾಗೂ ಪಟ್ಟಣ ಪಂಚಾಯತಿಗಳಲ್ಲೂ ಕೆಳಗಿನ ನಾಲ್ಕು ಸ್ಥಾಯಿ ಸಮಿತಿಗಳು ಕಾರ್ಯನಿರ್ವಹಿಸುತ್ತವೆ.

೧. ತೆರಿಗೆ ಮತ್ತು ಹಣಕಾಸು ಸಮಿತಿ.

೨. ಸಾರ್ವಜನಿಕ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ.

೩. ನಗರ ಯೋಜನೆ ಮತ್ತು ಅಭಿವೃದ್ಧಿ ಸಮಿತಿ.

೪. ಲೆಕ್ಕ ಪತ್ರ ಸಮಿತಿ.

### ಹಣಕಾಸಿನ ಮೂಲಗಳು

ಮಹಾನಗರ ಪಾಲಿಕೆ ಹೊಂದಿರುವ ಹಣಕಾಸಿನ ಮೂಲಗಳನ್ನೇ ನಗರಸಭೆ ಹಾಗೂ ಪಟ್ಟಣ ಪಂಚಾಯತಿಗಳು ಹೊಂದಿವೆ.

**ನಗರಸಭೆ ಹಾಗೂ ಪಟ್ಟಣ ಪಂಚಾಯತಿಯ ಕಾರ್ಯಗಳು :-** ಮಹಾನಗರ ಪಾಲಿಕೆ ನಿರ್ವಹಿಸುವ ಕಾರ್ಯಗಳನ್ನೇ ನಗರಸಭೆ ಹಾಗೂ ಪಟ್ಟಣ ಪಂಚಾಯತಿಗಳು ನಿರ್ವಹಿಸುತ್ತವೆ.

೧. ಸಾಮಾನ್ಯ ಕಾರ್ಯಗಳು

೨. ಕಡ್ಡಾಯದ ಕಾರ್ಯಗಳು

೩. ಐಚ್ಛಿಕ ಕಾರ್ಯಗಳು

ವಿವರಗಳಿಗೆ ಪುಟ ಸಂಖ್ಯೆ ೨೯೦ ರಲ್ಲಿರುವ ಮಹಾನಗರ ಪಾಲಿಕೆಯ ಕಾರ್ಯಗಳನ್ನು ನೋಡಿರಿ.

## ಪ್ರಶ್ನೆಗಳು

ಅ. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ. ಒಂದು ಅಂಕದ ಪ್ರಶ್ನೆಗಳು

೧. ಗ್ರಾಮ ಸ್ವರಾಜ್ಯ ಕಲ್ಪನೆ ಯಾರದು?

೨. ಪಂಚಾಯತ್‌ರಾಜ್ ಯೋಜನೆಗಾಗಿ ರಚಿಸಲಾದ ಮೊದಲ ಕಮೀಟಿಯ ಹೆಸರೇನು?

೩. ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಮೊದಲು ಜಾರಿಗೆ ತಂದ ರಾಜ್ಯಗಳಾವವು ?

೪. ಕರ್ನಾಟಕದಲ್ಲಿ ಜಿಲ್ಲಾ ಪಂಚಾಯತಿಯ ಸದಸ್ಯರ ಅಧಿಕಾರದ ಅವಧಿ ಎಷ್ಟು?

೫. ತಾಲೂಕಾ ಪಂಚಾಯತಿಯ ಅಧ್ಯಕ್ಷನ ಕಾರ್ಯಾವಧಿ ಎಷ್ಟು ?

೬. ಮೇಯರ್ ( ಮಹಾಪೌರನ) ಅಧಿಕಾರವಧಿ ಎಷ್ಟು ?

ಆ. ಕೆಳಗಿನ ಪ್ರಶ್ನೆಗಳಿಗೆ ೨ - ೩ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಎರಡು ಅಂಕದ ಪ್ರಶ್ನೆಗಳು

೭. ಗ್ರಾಮ ಪಂಚಾಯತಿಯ ಸ್ಥಾಯಿ ಸಮಿತಿಗಳನ್ನು ಹೆಸರಿಸಿರಿ ?

೮. ಜಿಲ್ಲಾ ಪಂಚಾಯತಿಯ ಅಧ್ಯಕ್ಷನ ಅರ್ಹತೆಗಳನ್ನು ವಿವರಿಸಿರಿ ?

೯. ಮಹಾನಗರ ಪಾಲಿಕೆಯ ಸ್ಥಾಯಿ ಸಮಿತಿಗಳನ್ನು ಹೆಸರಿಸಿರಿ ?

೧೦. ನಗರ ಸಭೆ, ಪಟ್ಟಣ ಪಂಚಾಯತಿಯ ಸದಸ್ಯರ ಆಯ್ಕೆಯ ವಿಧಾನ ತಿಳಿಸಿರಿ ?

೧೧. ತಾಲೂಕಾ ಪಂಚಾಯತಿಯ ಅಧ್ಯಕ್ಷನ ಅಧಿಕಾರಗಳನ್ನು ವಿವರಿಸಿರಿ ?

ಇ. ಕೆಳಗಿನ ಪ್ರಶ್ನೆಗಳಿಗೆ ೮-೧೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಐದು ಅಂಕದ ಪ್ರಶ್ನೆಗಳು

೧೨. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯ ಕಾರ್ಯಗಳನ್ನು ವಿವರಿಸಿರಿ ?

೧೩. ತಾಲೂಕಾ ಪಂಚಾಯತಿಯ ಕಾರ್ಯಗಳನ್ನು ವಿವರಿಸಿರಿ ?

೧೪. ಮಹಾನಗರ ಪಾಲಿಕೆಯ ಹಣಕಾಸಿನ ಮೂಲಗಳನ್ನು ತಿಳಿಸಿರಿ ?

೧೫. ಜಿಲ್ಲಾ ಪಂಚಾಯತಿಯ ರಚನೆ ವಿವರಿಸಿರಿ ?

೧೬.ಗ್ರಾಮಸಭೆ ಕುರಿತು ಟಿಪ್ಪಣಿ ಬರೆಯಿರಿ ?

ಈ. ಕೆಳಗಿನ ಪ್ರಶ್ನೆಗಳಿಗೆ ೩೦ - ೪೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ಹತ್ತು ಅಂಕದ ಪ್ರಶ್ನೆಗಳು

೧೭. ೧೯೮೪ ರ ಕರ್ನಾಟಕ ಪಂಚಾಯತ್‌ರಾಜ್ ವ್ಯವಸ್ಥೆಯ ರಚನೆ ಹಾಗೂ ಕಾರ್ಯ ನಿರ್ವಹಣೆಯನ್ನು ವಿವರಿಸಿರಿ ?

೧೮. ೧೯೯೩ ಕರ್ನಾಟಕ ಪಂಚಾಯತ್ ರಾಜ್ ವ್ಯವಸ್ಥೆಯ ಕಾರ್ಯ ನಿರ್ವಹಣೆಯನ್ನು ಪರಿಶೀಲಿಸಿರಿ ?

೧೯. ಮಹಾನಗರ ಪಾಲಿಕೆಯ ರಚನೆ ಹಾಗೂ ಕಾರ್ಯಗಳನ್ನು ತಿಳಿಸಿರಿ.

೨೦. ಸ್ಥಳೀಯ ಸರಕಾರ ವ್ಯವಸ್ಥೆಯ ಗುಣ ದೋಷ ವಿವರಿಸಿರಿ.

೨೧. ಜಿಲ್ಲಾ ಪಂಚಾಯತಿಯ ರಚನೆ ಹಾಗೂ ಕಾರ್ಯಗಳನ್ನು ವಿವರಿಸಿರಿ.

❑❑

ಅನುಬಂಧ ೧

# ರಾಜ್ಯಶಾಸ್ತ್ರ

## ೧. ರಾಜ್ಯಶಾಸ್ತ್ರವನ್ನೇಕೆ ಅಧ್ಯಯನ ಮಾಡಬೇಕು?

ಪ್ರತಿಯೊಬ್ಬ ವ್ಯಕ್ತಿಯು ಬದುಕುವುದು ಮತ್ತು ಬೆಳೆಯುವದು ಸಮಾಜದಲ್ಲಿ ಎಂಬುದು ಎಲ್ಲರಿಗೂ ತಿಳಿದಿದೆ. ರಾಜಕೀಯ ಚಟುವಟಿಕೆಗಳು ಸಾಮಾಜಿಕ ಬದುಕಿನ ಅವಿಭಾಜ್ಯ ಹಾಗೂ ನಿರ್ಣಾಯಕ ಭಾಗಗಳಾಗಿವೆ. ರಾಜಕಾರಣದ ಸ್ವರೂಪ ಹಾಗೂ ದಿಶೆಗಳು ವ್ಯಕ್ತಿಯ ನೆಲೆಯನ್ನು ಮತ್ತು ರಾಷ್ಟ್ರದ ಭವಿಷ್ಯವನ್ನು ರೂಪಿಸುತ್ತದೆ. ರಾಜಕಾರಣದ ಉದ್ದೇಶವು ಮೂಲತಃ ನ್ಯಾಯಬದ್ಧ ಹಾಗೂ ಮಾನವೀಯ ಸಮಾಜವನ್ನು ಕಟ್ಟುವುದಾಗಿದೆ. ರಾಜಕಾರಣದ ವಿವಿಧ ಅಂಶಗಳನ್ನು, ಅಂದರೆ ಪ್ರಭುತ್ವ (ರಾಜ್ಯ) ಸರ್ಕಾರ, ಆಡಳಿತ ಮತ್ತು ರಾಜಕಾರಣಕ್ಕೆ ಸಂಬಂಧಿಸಿದ ಸಂಸ್ಥೆಗಳನ್ನು ಕುರಿತಂತೆ ಅಧ್ಯಯನ ಮಾಡುವ ಶಿಸ್ತು ರಾಜಶಾಸ್ತ್ರ. ಪದವಿಪೂರ್ವ ಶಿಕ್ಷಣದ ಮಟ್ಟದಲ್ಲಿ ರಾಜಶಾಸ್ತ್ರದ ಅಧ್ಯಯನ ಉದ್ದೇಶಗಳು ಹೀಗಿವೆ;

* ರಾಜಾಕಾರಣಕ್ಕೆ ಸಂಬಂಧಿಸಿದ ಪರಿಕಲ್ಪನೆಗಳು, ಸಿದ್ಧಾಂತಗಳು ಹಾಗೂ ಅದರ ಆಚರಣೆ ಕುರಿತಂತೆ ಆಸಕ್ತಿ ಮೂಡಿಸುವದು.
* ರಾಜಶಾಸ್ತ್ರವೆಂಬ ಅಧ್ಯಯನ ಶಿಸ್ತಿಗೆ ಸಂಬಂಧಿಸಿದಂತೆ ಬೆಳೆಯುತ್ತಿರುವ ಸಂಗತಿಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವದು.
* ಭಾರತದ ಸಂವಿಧಾನ, ಅದರ ಪ್ರಜಾಸತ್ತಾತ್ಮಕ ಪ್ರಕ್ರಿಯೆಗಳು ಹಾಗೂ ಸಂಸ್ಥೆಗಳನ್ನು ಪರಿಚಯಿಸುವದು.
* ನಾಗರಿಕ ಪ್ರಜ್ಞೆಯನ್ನು ಬೆಳೆಸುವದು ಮತ್ತು ಆರೋಗ್ಯಕರ ನಾಗರಿಕ ಹಾಗೂ ರಾಜಕೀಯ ಜೀವನ ರೂಪಿಸಲು ಅಗತ್ಯವಾದ ಮೌಲ್ಯಗಳು ಹಾಗೂ ಮನೋಭಾವವನ್ನು ರೂಢಿಸುವುದಕ್ಕೆ ಪ್ರಯತ್ನಿಸುವದು.
* ಜಾಗತಿಕ ಮಟ್ಟದಲ್ಲಿ ಉಂಟಾಗುತ್ತಿರುವ ರಾಜಕೀಯ ಬೆಳವಣಿಗೆಯನ್ನು ವಿದ್ಯಾರ್ಥಿಗಳಿಗೆ ತಿಳಿಸುವದು ಮತ್ತು ಅದು ನಾಗರಿಕರ ಬದುಕಿನ ಮೇಲೆ ಉಂಟು ಮಾಡುತ್ತಿರುವ ಪರಿಣಾಮಗಳನ್ನು ಅರಿತುಕೊಳ್ಳುವದು.

ಒಟ್ಟಾರೆ,

* ಜಾಗತಿಕ ಮತ್ತು ಸ್ಥಳೀಯ ಸಂದರ್ಭದಲ್ಲಿ ಭಾರತದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸನ್ನಿವೇಶಕ್ಕೆ ವಿದ್ಯಾರ್ಥಿಗಳು ಸ್ಪಂದಿಸುವಂತೆ ಮಾಡುವದು.

* ಪ್ರಜಾಪ್ರಭುತ್ವದ ನಿಯಮಗಳು, ಮೌಲ್ಯಗಳು, ಹಾಗೂ ಉಪಯುಕ್ತತೆಗಳನ್ನು ವಿದ್ಯಾರ್ಥಿಗಳು ತಿಳಿದುಕೊಳ್ಳುವಂತೆ ಮಾಡುವುದು.

೬ ಭಾರತದ ಪ್ರಧಾನ ರಾಜಕೀಯ ಮತ್ತು ಸಾಮಾಜಿಕ ಸಂಸ್ಥೆಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವುದು.

* ಸಾತ್ವಿಕ ಪೌರತ್ವದ ಮೌಲ್ಯದ ಬಗ್ಗೆ ವಿದ್ಯಾರ್ಥಿಗಳಿಗೆ ಜಾಗೃತಿ ಮೂಡುವಂತೆ ಮಾಡುವುದು.

## ನಿರ್ದಿಷ್ಟ ಗುರಿಗಳು

(ಜ್ಞಾನ, ಕುಶಲತೆ, ಆನ್ವಯಿಕ ಸಾಮರ್ಥ್ಯ ಮತ್ತು ಅಧ್ಯಯನ ಶಾಸ್ತ್ರದ ಬಗ್ಗೆ ಮತ್ತು ಸಮಾಜದ ಬಗ್ಗೆ ಮನೋಭಾವ ಇವುಗಳನ್ನು ಅನುಲಕ್ಷಿಸಿ)

### ಅ. ಜ್ಞಾನ

* ಭಾರತಕ್ಕೆ ನಿರ್ದಿಷ್ಟವಾಗಿ ಸಂಬಂಧಿಸಿದಂತೆ ರಾಜಕೀಯ ಪ್ರಕ್ರಿಯೆಗಳು ಹಾಗೂ ವಿಚಾರಗಳ ಬಗ್ಗೆ ಒಟ್ಟಾರೆ ತಿಳುವಳಿಕೆ ಸಂಪಾದಿಸುವದು.

* ಭಾರತದ ರಾಜಕೀಯ ಸಂಸ್ಥೆಗಳ ಕಾರ್ಯಾಚರಣೆ ಬಗ್ಗೆ ತಿಳುವಳಿಕೆ ಪಡೆಯುವುದು.

* ಸಾಮಾಜಿಕ, ಆರ್ಥಿಕ,ಮತ್ತು ರಾಜಕೀಯ ಸನ್ನಿವೇಶ ಹಾಗೂ ಭಾರತೀಯ ರಾಜಕೀಯ ವ್ಯವಸ್ಥೆಯ ಮುಂದಿರುವ ಸವಾಲುಗಳ ಬಗ್ಗೆ ಅರಿವನ್ನು ಗಳಿಸಿಕೊಳ್ಳುವುದು.

### ಆ.ಕುಶಲತೆ

* ಭಾರತಕ್ಕೆ ಸಂಬಂಧಿಸಿದ ಪ್ರಧಾನ ರಾಜಕೀಯ ಬೆಳವಣಿಗೆಗಳನ್ನು ಮತ್ತು ಪ್ರಕ್ರಿಯೆಗಳನ್ನು ವಿವರಿಸುವ ಮತ್ತು ವಿಶ್ಲೇಷಿಸುವ ಸಾಮರ್ಥ್ಯ ಪಡೆಯುವುದು.

* ಭಾರತದ ಸಾಮಾಜಿಕ ಮತ್ತು ರಾಜಕೀಯ ಸಂಸ್ಥೆಗಳ ಕಾರ್ಯಾಚರಣೆಯನ್ನು ವಿವರಿಸುವ ಮತ್ತು ಗ್ರಹಿಸುವ ಸಾಮರ್ಥ್ಯ ಗಳಿಸಿಕೊಳ್ಳುವುದು.

### ಇ. ಆನ್ವಯಿಕ ಸಾಮರ್ಥ್ಯ

* ರಾಜಕೀಯ ಪ್ರಕ್ರಿಯೆ ಮತ್ತು ಸಂಸ್ಥೆಗಳಿಗೆ ಸಂಬಂಧಿಸಿದ ಸೈದ್ಧಾಂತಿಕ ಅಧ್ಯಯನಗಳ ಚೌಕಟ್ಟಿನಲ್ಲಿ ರಾಜಕೀಯ ಘಟನಾವಳಿಗಳನ್ನು ಜಾಗತಿಕ ಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ಹಾಗೂ ಸ್ಥಳೀಯ ಮಟ್ಟದಲ್ಲಿ ವ್ಯಾಖ್ಯಾನಿಸುವುದು ಮತ್ತು ವಿಶ್ಲೇಷಿಸುವ ಗುಣವನ್ನು ಗಳಿಸಿಕೊಳ್ಳುವುದು.

* ಇವತ್ತಿನ ಸಾಮಾಜಿಕ ಸಂದರ್ಭದಲ್ಲಿನ ಬೆಳವಣಿಗೆಗಳನ್ನು ಗಮನದಲ್ಲಿಟ್ಟುಕೊಂಡು ನಾಗರಿಕ ಹಕ್ಕು ಹಾಗೂ ಕರ್ತವ್ಯಗಳ ಸಂಬಂಧವನ್ನು ಗ್ರಹಿಸುವ ಪ್ರಯತ್ನ ನಡೆಸುವುದು.

### ಈ. ಸಮಾಜ ಹಾಗೂ ಅಧ್ಯಯನ ವಿಷಯದ ಬಗ್ಗೆ ಮನೋಭಾವ

* ರಾಜಕಾರಣ ಹಾಗೂ ರಾಜಕೀಯ ಪ್ರಕ್ರಿಯೆಗಳ ಬಗ್ಗೆ ಇತ್ಯಾತ್ಮಕ ಹಾಗೂ ವಾಸ್ತವಿಕ ದೃಷ್ಟಿಕೋನವನ್ನು ಬೆಳೆಸುವುದು.

* ಜಾಗತಿಕ, ರಾಷ್ಟ್ರೀಯ ಹಾಗೂ ಸ್ಥಳೀಯ ಮಟ್ಟದಲ್ಲಿನ ಸಾಮಾಜಿಕ ಮತ್ತು ರಾಜಕೀಯ ವಸ್ತುಸ್ಥಿತಿಯ ಬಗ್ಗೆ ಪ್ರತಿಸ್ಪಂದಿಸುವುದು.
* ತಿಳುವಳಿಕೆಯುಳ್ಳ ಹಾಗೂ ಪ್ರಜ್ಞಾವಂತ ನಾಗರಿಕನಾಗುವುದು.
* ನಾಗರಿಕರ ಹಕ್ಕುಗಳ ಹಾಗೂ ಕರ್ತವ್ಯಗಳು ಬಗ್ಗೆ ಹೆಚ್ಚು ಅರಿತವರಾಗುವುದು.

## ಅನುಬಂಧ ೨
## ಅಧ್ಯಾಪಕರಿಗೆ ವಿಸ್ತೃತವಾದ ಮಾರ್ಗಸೂಚಿ

ಈ ಹೊಸ ಪಠ್ಯಕ್ರಮವು ತನ್ನಷ್ಟಕ್ಕೆ ತಾನೇ ಅರ್ಥವಾಗುವಂತಿದೆ.

ಇಡೀ ಪತ್ರಿಕೆಯ ಉದ್ದೇಶಗಳನ್ನು ಹಾಗೂ ಪ್ರತಿ ಅಧ್ಯಾಯದ ಧ್ಯೇಯಗಳನ್ನು ವಿವರವಾಗಿ ಇಲ್ಲಿ ನೀಡಲಾಗಿದೆ. ಈ ವಿಷಯವನ್ನು ಬೋಧಿಸುವಾಗ ಅಧ್ಯಾಪಕರು ಇದನ್ನು ಗಮನಿಸಬೇಕು. ಈ ಜ್ಞಾನ ಶಿಸ್ತಿಗೆ ಮತ್ತು ಅದರ ಪ್ರಾಯೋಗಿಕ ಅನ್ವಯಕ್ಕೆ ಸಂಬಂಧಿಸಿದ ಪ್ರಧಾನ ಪರಿಭಾವನೆಗಳಿಗೆ ಪ್ರವೇಶವನ್ನು ಕಲಿಯುವವರಿಗೆ ಒದಗಿಸುವುದು ಪ್ರಸ್ತುತ ವಿಷಯದ ಗುರಿಯಾಗಿದೆ. ಪ್ರತಿಘಟಕ ಮತ್ತು ಉಪಘಟಕಗಳಿಗೆ ನೀಡಿರುವ ಸಮಯಾವಧಿಯ ಆಧಾರದ ಮೇಲೆ ಅದರ ವ್ಯಾಪ್ತಿಯನ್ನು ತಿಳಿಯಬಹುದು. ಪ್ರಧಾನ ಪರಿಭಾವನೆಗಳನ್ನು ವಿವರಿಸುವಾಗ ಭಾರತಕ್ಕೆ ಸಂಬಂಧಿಸಿದ ನಿರ್ದಿಷ್ಟ ಉದಾರಹಣೆಗಳನ್ನು ನೀಡಬೇಕು. ವಿವಿಧ ಘಟಕಗಳನ್ನು ಬೋಧಿಸುವಾಗ ಸಮಕಾಲೀನ ಬೆಳವಣಿಗೆಗಳನ್ನು ನಿದರ್ಶನವಾಗಿ ತೆಗೆದುಕೊಳ್ಳುವುದು ಸೂಕ್ತ. ಕಲಿಯುವವರನ್ನು ಕೇಂದ್ರವಾಗಿಟ್ಟುಕೊಂಡು ಪ್ರಸ್ತುತ ಪಠ್ಯಕ್ರಮವನ್ನು ರೂಪಿಸಿರುವುದರಿಂದ ಅಧ್ಯಾಪಕರು ಬೋಧನೆಯಲ್ಲ ಸೃಜನಶೀಲ ವಿಧಾನಗಳನ್ನು ಅಳವಡಿಸಿಕೊಳ್ಳಲು ವಿಪುಲ ಅವಕಾಶವಿದೆ. ಪ್ರತಿಘಟಕಕ್ಕೆ ಸಂಬಂಧಿಸಿದಂತೆ ಕ್ರಿಯಾಶೀಲ ಕಲಿಕಾ ಸಾಧನಗಳ ಬಗ್ಗೆ ವಿವರಣೆ ನೀಡಲಾಗಿದೆ.ಇವೆಲ್ಲವೂ ಕೇವಲ ಸೂಚನಾತ್ಮಕ ಸಂಗತಿಗಳು. ಅವುಗಳನ್ನು ಸೃಜನಶೀಲವಾಗಿ ಬಳಸಬಹುದು ಅಥವಾ ಸ್ಥಳಿಯ ಅಗತ್ಯ ಹಾಗೂ ಸನ್ನಿವೇಶಕ್ಕೆ ಸೂಕ್ತವಾಗುವಂತೆ ಬದಲಾಯಿಸಿಕೊಳ್ಳಬಹುದು.

ಅಧ್ಯಯನ ಯೋಜನೆಗಳು ಮತ್ತು ಹೊಣೆಗಳು ಕಡ್ಡಾಯ. ಇವುಗಳ ಮೌಲ್ಯಮಾಪನಕ್ಕೆ ಬೇಕಾದ ವಿವರಗಳನ್ನು ನಿರ್ದಿಷ್ಟ ಪಡಿಸಿದ ನಮೂನೆಗಳನ್ನು ನೀಡಲಾಗಿದೆ. ಈ ನಿಯಮವನ್ನು ಕ್ರಮಬದ್ಧವಾಗಿ ಪಾಲಿಸಬೇಕು.

ಅನುಬಂಧದಲ್ಲಿ ನೀಡಿರುವ ಗ್ರಂಥಗಳ ಪಟ್ಟಿಯು ಕೇವಲ ಸೂಚನಾತ್ಮಕ-ವಾದುದು. ಹೊಸದಾಗಿ ಪ್ರಕಟವಾಗುವ ಗ್ರಂಥಗಳಿಂದ ಅಧ್ಯಾಪಕರು ಮಾಹಿತಿಯನ್ನು ಅವಶ್ಯ ಪಡೆದುಕೊಳ್ಳಬಹುದು. ವಾರ್ಷಿಕಗಳು ಹಾಗೂ ವಿಶ್ವಕೋಶಗಳನ್ನು ಬಳಸಬಹುದು. ಇಲ್ಲಿ ನೀಡಿರುವ ವೆಬ್‌ಸೈಟ್‌ಗಳು ತುಂಬಾ ಉಪಯುಕ್ತವಾದ ಮಾಹಿತಿಯ ಆಕರಗಳಾಗಿವೆ.

ಈ ಭಾಗದಲ್ಲಿ ನೀಡಿರುವ ಮೌಲ್ಯಮಾಪನ ಮಾದರಿಯನ್ನು ಅಧ್ಯಾಪಕರು ವಿಷಯವನ್ನು ಬೋಧಿಸುವಾಗ ಗಮನದಲ್ಲಿರಿಸಿಕೊಳ್ಳಬೇಕು. ವಿಷಯದ ಮಹತ್ವ, ಅದಕ್ಕೆ ನಿಗದಿಪಡಿಸಿರುವ ಅಂಶಗಳು ಮತ್ತು ಅವುಗಳಿಗೆ ನಿಗದಿಪಡಿಸಿರುವ ಬೋಧನಾವಧಿಗಳ ನಡುವೆ ಸ್ಪಷ್ಟವಾದ ಸಂಬಂಧವಿದೆ. ಇದನ್ನು ವಿದ್ಯಾರ್ಥಿಗಳ ಗಮನಕ್ಕೆ ತರುವದು ಲೇಸು.

## ಅನುಬಂಧ ೩
## ಅಧ್ಯಯನದ ಯೋಜನೆಗಳು ಮತ್ತು ಪ್ರಾಯೋಗಿಕ ಕಾರ್ಯಗಳು

ಕರ್ನಾಟಕದ ಪದವಿಪೂರ್ವ ಶಿಕ್ಷಣ ಇಲಾಖೆಯು ೨೦೦೪-೦೫ ನೆಯ ಸಾಲಿನಲ್ಲಿ ಹೊಸ ಪಠ್ಯಕ್ರಮವನ್ನು ಜಾರಿಯಲ್ಲಿ ತಂದಿದೆ. ಇದರಲ್ಲಿ ಎರಡು ಭಾಗಗಳಿವೆ. ಮೊದಲನೆಯದು ಸೈದ್ಧಾಂತಿಕ ಭಾಗ ಅಥವಾ ತಾತ್ವಿಕ ಭಾಗ. ಎರಡನೆಯದು ಪ್ರಾಯೋಗಿಕ ಭಾಗ ಅಥವಾ ಎಂಫೆರಿಕಲ್ ಭಾಗ. ಮೊದಲನೆಯ ಸೈದ್ಧಾಂತಿಕ ಭಾಗಕ್ಕೆ ೯೦ ಅಂಕಗಳನ್ನು ಪ್ರಾಯೋಗಿಕ ಭಾಗಕ್ಕೆ ೧೦ ಅಂಕಗಳನ್ನು ನಿಗದಿಪಡಿಸಲಾಗಿದೆ.ಈ ಹಿಂದೆ ಪಠ್ಯಕ್ರಮದಲ್ಲಿ ಇಂತಹ ಪ್ರಾಯೋಗಿಕ ಭಾಗವಿರಲಿಲ್ಲ. ಪ್ರಾಯೋಗಿಕ ಭಾಗವನ್ನು ಸಮಾಜ ವಿಜ್ಞಾನಗಳಿಗೆ ನಿಯಮಿಸಿ ಪದವಿಪೂರ್ವ ಶಿಕ್ಷಣ ಇಲಾಖೆಯು ಶ್ಲಾಘನೀಯ ಕಾರ್ಯಮಾಡಿದೆ. ಬೋಧನೆ ಮತ್ತು ಅಧ್ಯಯನಗಳಿಗೆ ಇದು ಹೊಸ ಆಯಾಮವೊಂದನ್ನು ನೀಡಿದೆ. ಸಮಾಜ ವಿಜ್ಞಾನಗಳಿಗೆ ಪ್ರಾಯೋಗಿಕ ಭಾಗವನ್ನು ನಿಯಮಿಸಿರುವುದು. ಕರ್ನಾಟಕಕ್ಕೆ ಸಂಬಂಧಿಸಿದಂತೆ ಅತ್ಯಂತ ವಿನೂತನ ಕ್ರಮವಾಗಿದೆ.

ಈ ಪ್ರಾಯೋಗಿಕ ಭಾಗವನ್ನು ವಿದ್ಯಾರ್ಥಿಗಳು ಹೇಗೆ ನಿರ್ವಹಿಸಬೇಕು? ಅಧ್ಯಾಪಕರಿಂದ ಇದರ ಬಗ್ಗೆ ನಿರ್ದೇಶನ ಮತ್ತು ಮಾರ್ಗದರ್ಶನ ಹೇಗೆ ಪಡೆಯಬೇಕು. ಪ್ರಾಯೋಗಿಕ ಭಾಗಕ್ಕೆ ಸಂಬಂಧಿಸಿದಂತೆ ಮೌಲ್ಯಮಾಪನದ ಸ್ವರೂಪ ಹೇಗೆ? ಇವೆ ಮುಂತಾದ ಪ್ರಶ್ನೆಗಳನ್ನು ಇಲ್ಲಿ ಚರ್ಚಿಸಲಾಗಿದೆ. ಈ ಅನುಬಂಧ ಅಧ್ಯಾಪಕರಿಗೆ ಹಾಗೂ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುತ್ತದೆ ಎಂದು ಭಾವಿಸಲಾಗಿದೆ. ಇಲ್ಲಿ ಅಧ್ಯಯನ ಯೋಜನೆ ಹಾಗೂ ಪ್ರಾಯೋಗಿಕ ಕಾರ್ಯಗಳ ಬಗ್ಗೆ ಪಟ್ಟಿಯೊಂದನ್ನು ನೀಡಲಾಗಿದೆ. ಅದು ಅಂತಿಮವಾದುದೇನಲ್ಲ. ಅದೊಂದು ಸೂಚನೆ ಎಂದು ತಿಳಿದರೆ ಸಾಕು. ಸೃಜನಶೀಲವಾದ ವಿದ್ಯಾರ್ಥಿಗಳು ಮತ್ತು ಸಂಶೋಧನಾಶೀಲವಾದ ಅಧ್ಯಾಪಕರು ತಮ್ಮ ವಿಷಯ ಕುರಿತಂತೆ ಬೇರೆ ರೀತಿಯಲ್ಲಿ ಪ್ರಾಯೋಗಿಕ ಅಧ್ಯಯನ ಯೋಜನೆಗಳನ್ನು ರೂಪಿಸಿಕೊಳ್ಳಬಹುದು. ಲಭ್ಯವಿರುವ ಮೂಲ ಸೌಲಭ್ಯ, ಗ್ರಂಥಾಲಯ, ಪ್ರದೇಶ ಮುಂತಾದ ಸಂಗತಿಗಳನ್ನು ಗಮನದಲ್ಲಿಟ್ಟುಕೊಂಡು ವಿವಿಧ ಬಗೆಯಲ್ಲಿ ಇದನ್ನು ರೂಪಿಸಿಕೊಳ್ಳಬಹುದು.

ಸೈದ್ಧಾಂತಿಕ ಭಾಗ / ತಾತ್ವಿಕವಾದ ಸಂಗತಿಗಳು ಮತ್ತು ಅವುಗಳನ್ನು ಕುರಿತ ಚರ್ಚೆ ಮೂಲತಃ ಅಮೂರ್ತವಾಗಿರುತ್ತವೆ. ಪ್ರತಿಯೊಂದು ಜ್ಞಾನಶಾಖೆಯಲ್ಲೂ ಸಿದ್ಧಾಂತಗಳಿರುತ್ತವೆ, ನಿಯಮಗಳಿರುತ್ತವೆ, ತತ್ವಗಳಿರುತ್ತವೆ. ಈ ನಿಯಮ-ತತ್ವಗಳು ಆಚರಣೆಯಲ್ಲಿ ಹೇಗಿರುತ್ತವೆ ಎಂಬುದನ್ನು ತಿಳಿಯುವದು ರೋಚಕವಾಗಿರುತ್ತದೆ. ಪ್ರಾಯೋಗಿಕ ಅಧ್ಯಯನ ಯೋಜನೆಗಳ ಮೂಲಕ ಅಮೂರ್ತವಾದ ತತ್ವ-ನಿಯಮ ಸಿದ್ಧಾಂತಗಳನ್ನು ವಿದ್ಯಾರ್ಥಿಗಳು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು ಮತ್ತು ಮನನ ಮಾಡಿಕೊಳ್ಳಬಹುದು.

ಸಿದ್ಧಾಂತಗಳು ಆಚರಣೆಯಲ್ಲಿ ಯಾವ ಸ್ವರೂಪ ತಳೆಯುತ್ತವೆ ಎಂಬುದು ತುಂಬಾ ಕುತೂಹಲಕಾರಿಯಾದ ಸಂಗತಿಯಾಗಿದೆ. ಉದಾಹರಣೆಗೆ ಮೂಲಭೂತ ಹಕ್ಕುಗಳು ನಮ್ಮ ಗ್ರಾಮೀಣ ಪ್ರದೇಶದಲ್ಲಿ ನಾಗರಿಕರಿಗೆ ದಕ್ಕುತ್ತಿವೆಯೇ? ಮಾನವ ಹಕ್ಕುಗಳು ಯಾವ ರೀತಿ ಉಲ್ಲಂಘನೆಯಾಗುತ್ತಿವೆ? ಇಂತಹ ಸಂಗತಿಗಳನ್ನು ಪ್ರಾಯೋಗಿಕ ಕಾರ್ಯಗಳ ಮೂಲಕ ತಿಳಿದುಕೊಳ್ಳಬಹುದು. ಈ ಬಗೆಯ ಕಾರ್ಯಯೋಜನೆಗಳಿಂದ ಸೈದ್ಧಾಂತಿಕತೆ ಹಾಗೂ ಪ್ರಾಯೋಗಿಕತೆಗಳ ನಡುವೆ ಅನುಸಂಧಾನ ಸಾಧ್ಯವಾಗುತ್ತದೆ. ಸಿದ್ಧಾಂತಗಳನ್ನು ಕುರಿತಂತೆ ವಿದ್ಯಾರ್ಥಿಗಳಿಗೆ ಪ್ರಶ್ನೆ ಕೇಳುವದು ಸಾಧ್ಯವಾಗುತ್ತದೆ. ಈ ಬಗ್ಗೆ ಯೋಚಿಸುವುದು ಚಿಂತಿಸುವುದು -ಚರ್ಚಿಸುವುದು ಸಾಧ್ಯವಾಗುತ್ತದೆ. ಇದು ವಿದ್ಯಾರ್ಥಿಗಳಲ್ಲಿ ವಿಶ್ಲೇಷಣಾ ಕುಶಲತೆಯನ್ನು ಬೆಳೆಸುತ್ತದೆ. ಈಗಾಗಲೇ ತಿಳಿಸಿರುವಂತೆ ರಾಜ್ಯಶಾಸ್ತ್ರದ ಅಧ್ಯಯನದ ಉದ್ದೇಶಗಳು ನಾಲ್ಕು.

೧. ಜ್ಞಾನ ಸಂಪಾದಿಸುವದು.
೨. ಕುಶಲತೆ ಗಳಿಸಿಕೊಳ್ಳುವದು.
೩. ಅನ್ವಯಿಕ ಸಾಮರ್ಥ್ಯ ಪಡೆದುಕೊಳ್ಳುವದು.
೪. ಸಮಾಜದ ಬಗ್ಗೆ ಧೋರಣೆಯೊಂದನ್ನು ರೂಪಿಸಿಕೊಳ್ಳುವದು.

ಈ ಪ್ರಾಯೋಗಿಕ ಅಧ್ಯಯನ ಯೋಜನೆಗಳು ಮೇಲೆ ಉಲ್ಲೇಖಿಸಿರುವ ಎರಡು ಮತ್ತು ಮೂರನೆಯ ಉದ್ದೇಶಗಳನ್ನು ಸಾಧಿಸಿಕೊಳ್ಳಲು ನೆರವಾಗುತ್ತವೆ. ರಾಜ್ಯಶಾಸ್ತ್ರ ಪಠ್ಯಕ್ರಮದ ಮೂಲ ಉದ್ದೇಶ ಜ್ಞಾನ ಸಂಪಾದನೆಯಷ್ಟೇ ಅಲ್ಲ ರಾಜ್ಯಶಾಸ್ತ್ರದ ತತ್ವಗಳ ಅನ್ವಯಿಕ ಸ್ವರೂಪವನ್ನು ತಿಳಿದುಕೊಳ್ಳುವ ಅಗತ್ಯವಿದೆ. ಈ ಕಾರಣದಿಂದ ಪ್ರಾಯೋಗಿಕ ಭಾಗವನ್ನು ಪಠ್ಯಕ್ರಮದಲ್ಲಿ ಸೇರಿಸಲಾಗಿದೆ. ಈ ಪ್ರಾಯೋಗಿಕ ಕಾರ್ಯದಲ್ಲಿ ಭಾಗವಹಿಸುವುದರಿಂದ ಅಧ್ಯಯನದಲ್ಲಿ ಶಿಸ್ತು ಅಥವಾ ಪಟ್ಟು ಪಾಡು ವಿದ್ಯಾರ್ಥಿಗಳಿಗೆ ಪ್ರಾಪ್ತವಾಗುತ್ತದೆ. ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ನಡುವೆ ಚರ್ಚೆ- ಅನುಸಂಧಾನ ಸಾಧ್ಯವಾಗುತ್ತದೆ. ಅಧ್ಯಯನವು ದ್ವಿಮುಖಿಯಾಗುತ್ತದೆ.

ಇಲ್ಲಿ ವಿದ್ಯಾರ್ಥಿಗಳು ಕೇವಲ ಕೇಳುವ ಶ್ರೋತೃಗಳಾಗಿರುವುದಿಲ್ಲ.ಅವರು ಕೇಳಿದ್ದನ್ನು, ಕಲಿತಿದ್ದನ್ನು,ತಿಳಿದುಕೊಂಡಿದ್ದನ್ನು ಪ್ರಮಾಣಿಸಿ-ಪರೀಕ್ಷಿಸಿ ನೋಡುವ ಪ್ರಯೋಗ ಗಳನ್ನು ಮಾಡಬಲ್ಲರು.ಪ್ರಾಯೋಗಿಕ ಅಧ್ಯಯನ ಯೋಜನೆಗಳಿಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳು ಅಧ್ಯಯನ ವರದಿ ಸಿದ್ಧ ಮಾಡಬೇಕಾಗುತ್ತದೆ. ಇದರಿಂದ ವಿದ್ಯಾರ್ಥಿಗಳಿಗೆ ಪ್ರಬಂಧಕತೆಯನ್ನು ರೂಢಿಸಿಕೊಳ್ಳುವುದು ಸಾಧ್ಯವಾಗುತ್ತದೆ.

ರಾಜ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಮೊದಲನೆಯ ಪದವಿಪೂರ್ವ ತರಗತಿಯಲ್ಲಿ ಯಾವ ಪ್ರಾಯೋಗಿಕ ಅಧ್ಯಯನಗಳನ್ನು ಕೈಗೊಳ್ಳಬಹುದು ಎಂಬುದನ್ನು ಕುರಿತಂತೆ ಒಂದು ಪಟ್ಟಿಯನ್ನು ಇಲ್ಲಿ ನಿಡಲಾಗಿದೆ. ಈಗಾಗಲೇ ಹೇಳಿರುವಂತೆ ಅದೇನು ವಿಸ್ತೃತವಾದ ಪಟ್ಟಿಯಲ್ಲಿ ಅದೊಂದು ಮಾರ್ಗಸೂಚಿ.ಅದೊಂದು ಪ್ರಾಥಮಿಕ ಪಟ್ಟಿ.ಹೀಗೆ ಮಾಡಬೇಕಾದುದು ಕಡ್ಡಾಯವಿಲ್ಲ.

## ಪ್ರಾಯೋಗಿಕ ಅಧ್ಯಯನದ ಯೋಜನೆಗಳು

೧. ದೇಶದ ಹಾಗೂ ರಾಜ್ಯದ ರಾಜಕೀಯ - ರಾಜನೀತಿ ಕುರಿತಂತೆ ಪತ್ರಿಕೆಗಳಲ್ಲಿ ಪ್ರಕಟವಾಗುವ ಶೀರ್ಷಿಕೆ ವ್ಯಂಗಚಿತ್ರಗಳು ಭಾವಚಿತ್ರಗಳು ಮುಂತಾದವುಗಳನ್ನು ಬಳಸಿಕೊಂಡು ಕಾಲೇಜಿನಲ್ಲಿ ಒಂದು ಗೋಡೆಪತ್ರಿಕೆ ಸಿದ್ಧಪಡಿಸುವುದು.

೨. ಪೌರ ಚಟುವಟಿಕೆ ಕುರಿತಂತೆ ಕೆಲಸ ಮಾಡುತ್ತಿರುವ ಸ್ಥಳೀಯ ಸರ್ಕಾರೇತರ ಸ್ವಯಂಸೇವಾ ಸಂಸ್ಥೆ (ಎನ್.ಜಿ. ಒ) ಬಗ್ಗೆ ಅಧ್ಯಯನ ವರದಿ ಸಿದ್ಧಪಡಿಸುವುದು.

೩. ಪ್ರಜಾಪ್ರಭುತ್ವ ಮತ್ತು ಪ್ರಜಾಪ್ರಭುತ್ವೇತರ, ಸಂಸದೀಯ ಮತ್ತು ಅಧ್ಯಕ್ಷೀಯ ಹಾಗೂ ಏಕಾತ್ಮಕ ಮತ್ತು ಸಂಯುಕ್ತ ಸರ್ಕಾರಗಳು ಅಸ್ತಿತ್ವದಲ್ಲಿರುವ ದೇಶಗಳ ಪಟ್ಟಿ ಮಾಡುವುದು.

೪. ಕಳೆದ ಒಂದು ವರ್ಷದಲ್ಲಿ ರಾಜ್ಯ ವಿಧಾನಮಂಡಳ ಅಥವಾ ಸಂಸತ್ತಿನಲ್ಲಿ ರಚನೆಯಾದ ಶಾಸನವು ಕಾನೂನುಗಳನ್ನು ಕುರಿತಂತೆ ಶಾಸನ ಸಿದ್ಧಪಡಿಸುವುದು.

೫. ಪೌರತ್ವ, ಲೋಕಸಭೆ, ರಾಷ್ಟ್ರಪತಿ, ಚುನಾವಣೆಗಳು,ಸರ್ವೋಚ್ಛ ನ್ಯಾಯಾಲಯಗಳಿಗೆ ಸಂಬಂಧಿಸಿದ ನಮ್ಮ ಸಂವಿಧಾನದ ಕಲಮುಗಳನ್ನು ಗುರುತಿಸಿ ಪಟ್ಟಿ ಮಾಡುವುದು.

೬. ವಿಧಾನ ಸಭೆಯಲ್ಲಿನ ಪ್ರಶ್ನೋತ್ತರ ಕಾಲ, ಸ್ವಾತಂತ್ರ್ಯ ದಿನಾಚರಣೆ ಅಥವಾ ಗಣರಾಜ್ಯ ದಿನಾಚರಣೆಗಳಿಗೆ ಸಂಬಂಧಿಸಿದ ಪ್ರಧಾನ ಮಂತ್ರಿ ಅಥವಾ ರಾಷ್ಟ್ರ ಪತಿಗಳ ಭಾಷಣ - ಇವುಗಳಲ್ಲಿ ಯಾವುದಾದರೊಂದರ ಬಗ್ಗೆ ವಿಮರ್ಶಾತ್ಮಕ ವರದಿ ಸಿದ್ಧಪಡಿಸುವುದು.

೭. ರಾಷ್ಟ್ರ, ರಾಜ್ಯ , ಜಿಲ್ಲೆ, ತಾಲೂಕುಗಳ ಮಟ್ಟದ ರಾಜಕೀಯ ಸಂಸ್ಥೆಗಳ ಪಟ್ಟಿ ಮಾಡುವುದು.ಹಾಗೂ ಅವುಗಳ ಒಂದು ಚಾರ್ಟನ್ನು ಸಿದ್ಧಪಡಿಸುವುದು. ಕೇಂದ್ರ-ರಾಜ್ಯ ಸಂಪುಟದ ಸಚಿವರು ಹಾಗೂ ಅವರ ಖಾತೆಗಳನ್ನುತಯಾರಿಸುವುದು. ಜಿಲ್ಲಾ ಪಂಚಾಯತಿ, ನಗರಸಭೆ, ಗ್ರಾಮ ಪಂಚಾಯತಿ ಸದಸ್ಯರ ಪಟ್ಟಿ ತಯಾರಿಸುವುದು.

೮. ದೇಶದಲ್ಲಿರುವ ನ್ಯಾಯಾಂಗ ವ್ಯವಸ್ಥೆ ಕುರಿತಂತೆ ಚಾರ್ಟನ್ನು ಸಿದ್ಧಪಡಿಸುವುದು.

೯. ಸ್ಥಳೀಯ ರಾಜಕೀಯ ದುರೀಣರನ್ನು ಅಥವಾ ಆಡಳಿತಾಧಿಕಾರಿಗಳನ್ನು ಸಂದರ್ಶಿಸಿ ವರದಿ ಸಿದ್ಧಪಡಿಸುವುದು.

೧೦. ರಾಜ್ಯಶಾಸ್ತ್ರ ಮೀಮಾಂಸಕರ ಅಥವಾ ರಾಜಕೀಯ ಮುತ್ಸದ್ಧಿಗಳ ಜೀವನ ಚರಿತ್ರೆಯ ವಿವರಗಳನ್ನು ಸಂಗ್ರಹಿಸುವುದು.

೧೧. ಜಾಗತಿಕರಣ ಅಥವಾ ಖಾಸಗೀಕರಣ ಸ್ಥಳೀಯವಾಗಿ ಉಂಟುಮಾಡಿರುವ ಪರಿಣಾಮಗಳ ಬಗ್ಗೆ ವರದಿ ಸಿದ್ಧಪಡಿಸುವುದು.

೧೨. ಚುನಾವಣೆಗೆ ಸಂಬಂಧಿಸಿದಂತೆ ಪತ್ರಿಕಾ ವರದಿಗಳನ್ನು ವಿಶ್ಲೇಷಿಸಿ ಪ್ರಬಂಧ ರಚಿಸುವುದು.

೧೩. ಅಣಕು ಸಂಸತ್ತು ಅಥವಾ ವಿಧಾನಸಭೆ ಅಥವಾ ಜಿಲ್ಲಾ ಪಂಚಾಯತಿ ಸಭೆಯನ್ನು ಸಂಘಟಿಸುವುದು.

೧೪. ಜಿಲ್ಲಾ ಆಡಳಿತ ವ್ಯವಸ್ಥೆಯು ಶ್ರೇಣಿಕೃತ ಕ್ರಮವನ್ನು ಕುರಿತಂತೆ ಚಾರ್ಟನ್ನು ತಯಾರಿಸುವುದು. ಮತ್ತು ಅದನ್ನು ವಿಶ್ಲೇಷಿಸುವುದು.

೧೫. ಅಂತಾರಾಷ್ಟ್ರೀಯ ರಾಜಕೀಯ ಘಟನೆಯೊಂದರ ಬಗ್ಗೆ ಪ್ರಬಂಧ ರಚಿಸುವುದು.

೧೬. ಜಾತಿವಾರು ಮತ್ತು ಲಿಂಗವಾರು ಕರ್ನಾಟಕದ ವಿಧಾನಸಭೆ ಹಾಗೂ ವಿಧಾನಪರಿಷತ್ತಿನ ಸದಸ್ಯರ ಶೋಷಣೆವೊಂದನ್ನು ಸಿದ್ಧಪಡಿಸುವುದು.

## ಸೂಚನೆ

೧. ಅಧ್ಯಯನ ಯೋಜನೆ - ಪ್ರಾಯೋಗಿಕ ಕಾರ್ಯ ಎಲ್ಲ ವಿದ್ಯಾರ್ಥಿಗಳಿಗೂ ಕಡ್ಡಾಯ

೨. ಪ್ರತಿಯೊಬ್ಬ ವಿದ್ಯಾರ್ಥಿಯೂ ವಾರ್ಷಿಕ ಕನಿಷ್ಠ ಎರಡು ಯೋಜನಾ ವರದಿಗಳನ್ನು ಸಲ್ಲಿಸಬೇಕು.

೩. ಎರಡು ಯೋಜನೆಗಳಲ್ಲಿ ಒಂದು ವೈಯಕ್ತಿಕ ಯೋಜನೆಯಾಗಿರಬೇಕು. ಎರಡನೆಯದು ವೈಯಕ್ತಿಕ ಅಥವಾ ಸಮೂಹ ಯೋಜನೆಯಾಗಿರಬಹುದು.

೪. ಎರಡು ಅಧ್ಯಯನ ಯೋಜನಾ ವರದಿಗಳಿಗೆ ೧೦ ಅಂಶಗಳಿರುತ್ತವೆ.

೫. ಕೆಳಗೆ ನೀಡಿರುವ ನಮೂನೆಯಲ್ಲಿರುವ ಸೂಚನೆಯಂತೆ ಮೌಲ್ಯಮಾಪನ ನಡೆಯಬೇಕು.

## ಪ್ರಾಯೋಗಿಕ ಅಧ್ಯಯನ ಯೋಜನೆಗಳ ಮೌಲ್ಯಮಾಪನ ನಮೂನೆ

| | |
|---|---|
| ೧. ಅಧ್ಯಯನ ವರದಿಯ ವಿನ್ಯಾಸ, ಸೈದ್ಧಾಂತಿಕ ಚೌಕಟ್ಟು, ವೈಧಾನಿಕತೆ ಹಾಗೂ ಶೈಲಿ | ೨ಅಂಕಗಳು |
| ೨. ಮಾಹಿತಿ ಸಂಗ್ರಹಣೆ | ೨ಅಂಕಗಳು |
| ೩. ಸಂಗ್ರಹಿಸಿದ ಮಾಹಿತಿಯ ವಿಶ್ಲೇಷಣೆ | ೨ಅಂಕಗಳು |

೪. ಬರವಣಿಗೆ ಶೈಲಿ, ಭಾಷಾ ಬಳಕೆ, ಕೋಷ್ಟಕಗಳು, ನಕ್ಷೆ ೨ ಅಂಕಗಳು
೫. ಅಧ್ಯಯನದ ಶೋಧನೆ - ಸಾರಾಂಶ ೨ ಅಂಕಗಳು
ಒಟ್ಟು ೧೦ ಅಂಕಗಳು

**ಅಧ್ಯಯನ ವರದಿ ಸಿದ್ಧಪಡಿಸುವದು**

ಮೇಲೆ ತಿಳಿಸಿದ ಅಥವಾ ನಾವು ಆಯ್ಕೆ ಮಾಡಿಕೊಂಡ ವಿಷಯ ಕುರಿತಂತೆ ಅಧ್ಯಯನ ವರದಿ ಸಿದ್ಧಪಡಿಸಬೇಕಾದರೆ ಕೆಲವು ಸಂಗತಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಬರವಣಿಗೆಯು ಒಂದು ಕಲೆ. ಅದನ್ನು ವಿದ್ಯಾರ್ಥಿಗಳು ಶಾಲಾ-ಕಾಲೇಜುಗಳಲ್ಲಿ ರೂಢಿಸಿಕೊಳ್ಳಬೇಕಾಗುತ್ತದೆ.

ಸಾಮಾನ್ಯವಾಗಿ ಅಧ್ಯಯನ ವರದಿಯಲ್ಲಿ ಕೆಳಕಂಡ ಸಂಗತಿಗಳಿರಬೇಕು. ಮೊದಲನೆಯದಾಗಿ ಅಧ್ಯಯನ ಮಾಡುತ್ತಿರುವ ವಿಷಯ ಕುರಿತಂತೆ ಸೈದ್ಧಾಂತಿಕ ಸಂಗತಿಗಳನ್ನು ಚರ್ಚಿಸಬೇಕಾಗುತ್ತದೆ. ಅಧ್ಯಯನದಲ್ಲಿ ಪರಿಶೀಲಿಸಲಾಗುವ ಪ್ರಶ್ನೆಗಳನ್ನು ಗುರುತಿಸಬೇಕಾಗುತ್ತದೆ. ಅಧ್ಯಯನ ವಿಷಯವನ್ನು ಅಧ್ಯಯನ ಸಮಸ್ಯೆಯನ್ನಾಗಿ ಪರಿವರ್ತಿಸಿಕೊಳ್ಳಬೇಕಾಗುತ್ತದೆ. ಇದನ್ನು ಸಮಸ್ಯೀಕರಣವೆನ್ನುತ್ತಾರೆ.

ಎರಡನೆಯ ಭಾಗದಲ್ಲಿ ಅಧ್ಯಯನದ ಉದ್ದೇಶಗಳನ್ನು ಅನುಕ್ರಮವಾಗಿ ನೀಡಬೇಕಾಗುತ್ತದೆ. ಉದ್ದೇಶಗಳು ಅಧ್ಯಯನಕ್ಕೆ ಒಂದು ಚೌಕಟ್ಟಿನಲ್ಲಿ ನೀಡುತ್ತದೆ. ಅಧ್ಯಯನಕ್ಕೊಂದು ದಿಶೆ ಪ್ರಾಪ್ತವಾಗುತ್ತದೆ.

ಮೂರನೆಯ ಭಾಗದಲ್ಲಿ ಅಧ್ಯಯನ ವಿಧಾನದ ವಿವರಗಳು ಬೇಕಾಗುತ್ತದೆ. ಯಾವ ಮೂಲಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ, ಯಾರನ್ನು ಸಂದರ್ಶಿಸಲಾಗಿದೆ, ಮಾಹಿತಿಯನ್ನು ಯಾವ ರೂಪದಲ್ಲಿ ಅಣಿಗೊಳಿಸಲಾಗಿದೆ. ಮುಂತಾದ ಸಂಗತಿಗಳು ಮೂರನೆಯ ಭಾಗದಲ್ಲಿರಬೇಕು.

ನಾಲ್ಕನೆಯದು ಮಹತ್ವದ ಭಾಗ. ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಮಾಹಿತಿಯ ವಿಶ್ಲೇಷಣೆ ಇಲ್ಲಿರುತ್ತದೆ. ಈ ವಿಶ್ಲೇಷಣೆ-ಚರ್ಚೆಯ ಆಧಾರದ ಮೇಲೆ ಅಧ್ಯಯನದಿಂದ ಕಂಡುಕೊಂಡ ಸಂಗತಿಗಳನ್ನು ಗುರುತಿಸಬಹುದಾಗಿದೆ.

ಕೊನೆಯ ಭಾಗದಲ್ಲಿ ಅಧ್ಯಯನದ ಸಾರಾಂಶ ನೀಡಬೇಕು. ಅಧ್ಯಯನದಿಂದ ಹೊಸದಾಗಿ ಕಂಡುಹಿಡಿದ ಸಂಗತಿಗಳಾವುವು ಎಂಬುದನ್ನು ತಿಳಿಸಬೇಕು.

ಅಧ್ಯಯನದ ವರದಿಯು ೨೫ ರಿಂದ ೩೦ ಪುಟಗಳಿದ್ದರೆ ಸಾಕು.

# ಅನುಬಂಧ -೪

# ಮಾದರಿ ಪ್ರಶ್ನೆ ಪತ್ರಿಕೆ

## ಮೊದಲನೆ ಪದವಿ ಪೂರ್ವ ತರಗತಿ

## ರಾಜ್ಯಶಾಸ್ತ್ರದ ಮೂಲ ತತ್ವಗಳು ಮತ್ತು ಸರ್ಕಾರ

ಅ. ಕೆಳಗಿನ ಎಲ್ಲಾ ಪ್ರಶ್ನೆಗಳಿಗೂ ಪ್ರತಿಯೊಂದಕ್ಕೆ ಒಂದು ವಾಕ್ಯದಲ್ಲಿ ಉತ್ತರಿಸಿ.

೧೦x೧=೧೦

೧. ಹಕ್ಕು ಎಂದರೇನು ?

೨. ಕಾನೂನಿನ ವ್ಯಾಖ್ಯೆ ನೀಡಿ ?

೩. ಸಂವಿಧಾನ ನುಡಿಯ ಮೂಲಧಾತು ಯಾವುದು ?

೪. ಭಾರತದ ಸಂವಿಧಾನವು ಆಚರಣೆ ಯಾವಾಗ ಬಂದಿತು ?

೫. ಸಾಮಾಜಿಕ ನ್ಯಾಯವೆಂದರೇನು ?

೬. ಸುಗ್ರೀವಾಜ್ಞೆ ಎಂದರೇನು ?

೭. 'ಗಣರಾಜ್ಯ' ಎಂಬುದರ ಅರ್ಥವೇನು ?

೮. ಶಾಸಕಾಂಗದ ಪ್ರಾಥಮಿಕ ಕಾರ್ಯವನ್ನು ವಿವರಿಸಿ.

೯. ಜಿಲ್ಲಾ ನ್ಯಾಯಾಧೀಶರ ಆಡಳಿತಾತ್ಮಕ ಕಾರ್ಯವನ್ನು ವಿವರಿಸಿ.

೧೦. ಗ್ರಾಮಸಭಾ ಎಂಬುದರ ಅರ್ಥ ನೀಡಿ.

ಆ. ಕೆಳಗಿನ ಪ್ರಶ್ನೆಗಳಲ್ಲಿ ಹತ್ತಕ್ಕೆ ಉತ್ತರಿಸಿ. ಪ್ರತಿಯೊಂದು ಪ್ರಶ್ನೆಯನ್ನು ೨-೩ ವಾಕ್ಯಗಳಲ್ಲಿ ಉತ್ತರಿಸಿ. ೧೦x೨=೨೦

೧೧. 'ರಾಜಕಾರಣ'ದ ಅರ್ಥವನ್ನು ಬರೆಯಿರಿ.

೧೨. ರಾಜ್ಯಶಾಸ್ತ್ರದ ವ್ಯಾಪ್ತಿಯನ್ನು ಸಂಕ್ಷಿಪ್ತವಾಗಿ ವಿವರಿಸಿ.

೧೩. ನೈಸರ್ಗಿಕ ಸಮಾನತೆಯನ್ನು ಸಂಕ್ಷಿಪ್ತವಾಗಿ ವಿವರಿಸಿ.

೧೪. ಉಚ್ಚನ್ಯಾಯಾಲಯದ ಮೇಲ್ಮನವಿ ಮತ್ತು ಮರುಪರಿಶೀಲನಾ ವ್ಯಾಪ್ತಿಯನ್ನು ವಿವರಿಸಿ.

೧೫. ಸಂವಿಧಾನಾತ್ಮಕ ಸರಕಾರವೆಂದರೇನು?

೧೬. ಏಕಾತ್ಮಕ ಸರಕಾರದ ಅರ್ಥನೀಡಿ.

೧೭. ಭಾರತದ ಸಂವಿಧಾನದಲ್ಲಿ ಅಂತರ್ಗತಗೊಂಡಿರುವ ಎರಡು ಮೂಲಭೂತ ಹಕ್ಕುಗಳನ್ನು ಹೆಸರಿಸಿ.

೧೮. ಪ್ರಜಾಪ್ರಭುತ್ವ ಸರ್ಕಾರದ ಲಕ್ಷಣಗಳನ್ನು ನೀಡಿ.
೧೯. ಸರ್ವೋಚ್ಛ ನ್ಯಾಯ್ಯಾಲಯದ ನ್ಯಾಯಾಧಿಕಾರಿಯಾಗಲು ಅಗತ್ಯವಾದ ಅರ್ಹತೆಗಳನ್ನು ವಿವರಿಸಿರಿ.
೨೦. ಪಂಚಾಯತ್‌ರಾಜ್ ವ್ಯವಸ್ಥೆಯ ಮೂರು ಸಂಸ್ಥೆಗಳನ್ನು ಹೆಸರಿಸಿ.
೨೧. ಸ್ವಾತಂತ್ರ್ಯದ ವಿಧಾನಗಳನ್ನು ಬರೆಯಿರಿ.
೨೨. ಪಂಚಾಯತ್‌ರಾಜ್‌ಎಂದರೇನು ?

ಇ. ಕೆಳಗಿನವುಗಳಲ್ಲಿ ಎಂಟು ಪ್ರಶ್ನೆಗಳಿಗೆ ಉತ್ತರಿಸಿ. ಪ್ರತಿಯೊಂದನು ೫-೧೦ ವಾಕ್ಯಗಳಲ್ಲಿ ಉತ್ತರಿಸಿ. ೮x೫=೪೦
೨೩. ರಾಜ್ಯಶಾಸ್ತ್ರದ ಅಧ್ಯಯನದ ಮಹತ್ವವನ್ನು ವಿವರಿಸಿ.
೨೪. ರಾಜ್ಯ ಮತ್ತು ಸ್ವಯಂ ಸೇವಾಸಂಘಗಳ ಭಿನ್ನತೆಗಳನ್ನು ವಿವರಿಸಿ.
೨೫. ಕಾನೂನಿನ ಲಕ್ಷಣಗಳನ್ನು ವಿವರಿಸಿ.
೨೬. ನ್ಯಾಯದ ಆರ್ಥಿಕ ಮುಖವನ್ನು ಸಂಕ್ಷಿಪ್ತವಾಗಿ ವಿವರಿಸಿ.
೨೭. ಸಂಸದೀಯ ಸರ್ಕಾರದ ಕಾರ್ಯಾಂಗದ ಲಕ್ಷಣಗಳನ್ನು ನೀಡಿ.
೨೮. ಸಂಯುಕ್ತ ಸರ್ಕಾರದ ಲಕ್ಷಣಗಳನ್ನು ನೀಡಿ.
೨೯. ಕಾರ್ಯಾಂಗದ ಅರ್ಥವನ್ನು ಸಂಕ್ಷಿಪ್ತವಾಗಿ ವಿವರಿಸಿ.
೩೦. ಭಾರತದ ಸಂವಿಧಾನವನ್ನು 'ಅರೆಸಂಯುಕ್ತ'ವೆಂದು ಏಕೆ ಕರೆಯುತ್ತಾರೆ ?
೩೧. ಲೋಕಸಭಾಧ್ಯಕ್ಷರ ಅಧಿಕಾರ ಮತ್ತು ಕಾರ್ಯಗಳನ್ನು ವಿವರಿಸಿ.
೩೨. ಭಾರತಕ್ಕೆ ಸಂಬಂಧಿಸಿದಂತೆ ಕಾರ್ಯಾಂಗ ಮತ್ತು ಶಾಸಕಾಂಗಳ ನಡುವಣ ಸಂಬಂಧಗಳನ್ನು ವಿವರಿಸಿ.
೩೩. ನ್ಯಾಯಾಂಗದ ಪಾತ್ರವನ್ನು ವಿವರಿಸಿ.
೩೪. ಸ್ಥಳೀಯ ಸ್ವಯಮಾಡಳಿತ ಸರ್ಕಾರಗಳ ಯಶಸ್ಸಿಗೆ ಅಗತ್ಯವಾದ ನಿಬಂಧನೆಗಳು ಯಾವುವು ?

ಈ. ಕೆಳಗಿನವುಗಳಲ್ಲಿ ಎರಡು ಪ್ರಶ್ನೆಗಳಿಗೆ ಉತ್ತರಿಸಿರಿ. ಪ್ರತಿಯೊಂದು ಪ್ರಶ್ನೆಗೆ ೩೦-೪೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ೨x೧೦=೨೦
೩೫. ರಾಜ್ಯದ ನಿರ್ವಚನ ನೀಡಿ. ರಾಜ್ಯದ ಮೂಲಾಂಶಗಳನ್ನು ವಿವರಿಸಿ.
೩೬. ಸಾರ್ವಭೌಮತ್ವದ ವಾಖ್ಯೆ ನೀಡಿ. ಅದರ ಲಕ್ಷಣಗಳನ್ನು ವಿವರಿಸಿ.
೩೭. ಭಾರತದ ಸಂವಿಧಾನದ ಮುಖ್ಯ ಲಕ್ಷಣಗಳನ್ನು ವಿವರಿಸಿ.
೩೮. ಭಾರತದಲ್ಲಿನ ಕೇಂದ್ರ ಸಚಿವ ಸಂಪುಟದ ರಚನೆ ಹಾಗೂ ಕಾರ್ಯಗಳನ್ನು ವಿವರಿಸಿ.

# ಪ್ರಶ್ನೆ ಪತ್ರಿಕೆ ನೀಲಿ ನಕಾಶೆ
## ಮೊದನೆಯ ಪದವಿ ಪೂರ್ವ ತರಗತಿ
## ರಾಜ್ಯಶಾಸ್ತ್ರದ ಮೂಲ ತತ್ವಗಳು ಮತ್ತು ಸರಕಾರ

| ಅಧ್ಯಾಯಗಳು | ಅಧ್ಯಾಯಗಳ ಶೀರ್ಷಿಕೆ | ಬೋಧನಾ ಅವಧಿ (ಗಂಟೆಗಳು) | ನಿಗದಿಪಡಿಸಿದ ಅಂಕಗಳು | ಜ್ಞಾನ ಶೇ. ೪೦ | | | |
|---|---|---|---|---|---|---|---|
| | | | | ೧ | ೨ | ೫ | ೧೦ |
| ೧ | ರಾಜ್ಯಶಾಸ್ತ್ರ- ಒಂದು ಸಮಗ್ರದೃಷ್ಟಿ | ೦೬ | ೦೯ | - | ೧ | ೧ | - |
| ೨ | ರಾಜ್ಯ, ಸಮಾಜ ಮತ್ತು ನಾಗರಿಕ | ೧೧ | ೧೫ | - | - | - | ೧ |
| ೩ | ರಾಜ್ಯಶಾಸ್ತ್ರದ ಮೂಲ ಪರಿಕಲ್ಪನೆಗಳು | ೨೦ | ೨೮ | ೨ | ೧ | - | - |
| ೪ | ಸಂವಿಧಾನ ಮತ್ತು ಸರ್ಕಾರ | ೧೨ | ೧೭ | ೧ | ೨ | ೧ | - |
| ೫ | ಭಾರತದ ಸಂವಿಧಾನ | ೧೩ | ೧೯ | ೨ | ೧ | - | ೧ |
| ೬ | ಶಾಸಕಾಂಗ | ೦೮ | ೧೧ | ೧ | - | - | - |
| ೭ | ಕಾರ್ಯಾಂಗ | ೧೧. | ೧೫ | - | - | ೧ | - |
| ೮ | ನ್ಯಾಯಾಂಗ | ೦೭ | ೧೦ | - | ೧ | - | - |
| ೯ | ಸ್ಥಳೀಯ ಸರ್ಕಾರಗಳು | ೦೭ | ೧೦ | ೧ | - | - | - |
| | ಒಟ್ಟು | ೯೫ | ೧೩೪ | ೫೪ | | | |

ಟಿಪ್ಪಣಿ : ೧. ತೂಕ = ಒಟ್ಟು ಅಂಕಗಳು/ಬೋಧನಾ ಅವಧಿ = ೧೯೪/೯೫=೧.೪ ಗಂಟೆಗೆ ೧.೪ ಅಂಕಗಳು

೨. ಆಯ್ಕೆ = ಒಟ್ಟು ೩೮ ಪ್ರಶ್ನೆಗಳಲ್ಲಿ ೩೦ ಪ್ರಶ್ನೆಗಳನ್ನು ಮಾತ್ರ ಉತ್ತರಿಸಬೇಕು.

| ಅರ್ಥ ಗ್ರಹಣ ಶೇ. ೩೦ | | | | ಅನ್ವಯಿಕತೆ ಶೇ. ೨೦ | | | | ಕುಶಲತೆ ಶೇ. ೧೦ | | | | ಒಟ್ಟು |
|---|---|---|---|---|---|---|---|---|---|---|---|---|
| ೧ | ೨ | ೫ | ೧೦ | ೧ | ೨ | ೫ | ೧೦ | ೧ | ೨ | ೫ | ೧೦ | |
| - | ೧ | - | - | -- | - | - | - | - | - | - | - | ೬ |
| - | - | ೧ | - | - | - | - | - | - | - | - | - | ೧೫ |
| ೨ | - | ೧ | ೧ | - | ೧ | ೧ | - | - | - | - | - | ೨೮ |
| - | ೧ | - | - | - | - | ೧ | - | - | - | - | - | ೧೭ |
| - | - | ೧ | - | - | - | - | - | - | - | - | - | ೧೬ |
| - | - | ೧ | - | - | - | ೧ | - | - | - | - | - | ೧೧ |
| - | - | - | - | - | - | - | - | - | - | - | ೧ | ೧೫ |
| - | ೧ | - | - | - | - | ೧ | - | ೧ | - | - | - | ೧೦ |
| - | ೧ | - | - | - | - | ೧ | - | - | ೧ | - | - | ೧೦ |
| ೪೦ | | | | ೨೭ | | | | ೧೩ | | | | ೧೩೪ |

## ಅನುಬಂಧ ೫

## ಪರೀಕ್ಷೆಯ ವಿಧಾನ ಮತ್ತು ಪ್ರಶ್ನೆಪತ್ರಿಕೆಯ ನೀಲಿ ನಕಾಶೆ

ಪರೀಕ್ಷಾ ವಿಧಾನಕ್ಕೆ ಸಂಬಂಧಿಸಿದಂತೆ ಪದವಿಪೂರ್ವ ಶಿಕ್ಷಣ ಇಲಾಖೆಯು ಕೆಳಕಂಡ ಮಾರ್ಗದರ್ಶಿ ಸೂತ್ರಗಳನ್ನು ನೀಡಿರುತ್ತದೆ.

ವಾರ್ಷಿಕ ಪರೀಕ್ಷೆ: ೯೦ ಅಂಕಗಳು : ಸಿದ್ಧಾಂತ ಆಧರಿತ : ೨ಗಂಟೆಗಳು

ಆಂತರಿಕ ಮೌಲ್ಯಮಾಪನ : ೧೦ಅಂಕಗಳು : ಪ್ರಾಯೋಗಿಕ ಕಾರ್ಯ ಆಧರಿತ.

ಸಿದ್ಧಾಂತ ಆಧರಿತ ಪ್ರಶ್ನೆಪತ್ರಿಕೆಯ ವಿನ್ಯಾಸ : ಒಟ್ಟು ೯೦ ಅಂಕಗಳು : ೩ ಗಂಟೆಗಳು

| ಭಾಗ | ನೀಡುವ ಪ್ರಶ್ನೆಗಳು | ಉತ್ತರಿಸ ಬೇಕಾದ ಪ್ರಶ್ನೆಗಳು | ಅಂಕಗಳು |
|---|---|---|---|
| ಅ | ೧೦ | ೧೦ | ೧x೧೦=೧೦ |
| ಆ | ೧೨ | ೧೦ | ೨x೧೦=೨೦ |
| ಇ | ೧೨ | ೮ | ೫x೮=೪೦ |
| ಈ | ೪ | ೨ | ೨x೧೦=೨೦ |
| ಒಟ್ಟು | ೩೮ | ೩೦ | ೯೦ |

ಆಂತರಿಕ ಮೌಲ್ಯಮಾಪನದ ೧೦ ಅಂಕಗಳು ಪ್ರಾಯೋಗಿಕ ಕಾರ್ಯಯೋಜನೆ ಮತ್ತು ಹೊಣೆಗಳನ್ನು ಆಧರಿಸಿರುತ್ತಾರೆ.

ಭಾಗ: ಅ. ಒಂದು ಅಂಕದ ಹತ್ತು ಪ್ರಶ್ನೆಗಳು ಪ್ರತಿಯೊಂದು ಪ್ರಶ್ನೆಗೆ ಒಂದು ಪದ ಅಥವಾ ವಾಕ್ಯದಲ್ಲಿ ಉತ್ತರಿಸಬೇಕು

ಭಾಗ: ಆ. ಎರಡು ಅಂಕಗಳ ಹನ್ನೆರಡು ಪ್ರಶ್ನೆಗಳು. ಹತ್ತು ಪ್ರಶ್ನೆಗಳಿಗೆ ಉತ್ತರಿಸಬೇಕು. ಪ್ರತಿಯೊಂದು ಪ್ರಶ್ನೆಗೆ ಎರಡರಿಂದ ಮೂರು ವಾಕ್ಯಗಳಲ್ಲಿ ಉತ್ತರಿಸಬೇಕು.

ಭಾಗ: ಇ. ಐದು ಅಂಕಗಳ ಹನ್ನೆರಡು ಪ್ರಶ್ನೆಗಳು. ಎಂಟನ್ನು ಮಾತ್ರ ಉತ್ತರಿಸಬೇಕು. ಪ್ರತಿಯೊಂದು ಪ್ರಶ್ನೆಗೆ ಐದರಿಂದ ಹತ್ತು ವಾಕ್ಯಗಳಲ್ಲಿ ಉತ್ತರಿಸಬೇಕು.

ಭಾಗ: ಈ. ಹತ್ತು ಅಂಕಗಳ ನಾಲ್ಕುಪ್ರಶ್ನೆಗಳು. ಎರಡನ್ನು ಮಾತ್ರ ಉತ್ತರಿಸಬೇಕು. ಪ್ರತಿಯೊಂದು ಪ್ರಶ್ನೆಗೆ ಮೂವತ್ತರಿಂದ ನಲವತ್ತು ವಾಕ್ಯಗಳಲ್ಲಿ ಉತ್ತರಿಸಬೇಕು.

## ಅನುಬಂಧ ೬
## ಆಕರ ಗ್ರಂಥಗಳು


1) Political Science. ( Text book for class XI) Iqbal Narin NCERT, New Delhi, 2002.
2) Major Concepts in Political Science. ( Text book for class XI) U.R. Mehta NCERT, New Delhi,2002.
3) Organs of Governments (Text Book for class XI) Iqbal Narin NCERT, New Delhi, 2002.
4)Constitution of India Bare Facts. Governments of India Publications.
5) History of Local Self Government in Karnataka. M. Umapathy, Prasaranga, Mysore University, Mysore.
6) Democracy at work (A tex Book for class XII) Rasheeduddin Khan, NCERT, New Delhi.


### ನಿಯತ ಕಾಲಿಕೆಗಳು


Karnatak Journal of Politics ( Biannual).
Published by Karnataka State Political Science Teachers Association.
Indian Journal of Political Science (Quarterly).
Published by Indian Political Science Association.


## Encyclopedia


Encyclopedia of Social Sciences.
Encyclopedia of Political Science.


### Web sites

For information on Government of India - www.nic.in

For information of Government of Karnataka - www.kar.nic.in

# ಲೇಖಕರ ವಿವರ


೧. ಡಾ. ಹರೀಶ್ ರಾಮಸ್ವಾಮಿ
ಪ್ರವಾಚಕರು, ರಾಜ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ
ಪಾವಟೆ ನಗರ, ಧಾರವಾಡ ೫೮೦ ೦೦೩
ದೂರವಾಣಿ ೦೮೩೬ - ೨೭೭೦೯೦೨
ಮೊಬೈಲ್ ೯೪೪೮೩೭೯೩೫೦

೨. ಪ್ರೊ. ಬಿ.ಎಫ್. ಚೇಗರಡ್ಡಿ
ಅನ್ನದಾನೀಶ್ವರ ನಗರ, ಕೋಡಿಕೊಪ್ಪ ೫೮೨ ೨೩೩
ರೋಣ ತಾಲೂಕು, ಗದಗ ಜಿಲ್ಲೆ

೩. ಪ್ರೊ. ಎ.ಬಿ. ಹಿರೇಮಠ
'ಬಸವ ಬೆಳಕು', ಚನ್ನಬಸವ ನಗರ
ಮುಂಡರಗಿ ೫೮೨ ೧೧೮, ಗದಗ ಜಿಲ್ಲೆ

೪. ಡಾ. ಟಿ.ಆರ್. ಚಂದ್ರಶೇಖರ
ಪ್ರಾಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬, ಬಳ್ಳಾರಿ ಜಿಲ್ಲೆ
ದೂರವಾಣಿ ೦೮೩೯೪ - ೨೪೧೪೬೪

ಕನ್ನಡ ವಿಶ್ವವಿದ್ಯಾಲಯದ ಪಠ್ಯಪುಸ್ತಕ ರಚನಾ ಕೇಂದ್ರವು ಸಿದ್ಧಪಡಿಸಿರುವ ಪದವಿಪೂರ್ವ ಶಿಕ್ಷಣದ ಮೊದಲ ವರ್ಷದ ರಾಜ್ಯಶಾಸ್ತ್ರ ಪಠ್ಯವನ್ನು ತಮ್ಮ ಮುಂದಿಡಲು ನಮಗೆ ಸಂತೋಷವೆನಿಸುತ್ತದೆ. ಈಗ ಜಾರಿಗೆ ಬಂದಿರುವ ಹೊಸ ಪಠ್ಯಕ್ರಮಕ್ಕೆ ಅನುಗುಣವಾಗಿ ಇದನ್ನು ಸಿದ್ಧಪಡಿಸಲಾಗಿದೆ. ಈ ಪಠ್ಯವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನಾಡಿನ ಪ್ರಸಿದ್ಧ ವಿದ್ವಾಂಸರು ಪಾಲುದಾರರಾಗಿದ್ದಾರೆ.

ಈ ಪಠ್ಯವು ನಾಡಿನ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುತ್ತದೆಂದು ನಾವು ಭಾವಿಸಿದ್ದೇವೆ. ಈ ಪಠ್ಯವನ್ನು ಉಪಯೋಗಿಸುವ ಸಹೃದಯಿಗಳನ್ನು ಪಠ್ಯದ ಬಗ್ಗೆ ತಮ್ಮ ಅಭಿಪ್ರಾಯವನ್ನು ಕೇಂದ್ರಕ್ಕೆ ಬರೆದು ತಿಳಿಸಿದರೆ ತುಂಬಾ ಉಪಯೋಗವಾಗುತ್ತದೆ. ಮುಂದಿನ ಆವೃತ್ತಿಗ್ಗಳಲ್ಲಿ ಪಠ್ಯದ ಗುಣಮಟ್ಟವನ್ನು ಇನ್ನೂ ಹೆಚ್ಚು ಉತ್ತಮ ಪಡಿಸಬಹುದು.

ಪಠ್ಯಪುಸ್ತಕಗಳ ಜೊತೆ ನಾವು ಅಧ್ಯಾಪಕರ ಕೈಪಿಡಿಗಳನ್ನು ಸಿದ್ಧಪಡಿಸುತ್ತಿದ್ದೇವೆ. ನಾವು ಪ್ರಕಟಿಸುತ್ತಿರುವ ಪಠ್ಯಗಳಿಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಅಧಿಕೃತ ಮನ್ನಣೆ ನೀಡಿ ನಮ್ಮ ಪ್ರಯತ್ನದಲ್ಲಿ ಕೈ ಜೋಡಿಸಿದೆ. ಕರ್ನಾಟಕದ ವಿದ್ಯಾರ್ಥಿ ಬಳಗಕ್ಕೆ ಕನ್ನಡದಲ್ಲಿ ಜ್ಞಾನವು ಉತ್ತಮ ರೀತಿಯಲ್ಲಿ ದೊರೆಯಬೇಕೆಂಬುದು ನಮ್ಮ ಮುಖ್ಯ ಗುರಿಯಾಗಿದೆ. ಈ ದಿಶೆಯಲ್ಲಿ ನಮ್ಮ ಪ್ರಯತ್ನ ನಡೆದಿದೆ. ಇದಕ್ಕೆ ತಮ್ಮ ಆಶೀರ್ವಾದವಿದೆಯೆಂದು ಭಾವಿಸಿದ್ದೇವೆ.

ರೂ. ೧೦೦/-